|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨




ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಪಂಡಿತ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1946

# ಮುನ್ನುಡಿ

ಈಗ ಪರಿವರ್ತಿತವಾಗಿ ಪ್ರಕಾಶಕ್ಕೆ ಬಂದಿರುವ ಶ್ರೀ ಶಿವರಹಸ್ಯ ಪ್ರಥಮಾಂಶದ ಎರಡನೆಯ ಭಾಗವು ಕೊನೆಯ ಮೂವತ್ತು ಅಧ್ಯಾಯಗಳನ್ನೊಳಗೊಂಡಿದೆ. ಪ್ರಪಂಚದಲ್ಲಿ ಇಲ್ಲಿವರೆಗೆ ಎಷ್ಟೋ ಆಸ್ತಿಕಮತಗಳು ಅವತರಿಸಿವೆ. ಅವುಗಳಲ್ಲಿ ಕೆಲವು ಅಳಿದಿವೆ, ಕೆಲವು ಉಳಿದಿವೆ. ಪ್ರತಿ ಮತದಲ್ಲಿಯೂ ಪರಸ್ಪರ ವಿರೋಧಾಂಶಗಳು ಸ್ಪಷ್ಟವಾಗಿ ಕಾಣುತ್ತಿವೆ. ಹೇಗಿದ್ದರೂ "ಸಕಲ ಜಗನ್ನಿಯಾಮಕನಾದ ದೇವರು ಒಬ್ಬನಿರುವನು" ಎಂಬ ತತ್ತ್ವದಲ್ಲಿ ಮಾತ್ರ ಭಿನ್ನಾಭಿಪ್ರಾಯವಿಲ್ಲ. ಅಂತಹ ದೇವದೇವನು ಸಾಕಾರನೇ? ನಿರಾಕಾರನೇ? ಎಂಬ ಸಂಶಯವು ಸಾಮಾನ್ಯ ಮಾನವನಿಗೂ ಉಂಟಾಗತಕ್ಕದ್ದೇ. ಇದೇ ಅಭಿಪ್ರಾಯವನ್ನು ಸಕಲ ಮತಗಳೂ ಮಥನಮಾಡಿ, ಯುಕ್ತಿಪ್ರತ್ಯುಕ್ತಿಗಳನ್ನು ತೋರಿಸಿ, ಕೆಲವರು ದೇವರು ಸಾಕಾರನೆಂದೂ,ಹಲವರು ಪರಬ್ರಹ್ಮವಸ್ತುವು ನಿರ್ಗುಣ, ನಿರಾಕಾರ, ನಿರುಪಾಧಿಕನೆಂದೂ ಸಿದ್ಧಾಂತಮಾಡಿರುವರು. ವಸ್ತುಸ್ಥಿತಿ ಏನೇ ಇರಲಿ; ಮಾನವವರ್ಗಕ್ಕೆ ಶಾಂತಿಬೇಕು. ಅಂತಹ ಶಾಂತಿ ದೊರೆಯಲು ರಾಗ ದ್ವೇಷ ಮೋಹಗಳು ತೊಲಗಬೇಕು. ಆದರೆ ಮನುಷ್ಯರಾಗಿರುವವರಿಗೆ ಸಹಜವಾಗಿ ಬಂದಿರುವ ಈ ರಾಗದ್ವೇಷಾದಿಗಳು ಸುಲಭವಾಗಿ ಹೋಗತಕ್ಕವುಗಳಲ್ಲ. ಹೋದರೆ ಈಗಿನ ಪ್ರಪಂಚದಲ್ಲಿ ಜೀವನ ನಡೆಯುವುದೇ ಕಷ್ಟವಾದೀತು. ಆದರೆ ಈ ರಾಗದ್ವೇಷಾದಿಗಳೇ ಲೋಕದಲ್ಲಿ ಪ್ರಬಲವಾಗಿ ನಿಂತುಬಿಟ್ಟರೆ ಅನೇಕ ಅನರ್ಥಗಳುಂಟಾಗುವುವು. ಈ ಅನರ್ಥಪರಂಪರೆಯನ್ನು ತಪ್ಪಿಸಲು ಒಂದು ಸಮಾಜವಾಗಲಿ, ರಾಜಕೀಯ ದರ್ಪವಾಗಲಿ ಪ್ರವೇಶಿಸಿ ಬಹು ಶ್ರಮವಹಿಸಬೇಕಾಗುವುದು. ಇಂತಹ ತೊಂದರೆಗಳನ್ನು ಮೂಲೋತ್ಪಾಟನೆಮಾಡಬೇಕಾದರೆ ಪ್ರತಿ ವ್ಯಕ್ತಿಗೂ ಹೃದಯಾಂತರಾಳದಲ್ಲಿ ಒಂದು ವಿಧವಾದ ಕರುಣೆ, ಭಕ್ತಿ, ದೈನ್ಯ, ಕಷ್ಟಸಹಿಷ್ಣುತೆ ಇವು ಮೂಡಬೇಕು; ಇದರಿಂದಲೇ ಪ್ರತಿ ಮಾನವನ ಮತ್ತು ಪ್ರಪಂಚದ ಜೀವನ ಸುಲಭವಾಗುವುದು, ಮತ್ತು ಸ್ಥಿರವಾದ ಶಾಂತಿ ದೊರಕುವುದು ಎಂಬ ಅಂಶವನ್ನರಿತೇ ನಮ್ಮ ಪೂರ್ವಾಚಾರ್ಯರು ನಮಗೆ ಮುಖ್ಯ ಎರಡು ಮಾರ್ಗಗಳನ್ನು ತೋರ್ಪಡಿಸಿರುವರು.

ತತ್ತ್ವಮಾರ್ಗ, ಭಕ್ತಿಮಾರ್ಗ ಎಂಬ ಆ ಎರಡು ದಾರಿಗಳಲ್ಲಿ ಪ್ರತಿಯೊಬ್ಬನೂ ತತ್ತ್ವಮಾರ್ಗಗಾಮಿಯಾಗುವುದು ಕಷ್ಟ. ಅದಕ್ಕೆ ಸಂಪೂರ್ಣ ಪಾಂಡಿತ್ಯ ಸಹಾಯ

ಬೇಕು. ಚರ್ಚೆಮಾಡಿ ವಿಷಯ ಮಥಿಸಲು ಕಾಲಾವಕಾಶಬೇಕು. ತತ್ತ್ವವೆಂದರೆ ಕಲ್ಪಿತವಲ್ಲದ ವಸ್ತು ಎನ್ನಬಹುದು. ಅದರ ಸ್ವಭಾವವನ್ನು ಪರಿಶೋಧಿಸುವುದೇ ತತ್ತ್ವಮಾರ್ಗ. ಲೋಕದಲ್ಲಿ ಪ್ರತ್ಯಕ್ಷವಾಗುವ ಪೃಥಿವ್ಯಾದಿ ವಸ್ತುಗಳನ್ನು ಶೋಧಿಸುವುದೂ, ಈ ತತ್ತ್ವಮಾರ್ಗವೇ. ಹಾಗೆಯೇ ಪರೋಕ್ಷವಾಗಿರುವ ಆತ್ಮ, ಪರಲೋಕ, ಪುಣ್ಯ, ಪಾಪ, ಮೊದಲಾದ ವಸ್ತುಗಳ ನಿಜಸ್ವರೂಪವನ್ನು ಅರಿಯುವುದೂ ಈ ತತ್ತ್ವ ಮಾರ್ಗದ ಹೆದ್ದಾರಿಯೇ. ಪ್ರತ್ಯಕ್ಷ ವಸ್ತುಗಳ ಶೋಧನೆಯನ್ನಂತೂ ಇಂದಿನ ವೈಜ್ಞಾನಿಕರು ಬಹುವಾಗಿ ಮುಂದುವರಿಸುತ್ತಿರುವರು. ಪರೋಕ್ಷವಸ್ತುಗಳ ಶೋಧನೆಯನ್ನು ಪ್ರಾಚೀನರು ಕಷ್ಟದಿಂದ ಸಾಧಿಸಿ, ಅನೇಕ ದರ್ಶನಗಳಲ್ಲಿ ಸಿದ್ಧಾಂತ ರೂಪವಾಗಿ ಅದನ್ನು ನಿಸ್ಸಂದೇಹವಾಗಿ ಬರೆದಿಟ್ಟಿರುವರು.

ಈ ಮಾರ್ಗವನ್ನವಲಂಬಿಸಲು ಅವಕಾಶವಿಲ್ಲದವರು ಎರಡನೆಯದಾದ ಭಕ್ತಿಮಾರ್ಗದಲ್ಲಿ ಸಂಚರಿಸಬಹುದು. ಈ ಭಕ್ತಿಮಾರ್ಗವನ್ನೇ ಮತವೆನ್ನುವರು. ಮತವೆಂದರೆ ಮನೋಭಾವಕ್ಕೆ ಗೋಚರವಾದುದು. ಈ ಮನೋಭಾವವನ್ನು ಶ್ರದ್ಧಾ, ಭಕ್ತಿ, ವಿಶ್ವಾಸ, ನಂಬಿಕೆ, ಮೊದಲಾದ ಶಬ್ದಗಳಿಂದ ವ್ಯವಹರಿಸಬಹುದು. ಮನೋಭಾವವು ಅನಾದಿಯಾದ ಸಂಪ್ರದಾಯಗಳಿಂದ ವಿಚಿತ್ರವಾಗಿ ಕಂಡುಬರುತ್ತಲೂ ಇದೆ. ಈ ಭಕ್ತಿಮಾರ್ಗದಲ್ಲಿ ವಸ್ತುಸ್ವಭಾವವನ್ನು ಪರೀಕ್ಷಿಸಬೇಕಾಗಿಲ್ಲ. ಪರೀಕ್ಷಿಸಲೂ ಬಾರದು. ಕೇವಲ ಶ್ರದ್ಧೆ, ಭಕ್ತಿ, ನಂಬಿಕೆ ಇವುಗಳು ಹೇರಳವಾಗಿರಬೇಕು. ಆ ಭಕ್ತಿಮಾರ್ಗಕ್ಕೆ ಸಾಧಕವಾದ ಅನೇಕ ಅಂಶಗಳು ಈ ಪುರಾಣೇತಿಹಾಸಗ್ರಂಥಗಳಲ್ಲಿ ದೊರಕುವಂತೆ ಆರ್ಯಮಹರ್ಷಿಗಳು ರಚಿಸಿರುವರು.

ಪ್ರಕೃತ, ಈ ಶಿವರಹಸ್ಯ ಗ್ರಂಥದಲ್ಲಿ ಮಾನವ ಜೀವನದ ಶಾಂತಿಸಾಧನೆಗಾಗಿ ತತ್ತ್ವ, ಭಕ್ತಿ, ಇವೆರಡನ್ನೂ ವಿಶದಪಡಿಸುತ್ತಾ ಹೋಗುವರು. ಈ ಗ್ರಂಥದಲ್ಲಿ ಮೊದಲು ಪರಮದೇವತೆಯೆನಿಸಿದ ಸಾಕ್ಷಾತ್ಪರಮೇಶ್ವರನು ಸಕಲ ಶಕ್ತಿಸಂಪನ್ನನು, ಸಕಲ ದೇವತಾಶ್ರೇಷ್ಠನು ಎಂಬುದನ್ನು ನಾನಾವಿಧವಾದ ದೃಷ್ಟಾಂತಗಳಿಂದ ನಿರೂಪಿಸಿ, ಅವನಲ್ಲಿ ದೃಢವಾದ ಭಕ್ತಿಯುಂಟಾಗುವಂತೆ ಪ್ರತಿಪಾದಿತವಾಗಿದೆ. ಹಾಗೆ ಭಕ್ತಿಮಾರ್ಗದಲ್ಲಿ ಮುಂದುವರಿದವರಿಗೆ ತತ್ತ್ವದ ದಾರಿಯನ್ನು ತೋರಿಸಲು, ದೇವದೇವನಾದ ಶಂಕರನಿಗೆ ಯಾವ ಆಕಾರಗಳೂ ಇಲ್ಲ; ಆನಂದಮಯನೇ ಅವನು; ಚಿತ್ತಶುದ್ಧಿಗಾಗಿ ಅವನನ್ನು ನಾನಾರೀತಿ ಉಪಾಸನೆ ಮಾಡಬೇಕೇ ಹೊರತು ವಸ್ತುಸ್ಥಿತಿ ಬೇರೆ ಎಂದು ಕೆಲವೆಡೆ ವರ್ಣಿತವಾಗಿದೆ. ಅಂತೂ ಭಕ್ತಿ ಮತ್ತು ತತ್ತ್ವ

ಇವೆರಡನ್ನೂ ಸಾಮಾನ್ಯ ಜನರಿಗೆ ಬೋಧಿಸುವ ಉದ್ದೇಶದಿಂದಲೇ ಈ ಪವಿತ್ರ ಗ್ರಂಥವನ್ನು ಇಷ್ಟು ವಿಸ್ತಾರವಾಗಿ, ಮತ್ತು ಮಹಿಮಾಪೂರ್ಣವಾಗಿ ನಿರ್ಮಿಸಿರುವರೆಂದು ಹೇಳಬಹುದು.

ಈ ಭಾಗದಲ್ಲಿ ಕೈಲಾಸಪರ್ವತಸ್ಥವಾದ ಶಿವಲಿಂಗಗಳ ಸಹಸ್ರ ನಾಮಗಳು, ಲಿಂಗಸ್ವರೂಪ, ಶಿವಲಿಂಗ ವಿಷಯಕವಾಗಿ ಉಪನಿಷತ್ತುಗಳಲ್ಲಿ ಹೇಳಿರುವ ಅಂಶಗಳು, ಪರಬ್ರಹ್ಮಸ್ವರೂಪವೇ ಪರಶಿವನ ಆತ್ಮಲಿಂಗ ಎಂಬ ಸಿದ್ಧಾಂತ, ಇಂತಹ ಶಾಸ್ತ್ರೀಯವಾದ ವಿಷಯಗಳು ವಿವೃತವಾಗಿವೆ. ಅಲ್ಲಲ್ಲಿ ಭಾಷಾದೃಷ್ಟಿಯಿಂದ ವ್ಯಾಕರಣನಿಯಮ, ಛಂದಸ್ಸುಗಳು ಅಸ್ತವ್ಯಸ್ತವಾಗಿದ್ದರೂ, ಕವಿತಾಬಂಧ ಮತ್ತು ಉಪಪಾದನ ಕ್ರಮ ಇವು ಬಹು ಬಿಗಿಯಾಗಿ ರಮಣೀಯವಾಗಿರುವುವು. ಈ ಗ್ರಂಥವನ್ನು ಆಮೂಲಾಗ್ರವಾಗಿ ಓದುವುದರಿಂದ ಮನುಷ್ಯನು ಪರಮೇಶ್ವರನಲ್ಲಿ ಅನಿರ್ವಚನೀಯವಾದ ಭಕ್ತಿಯನ್ನು ಸಂಪಾದಿಸುವನೆಂಬುದರಲ್ಲಿ ಯಾವ ಅನುಮಾನವೂ ಇಲ್ಲ.

ಇಂತಹ ಪವಿತ್ರ ಗ್ರಂಥಗಳ ಪ್ರಚಾರಕ್ಕಾಗಿ ಬದ್ಧಾದರರಾಗಿ ನಿಂತಿರುವ ಆಸ್ತಿಕವರೇಣ್ಯ **ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರಿಗೆ ಸರ್ವೇಶ್ವರನು ಸಕಲ ಸನ್ಮಂಗಳಗಳನ್ನೂ ದಯಪಾಲಿಸಲೆಂದು ಮಹೇಶ್ವರನನ್ನು ಸರ್ವದಾ ಪ್ರಾರ್ಥಿಸುವೆನು.

ವ್ಯಯನಾಮ ಸಂವತ್ಸರದ
ಭಾದ್ರಪದ ಶುದ್ಧ ಸಪ್ತಮಿ
ಸೋಮವಾರ

ಇತಿ ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ.**

# ಶ್ರೀ ಶಿವರಹಸ್ಯ ಪ್ರಥಮಾಂಶದಲ್ಲಿನ ಕೊನೆಯ
# ಮೂವತ್ತು ಅಧ್ಯಾಯಗಳ ವಿಷಯಾನುಕ್ರಮಣಿಕೆ

## ಮೂವತ್ತೇಳನೆಯ ಅಧ್ಯಾಯ



## ಮೂವತ್ತೆಂಟನೆಯ ಅಧ್ಯಾಯ



## ಮೂವತ್ತೊಂಬತ್ತನೆಯ ಅಧ್ಯಾಯ



## ನಲವತ್ತನೆಯ ಅಧ್ಯಾಯ



## ನಲವತ್ತೊಂದನೆಯ ಅಧ್ಯಾಯ



## ನಲವತ್ತೆರಡನೆಯ ಅಧ್ಯಾಯ



## ನಲವತ್ತುಮೂರನೆಯ ಅಧ್ಯಾಯ



## ನಲವತ್ತುನಾಲ್ಕನೆಯ ಅಧ್ಯಾಯ

## ನಲವತ್ತೈದನೆಯ ಅಧ್ಯಾಯ



## ನಲವತ್ತಾರನೆಯ ಅಧ್ಯಾಯ



## ನಲವತ್ತೇಳನೆಯ ಅಧ್ಯಾಯ



## ನಲವತ್ತೆಂಟನೆಯ ಅಧ್ಯಾಯ



## ನಲವತ್ತೊಂಬತ್ತನೆಯ ಅಧ್ಯಾಯ

# ಶ್ರೀ ಶಿವರಹಸ್ಯ ಪ್ರಥಮಾಂಶದಲ್ಲಿನ ಕೊನೆಯ ಮೂವತ್ತು ಅಧ್ಯಾಯಗಳ ವಿಷಯಾನುಕ್ರಮಣಿಕೆ

## ನಲವತ್ತೈದನೆಯ ಅಧ್ಯಾಯ



## ನಲವತ್ತಾರನೆಯ ಅಧ್ಯಾಯ



## ನಲವತ್ತೇಳನೆಯ ಅಧ್ಯಾಯ



## ನಲವತ್ತೆಂಟನೆಯ ಅಧ್ಯಾಯ



## ನಲವತ್ತೊಂಬತ್ತನೆಯ ಅಧ್ಯಾಯ

## ಐವತ್ತನೆಯ ಅಧ್ಯಾಯ

ದೇವತೆಗಳ ಪ್ರಶ್ನೆಗೆ ಶಂಕರನ ಉತ್ತರ. ಶಂಕರನು ತನ್ನ ನಿಜಸ್ವರೂಪವನ್ನು ಆಧಾರಸಹಿತವಾಗಿ ದೇವತೆಗಳಿಗೆ ಉಪದೇಶಿಸುವಿಕೆ. ಪುಟ ೨೪೨-೨೫೪

## ಐವತ್ತೊಂದನೆಯ ಅಧ್ಯಾಯ

ಮಹೇಶ್ವರನು, ದೇವತೆಗಳಿಗೆ ವೇದದ ಸಾರವನ್ನು ವಿವರಿಸುವಿಕೆ. ತಾನು ಶಿವಶಕ್ತಿಯ ಸಹಾಯದಿಂದ ಲೋಕವನ್ನು ನಡೆಸುವುದನ್ನೂ, ಮಾಯಾತೀತನಾದ ತನ್ನ ಸ್ವಭಾವವು ಎಂತಹುದು ಎಂಬುದನ್ನೂ ವಿವರಿಸುವಿಕೆ.

ಪುಟ ೨೫೫-೨೭೦

## ಐವತ್ತೆರಡನೆಯ ಅಧ್ಯಾಯ

ಕೇನೋಪನಿಷತ್ತಿನ ಸಾರವನ್ನು ವಿವರಿಸುವುದು. ಮತ್ತು ಅಲ್ಲಿಗೆ ಬಂದಿದ್ದ ದೇವತೆಗಳನ್ನು ಕುರಿತು "ನಿಮ್ಮ ಶಕ್ತಿಯನ್ನು ವಿವರಿಸಿ ಹೇಳಿರಿ" ಎಂದು ಪರೀಕ್ಷಿಸುವುದು. ಅದಕ್ಕೆ ಉತ್ತರವಾಗಿ ಅನೇಕ ಧೇವತೆಗಳು ಸ್ವಸಾಮರ್ಥ್ಯವನ್ನು ವಿವರಿಸುವುದು. ಅನಂತರ ಶಂಕರನು ತೃಣಪುರುಷನನ್ನು ನಿರ್ಮಿಸಿ ಅವನನ್ನು ಕೊಲ್ಲುವಂತೆ ಆಜ್ಞಾಪಿಸಿ ಕಣ್ಮರೆಯಾಗುವುದು. .... ಪುಟ ೨೭೧-೨೮೭

## ಐವತ್ತಮೂರನೆಯ ಅಧ್ಯಾಯ

ಹಾಗೆ ಶಂಕರನ ಅಪ್ಪಣೆಯನ್ನು ನಿರ್ವಹಿಸಲಾರದ ದೇವತೆಗಳು ಈಶ್ವರ ಶಕ್ತಿಯಾದ ದೇವಿಯನ್ನು ಪ್ರಾರ್ಥಿಸುವಿಕೆ. ಪ್ರತ್ಯಕ್ಷಳಾದ ದೇವಿಯು ಶಂಕರ ಮಹಿಮೆಯನ್ನು ವಿವರಿಸಿ, ತಾನು ಮಾಯವಾಗುವುದು. ಆದರಂತೆ ದೇವತೆಗಳು ಮತ್ತೆ ಈಶ್ವರನನ್ನು ಪ್ರಾರ್ಥಿಸಿದುದು. .... ಪುಟ ೨೮೮-೩೦೧

## ಐವತ್ತನಾಲ್ಕನೆಯ ಅಧ್ಯಾಯ

ದೇವತೆಗಳು ಉಪನಿಷತ್ತಿನ ಸಾರವನ್ನು ಅರಿತು, ಆದರಂತೆ ಶಂಕರನನ್ನು ಪ್ರಾರ್ಥಿಸುವಿಕೆ. ಆಗ ಶಂಕರನು ಮತ್ತೆ ಪ್ರತ್ಯಕ್ಷನಾಗುವಿಕೆ. ಪುಟ ೩೦೨-೩೧೭

## ಐವತ್ತೈದನೆಯ ಅಧ್ಯಾಯ

ದೇವತೆಗಳು ದೇವಿಯನ್ನು ಪ್ರಾರ್ಥಿಸುವಿಕೆ. ಪರಶಿವನು ಅದೇ ದೇವತೆಗಳಿಗೆ ದೇವಿಯ ಶಕ್ತಿಯನ್ನೂ, ಮಹಿಮೆಯನ್ನೂ ಉಪನಿಷತ್ತಿನ ಆಧಾರದಿಂದ ವಿವರಿಸುವುದು. ದೇವಿಯು ಸ್ವಶಕ್ತಿಯನ್ನು ದೇವತೆಗಳಿಗೆ ತಿಳಿಯಪಡಿಸುವುದು.

ಪುಟ ೩೧೮–೩೩೮

## ಐವತ್ತಾರನೆಯ ಅಧ್ಯಾಯ

ಪರಶಿವನು ದೇವಿಯ ಮಾತನ್ನು ವಿವರಿಸಿ, ಪರಮಾತ್ಮಸ್ವರೂಪವನ್ನು ಮತ್ತೆ ಬೋಧಿಸುವುದು. ಹರಿಯು ಕೇದಾರೇಶ್ವರ ಪೂಜೆಯನ್ನೂ, ಬ್ರಹ್ಮನು ಓಂಕಾರೇಶ್ವರ ಪೂಜೆಯನ್ನೂ, ರುದ್ರನು ಅವಿಮುಕ್ತೇಶ್ವರ ಪೂಜೆಯನ್ನೂ, ಕುಬೇರನು ಶ್ರೀಶೈಲೇಶ್ವರ ಪೂಜೆಯನ್ನೂ, ಮರುದ್ಗಣಗಳು ಗೋಕರ್ಣೇಶ್ವರ ಪೂಜೆಯನ್ನೂ ನಡೆಸುವುದು. .... ಪುಟ ೩೩೯–೩೫೫

## ಐವತ್ತೇಳನೆಯ ಅಧ್ಯಾಯ

ವಿಷ್ಣ್ವಾದಿ ದೇವತೆಗಳು ಶಂಕರನನ್ನು ವಿಧವಿಧವಾಗಿ ಸ್ತುತಿಸುವುದು.

.... ಪುಟ ೩೫೬–।

## ಐವತ್ತೆಂಟನೆಯ ಅಧ್ಯಾಯ

ಲಿಂಗಪದಾರ್ಥನಿರೂಪಣ, ಲಿಂಗಲಕ್ಷಣ, ಜೀವಿಗಳಲ್ಲಿ ಬ್ರಹ್ಮ, ವಿಷ್ಣು ಇವರ ಔತ್ಕರ್ಷಪ್ರತಿಪಾದನೆ. .... ಪುಟ ೩೭೫–೩೯೨

## ಐವತ್ತೊಂಬತ್ತನೆಯ ಅಧ್ಯಾಯ

ವಿಗ್ರಹಗಳನ್ನು ಪೂಜಿಸುವುದಕ್ಕಿಂತ ಶಿವಲಿಂಗವನ್ನು ಪೂಜಿಸುವುದರ ಔಚಿತ್ಯ. ವಿಭೂತಿ ರುದ್ರಾಕ್ಷಿಧಾರಣೆಯು, ಈಶ್ವರಪೂಜೆಗೆ ಸನ್ನಿಪತ್ಯೋಪಕಾರಕವಾದದ್ದು ಮತ್ತು ಜ್ಞಾನಸಾಧಕವಾದದ್ದು ಎಂಬ ವಿಚಾರಪ್ರತಿಪಾದನೆ. ಶಿವನೈವೇದ್ಯವನ್ನು ಭುಜಿಸುವವನಿಗೆ ಚಿತ್ತಶುದ್ಧಿಯುಂಟಾಗುವ ವಿಷಯಪ್ರತಿಪಾದನೆ. ಆತ್ಮಲಿಂಗ ಪೂಜಾಕ್ರಮ. ಆತ್ಮಲಿಂಗದಲ್ಲಿ ಅದ್ವೈತಮತಪ್ರತಿಪಾದ್ಯನಾದ ಪರಾಬ್ರಹ್ಮವಸ್ತು ಲಕ್ಷಣವನ್ನು ನಿರೂಪಿಸುವಿಕೆ. ಪ್ರಶಸ್ತವಾದ ಲಿಂಗಸ್ಥಾನಗಳು. ಶಿವಲಿಂಗ ತ್ಯಾಗ ಮಾಡುವುದರಿಂದಾಗುವ ದುಷ್ಫಲಗಳು. .... ಪುಟ ೩೯೩–೪೨೧

## ಅರುವತ್ತನೆಯ ಅಧ್ಯಾಯ

ಅವಿಮುಕ್ತಾದಿ ಸಕಲ ಶಿವಕ್ಷೇತ್ರಸ್ಥಲಿಂಗಗಳನ್ನು ಸರ್ವರೂ ಪೂಜೆಮಾಡಬೇಕಾದ ಆವಶ್ಯಕತೆ. ಆತ್ಮಲಿಂಗ ಪೂಜೆಮಾಡುವವನ ಲಕ್ಷಣ. ಆತ್ಮಲಿಂಗಾನುಸಂಧಾನದಲ್ಲಿ ಅಶಕ್ತನಾದವನು. ಸೂರ್ಯಮಂಡಲದಲ್ಲಿ ಶಂಕರನನ್ನು ಧ್ಯಾನಿಸುವ ಕ್ರಮ. ಪ್ರಾಣಾಯಾಮಪ್ರಕಾರ, ಅದರಲ್ಲಿ ಕಾಲಪರಿಮಾಣನಿರೂಪಣ, ಪ್ರಾಣಾಯಾಮಮಾಡುವವನಿಗೆ ದೊರಕುವ ಸರ್ವಾರ್ಥಸಿದ್ಧಿಗಳು, ನಾನಾತ್ವವಾದನಿರಾಕರಣೆ, ದೇಹಗಳಲ್ಲಿ ಶಂಕರನು ಜೀವರೂಪನಾಗಿ ಪ್ರವೇಶಿಸುವಿಕೆ. ಸರ್ವಾಂತರ್ಯಾಮಿಯಾದರೂ ಈಶ್ವರನು ಶಿವಲಿಂಗದಲ್ಲಿ ವಾಸಮಾಡುವಿಕೆ. ಲಿಂಗಪೂಜೆಯಿಂದ ಬರುವ ಜ್ಞಾನಪ್ರಾಪ್ತಿ. ತ್ರಿಪುಂಡ್ರಧಾರಿಗಳು ಯಾವಾಗಲೂ ಊರ್ಧ್ವಪುಂಡ್ರವನ್ನು ಧರಿಸಬಾರದೆಂಬ ವಿಷಯ. ದೇವಾದಿಗಳು ಕುಮಾರಸ್ವಾಮಿಯನ್ನು ಧ್ಯಾನಿಸುವಿಕೆ. ಕೊನೆಯಲ್ಲಿ ಸೂತಮಹರ್ಷಿಗಳು ಶಂಕರನನ್ನು ಧ್ಯಾನಮಾಡುವುದು.

ಪುಟ ೪೨೨ - ೪೫೨

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಏಕತ್ರಿಂಶೋಽಧ್ಯಾಯಃ

### ರುದ್ರಗಣಾರ್ಚನಂ

|| ಸ್ಕಂದ ಉವಾಚ ||

ತಸ್ಮಾದತ್ಯುತ್ತಮೋ ವಿಪ್ರಾ ಗಣಾ ವಿಷ್ಣ್ವಾದಯಸ್ಸುರಾಃ ।
ಕೈಲಾಸಮೌಲೌ ತಚ್ಛಂಭೋರ್ನವರತ್ನಪರಿಷ್ಕೃತಃ ||೧||

ಪ್ರಾಕಾರೋ ಲಕ್ಷಮಾನೇನ ಚಾಯಾಮೋಚ್ಛ್ರಾಯಸಮ್ಮಿತಃ ।
ಇಂದ್ರಗೋಪಕಸಂಕಾಶಸುಧಾಮಣಿಮಹೋಪಲಃ ||೨||

ಕಲ್ಪಿತೋಽಸ್ತಿ ಮಹೇಶೇನ ಮನಸೈವ ದ್ವಿಜೋತ್ತಮಾಃ ।
ನ ಮಯೋ ವಿಶ್ವಕರ್ಮಾಪಿ ತತ್ಕೈಲಾಸವರಾಲಯಂ ||೩||

---

### ಶ್ರೀಶಿವರಹಸ್ಯದಲ್ಲಿ ಮೂವತ್ತೊಂದನೆಯ ಅಧ್ಯಾಯ

ಕುಮಾರಸ್ವಾಮಿಯು ಮುಂದಿನ ವಿಷಯವನ್ನು ವಿವರಿಸಲು ಆರಂಭಿಸಿ, ಹೀಗೆಂದನು. "ಎಲೈ ಜೈಗೀಷವ್ಯಾದಿ ಋಷಿಗಳೇ, ವಿಷ್ಣ್ವಾದಿ ಸಕಲದೇವತೆಗಳೇ, ಪ್ರಮಥಗಣಗಳೇ, ಈಗ ಹೇಳುವ ರುದ್ರಗಣಾರ್ಚನೆಯನ್ನು ಕೇಳುವವರಾಗಿರಿ. ಕೈಲಾಸಪರ್ವತದ ಶಿಖರಭಾಗದಲ್ಲಿ ನವರತ್ನಪರಿಷ್ಕೃತವಾದ ಒಂದು ದಿವ್ಯಪ್ರಾಕಾರವಿರುವುದು. ||೧||

ಅದು ಉದ್ದ, ಮತ್ತು ಅಗಲಗಳಲ್ಲಿ ಲಕ್ಷ ಯೋಜನ ವಿಸ್ತಾರಾತ್ಮಕವಾಗಿರುವುದು. ಮತ್ತು ಕಾಮನಬಿಲ್ಲಿನ ಬಣ್ಣಗಳಿಂದ ತೋರಿಬರುವ ದಿವ್ಯರತ್ನಗಳಿಂದ ನಿರ್ಮಿಸಲ್ಪಟ್ಟದ್ದಾಗಿರುವುದು. ||೨||

ಮಹೇಶ್ವರನೇ ತನ್ನ ಮನಸ್ಸಿನ ಊಹೆಯಿಂದ ಅದನ್ನು ನಿರ್ಮಿಸಿರುವನು. ಮಯನಾಗಲಿ, ವಿಶ್ವಕರ್ಮನಾಗಲಿ ಕೈಲಾಸಪರ್ವತದ ಆ ಪ್ರಾಕಾರವನ್ನು ನಿರ್ಮಿಸಲಿಲ್ಲ. ||೩||

ಮನಸಾ ಕಲ್ಪಿತುಂ ಶಕ್ಯಂ ಕಿಂ ಶಿಲ್ಪಿಭಿರಖಿಲೈರಪಿ ।
ನಾನಾರತ್ನಮಣಿವ್ರಾತಭಾಸುರಶ್ಚಂದ್ರಸುಂದರಃ ॥೪॥

ಶಾಣೋಲ್ಲೀಢಾಮಲಮಣಿಕಾಂತಿಸಾರೋಽಯಮುತ್ತಮಃ ।
ರಮ್ಯೋ ಗಂಧರ್ವನಗರಾಕಾರಾಕಾರೋಽಯಮುನ್ನತಃ ॥೫॥

ತತ್ಪ್ರಾಕಾರವರೋತ್ತುಂಗಮಣೀಂದ್ರವೃಷಭಾಂಚಿತಃ ।
ಅಂತರಿಕ್ಷೇ ರುದ್ರಗಣಾಸ್ತಚ್ಛ್ರೀಪ್ರಾಕಾರರಕ್ಷಕಾಃ ॥೬॥

ಏಕಾದಶಸಹಸ್ರಂ ವೈ ಬಾಣಕಾರ್ಮುಕಪಾಣಯಃ ।
ಮಹಾನಿಷಂಗಪೃಷ್ಠಾಸ್ತೇ ಕಪರ್ದಧೃತಚಂದ್ರಕಾಃ ॥೭॥

ಸಿಂಹಸಂಹನನಾಸ್ಸರ್ವೇ ಯುವಾನೋ ಮೃಷ್ಟಕುಂಡಲಾಃ ।
ಕರಿಶೃಂಗಾಭವೃತ್ತೋರುಭುಜದಂಡವರಾಯುಧಾಃ ॥೮॥

ಪರಮೇಶ್ವರನ ಮನೋನಿರ್ಮಾಣದ ಮುಂದೆ ಇನ್ನು ಉಳಿದ ಶಿಲ್ಪಿಗಳ ಕಾರ್ಯವೇನೂ ನಡೆಯಲಾರದು. ಅಂತೂ ಆ ಪ್ರಾಕಾರವು ನಾನಾ ರತ್ನಸಮೂಹಗಳಿಂದ ಕೂಡಿ ಚಂದ್ರನಂತೆ ಸರ್ವದಾ ಪ್ರಕಾಶಮಾನವಾಗಿರುವುದು. ॥೪॥

ಸಾಣೆಹಿಡಿದು ಹೊಳಪುಗೊಟ್ಟಿರುವ ಸುಂದರವಾದ ರತ್ನಗಳ ಸಾರವೇ ಈ ಪ್ರಾಕಾರವೋ ಎಂಬಂತೆ ಮನೋಹರವಾಗಿರುವುದು. ಗಂಧರ್ವನಗರಗಳ ಆಕಾರದಂತಿದ್ದು ಅತ್ಯುನ್ನತವಾಗಿ ಕಾಣುವ ಈ ಎತ್ತರವಾದ ಪರ್ವತಭಾಗವು ರಮಣೀಯವಾಗಿರುವುದು. ॥೫॥

ಆ ಪ್ರಾಕಾರಗಳ ಮೇಲೆ ಎತ್ತರವಾದ ಮತ್ತು ರತ್ನಮಯವಾದ ಬಸವನ ವಿಗ್ರಹಗಳಿವೆ. ಸಂಪದ್ಯುಕ್ತವಾದ ಆ ಪ್ರಾಕಾರರಕ್ಷಣೆಗಾಗಿ ರುದ್ರಗಣಗಳು ಅಂತರಿಕ್ಷದಲ್ಲಿ ಸರ್ವದಾ ಓಡಾಡುತ್ತಿರುವರು. ॥೬॥

ರುದ್ರಗಣಗಳು ಹನ್ನೊಂದುಸಾವಿರ ಸಂಖ್ಯೆಯಲ್ಲಿರುವವು. ಅವರೆಲ್ಲರೂ ಬಿಲ್ಲುಬಾಣಗಳನ್ನು ಕೈಯಲ್ಲಿ ಹಿಡಿದಿರುವರು. ಹಿಂಭಾಗದಲ್ಲಿ ಬತ್ತಳಿಕೆಯನ್ನು ಕಟ್ಟಿಕೊಂಡಿರುವರು. ಜಟಾಜೂಟದಲ್ಲಿ ಚಂದ್ರನನ್ನು ಧರಿಸಿಕೊಂಡಿರುವರು. ॥೭॥

ಎಲ್ಲರೂ ಸಿಂಹವನ್ನು ಕೊಲ್ಲುವಂತಹ ಶಕ್ತಿಯುಳ್ಳವರೇ. ಯುವಕರಾಗಿದ್ದು ಸುಂದರವಾದ ಕರ್ಣಕುಂಡಲಗಳನ್ನು ತಳೆದು, ಆನೆಯ ಸೊಂಡಲಿನಂತೆ ಗುಂಡಾದ

**ಚಿಂತಾಮಣಿಗಣಾಸಾರಗೋಪುರಂ ಕುಂಭರಂಜಿತಂ ।**
**ರುದ್ರಾವತಾರಚರಿತ್ರೈಶ್ಯೋಭಿತಂ ಸುಮನೋಹರಂ ॥೯॥**

**ಮೌಲಿಸಂಸ್ಥಮಹಾನಂದಿನಂದಿತಾಖಿಲದಿಕ್ತಟಿಂ ।**
**ಪ್ರಾಚ್ಯಾಂ ತದ್ಗೋಪುರಂ ಶಂಭೋ ರಕ್ಷಂತಿ ಗಣಪಾಸ್ಸದಾ ॥೧೦॥**

**ಪ್ರಾಕಾರಂ ಚಾಪಿ ತೇ ಸರ್ವೇ ತ್ರಿಶೂಲೋದ್ಯತಪಾಣಯಃ ।**
**ತತ್ರ ಶಂಭೋರ್ಗಣೈರ್ಲಿಂಗಂ ಪೂಜಿತಂ ಸರ್ವಕಾಮದಂ ॥೧೧॥**

**ಮಣಿರುದ್ರೇಶ್ವರಂ ನಾಮ್ನಾ ಚಿಂತಾಮಣಿಗಣಕ್ಷಯೇ**
**ಪ್ರೋದ್ಯತ್ಕುಂಭೈಕವಸತಾ ಪೂಜಿತಂ ತಂ ಗಣೇಶ್ವರೈಃ ।**
**ಸಂಸ್ತುತಂ ಪರಯಾ ಭಕ್ತ್ಯಾ ಚಾಂತರಿಕ್ಷೇ ಗಣೈಸ್ಸದಾ ॥೧೩॥**

ಬಾಹುಗಳುಳ್ಳವರಾಗಿ, ಅವುಗಳಲ್ಲಿ ಉಗ್ರವಾದ ಆಯುಧಗಳನ್ನು ಧರಿಸಿರುವವರಾಗಿರುವರು. ॥೮॥

ಅಲ್ಲಿರುವ ಗೋಪುರವು ಚಿಂತಾಮಣಿಗಳಿಂದ ನಿರ್ಮಿತವಾಗಿದೆ. ಮನೋಹರವಾದ ಕಲಶವೂ ಅದಕ್ಕಿದೆ. ಆ ಗೋಪುರದಲ್ಲಿ ಅನೇಕ ರುದ್ರಾವತಾರದ ಬೊಂಬೆಗಳು ಮನೋಹರವಾಗಿ ಕಾಣುತ್ತಿರುವುವು. ॥೯॥

ಆ ಗೋಪುರದ ಪೂರ್ವಭಾಗದಲ್ಲಿ ನಂದೀಶ್ವರನಿರುವನು. ಅವನು ಸಕಲ ದಿಕ್ಕುಗಳನ್ನೂ ಬೆಳಗಿಸುತ್ತಾ ಕುಳಿತಿರುವನು. ಅವನ ಅಧೀನದಲ್ಲಿ ಅನೇಕ ಗಣನಾಯಕರು ಆ ಪೂರ್ವಭಾಗವನ್ನು ರಕ್ಷಿಸುತ್ತಿರುವರು. ॥೧೦॥

ಆ ಗಣನಾಯಕರು ಸರ್ವದಾ ತ್ರಿಶೂಲಪಾಣಿಗಳಾಗಿ ನಿಂತು ಅದೇ ದಿಕ್ಕಿನ ಪ್ರಾಕಾರಗಳನ್ನೂ ರಕ್ಷಿಸುತ್ತಿರುವರು. ಅದಲ್ಲದೆ ಸರ್ವಕಾಮದವಾದ ಶಿವಲಿಂಗವನ್ನು ಗಣನಾಯಕರೆಲ್ಲರೂ ಪೂಜಿಸುತ್ತಿರುವರು. ॥೧೧॥

ಅಲ್ಲಿ ಮಣಿರುದ್ರೇಶ್ವರಲಿಂಗವಿರುವುದು. ಚಿಂತಾಮಣಿನಿರ್ಮಿತವಾದ ಆ ಗೃಹಭಾಗದಲ್ಲಿ ದಿವ್ಯಕಲಶಗಳಿಂದ ರಂಜಿತವಾಗಿ ಆ ಲಿಂಗವು ಸಮಸ್ತ ರುದ್ರಗಣಗಳಿಂದಲೂ ಪೂಜಿಸಲ್ಪಡುತ್ತಾ ಈರೀತಿಯಾಗಿ ಸ್ತುತಿಸಲ್ಪಡುತ್ತಿರುವುದು. ॥೧೩॥

|| ರುದ್ರಾ ಊಚುಃ ||

ಸಂಸಾರತಾಪಜಮಹಾರುಜಮಾಶು ಚೇಶ
ಸದ್ಯೋ ವಿನಾಶಯ ಮಹೇಶ್ವರ ಚಾರುದೃಷ್ಟ್ಯಾ ।
ರುದ್ರೋ ಭವಾನ್ ಶ್ರುತಿಶಿಖಾಮಲಗೀತಕೀರ್ತೇ
ಪಾಹೀಶ ವೇದವಚನೈರ್ಭಿಷಜಾಂ ತ್ವಮೀಶಃ ॥೧೪॥

ಸ್ಕಂದ ಉವಾಚ ||

ಏವಂ ಸ್ತುವಂತಿ ತಂ ದೇವಂ ಮಣಿಭದ್ರೇಶ್ವರಂ ಗಣಾಃ ।
ತದ್ದಕ್ಷಿಣೇಽಪಿ ಪ್ರಾಕಾರಂ ಮುಕ್ತಾರತ್ನವಿನಿರ್ಮಿತಮ್ ॥೧೫॥

ತನ್ಮಧ್ಯಗೋಪುರವರಂ ಮಣಿಮಾಣಿಕ್ಯನಿರ್ಮಿತಮ್ ।
ಮಹಾಮಣಿಶಿಖಾಕೀಲಕಲಿತಂ ಶೇಖರಾನ್ವಿತಮ್ ॥೧೬॥

ರುದ್ರಾವತಾರಚರಿತೈರ್ವೃಷಭೈಶ್ಚ ಸಮನ್ವಿತಮ್ ।
ಏಕಾದಶಸಹಸ್ರಂ ವೈ ತೋಮರಾಸಿವರಾಯುಧಾಃ ॥೧೭॥

"ಉಪನಿಷತ್ಶ್ರುತಿಪಾದ್ಯನಾದ ಮಹೇಶ್ವರನೇ, ಸಂಸಾರ ತಾಪವನ್ನು ಕೊಡುವಂತಹ ನಮ್ಮ ದೊಡ್ಡವ್ಯಾಧಿಯನ್ನು ನಿನ್ನ ಕೃಪಾದೃಷ್ಟಿಯಿಂದ ಪರಿಹರಿಸು. ಏಕೆಂದರೆ ನೀನು ಭವರೋಗನಾಶಕನು. ವೈದ್ಯರಿಗೆಲ್ಲಾ ವೈದ್ಯನಾಗಿರುವೆ. ವೇದಗಳೆಲ್ಲವೂ ಹಾಗೆಯೇ ಧ್ಯಾನಿಸುತ್ತಿರುವುವು. ಪರಮೇಶ್ವರನೇ ನಮ್ಮನ್ನು ಕಾಪಾಡು." ||೧೪||

ಹೀಗೆ ಮಣಿಭದ್ರೇಶ್ವರಲಿಂಗವನ್ನು ಸಮಸ್ತ ರುದ್ರಗಣಗಳೂ ಪ್ರಾರ್ಥಿಸುತ್ತಿರುವುವು. ಅದೇ ರೀತಿ ಕೈಲಾಸಪರ್ವತದ ದಕ್ಷಿಣಭಾಗದಲ್ಲಿರುವ ಒಂದು ಪ್ರಾಕಾರವು ಅನೇಕ ಮುತ್ತುಗಳಿಂದಲೂ ರತ್ನಗಳಿಂದಲೂ ನಿರ್ಮಿತವಾಗಿರುವುದು ||೧೫||

ಅದರ ಮಧ್ಯದಲ್ಲಿ ಒಂದು ಶ್ರೇಷ್ಠವಾದ ಗೋಪುರವು ಮಾಣಿಕ್ಯಮಯವಾಗಿರುವುದು. ಅದರ ಮೇಲೆ ದಿವ್ಯವಾದ ರತ್ನಗಳು ಕೀಲಿಸಲ್ಪಟ್ಟಿವೆ. ಆ ಗೋಪುರಕ್ಕೆ ಒಂದು ಶ್ರೇಷ್ಠವಾದ ರತ್ನಶಿಖರವು ಕಂಡುಬರುತ್ತಿದೆ. ||೧೬||

ಅದರಲ್ಲಿ ರುದ್ರಾವತಾರದ ವಿಗ್ರಹಗಳೂ, ವೃಷಭಮೂರ್ತಿಗಳೂ ಸುಮಾರು ಹನ್ನೊಂದುಸಾವಿರ ಸಂಖ್ಯೆಯಲ್ಲಿರುತ್ತವೆ. ||೧೭||

ಮಹಾಬಲಾ ಮಹೋತ್ಸಾಹಾ ದಿವ್ಯಾಸ್ತ್ರತ್ರ ಗಣಾಶ್ಶುಭಾಃ ।
ಜಟಾಮುಕುಟಶೋಭಾಢ್ಯಾಸ್ತಾರಾನಾಥಕಲಾಧರಾಃ ॥೧೮॥

ಶಿವಾಜ್ಞಾಕಾರಿಣಸ್ಸರ್ವೇ ಯೌವನೋನ್ಮತ್ತವಿಗ್ರಹಾಃ ।
ತತ್ರ ಸಂಪೂಜಯಂತ್ಯೇವ ದಿವ್ಯರುದ್ರೇಶ್ವರಂ ಹಿ ತೇ ॥೧೯॥

ಮಣಿಧಾಮ್ನಿ ಮಹಾಲಿಂಗಂ ಸಂಪೂಜ್ಯ ಸ್ತುವಂತೀಶ್ವರಂ ॥೨೦॥

॥ ರುದ್ರಗಣಾ ಊಚುಃ ॥

ದಿವ್ಯೇಶ್ವರ ತ್ರಿದಶವರ್ಗಜಜಾತದುಃಖ
ಸಂತಾಪಬೃಂದಪುರನಾಶನ ತೇ ವಿನೀತಂ ।
ದೇವೇಶ ತೇ ವರದಯಾರಸಪಾತ್ರಮೀಶ
ತ್ವಸ್ಮಾನ್ ಸದಾಶಿವ ಸದೈವ ಸುರಕ್ಷ ತಾನ್ನಃ ॥೨೧॥

ಏವಂ ಸ್ತುವಂತಿ ತೇ ರುದ್ರಾ ದಿವ್ಯರುದ್ರೇಶ್ವರಂ ತದಾ ।
ಗೋಪುರಂ ತಚ್ಚ ಪ್ರಾಕಾರಂ ರಕ್ಷಂತಿ ಸತತಂ ಗಣಾಃ ॥೨೨॥

ಅಸಂಖ್ಯಾತರಾದ ರುದ್ರಗಣಗಳು, ತೋಮರ, ಕತ್ತಿ ಮೊದಲಾದ ಆಯುಧಗಳನ್ನು ಧರಿಸಿದವರಾಗಿ, ಮಹಾಬಲಿಷ್ಠರಾಗಿ, ಉತ್ಸಾಹಯುಕ್ತರಾಗಿ, ಜಟೆ, ಕಿರೀಟ ಇವುಗಳನ್ನೂ, ಚಂದ್ರಕಲೆಯನ್ನೂ ಹೊಂದಿದವರಾಗಿ, ಪರಶಿವನ ಸೇವೆಗೈಯ್ಯುತ್ತಾ ಇರುವರು. ॥೧೮॥

ಅವರು ಸರ್ವದಾ ಶಿವಾಜ್ಞಾಪಾಲಕರಾಗಿರುವರು. ಯೌವನದಿಂದ ಮದಿಸಿದವರಾಗಿ ಕಾಣುವರು. ಇಂತಹವರು ರತ್ನಖಚಿತವಾದ, ದೇವಾಲಯದಲ್ಲಿ ಮಹಾಲಿಂಗೇಶ್ವರನನ್ನು ಸಂತೋಷದಿಂದ ಸ್ತುತಿಸುತ್ತಿರುವರು. ॥೧೯॥

"ದಿವ್ಯೇಶ್ವರನೇ, ದೇವತೆಗಳಿಗೆ ಒದಗುವ ಸಕಲದುಃಖಗಳನ್ನೂ ನಾಶಮಾಡತಕ್ಕವನೇ, ತ್ರಿಪುರನಾಶಕನೇ, ಯಾರು ನಿನಗೆ ಭಕ್ತರೆನಿಸಿ, ನಿನ್ನ ದಯಾರಸಕ್ಕೆ ಪಾತ್ರರೆನಿಸುವರೋ, ಅಂತಹವರನ್ನೂ, ನಿನ್ನ ಗಣಗಳೆನಿಸಿದ ನಮ್ಮನ್ನೂ ಕರುಣೆಯಿಂದ ಕಾಪಾಡು." ॥೨೧॥

ಹೀಗೆ ಸಕಲ ರುದ್ರಗಣಗಳೂ, ದಿವ್ಯರುದ್ರೇಶ್ವರನನ್ನು ಸ್ತುತಿಸುತ್ತಾ ಆ ಪ್ರಾಕಾರವನ್ನು ಕಾದುಕೊಂಡಿರುವರು. ॥೨೨॥

ತತ್ಪಶ್ಚಾನ್ಮಣಿಸಂಕ್ಲೃಪ್ತಪ್ರಾಕಾರಂ ಮಣಿಗೋಪುರಂ ।
ರುದ್ರಾವತಾರಚರಿತ್ರೈರ್ಲಲಾಮವೃಷಶೇಖರೈಃ ॥೨೩॥

ಪ್ರೋಲ್ಲಸತ್ಕಕುದ್ಮೈಶ್ಚೈವ ಮಣೀಂದ್ರಮುಕುಟೈರಪಿ ।
ತತ್ರ ರಕ್ಷಂತಿ ಗಣಪಾ ಹೇತಿಶೂಲವರಾಯುಧಾಃ ॥೨೪॥

ತ್ರಿಪುಂಡ್ರಾವಲಿಫಾಲೋರುಕಪರ್ದವರಮೌಲಯಃ ।
ಬಾಲಾರುಣಪ್ರತಿಪ್ರಖ್ಯಚಂಚಚ್ಚಂದ್ರಕಲಾಧರಾಃ ॥೨೫॥

ಏಕಾದಶಸಹಸ್ರಂ ವೈ ರಕ್ಷಂತಿ ಗಣಪಾಸ್ಸದಾ ।
ದಕ್ಷಾಧ್ವರವಿನಾಶಾಯ ಮಹೇಶಾಂಗಾದ್ವಿನಿರ್ಗತಾಃ ॥೨೬॥

ರೌಮ್ಯಾ ನಾಮ ಗಣಶ್ರೇಷ್ಠಾ ಮತ್ತಮಾತಂಗವಿಕ್ರಮಾಃ ।
ತತ್ರ ತೇ ಪೂಜಯಂತ್ಯೇವ ರೌಮ್ಯೇಶಂ ಮಣಿಧಾಮಗಂ ॥೨೭॥

ಇನ್ನು ಕೈಲಾಸಪರ್ವತದ ಪಶ್ಚಿಮಭಾಗದಲ್ಲಿ ಮತ್ತೊಂದು ಮಣಿಗೋಪುರವಿರುವುದು. ಅದರಲ್ಲಿಯೂ ರುದ್ರಾವತಾರದ ವಿಗ್ರಹಗಳೂ, ವೃಷಭಮೂರ್ತಿಗಳೂ ವಿಶೇಷವಾಗಿರುವುವು. ||೨೩||

ಆ ಬಸವನವಿಗ್ರಹಗಳಿಗೆ ದೊಡ್ಡವಾದ ಹಿಳಿಲುಗಳೂ, ರತ್ನಮಯವಾದ ಕಿರೀಟಗಳೂ ಕಾಣುತ್ತಿರುವುವು. ಅಲ್ಲಿ ಅನೇಕ ವೀರಗಣನಾಯಕರು, ಆಯುಧಪಾಣಿಗಳಾಗಿ ಆ ಪ್ರಾಕಾರವನ್ನು ರಕ್ಷಿಸುತ್ತಿರುವರು. ||೨೪||

ಗಣನಾಯಕರೆಲ್ಲರೂ ಭಸ್ಮವನ್ನು ತಮ್ಮ ಹಣೆಯಲ್ಲಿ ಧರಿಸಿರುವರು. ತಲೆಯಲ್ಲಿ ಜಟಾಜೂಟವಿರುವುದು. ಬಾಲಸೂರ್ಯನನ್ನು ಹೋಲುವಂತಹ ಚಂದ್ರಕಲೆಯನ್ನು ಶಿರಸ್ಸಿನಲ್ಲಿ ಧರಿಸಿದವರಾಗಿರುವರು. ||೨೫||

ಅವರು ಸುಮಾರು ಹನ್ನೊಂದುಸಾವಿರ ಸಂಖ್ಯೆಯಲ್ಲಿರುವರು. ಹಿಂದೆ ದಕ್ಷಬ್ರಹ್ಮನ ಯಾಗನಾಶಕ್ಕಾಗಿ ಇವರೆಲ್ಲರೂ ಈಶ್ವರನ ಅಂಗದಿಂದ ಉದ್ಭವಿಸಿದವರು.||೨೬||

ಇವರಿಗೆ ರೌಮ್ಯರೆಂದು ಹೆಸರು. ಮದ್ದಾನೆಯಂತೆ ಪರಾಕ್ರಮಿಗಳು. ಇಂತಹ ರೌಮ್ಯಗಣಗಳು ಮಣಿಗೃಹದಲ್ಲಿರುವ ರೌಮ್ಯೇಶ್ವರಸ್ವಾಮಿಯನ್ನು ಪೂಜಿಸುವರು. ||೨೭||

ಪೂಜಯಂತಿ ಸ್ತುವಂತ್ಯೇವ ರೌಮ್ಯಾ ನಾಮ ಗಣಾಶ್ಶಿವಂ ॥೨೮॥

ತ್ವದ್ರೋಮಜಾತವಿಧಯೋ ಹರವಿಷ್ಣುಸಂಜ್ಞಾ
ರಕ್ಷಂತಿ ದೇವ ಜಗತಾಂ ಸ್ಥಿತಿನಾಶಕೇಽಪಿ ।
ತ್ವತ್ಪಾದಪಂಕಜರಜಶ್ಶಿರಸಾ ವಹಂತಃ
ಪಾಹೀಶ ನೋಽದ್ಯ ಕೃಪಯಾ ಸರಸಾರ್ದ್ರದೃಷ್ಟ್ಯಾ ॥೨೯॥

ಏವಂ ಸ್ತುವಂತಿ ತೇ ರೌಮ್ಯಾ ಮಹೇಶಂ ಭಕ್ತಿಭಾವಿತಾಃ ।
ಉತ್ತರೇ ಭೌಮಕಾ ನಾಮ ಗಣಾಶ್ಶಂಭೋರ್ಮಹಾತ್ಮನಃ ॥೩೦॥

ಏಕಾದಶಸಹಸ್ರಂ ತು ಏಕೋಽಶೀಕೃತಹೇತಯಃ ।
ದಂಷ್ಟ್ರಾಕರಾಳವದನಾ ಜಟಾಬದ್ಧೇಂದುಖಂಡಕಾಃ ॥೩೧॥

ಸಜಲೋದ್ದಾಮಘನಭಾಸ್ಸದೇಹಾಸ್ತೇಽತುಲಪ್ರಭಾಃ ।
ಭಸ್ಮದಿಗ್ಧಾಸ್ತ್ರಿಪುಂಡ್ರಾಂಕಾ ರುದ್ರಾಕ್ಷಾವಲಿಭಾಸುರಾಃ ॥೩೨॥

---

ಮತ್ತು ರೌಮ್ಯೇಶ್ವರಮೂರ್ತಿಯನ್ನು ಆರಾಧಿಸಿ ಹೀಗೆ ಸ್ತುತಿಸುವರು. ||೨೮||

"ಮಹೇಶ್ವರನೇ, ನಿನ್ನ ರೋಮಕೂಪಗಳಿಂದ, ಬ್ರಹ್ಮ, ವಿಷ್ಣು, ರುದ್ರರು ಜನಿಸಿರುವರು. ಅವರು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ನೆರವೇರಿಸುತ್ತಿರುವರು. ಅವರೆಲ್ಲರೂ ನಿನ್ನ ಪಾದಪಂಕಜಗಳ ರಜಸ್ಸನ್ನು ಶಿರಸ್ಸಿನಲ್ಲಿ ಧರಿಸಿ ನಿನ್ನನ್ನೇ ಆರಾಧಿಸುತ್ತಿರುವರು. ಇಂತಹ ದೇವದೇವನಾದ ನೀನು ಕೃಪಾದೃಷ್ಟಿಯಿಂದ ನಮ್ಮನ್ನು ರಕ್ಷಿಸು" ||೨೯||

ಹೀಗೆ ರೌಮ್ಯಗಣಗಳು ಮಹೇಶ್ವರನನ್ನು ಭಕ್ತಿಯಿಂದ ಸ್ತುತಿಸುವರು. ಉತ್ತರಭಾಗದಲ್ಲಿ ಭೌಮಕರೆಂಬ ಶಿವಗಣಗಳು ವಾಸಿಸುವರು. ||೩೦||

ಅವರು ಹನ್ನೊಂದುಸಾವಿರ ಸಂಖ್ಯೆಯಲ್ಲಿರುವರು. ಆಯುಧಗಳನ್ನು ಒರೆಯಿಂದ ಎಳೆದು ಹಿಡಿದು ನಿಂತಿರುವರು. ಕೋರೆಹಲ್ಲುಗಳಿಂದ ಅವರ ಮುಖವು ಉಗ್ರವಾಗಿರುವುದು. ಜಟೆಯಲ್ಲಿ ಚಂದ್ರಮಂಡಲವು ವಿರಾಜಿಸುತ್ತಿರುವುದು. ||೩೧||

ಕಪ್ಪುಮೇಘದಂತೆ ಅವರ ಮೈಬಣ್ಣವಿರುವುದು. ಅತಿಶಯವಾದ ಕಾಂತಿಯಿಂದ ಕೂಡಿದವರಾಗಿ ಭಸ್ಮತ್ರಿಪುಂಡ್ರಧಾರಿಗಳಾಗಿ ರುದ್ರಾಕ್ಷಿಗಳ ಸರವನ್ನು ಕಂಠದಲ್ಲಿ ಧರಿಸಿರುವರು. ||೩೨||

ಖೇಟಢಕ್ಕಾಧ್ವನಿಭೃತಸ್ತಟಿತ್ಕೂಟಸಮಾರವಾಃ ।
ಉರಗೇಂದ್ರಾಧಿಕಕ್ರೋಧಾ ಉರಗೇಂದ್ರಾಧಿಕಾ ಜವೇ ॥೩೩॥

ಶಿವಾಜ್ಞಾಕಾರಿಣೋ ಭೌಮಾ ಬಲವೀರ್ಯಪರಾಕ್ರಮಾಃ ।
ತತ್ರೋತ್ತರೇ ಚ ಪ್ರಾಕಾರೇ ಮಣಿಸಾಲೋಜ್ಜ್ವಲಪ್ರಭೇ ॥೩೪॥

ತನ್ಮಧ್ಯಗೋಪುರೇ ಚಾಪಿ ರುದ್ರಕ್ರೀಡಾವೃಷೈರ್ವೃತೇ ।
ಮಣಿರಾಜನ್ಮಹಾಕುಂಭೇ ರಂಜಿತೇ ಭಾನುಸಪ್ರಭೇ ॥೩೫॥

ತಿಷ್ಠಂತಿ ತೇ ಚ ರಕ್ಷಂತಿ ಪ್ರಾಕಾರಂ ತಚ್ಚ ಗೋಪುರಂ ।
ತೈಶ್ಚ ಭೌಮೇಶ್ವರಂ ನಾಮ್ನಾ ಮಣಿಧಾಮಗತೋಽರ್ಚಿತಃ ॥೩೬॥

ಸಂಸ್ತುತಃ ಪರಯಾ ಭಕ್ತ್ಯಾ ಲಿಂಗಸಂಸ್ಥೋ ಮಹೇಶ್ವರಃ ॥೩೭॥

ಖೇಟ, ಢಕ್ಕಾ ಮುಂತಾದ ವಾದ್ಯಗಳಧ್ವನಿಯು ಸಿಡಿಲುಗಳ ಧ್ವನಿಗೆ ಸರಿಸಮನಾಗಿರುವುದು. ಅವರು ಕೋಪದಲ್ಲಿ ಆದಿಶೇಷನನ್ನು ಮೀರಿಸಿರುವರು. ವೇಗದಲ್ಲಿ ಆದಿಶೇಷನಿಗಿಂತಲೂ ಮಿಗಿಲೆನಿಸಿರುವರು. ||೩೩||

ಆ ಭೌಮಗಣಗಳೆಲ್ಲರೂ ಶಿವಾಜ್ಞಾಕಾರಿಗಳಾಗಿ, ಮಹಾಬಲಿಷ್ಠರೆಂದೆನಿಸಿ, ರತ್ನಕಾಂತಿಯಿಂದ ಹೊಳೆಯುತ್ತಿರುವ ಉತ್ತರದಿಕ್ಕಿನ ಪ್ರಾಕಾರವನ್ನು ರಕ್ಷಿಸುತ್ತಿರುವರು. ||೩೪||

ಆ ಪ್ರಾಕಾರಮಧ್ಯದಲ್ಲಿ ಒಂದು ಗೋಪುರವಿರುವುದು ಅದರಲ್ಲಿ ರುದ್ರಕ್ರೀಡಾ ಪುತ್ಥಳಿಗಳೂ, ಬಸವನ ವಿಗ್ರಹಗಳೂ ರತ್ನಮಯವಾಗಿ ರಂಜಿಸುತ್ತಿರುವುವು. ಇದು ಸೂರ್ಯರಂತೆ ಹೊಳೆಯುತ್ತಿರುವುದು. ||೩೫||

ಭೌಮಗಣಗಳು ಹಾಗೆ ಗೋಪುರವನ್ನೂ, ಪ್ರಾಕಾರವನ್ನೂ ರಕ್ಷಿಸುತ್ತ ಭೌಮೇಶ್ವರಲಿಂಗವನ್ನೂ ಪೂಜಿಸುತ್ತಿರುವರು. ರತ್ನಮಯವಾದ ಶಿವಾಲಯದಲ್ಲಿ ನಿಂತು ಅತಿಶಯವಾದ ಭಕ್ತಿಯಿಂದ ಭೌಮೇಶ್ವರನ ಮುಂದೆ ನಿಂತು ಹೀಗೆ ಪ್ರಾರ್ಥಿಸುವರು. ||೩೬-೩೭||

ಭೌಮೇಶ ಭೀಮರಥತುಂಗರಥಾಂಗದಾನೇ
ಸಂಮೋದಿತೋ ಹರಿಹರಾಂಬುಜಲೋಚನೇನ ।
ಭೂಮಾತಿಗಾಖಿಲಗತೇ ಪರಿಪಾಹಿ
ಸೋಮಸುಧಾಮೋತ್ತಮಾಂಗ ಲಲನಾರ್ಚಿತಚಾರುದೇಹ ॥೩೮॥

ಇತಿ ಸ್ತುವಂತಿ ತೇ ಭೌಮಾ ಮಹಾದೇವಂ ಘೃಣಾನಿಧಿಂ ।
ವಿಂಶತ್ಸಹಸ್ರಂ ಪರಿತಃ ಪ್ರಾಕಾರಮಣಿಗೋಪುರೈಃ ॥೩೯॥

ಶೋಭಿತಂ ವೃಷಭೈಶ್ಚಿತ್ರೈರ್ನಾನಾಶಿಲ್ಪೈಕಸುಂದರೈಃ ।
ಮನಸಾಪ್ಯನುಮಾನೇನ ನೋಪಮೇಯಂ ಮನೋಹರೈಃ ॥೪೦॥

ಚತುರ್ದಿಕ್ಷ್ವಪಿ ತೇ ರುದ್ರಾ ಬ್ರಹ್ಮವಿಷ್ಣ್ವಿಂದ್ರಹಂತೃಕಾಃ ।
ಹೇತಿಶೂಲಕರಾಸ್ಸರ್ವೇ ಭಸ್ಮಪಾಂಡರವಿಗ್ರಹಾಃ ॥೪೧॥

ಭೌಮೇಶ್ವರನೇ, ನೀನು ಭಯಂಕರವಾದ ರಥವನ್ನೂ, ಚಕ್ರವನ್ನೂ, ವಿಷ್ಣುವಿಗೆ ಅನುಗ್ರಹಿಸಿ ಅವನ ಕಮಲಲೋಚನದಿಂದ ನೀನು ತೃಪ್ತಿಪಟ್ಟಿರುವೆ. ಮಹಾಮಹಿಮನೂ, ಚಂದ್ರಶೇಖರನೂ, ಸುಂದರವಾದ ದೇಹವುಳ್ಳವನೂ ಆದ ಮಹೇಶ್ವರನೇ, ನಮ್ಮನ್ನು ರಕ್ಷಿಸು. ॥೩೮॥

ಹೀಗೆ ಕರುಣಾನಿಧಿಯಾದ ಮಹೇಶ್ವರನನ್ನು ಭೌಮಗಣಗಳು ಸ್ತುತಿಸುತ್ತಿರುವುವು. ಇವರಲ್ಲದೆ ಇನ್ನೂ ಇಪ್ಪತ್ತುಸಾವಿರ ರುದ್ರಗಣಗಳು, ರತ್ನಮಯವಾದ ಪ್ರಾಕಾರಗಳಿಂದ ಕೂಡಿದ ಗೋಪುರಗಳಲ್ಲಿ ವಾಸಿಸುತ್ತಿರುವರು. ॥೩೯॥

ಆ ಪ್ರಾಕಾರಗಳಾದರೋ ನಾನಾವಿಧವಾದ ವೃಷಭವಿಗ್ರಹಗಳಿಂದಲೂ, ಶಿಲ್ಪಕಲೆಗಳಿಂದಲೂ ಕೂಡಿದ್ದಾಗಿ, ಮನಸ್ಸಿನಿಂದಲೂ, ಅನುಮಾನದಿಂದಲೂ ಅವುಗಳಿಗೆ ಹೋಲಿಕೆಯನ್ನು ಕೊಡುವುದೇ ಅಸಾಧ್ಯವೆನಿಸುವುದು. ॥೪೦॥

ಆ ರುದ್ರಗಣಗಳು, ನಾಲ್ಕು ದಿಕ್ಕುಗಳಲ್ಲಿಯೂ ಸಂಚರಿಸುವರು. ಬ್ರಹ್ಮ, ವಿಷ್ಣು ಇವರೇ ಮೊದಲಾದವರನ್ನು ಯುದ್ಧದಲ್ಲಿ ಸೋಲಿಸಿರುವರು. ಸರ್ವರೂ ಆಯುಧಗಳನ್ನು ಕೈಯಲ್ಲಿ ಧರಿಸಿ, ಭಸ್ಮದಿಂದ ದೇಹವನ್ನು ಶುಭ್ರಗೊಳಿಸಿಕೊಂಡಿರುವರು. ॥೪೧॥

ರಂಭೋಪಮಾನವೃತ್ತೋರೂರುದ್ವಯವಿರಾಜಿತಾಃ ।
ವಕ್ಷಃಕವಾಟಪಟ್ಟಾಭಹಿರಣ್ಯಕವಚಾವೃತಃ ॥೪೨॥

ಉಷ್ಣೀಷಿಣೋ ಮುಕುಟಿನಶ್ಚೋರಗೇಂದ್ರೋರುಮೌಳಯಃ ।
ಧಾವಂತಸ್ಸಂಸ್ಥಿತಾಃ ಕೇಚಿನ್ನಿಷಣ್ಣಾಃ ಸ್ವಾಪಕಾಃ ಪರೇ ॥೪೩॥

ನಿಷಂಗಿಣಃ ಕವಚಿನಶ್ಶರಕಾರ್ಮುಕಪಾಣಯಃ ।
ವರ್ಷಂತಶ್ಶರವರ್ಷೈಶ್ಚಾಪ್ಯಶೈವಾನ್ನುನ್ನಸಾಯಕೈಃ ॥೪೪॥

ಪಥಿ ವೃಕ್ಷೇ ಜಲೇ ಚೈವ ಸಾಗರೈರ್ಭುವಿಸಂಸ್ಥಿತಾಃ ।
ವಿಪಿನೇ ಚ ತಥಾ ಗ್ರಾಮೇ ಪುರೇ [1]ಖರ್ವೇ ವೃಕೇ ತಥಾ ॥೪೫॥

ಶಿವಾಜ್ಞಾಕಾರಿಣಸ್ಸರ್ವೇ ಚಾಗ್ನಿದೀಪ್ತಾ ಮಹೌಜಸಃ ॥೪೬॥

ಅವರ ತೊಡೆಗಳಾದರೋ ಬಾಳೆ ಮರಗಳಿಗೆ ಸಮಾನವಾಗಿ ಮಾಟವಾಗಿ ಕಾಣು ತ್ತಿರುವುವು. ಕವಾಟದಂತೆ ವಿಶಾಲವಾದ ಎದೆಯೂ, ಚಿನ್ನದ ಕವಚದಿಂದ ಆಚ್ಛಾದಿತವಾದ ದೇಹವೂ ಕಂಗೊಳಿಸುತ್ತಿರುವುದು. ॥೪೨॥

ಕೆಲವರು ರುಮಾಲನ್ನೂ, ಹಲವರು ಕಿರೀಟವನ್ನೂ, ಅನೇಕರು ಸರ್ಪಗಳನ್ನೂ ತಲೆಗೆ ಸುತ್ತಿಕೊಂಡಿರುವರು. ಅವರಲ್ಲಿ ಕೆಲವರು ಸದಾ ಓಡಾಡುತ್ತಿರುವರು. ಕೆಲವರು ಕುಳಿತಿರುವರು. ಅನೇಕರು ನಿದ್ರಿಸುತ್ತಿರುವರು. ॥೪೩॥

ಬತ್ತಳಿಕೆ, ಕವಚ, ಬಾಣ, ಬಿಲ್ಲು ಇವುಗಳನ್ನು ಸರ್ವದಾ ಕೈಯಲ್ಲಿ ಧರಿಸಿಕೊಂಡು, ಬಾಣವೃಷ್ಟಿಯನ್ನು ಸುರಿಸುತ್ತಾ, ಶಿವಸೇವಕರಲ್ಲದವರನ್ನು ತಮ್ಮ ಆಯುಧಗಳಿಂದ ಶಿಕ್ಷಿಸುತ್ತಾ ಸಂಚರಿಸುತ್ತಿರುವರು. ॥೪೪॥

ದಾರಿಯಲ್ಲಿ, ಮರಗಳಲ್ಲಿ, ನೀರಿನಲ್ಲಿ, ಸಮಸ್ತ ಸಾಗರಗಳಲ್ಲಿಯೂ, ಭೂಮಿಯಲ್ಲಿಯೂ, ಅರಣ್ಯದಲ್ಲಿಯೂ, ಗ್ರಾಮಾದಿಗಳಲ್ಲಿಯೂ, ಅಪಥಗಳಲ್ಲಿಯೂ, ಅವರು ಸಂಚರಿಸಬಲ್ಲರು. ॥೪೫॥

ಅವರೆಲ್ಲರೂ ಶಿವಾಜ್ಞಾಧಾರಕರಾಗಿ, ಅಗ್ನಿಯಂತೆ ಹೊಳೆಯುತ್ತ ಮಹಾತೇಜಸ್ವಿಗಳಾಗಿ ಕಂಡುಬರುವರು. ॥೪೬॥

---

1. ಖರ್ವೇಽಟಕೇ ಇತಿ (ಪಾ. ರ.)

**ಏವಂ ತೇ ವರಗೋಪುರೈಶ್ಚ ಸಹಿತಾರುದ್ರಾಶ್ಚತುರ್ದಿಕ್ಷ್ವಪಿ ।**
**ಪ್ರಾಕಾರಂ ಮಣಿಸಾರಸುಂದರತಮಂ ರಾಜದ್ವೃಷಾಧಿಷ್ಠಿತಂ ॥೪೭॥**

**ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಪ್ರಾಕಾರವರ್ಣನೇ ರುದ್ರಗಣಾರ್ಚನಂ ನಾಮ ಏಕತ್ರಿಂಶೋಽಧ್ಯಾಯಃ**

ಹೀಗೆಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ಹೇಳುತ್ತಾ, ಎಲೈ ಮಹರ್ಷಿಗಳೇ, ಹೀಗೆ ಕೈಲಾಸಪರ್ವತವು ನಾಲ್ಕು ದಿಕ್ಕುಗಳಲ್ಲಿಯೂ, ಮನೋಹರವಾದ ಗೋಪುರಗಳನ್ನೂ, ರತ್ನಖಚಿತವಾದ ಪ್ರಾಕಾರಗಳನ್ನೂ, ಮಣಿಮಯಗಳಾದ ವೃಷಭವಿಗ್ರಹಗಳನ್ನೂ ಹೊಂದಿ ಸರ್ವದಾ ಪ್ರಕಾಶಮಾನವಾಗಿರುವುದು. ಎಂಬ ವಿಷಯವನ್ನು ನಿಮಗೆ ಸಂಪೂರ್ಣವಾಗಿ ತಿಳಿಸಿರುವೆನೆಂದು ಸೂತರು ವಿವರಿಸಿ ಸುಮ್ಮನಾದರು. ||೪೭||

ಇಲ್ಲಿಗೆ ಶ್ರೀ ಶಿವರಹಸ್ಯದ ಪ್ರಥಮಾಂಶದಲ್ಲಿ ಪ್ರಾಕಾರವರ್ಣನೆಯ ಪ್ರಸ್ತಾವದಲ್ಲಿ ರುದ್ರಗಣಗಳ ಅರ್ಚನೆಯೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

श्रीः

# ಅಥ ಶ್ರೀಶಿವರಹಸ್ಯೇ

## ದ್ವಾತ್ರಿಂಶೋಽಧ್ಯಾಯಃ

### ಸಭಾವರ್ಣನಂ

|| ಸ್ಕಂದ ಉವಾಚ ||

ತಸ್ಯಾಂತರೇ ಶಿವೇನೈವ ಮನಸಾ ಪರಿನಿರ್ಮಿತಾಃ ।
ವಿಂಶತ್ಸಹಸ್ರಮಾನೇನ ಆಯಾಮೋಚ್ಛ್ರಾಯತಸ್ತದಾ ||೧||

ಪ್ರಾಗ್ದಕ್ಷಿಣೇ ಪ್ರತೀಚ್ಯಾಂ ವೈ ಚೋತ್ತರೇ ಶೂಲಪಾಣಿನಾ ।
ಮಣಿಪ್ರಭಾಧಿಕಜ್ಯೋತಿಃ ಕೈಲಾಸನಗಮೌಲಿನಃ ||೨||

ಕಲಧೌತನಗೋದ್ದಾಮಶಿಖರೇ ತಿಲಕಾಯಿತಾಃ ।
ಪುಮರ್ಥಾ ಇವ ರಾಜಂತ್ಯಶ್ಚತುರ್ವೇದಶಿಖೋಪಮಾಃ ||೩||

### ಶ್ರೀಶಿವರಹಸ್ಯದಲ್ಲಿ ಮೂವತ್ತೆರಡನೆಯ ಅಧ್ಯಾಯ

ಕೈಲಾಸಪರ್ವತದ ಮಧ್ಯಭಾಗದಲ್ಲಿ ಶಂಕರನು ತನ್ನ ಮಾನಸಸೃಷ್ಟಿಯಿಂದ ಇಪ್ಪತ್ತುಸಹಸ್ರ ಯೋಜನ ಪರಿಮಿತಿಯಿಂದ ಕೂಡಿದ ಸಭಾಗೃಹವೊಂದನ್ನು ರಚಿಸಿರುವನು. ||೧||

ಸಭಾಗೃಹದ ಪೂರ್ವ. ಪಶ್ಚಿಮ, ದಕ್ಷಿಣ, ಉತ್ತರ ಮುಂತಾದ ನಾಲ್ಕು ದಿಕ್ಕುಗಳಲ್ಲಿಯೂ, ರತ್ನಕಾಂತಿಯಿಂದ ಅಧಿಕವಾಗಿ ಪ್ರಕಾಶಿಸುವಂತಹ ಶಿಖರಗಳನ್ನು ಕಲ್ಪಿಸಿರುವನು. ||೨||

ಆ ನಾಲ್ಕು ಶಿಖರಗಳೂ ಸುವರ್ಣಮಯವಾಗಿರುವುದರಿಂದ ತಿಲಕಗಳಂತೆ ಕಂಡುಬರುತ್ತಿವೆ. ಮತ್ತು ಚತುರ್ವಿಧವಾದ ಪುರುಷಾರ್ಥಗಳಂತೆಯೂ, ಚತುರ್ವೇದಗಳ ಶಿಖಾಭಾಗಗಳಂತೆಯೂ ಕಂಗೊಳಿಸುತ್ತಿವೆ. ||೩||

ರಂಗಸ್ಥಾನಂ ಮಹೇಶಸ್ಯ ಶಂಭೋಸ್ಸಂಧ್ಯಾನಟಸ್ಯ ಚ ।
ಶಾತಕುಂಭಮಹಾಕುಂಭಸಹಸ್ರೇಣೋಪಶೋಭಿತಾಃ ॥೪॥

ನಿಷ್ಟಪ್ತಹೇಮಕ್ಲುಪ್ತಾಸ್ತೇ ಮಹಾಮೇರುಗುಹೋಪಮಾಃ ।
ತತ್ತತ್ಕುಂಭಮಹಾಸ್ತಂಭಸಹಸ್ರಪರಿಶೋಭಿತಾಃ ॥೫॥

ಸುಬದ್ಧಮಣಿಸೋಪಾನಾ ವೇದಿಕಾಪಟ್ಟಿಕೋಜ್ಜ್ವಲಾಃ ।
ಮರಾಲರಾಜವಲ್ಲ್ಯುತ್ಥಮುಕ್ತಾಭಕ್ಷಿತಚಂಚುಕಾಃ ॥೬॥

ಉತ್ಕೋಚನೀಲಪೀತಾಚ್ಛರತ್ನಜಾಲಕಚಿತ್ರಿತಾಃ ।
ಮುಕ್ತಾಗುಚ್ಛೈರ್ವೃತಾಪಾರಮಾಲಾಜಾಲಾಕಿತಾಂತರಾಃ ॥೭॥

ಪ್ರವಾಳಲತಿಕಾಕ್ಲುಪ್ತ ಸ್ತಂಭವಿದ್ರುಮಪುತ್ರಿಕಾಃ ।
ಹರಿನ್ಮಣಿಕೃತಾಪಾದ ಪಾಲಿಬಂಧೋರು ಹಸ್ತಕಾಃ ॥೮॥

ಸಂಧ್ಯಾಕಾಲದಲ್ಲಿ ನಾಟ್ಯವಾಡುವಂತಹ ಮಹೇಶ್ವರನ ನಾಟ್ಯರಂಗವು ಸುವರ್ಣಮಯವಾದ ಸಹಸ್ರ ಕಲಶಗಳಿಂದ ಅಲಂಕೃತವಾಗಿದೆ. ॥೪॥

ಒಂದೊಂದು ಕಲಶಕ್ಕೂ ಒಂದು ಸುವರ್ಣಸ್ತಂಭವು ನಿಯತವಾಗಿ ನಿಂತಿದೆ. ಅವು ಅಪರಂಜಿ ಚಿನ್ನದಿಂದ ನಿರ್ಮಿತವಾದವುಗಳು. ಮೇರುಪರ್ವತದ ಗುಹೆಗಳಂತೆ ಶೋಭಿಸುತ್ತಿವೆ. ॥೫॥

ಮಣಿಗಳಿಂದ ಕಟ್ಟಲ್ಪಟ್ಟ ಸೋಪಾನಗಳೂ, ಜಗುಲಿಗಳೂ, ಪಟ್ಟಿಗಳೂ ವಿರಾಜಿಸುತ್ತಿರುವುವು. ರಾಜಹಂಸಗಳು ಬಳ್ಳಿಗಳಲ್ಲಿ ತೋರಿಬರುವ ಮುತ್ತುಗಳನ್ನು ತಮ್ಮ ಕೊಕ್ಕುಗಳಲ್ಲಿ ಕಚ್ಚಿಕೊಂಡು ಓಡಾಡುತ್ತಿರುವುವು. ॥೬॥

ಕಾಂತಿಯಿಂದ ಕೂಡಿರುವ, ನೀಲ, ಹಳದಿ, ಶುಭ್ರವರ್ಣ ಇವುಗಳಿಂದ ರಂಜಿಸುವ ರತ್ನಸಮೂಹಗಳಿಂದ ಆ ಸಭಾಗೃಹವು ಅಲಂಕೃತವಾಗಿರುವುದು. ಮುತ್ತಿನ ಗೊಂಚಲುಗಳೂ ಮುತ್ತಿನ ಸರಗಳೂ ಗವಾಕ್ಷಗಳಲ್ಲಿ ಅಲ್ಲಲ್ಲಿ ಕಂಡುಬರುತ್ತಿರುವುವು. ॥೭॥

ಹವಳಗಳ ಬಳ್ಳಿಗಳನ್ನು ಕಂಬಗಳಿಗೆ ಬಿಗಿದಿರುವರು. ವಿದ್ರುಮಗಳ ಬೊಂಬೆಗಳು, ಪಚ್ಚೆಯಿಂದ ನಿರ್ಮಿತವಾದ ಕಲಶಗಳನ್ನು ಕೈಯ್ಯಲ್ಲಿ ಹಿಡಿದು ನಿಂತಿರುವುವು. ॥೮॥

**ಪುಷ್ಪರಾಗ ಮಹಾಸಿಂಹ ಸಟಾಮಂಡಲಕೀಲಿತಾಃ ।**
**ಗಜಶುಂಡೋರುಧಾರಾಚ್ಛ ನೀಲಕುಂಭೋರುಮೌಲಿಕಾಃ ॥೯॥**

**ವೈಡೂರ್ಯಧಾರಾ ಸೂತ್ರೋದ್ಯನ್ನಾಗಬಂಧವಿರಾಜಿತಾಃ ।**
**ಮೌಳಿಪಾಲಿಜಹಂಸಾಲಿ ಕಪೋತತಲಸುಂದರಾಃ ॥೧೦॥**

**ರತ್ನೋತ್ಕೀರ್ಣಾಚ್ಛವಲಭೀ ವೃತೋರುಮಣಿಮಾಲಯಃ**
**ಕುರವಿಂದಮಹೋತ್ಫುಲ್ಲಮಾಲಾಜಾಲಾವೃತಾಂತರಾಃ ॥೧೧॥**

**ಸ್ಫಟಿಕೋತ್ತಮಗರ್ಭಾಚ್ಛಧಾರಾಸೋಪಾನಕೀಲಿತಾಃ ।**
**ವಿಚಿತ್ರಜಾಲಿಕಾಪಾಲಿಚಿತನೀಲಮಹೋಪಲಾಃ ॥೧೨॥**

**ಬಿಂಬಾಭಪದ್ಮರಾಗೋತ್ಥಕೇಲಿಪಾಲೀವಿರಾಜಿತಾಃ ।**
**ಸುವರ್ಣಪರಿಸಂಕ್ಲೃಪ್ತರಂಭಾಪೂಗೈಕಭಾಸುರಾಃ ॥೧೩॥**

ಪುಷ್ಪರಾಗಮಣಿಗಳಿಂದ ಸಿಂಹವನ್ನು ನಿರ್ಮಿಸಿ ಅವುಗಳ ಕೇಸರಗಳು ಅತ್ಯಂತ ಕಾಂತಿಯುತಗಳಾಗಿರುವಂತೆ ಮಾಡಲ್ಪಟ್ಟಿವೆ. ಅಂತಹ ಸಿಂಹಗಳು ನೀಳವಾದ ಸೊಂಡಿಲುಗಳಿಂದ ರಂಜಿಸುತ್ತಿರುವ ಆನೆಗಳ ಕುಂಭಸ್ಥಳಗಳ ಮೇಲೆ ಕುಳಿತಿರುವುದನ್ನು ಅಲ್ಲಿ ನಾವು ನೋಡಬಹುದು. ॥೯॥

ವೈಡೂರ್ಯಮಣಿಗಳಿಂದ ಕಲ್ಪಿತವಾದ ರತ್ನಹಾರಗಳಿಂದ ನಾಗಬಂಧವು ರಚಿತವಾಗಿರುವುದು. ಸಭಾಗೃಹದ ಮೇಲ್ಭಾಗದಲ್ಲಿ ಹಂಸಪಕ್ಷಿಗಳು, ಕಪೋತಗಳು ಬಹಳವಾಗಿ ಕಂಗೊಳಿಸುತ್ತಿರುವುವು. ॥೧೦॥

ಸಭಾಗೃಹದ ಮುಂಜೂರುಗಳು ರತ್ನನಿರ್ಮಿತಗಳಾಗಿವೆ. ಅವರಿಂದ ರತ್ನದ ಗೊಂಚಲುಗಳು ನೇತಾಡುತ್ತಿರುವುವು. ಅರಳಿದ ಕುರುವಿಂದ ಪುಷ್ಪಗಳ ಸಮೂಹಗಳಿಂದ ತುಂಬಿದ ಮಾಲೆಗಳು ಸಾಲುಸಾಲಾಗಿ ಕಟ್ಟಲ್ಪಟ್ಟಿರುವುವು. ॥೧೧॥

ಸ್ಫಟಿಕಶಿಲೆಗಳಿಂದ ನಿರ್ಮಿತವಾಗಿ ಶುಭ್ರವರ್ಣದಿಂದ ರಂಜಿಸುವ ಸೋಪಾನಗಳೂ, ವಿಚಿತ್ರತರವಾಗಿ ತೋರಿಬರುತ್ತಿರುವ ವಿಧವಿಧವಾದ ಶಿಲೆಗಳೂ ಕಂಗೊಳಿಸುತ್ತಿರುವುವು. ॥೧೨॥

ಮಂಡಲಾಕಾರವಾಗಿ ತೋರುವ ಪದ್ಮರಾಗಮಣಿಗಳಿಂದ ಕಲ್ಪಿತವಾದ ಕ್ರೀಡಾಪಾತ್ರೆಗಳು ಅತಿಶಯವಾಗಿ ಕಂಡುಬರುತ್ತಿವೆ. ಹಾಗೆಯೇ ಸುವರ್ಣಮಯವಾಗಿರುವ ಬಾಳೆ, ಅಡಕೆ ಮುಂತಾದ ಮರಗಳು ಅಲ್ಲಿ ವಿರಾಜಿಸುತ್ತಿವೆ.

ಹರಿನ್ಮರಕತೋದ್ದಾಮಗರ್ಭಸಪ್ತಚ್ಛದಾವೃತಾಃ ।
ದಂತಿದಂತಾವಲೀಲಗ್ನಹಂಸಾಲೀವೃಷಕೀಲಿತಾಃ ॥೧೪॥

ಕಪೋತಪಾಲೀಪೀಠಸ್ಥಮಣಿಶಾರ್ದೂಲನಾಸಿಕಾಃ ।
ಸುವರ್ಣಕೇತಕೀಗುಚ್ಛತತ್ಫಲಾವಲಿಭಾಸುರಾಃ ॥೧೫॥

ಮಣಿಪಾನಸಜಾಮ್ರಾದಿಫಲಾಲಿಪರಿಲಂಬಿತಾಃ ।
ಮಾತುಲಿಂಗೈಶ್ಚ ಲಿಕುಚೈಃ ಪ್ರೋತಮಾಲಾವೃತಾಂತರಾಃ ॥೧೬॥

ಮಣಿಧಾರಾವೃಷೈಃ ಕುಂಭೈಸ್ಸಪಲ್ಲವಸುಮೈರ್ಯುತಾಃ ।
ದಮನೋರುವಿತಾನೋಚ್ಚಸಂಛಾದಿತತಲಾಂಬರಾಃ ॥೧೭॥

ಉಶೀರಪಟಗುಚ್ಛೈಶ್ಚ ಲಂಬಲೋಲಿತಭಾಸುರಾಃ ।
ಗಂಧಬಂಧಾನುಬಂಧೋದ್ಯನ್ಮಂದಮಾರುತಸುಂದರಾಃ ॥೧೮॥

ಮರಕತಮಣಿಗಳಿಂದ ಹಸುರುಬಣ್ಣವಾಗಿ ಕಾಣುವ ಏಳೆಲೆ ಬಾಳೆಗಿಡಗಳು ಅತಿಶಯವಾಗಿರುವುವು. ಆನೆಗಳ ದಂತಗಳಲ್ಲಿ, ಓಡಾಡುವಂತೆ ಹಂಸಗಳನ್ನೂ, ವೃಷಭಗಳನ್ನೂ ಕೀಲಿಸಿರುವರು. ॥೧೪॥

ಕಪೋತಗಳು ವಾಸಿಸುವ ಪಾಲಿಕೆಯನ್ನು ರತ್ನಗಳಿಂದ ಹುಲಿಗಳ ಮೂಗುಗಳ ಆಕಾರದಂತೆ ನಿರ್ಮಿಸಿರುವರು. ಚಿನ್ನದ ತಾಳೇಹೂವುಗಳೂ, ಚಿನ್ನದ ಫಲಗಳು ಇವು ಮಂಟಪವನ್ನು ರಂಜಿಸುತ್ತಿರುವುವು. ॥೧೫॥

ಹಲಸು, ಮಾವು ಮುಂತಾದ ಹಣ್ಣುಗಳ ಆಕಾರವನ್ನು ರತ್ನಗಳಿಂದ ನಿರ್ಮಿಸಿಟ್ಟಿರುವರು. ಮಾದಲ, ನಿಂಬೆ ಮುಂತಾದುವುಗಳನ್ನೂ ಹಾಗೆ ನಿರ್ಮಿಸಿ ಮಾಲೆಯನ್ನಾಗಿ ಮಾಡಿ ಕಟ್ಟಿರುವರು. ॥೧೬॥

ರತ್ನದ ಧಾರೆಗಳಿಂದ ನಿರ್ಮಿತವಾದ ಬಸವನ ವಿಗ್ರಹಗಳೂ, ಚಿಗುರು ಮತ್ತು ಹೂವುಗಳಿಂದ ಕೂಡಿರುವ ಕಲಶಗಳೂ ಬಹಳವಾಗಿರುವುವು. ದವನಗಳಿಂದ ಕಲ್ಪಿತವಾದ ಮೇಲ್ಕಟ್ಟುಗಳನ್ನು ಸಭಾಗೃಹದ ಮೇಲ್ಭಾಗಕ್ಕೆಲ್ಲಾ ಹಾಸಿ ಕಟ್ಟಿರುವರು. ॥೧೭॥

ಲಾಮಂಚದ ವಸ್ತ್ರಸಮೂಹಗಳು, ಅಲ್ಲಲ್ಲಿ ಸುಂದರವಾಗಿ ನೇತಾಡುತ್ತಿರುವುವು. ಇವುಗಳಿಂದ ಹೊರಟಂತಹ ದಿವ್ಯಗಂಧವನ್ನು ಹೊತ್ತು ಮಂದಮಾರುತವು ಹಿತವಾಗಿ ಬೀಸುತ್ತಿರುವುದು. ॥೧೮॥

ಮಹಾಗರುಮಹೋದ್ದಾಮಧೂಪಧೂಮಶಿಖಾವೃತಾಃ ।
ಮಣಿದೀಪಾವಲೀನೃತ್ತಭ್ರಮದ್ಗೃಹವರಾಂಚಿತಾಃ ॥೧೯॥

ಸಹಸ್ರದೀಪಪಾತ್ರೈಶ್ಚ ಧೂಪವೃಕ್ಷೈಶ್ಚ ಲಂಬಿತಾಃ ।
ಮಣಿಸಾರೈಶ್ಚ ವಿವಿಧವರ್ಣಕಲ್ಲಪ್ರೋರುಕುಟ್ಟಿಮಾಃ ॥೨೦॥

ಸ್ಫಟಿಕಾಕ್ತತಲಾಸ್ಸರ್ವಾ ರಮ್ಯಾದರ್ಶಕಲಂಬಿತಾಃ ।
ಸುವರ್ಣರೇಖಾವಿಲಸನ್ಮಣಿಚಿತ್ರವಿಚಿತ್ರಿತಾಃ ॥೨೧॥

ನಾನಾರುದ್ರಾವತಾರಾದಿದೇವ್ಯಾಶ್ಚ ನಟನಂ ತದಾ ।
ಶಂಭೋರ್ಗಣೇಂದ್ರತಿಲಕೈರ್ವೃತಚಿತ್ರವಿಚಿತ್ರಿತಾಃ ॥೨೨॥

ಸುರಮ್ಯಮಣಿವೇದಿಭಿಸ್ಸಂಯುತಾ ಧೂಪನೋದಿತಾಃ ।
ವಿಸ್ತಾರಾಯಾಮಬಹುಲಾಸ್ಸಹಸ್ರಸ್ತಂಭಮಂಡಿತಾಃ ॥೨೩॥

ಅಗರುವೃಕ್ಷದಿಂದ ಹೊರಡುವ ಧೂಪಧೂಮಗಳು ಸುತ್ತಲೂ ವ್ಯಾಪಿಸು ತ್ತಿರುವವು. ರತ್ನದೀಪಗಳು ಸುತ್ತಲೂ ಇರುವುದರಿಂದ ಅವುಗಳಿಂದ ಹೊರಟ ಕಾಂತಿಯು ಮನೆಯನ್ನೆಲ್ಲಾ ಅಲಂಕರಿಸಿರುವುದು. ॥೧೯॥

ಅನೇಕ ದೀಪಪಾತ್ರೆಗಳು, ಸುಗಂಧಮಯವಾದ ವೃಕ್ಷಗಳೂ, ರತ್ನಸ್ತಂಭಗಳು ಬಹಳವಾಗಿ ಕಾಣುತ್ತಿರುವುವು. ದಿವ್ಯವಾದ ರತ್ನಗಳನ್ನು ಕೆತ್ತಿ ಕಟ್ಟಿಸಿದಂತಹ ಜಗುಲಿಗಳಂತೂ ನಯನಮನೋಹರಗಳಾಗಿರುವುವು. ॥೨೦॥

ಸಭಾಗೃಹದ ಭೂಭಾಗಕ್ಕೆಲ್ಲಾ ಸ್ಫಟಿಕಶಿಲೆಯನ್ನು ಹಾಸಿರುವರು. ರಮ್ಯವಾದ ನಿಲವುಗನ್ನಡಿಗಳನ್ನು ತೂಗುಹಾಕಿರುವರು. ಸುವರ್ಣರೇಖೆಗಳಿಂದ ಸುಂದರವಾದ ರತ್ನದ ಚಿತ್ರಗಳು ಮನೋಹರವಾಗಿ ಕಂಡುಬರುತ್ತಿರುವುವು. ॥೨೧॥

ಅಲ್ಲಿ ಅನೇಕ ರುದ್ರಾವತಾರದ ಬೊಂಬೆಗಳೂ, ದೇವಿಯ ನಾಟ್ಯಚಿತ್ರವೂ ಸುಂದರವಾಗಿ ತೋರುತ್ತಿರುವುದು. ಶಂಕರನ ಗಣಶ್ರೇಷ್ಠರುಗಳ ಚಿತ್ರನೆಲ್ಲಾ ಅಲ್ಲಿ ರಮ್ಯವಾಗಿ ಕಾಣುತ್ತಿರುವುದು. ॥೨೨॥

ಹೊಳೆಯುವ ರತ್ನಗಳಿಂದ ವೇದಿಕೆಗಳನ್ನು ಕಲ್ಪಿಸಿರುವರು. ಧೂಪದ ವಾಸನೆಯು ಸರ್ವವ್ಯಾಪಿಯಾಗಿರುವುದು. ವಿಶಾಲವಾದ ಉದ್ದ ಮತ್ತು ಅಗಲಗಳುಳ್ಳ

ಷಣ್ಣವಾದಿಮಹಾತತ್ತ್ವಜಾಲಾಸಾರಾವೃತಾಂತರಾಃ ।
ರಾಜಲ್ಲಲಾಮವೃಷಭಾ ರತ್ನಕುಂಭಪರಿಷ್ಕೃತಾಃ ॥೨೪॥

ರತ್ನದಂಡಾಯುಧಾಸಾರಛತ್ರಚಾಮರಶೋಭಿತಾಃ ।
ದೋಧೂಯಿತಪತಾಕಾಗ್ರಾ ಮಣಿಘಂಟಾವೃತಾಂತರಾಃ ॥೨೫॥

ಕಸ್ತೂರೀಚಂದ್ರಪಾಟೀರಸುಗಂಧಸುಮವರ್ಷಿತಾಃ ।
ಮಣಿದರ್ಪಣಜೋತ್ತುಂಗಬಿಂಬಿತಾಮಲಜಾಲಕಾಃ ॥೨೬॥

ಮಂದರೋದ್ದಾಮಗಂಭೀರನಾದಾಪೂರಿತದಿಙ್ಮುಖಾಃ ।
ಶಂಖದುಂದುಭಿನಿಸ್ಸಾಣಪಣವಾನಕಗೋಮುಖೈಃ ॥೨೭॥

ಮನೋಹರವಾದ ಸಭಾಮಂಟಪವು ಸಹಸ್ರಸ್ತಂಭಗಳಿಂದ ಅಲಂಕೃತವಾಗಿರುವುದು. ||೨೩||

ಪಂಚದಶ ಮಹಾತತ್ತ್ವಗಳನ್ನೊಳಗೊಂಡ ಪ್ರದೇಶಗಳೆಲ್ಲವೂ ಅಲ್ಲಿ ಕಂಡು ಬರುತ್ತಿರುವುವು. ಬಸವನ ವಿಗ್ರಹಗಳೂ, ರತ್ನಕುಂಭಗಳೂ, ಆ ದಿವ್ಯಮಂಟಪವನ್ನು ಅತಿಯಾಗಿ ಕಂಗೊಳಿಸುತ್ತಿರುವುವು. ||೨೪||

ರತ್ನಮಯವಾದ ದಂಡಗಳಿಂದ ಕೂಡಿದ ಛತ್ರಿ, ಚಾಮರ ಇವು ಅಲ್ಲಲ್ಲಿ ಕಟ್ಟಲ್ಪಟ್ಟಿವೆ. ಸುವರ್ಣಮಯವಾದ ಪತಾಕೆಗಳೂ, ರತ್ನಮಯವಾದ ಗಂಟೆಗಳೂ ಬಹುಮಟ್ಟಿಗೆ ಸಭಾಗೃಹವನ್ನು ಅಲಂಕರಿಸುತ್ತಿವೆ. ||೨೫||

ಕಸ್ತೂರೀ, ಚಂದನ, ಶ್ರೀಗಂಧ, ಸುಗಂಧಮಯವಾದ ಪುಷ್ಪಗಳು ಇವುಗಳು ಎಲ್ಲಾ ಕಡೆಯಲ್ಲಿಯೂ ಮಳೆಯಂತೆ ಎರಚಲ್ಪಟ್ಟಿವೆ. ಈ ಸಭಾಗೃಹಸೌಂದರ್ಯವನ್ನೆಲ್ಲಾ ಅಲ್ಲಿರುವ ರತ್ನಗಳ ನಿಲವುಗನ್ನಡಿಯಲ್ಲಿ ಕಾಣಬಹುದಾಗಿದೆ. ||೨೬||

ಶಂಖ, ದುಂದುಭಿ, ಭೇರಿ, ತಮಟೆ, ಮೃದಂಗ, ಗೋಮುಖವಾದ್ಯ ಇವುಗಳ ಗರ್ಜನೆಯಿಂದ ಮಂದರವೇ ಮೊದಲಾದ ಅನೇಕ ಪರ್ವತಗಳ ಗುಹೆಗಳೂ, ಸಕಲ ದಿಕ್ಕುಗಳೂ ತುಂಬಿಹೋಗಿವೆ. ||೨೭||

ಕಾಹಲಾಸಾರನಿನದವೇಣುವೀಣಾರವಾಕುಲಃ ।
ಮಣಿಮಂದಾರವಕುಲಪಾಟಲಾಶೋಕಚಂಪಕೈಃ ॥೨೮॥

ವಿಲಂಬಿತಾಚ್ಛಮಾಲಾಸ್ತ್ವಸ್ತಮಾಲತಲಸುಂದರಾಃ ।
ಕೃತಮಾಲಮಹಾಮಾಲಾಗುಚ್ಛಸಂಛಾದಿತಾಂಬರಾಃ ॥೨೯॥

ಕುಂದಮಲ್ಲೀಜಮುಲ್ಲೀಜಜಾಜೀಮಾಲಾವೃತಾಂತರಾಃ ।
ಗಲನ್ಮಧುರ್ಝುರೀಭಾರಗುಚ್ಛಗುಂಜದಲಿವ್ರಜಾಃ ॥೩೦॥

ಕದಂಬದಾಮಸುಭಗಾ ದಮನೋದ್ದಾಮಗಂಧಿತಾಃ ।
ಕುರವಾಮೋದಿತೋಶೀರಮರುವಾಮೋದಮೋದಿತಾಃ ॥೩೧॥

ಉಶೀರಕಕೃತಾಸಾರಮಾಲಾಂದೋಲನಸುಂದರಾಃ ।
ತಾರೋತ್ತರ್ಕಿತಭೂಭಾಗಮುಕ್ತಾಜಾಲಾವೃತಾ ಭುವಃ ॥೩೨॥

ಅಲ್ಲದೆ, ತುತ್ತೂರಿ, ಕೊಳಲು, ವೀಣೆ, ಮೊದಲಾದ ವಾದ್ಯಧ್ವನಿಗಳು ಕಿವಿಗಿಂಪಾಗಿ ಧ್ವನಿಗೈಯ್ಯುವುವು. ಮಂದಾರಪುಷ್ಪ, ವಕುಲ, ಪಾದರಿ, [illegible]ಕ, ಸಂಪಿಗೆ ಮೊದಲಾದ ಪುಷ್ಪಜಾತಿಗಳು, ಬಹಳವಾಗಿ ಕಂಗೊಳಿಸುತ್ತಿವೆ. ॥೨೮॥

ಹೊಂಗೆಯ ಮರಗಳು ಶುಭ್ರವಾದ ಮಾಲೆಗಳಿಂದ ಕೂಡಿ ಕೆಳಗೆ ನೇತಾಡು ವಂತೆ ತೋರುತ್ತಿವೆ. ಕಕ್ಕೇಗಿಡಗಳ ಸಾಲುಗಳು ಗುಂಪುಗುಂಪಾಗಿ ಆಕಾಶವನ್ನು ಮುಚ್ಚುತ್ತಿರುವುವು. ॥೨೯॥

ಕುಂದ, ಮಲ್ಲಿಕಾ, ಮುಲ್ಲೀಜವೆಂಬ ಪುಷ್ಪವಿಶೇಷ, ಜಾಜೀ, ಈ ಹೂವುಗಳ ಮಾಲೆಯಲ್ಲಿ ಮಕರಂದಪಾನದಿಂದ ಮದಿಸಿ ಧ್ವನಿಗೈಯ್ಯುವ ಭ್ರಮರಗಳು ಗುಂಪು ಗುಂಪಾಗಿ ಹಾರಾಡುತ್ತಿರುವುವು. ॥೩೦॥

ಕದಂಬಪುಷ್ಪಗಳ ಸೊಬಗೂ, ದವನದ ಸುಗಂಧವೂ, ಕುರವಪುಷ್ಪಗಳಿಂದ ಸಹಿತವಾದ ಲಾಮಂಚಗಳ ಸುವಾಸನೆಯೂ ಬಹು ಮನೋಹರವಾಗಿ ಕಾಣುತ್ತಿ ರುವುದು. ॥೩೧॥

ಲಾಮಂಚದ ಮಾಲೆಯು ಗಂಧವನ್ನು ಬೀರುತ್ತಾ ಸುಂದರವಾಗಿರು ವುದು. ಮುತ್ತಿನ ರಾಶಿಯಿಂದ ಆವೃತವಾಗಿರುವ ಭೂಭಾಗವು ನಕ್ಷತ್ರಗಳ ಭ್ರಾಂತಿ ಯನ್ನುಂಟುಮಾಡತಕ್ಕದ್ದಾಗಿರುವುದು. ॥೩೨॥

ಗಣಹಸ್ತಮಹಾತಾಲಝುಲ್ಲರೀನಾದಹುಂಕೃತಾಃ ।
ರತ್ನಮಡ್ಡುಜಹುಂಕಾರಗರ್ಭಿತಾಂತರಸುಂದರಾಃ ॥೩೩॥

ಕಾಹಳಾಪಾರಗಂಭೀರನಾದಾಪೂರಿತದಿಙ್ಮುಖಾಃ ।
ನಟಜ್ಝಣಝುಣಾರಾವಶಿಂಜನ್ಮಂಜೀರನಿಸ್ಸ್ವನಾಃ ॥೩೪॥

ಗೋಮುಖಾನಕಜೋದ್ದಾಮಗಣವಕ್ತ್ರಾಬ್ಜಕಾರವಾಃ ।
ಶಂಖಾವಲೀಕೃತಾಪಾರಧೂತ್ಕಾರರವಗರ್ಜಿತಾಃ ॥೩೫॥

ಚತುರ್ವೇದಶಿಖೋದ್ದಾಮಬ್ರಹ್ಮವಕ್ತ್ರಕೃತಸ್ತುತಿಃ ।
ವಾಮದೇವಮಹಾಸಾಮರಥಂತರರವಾಕುಲಾಃ ॥೩೬॥

ರಥಂತರೋತ್ಥಫೂತ್ಕಾರಭಾಂಕೃತಾಖಿಲದಿಕ್ತಟಾಃ ।
ರಾಜದ್ರಾಜನಹಿಂಕಾರವೈರಾಜವರಭೂಷಿತಾಃ ॥೩೭॥

ಪ್ರಮಥಗಣವರ್ಗವು ತಮ್ಮ ಕೈಗಳಲ್ಲಿ ತಾಳಗಳನ್ನು, ಝುಲ್ಲರಿಗಳನ್ನೂ, ಹಿಡಿದು ಬಾರಿಸುತ್ತಾ ಧ್ವನಿಮಾಡುತ್ತಿರುವುದು. ರತ್ನಮಾಲೆಗಳ ಧ್ವನಿಯಿಂದಲೂ, ಈ ವರ್ಗದವರ ಕೂಗಾಟದಿಂದಲೂ, ಆ ಸಭಾಂಗಣವು ಅತ್ಯಂತ ಶಬ್ದಮಯವಾಗಿರುವುದು. ॥೩೩॥

ಕಾಹಳೆಗಳ ಧ್ವನಿಯು ಗಂಭೀರವಾಗಿದ್ದು ಎಲ್ಲಾ ದಿಕ್ಕುಗಳನ್ನೂ ತುಂಬಿಸಿಬಿಟ್ಟಿದೆ. ನಾಟ್ಯವಾಡತಕ್ಕವರ ಕಾಲಿನಲ್ಲಿರುವ ಗೆಜ್ಜೆಗಳು ಧ್ವನಿಗೈಯ್ಯುವುದು ಬಹು ಇಂಪಾಗಿ ಕೇಳಿ ಬರುತ್ತಿದೆ. ॥೩೪॥

ಗೋಮುಖ, ತಮಟೆ ಮೊದಲಾದ ವಾದ್ಯಧ್ವನಿಗಳೊಡನೆ, ಗಣನಾಯಕರ ಗಂಭೀರವಾಣಿಯೂ, ಶಂಖವೇ ಮೊದಲಾದ ವಾದ್ಯಧ್ವನಿಗಳೊಡನೆ ಕೂಡಿ ಬರುವ ಧೂತ್ಕಾರಶಬ್ದವೂ ಕೇಳಲು ಮನೋಹರವಾಗಿರುವುದು. ॥೩೫॥

ನಾಲ್ಕು ವೇದಗಳನ್ನೂ, ಉಪನಿಷತ್ತುಗಳನ್ನೂ ಹೇಳುತ್ತಾ ಬ್ರಹ್ಮನು ಶಂಕರನನ್ನು ಸ್ತುತಿಸುತ್ತಿರುವನು. ವಾಮದೇವ, ರಥಂತರವೇ ಮೊದಲಾದ ಸಾಮವೇದದ ಬೇರೆ ಬೇರೆ ಭಾಗಗಳನ್ನು ಪಠಿಸುತ್ತಾ ವೇದಗಾನಮಾಡುತ್ತಿರುವನು. ॥೩೬॥

ರಥಂತರಸ್ತಾಮದ ಧ್ವನಿಯು, ವೇದಪಾಠಕರ ಕಂಠಧ್ವನಿಯೊಡಗೂಡಿ, ಸಕಲ ದಿಗಂತವನ್ನೂ ವ್ಯಾಪಿಸಿದ್ದಾಗಿರುವುದು. ಮತ್ತು ಸಾಮವೇದದಲ್ಲಿ ಶ್ರಾವ್ಯವಾಗಿ

ಅಷ್ಟಾವಕ್ರೋದಿತಾತ್ಮಚ್ಛಚಾಷ್ಟದಂಷ್ಟ್ರಾರವಾಕುಲಾಃ ।
ಮಹಾಗಣೇಶಶುಂಡಾಗ್ರಲಗ್ನಕುಂಜೋತ್ಥನಾದಿತಾಃ ॥೩೮॥

ಷಡಾನನಕೃತೋದ್ದಾಮಕಾಹಲಾರವಸುಂದರಾಃ ।
ನಂದಿಭೃಂಗಿಕೃತಾನೇಕತಲಘಾತೋರುಮದ್ದಲೈಃ ॥೩೯॥

ಧಿಕ್ತಾಂಧಿಕ್ತಾನಿತಿರವೈರಶೇಷಮತಿವಾರಕೈಃ ।
ತಂಡುಡಿಂಡಿಮನಾದೋತ್ಥರವಸುಂದರದಿಙ್ಮುಖಾಃ ॥೪೦॥

ವಾಣೀಪಾಣಿಮಹಾವೀಣಾಶಿವನಾಮಾಲಿಮೂರ್ಛನಾಃ ।
ತಂತ್ರೀಯಂತ್ರಿತಗಾಂಧರ್ವಗೀತನಾದೈಕಸುಂದರಾಃ ॥೪೧॥

ನಾರದಾದಿಮುನಿಶ್ರೇಷ್ಠ[1]ಸ್ತುವದುದ್ದಾಮಗಾಯನಾಃ ।
ಹಾಹಾಹೂಹೂಕೃತಾನೇಕ[2]ಮುರಕ್ಷರತಶಿಕ್ಷಿತಾಃ ॥೪೨॥

ಕೇಳಿಬರುವ, ರಾಜಸ, ವೈರಾಜ, ಹಿಂಕಾರಗಳೆಂಬ ಸ್ವರಭೇದದಿಂದ ಆ ಸಭಾಗ್ರಹ ವೆಲ್ಲವೂ ಪ್ರಕಾಶಿತವಾಗಿರುವುದು. ॥೩೭॥

ಅಷ್ಟಾವಕ್ರನು ಶಿವಸ್ತುತಿಗಳನ್ನು ಹೇಳುತ್ತಾ ತನ್ನ ಎಂಟು ದಂಷ್ಟ್ರಗಳಿಂದಲೂ ಶಬ್ದಮಾಡುತ್ತಿರುವನು. ಮಹಾಗಣಪತಿಯು ಸೊಂಡಲಿನ ತುದಿಯಲ್ಲಿ ಪುಷ್ಪಗುಚ್ಛವನ್ನು ಹಿಡಿದು ಘೀಂಕರಿಸುತ್ತಿರುವನು. ॥೩೮॥

ಕುಮಾರ ಸ್ವಾಮಿಯು ಕಹಳೆಯನ್ನು ಎತ್ತಿ ಊದುತ್ತಿರುವನು. ನಂದಿ, ಭೃಂಗಿ ಮೊದಲಾದವರು ತಮ್ಮ ಕೈಯಿಂದ ಮದ್ದಲೆಯನ್ನು ಬಾರಿಸುತ್ತಿರುವರು. ॥೩೯॥

ಮದ್ದಲೆಯ ಧ್ವನಿಯು ಧಿಕ್, ತಾಂ, ಧಿಕ್, ತಾಂ, ಎಂದು ಸಕಲ ದಿಕ್ಕನ್ನೂ ಮೊಳಗಿಸುತ್ತಿರುವುದು. ತಂಡುವು ಡಿಂಡಿಮ ನಾದವನ್ನು ಬಾರಿಸುತ್ತಾ ಸುಂದರವಾದ ಧ್ವನಿಯಿಂದ ದಿಕ್ಕುಗಳನ್ನು ಬೆಳಗಿಸುತ್ತಿರುವನು. ॥೪೦॥

ಸರಸ್ವತಿಯು ತನ್ನ ಕೈಯ್ಯಲ್ಲಿ ವೀಣೆಯನ್ನು ಹಿಡಿದು ಶಿವಗೀತೆಗಳನ್ನು ಆರೋಹಾವರೋಹಣಧ್ವನಿಯಲ್ಲಿ ಬಾರಿಸುತ್ತಿರುವಳು. ಆ ತಂತಿಯ ಧ್ವನಿಯು ಗಂಧರ್ವರ ಗೀತನಾದಗಳನ್ನು ತಡೆದು ಮುಂದುವರಿಯುತ್ತಿರುವುದು. ॥೪೧॥

ನಾರದನೇ ಮೊದಲಾದ ಮುನಿಶ್ರೇಷ್ಠರು ದಿವ್ಯವಾಗಿ ಒಂದೆಡೆಯಲ್ಲಿ ಗಾನ

1 ಸ್ತುಂಬುರೂದ್ದಾಮ (ಪಾ-ರ) 2 ಭರತಾಕ್ಷರ ಶಿಕ್ಷಿತಾಃ (ಪಾ-ರ)

ಯಕ್ಷಶಿಕ್ಷಾಕಲಾಲಾಪರಂಗತುಂಗತರಂಗಿಕಾಃ ।
ರಾಗರಾಗಿಣಿಕಾಕ್ಲೃಪ್ತರಮ್ಯತ್ರಿಸ್ಥಾಯಿಮೂರ್ಛನಾಃ ॥೪೩॥

ತಾಲಮದ್ದಲಜೋದ್ದಾಮತಾಂಥಿಗಿತ್ಯುತ್ತಮಧ್ವನಿಃ ।
ಬರ್ಹಿಪಿಂಛಾಭಸುಭಗಸ್ಫಾಟಿಕೋತ್ತಮಭಿತ್ತಿಕಾಃ ॥೪೪॥

ಮಣಿನಿಸ್ವಾಣನಾರಾವಪ್ರಬುದ್ಧವರಕೋಕಿಲಾಃ ।
ಕೋಕಿಲಾಕಾಕಲೀರಮ್ಯಧ್ವನಿಧ್ವನನರಂಜಿತಾಃ ॥೪೫॥

ರತ್ನಪಂಜರಮಧ್ಯಸ್ಥಶುಕಶಾರಿಕಜಾರವಾಃ ।
ಮೃದಂಗಘನಘೋಷೇಣ ಶಿಖಂಡೀಕೃತತಾಂಡವಾಃ ॥೪೬॥

ಮಾಡುತ್ತಿರುವರು. ಹಾಹಾ, ಹೂಹೂವೇ ಮೊದಲಾದವರು ಮೃದಂಗ ಧ್ವನಿಯಿಂದ ಸಕಲರನ್ನೂ ಆನಂದಗೊಳಿಸುತ್ತಿರುವರು. ॥೪೨॥

ಯಕ್ಷರು, ತಮ್ಮ ವಾದ್ಯಕಲೆಯಿಂದ ರಂಗಸ್ಥಳವನ್ನು ತರಂಗ ತರಂಗವುಳ್ಳದ್ದನ್ನಾಗಿ ಮಾಡುತ್ತಿರುವರು. ಮಂದ್ರ, ಮಧ್ಯ, ಷಡ್ಜವೆಂಬ ಸ್ಥಾಯಿಗಳಲ್ಲಿ ನಾನಾ ವಿಧವಾದ ರಾಗಗಳನ್ನು ವಿಕಾಸಗೊಳಿಸುತ್ತಿರುವರು. ॥೪೩॥

ತಾಲ, ಮದ್ದಲೆ, ಮುಂತಾದ ವಾದ್ಯಗಳಿಂದ ಹೊರಡುವ ಧಿಕ್, ತಾಂ, ಎಂಬ ಧ್ವನಿಯು, ಅತಿಶಯವಾಗಿ ಕೇಳಿಬರುವುದು. ನವಿಲು ಗರಿಗಳಂತೆ ಬಣ್ಣಬಣ್ಣಗಳನ್ನು ಪಡೆದು ಹೊಳೆಯುತ್ತಿರುವ ಸ್ಫಟಿಕಮಯವಾದ ಗೋಡೆಗಳು ಅಲ್ಲಿ ಬಹುವಾಗಿ ಪ್ರಕಾಶಿಸುತ್ತಿರುವುವು. ॥೪೪॥

ರತ್ನಮಯವಾದ ಮೃದಂಗ ಧ್ವನಿಯಿಂದ ಕೋಗಿಲೆಗಳು ಸಂತುಷ್ಟಗಳಾಗಿ ತಾವೂ ಕೇಕಾಧ್ವನಿ ಮಾಡುತ್ತಿರುವುವು. ಕೋಗಿಲೆಗಳ ಅವ್ಯಕ್ತ ಮಧುರವಾದ ಸೂಕ್ಷ್ಮಧ್ವನಿಯಿಂದ ಸಭಾಗೃಹವೆಲ್ಲವೂ ಶಬ್ದಮಯವಾಗಿರುವುದು. ॥೪೫॥

ರತ್ನಮಯವಾದ ಪಂಜರಗಳಲ್ಲಿರುವ ಗಿಳಿಗಳು, ಶಾರಿಕೆಗಳು ಮನೋಹರವಾಗಿ ಇಂಚರಗೈಯ್ಯುತ್ತಿರುವುವು. ಮೃದಂಗಗಳ ಧ್ವನಿಯೆಂಬ ಮೇಘಧ್ವನಿಯನ್ನು ಕೇಳಿ ನವಿಲುಗಳು ನಾಟ್ಯವಾಡಲು ಆರಂಭಿಸಿರುವುವು. ॥೪೬॥

ಗಾಯದ್ಗಂಧರ್ವನಿಕರಮುಖವೀಕ್ಷಣತತ್ಪರಮೃಗಾಃ ।
ರತ್ನಧಾರಗಜಾಸಾರಪುಷ್ಕರೋದ್ಧಾಮಬೃಂಹಿತಾಃ ॥೪೭॥

ಪುಂಡ್ರೇಕ್ಷುಬದ್ಧಸುಭಗಸ್ತಂಭರಂಭಾವೃತಾಸ್ಸಭಾಃ ।
ಮಣಿವಲ್ಲೀತೋರಣಾದಿಲಂಬಿತಾಂದೋಲಿತಾಃ ಪುನಃ ॥೪೮॥

ಮಂದಮಾರುತಸಂಚಾರವಿತಾನಚಲಿತಾಲಕಾಃ ।
ಶಾತಕುಂಭಮಹಾಕುಂಭಪೂರಿತಾಮೃತಧಾರಿಕಾಃ ॥೪೯॥

ಸುಪಲ್ಲವಮುಖಾಸಾರರಾಜದ್ಭೃಂಗಾರಸುಂದರಾಃ ।
ಪೂಗಾಪಾರಮಹಾಸಾರಾಶ್ಯಂಭೋಸ್ತತ್ರ ಮಹಾಸಭಾಃ ॥೫೦॥

ಕ್ಲೃಪ್ತಾಸ್ತತ್ರ ಶಿವೇನೈವ ಮನಸಾ ಮನನೇನ ಹಿ ।
ಶಾತಕುಂಭಮಯೀ ತತ್ರ ಸಭಾ ಪ್ರಾಚ್ಯಾಂ ದಿಶಿ ಸ್ಥಿತಾ ॥೫೧॥

ಜಿಂಕೆಗಳು ಗಾನಮಾಡುತ್ತಿರುವ ಗಂಧರ್ವರ ಮುಖವನ್ನು [illegible] ಪತೆಯಿಂದ ನೋಡುತ್ತಿರುವುವು. ರತ್ನಧಾರೆಗಳಿಂದ ಕೂಡಿರುವ ಆನೆಗಳು ತಮ್ಮ ಸೊಂಡಲನ್ನು ಮೇಲೆತ್ತಿ ಗರ್ಜನೆ ಮಾಡುತ್ತಿರುವುವು. ॥೪೭॥

ರಸಭರಿತವಾದ ಕಬ್ಬಿನ ಜಲ್ಲೆಗಳಿಂದ ಸುಂದರವಾದ [illegible] ಸಭಾಮಂಟಪಕ್ಕೆಲ್ಲಾ ಕಟ್ಟಿರುವರು. ರತ್ನಮಯವಾದ ತೋರಣಗಳನ್ನು ಸಾಲಾಗಿ ಕಟ್ಟಿರುವುದರಿಂದ ಅವುಗಳು ಅಲ್ಲಲ್ಲಿ ತೂಗಾಡುತ್ತಿರುವುವು. ॥೪೮॥

ಮಂದಮಾರುತದ ಚಲನೆಯಿಂದ ಮೇಲ್ಕಟ್ಟುಗಳು ಅಲ್ಲಾಡುತ್ತಿರುವುವು. ಅಲ್ಲಲ್ಲಿ ಸುವರ್ಣಮಯವಾದ ಮಹಾ ಕಲಶಗಳಿಂದ ಅಮೃತವು [illegible] ಸುರಿಯುತ್ತಿರುವುದು. ॥೪೯॥

ಕೆಲವು ಕಲಶಗಳು ಪಲ್ಲವಗಳನ್ನು ಹೊಂದಿ [illegible] ಸುಂದರವಾಗಿರುವುವು. ಅಡಕೆ ಕಾಯಿಗಳ ಗೊಂಚಲುಗಳನ್ನು ಆ ಸಭೆಯಲ್ಲಿ ಅಲ್ಲಲ್ಲಿ ಕಟ್ಟಿರುವರು. ॥೫೦॥

ಹೀಗೆ ಪೂರ್ವಭಾಗದಲ್ಲಿರುವ ಸುವರ್ಣಮಯವಾದ ಸಭೆಯು ಶಂಕರನ ಮನಸ್ಸಿನಿಂದಲೇ ನಿರ್ಮಿತವಾಗಿರುವುದು. ಆದುದರಿಂದಲೇ ಶಂಕರನ ಇಚ್ಛಾನುಸಾರವಾಗಿ ಅದು ರಂಜಿಸುತ್ತಿರುವುದು. ॥೫೧॥

ಮಹಾರತ್ನಸಭಾ ಶಂಭೋರ್ದಕ್ಷಿಣೇ ಚ ಪ್ರಕಲ್ಪಿತಾ ।
ರಾಜತೀ ರಜತಾದ್ರೌ ತು ಶಂಭೋಃ ಪಶ್ಚಾತ್ಸಭಾ ತದಾ ॥೫೨॥

ಚಿತ್ಸಭಾ ಚೋತ್ತರೇ ಶಂಭೋಃ ಕಲಧೌತಾಚಲೇ ಸ್ಥಿತಾ ।
ಏವಂ ಚತುರ್ದಿಕ್ಷ್ವಪಿ ತಾ ಸ್ಸನ್ನಾಹಾನಂದಿತಾಸ್ಸಭಾಃ ॥೫೩॥

ತತ್ಸಭಾವರ್ಣನಂ ದೇವೈರ್ಬ್ರಹ್ಮವಿಷ್ಣುಮಹೇಶ್ವರೈಃ ।
ಮೂರ್ತಿಮದ್ಭಿಸ್ತಥಾ ಸಾಂಗೈರ್ವೇದನಿಶ್ವಾಸ ಈಶ್ವರಃ ॥೫೪॥

ಋಗ್ವೇದಸ್ತು ತಥಾ ಪ್ರಾಚ್ಯಾಮೇಕವಿಂಶತಿಶಾಖಕೈಃ ।
ಸ್ತೌತಿ ತಸ್ಯಾಂ ಸಭಾಯಾಂ ತು ದೇವದೇವಂ ಮಹೇಶ್ವರಂ ॥೫೫॥

ಯಜುರ್ವೇದಸ್ತಥಾ ರತ್ನಸಭಾಯಾಂ ಶತಶಾಖಕಃ ।
ಸ್ತೌತಿ ದೇವಂ ವಿರೂಪಾಕ್ಷಂ ಬದ್ಧಾಂಜಲಿಪುಟೋ ಮುದಾ ॥೫೬॥

ಅದೇರೀತಿ ದಕ್ಷಿಣ ಭಾಗದಲ್ಲಿಯೂ ಒಂದು ಸಭಾಗೃಹವು ಮಹಾರತ್ನಗಳಿಂದ ನಿರ್ಮಿತವಾಗಿರುವುದು. ಅದೂ ಶಂಭುವಿನ ಮಾನಸಪರಿಕಲ್ಪಿತವೇ. ಪಶ್ಚಿಮಭಾಗದಲ್ಲಿಯೂ ರಜತಾದ್ರಿಯಲ್ಲಿ ಬೆಳ್ಳಿಯಿಂದ ನಿರ್ಮಿತವಾದ ಒಂದು ಸಭೆಯಿರುವುದು ||೫೨||

ಉತ್ತರಭಾಗದಲ್ಲಿಯೂ ಚಿತ್ಸಭೆಯು ಅಂದರೆ ಜ್ಞಾನಪ್ರದಾಯಕವಾದ ಸಭೆಯೊಂದಿರುವುದು. ಹೀಗೆ ನಾಲ್ಕು ದಿಕ್ಕುಗಳಲ್ಲಿಯೂ, ಸಕಲಸನ್ನಾಹಗಳಿಂದ ಮನೋಹರವಾದ ನಾಲ್ಕು ಸಭೆಗಳಿರುವುವು. ||೫೩||

ಆ ಸಭೆಗಳ ವಿಷಯವನ್ನು ಸಾಕ್ಷಾತ್ತಾಗಿ ಬ್ರಹ್ಮವಿಷ್ಣುರುದ್ರರೇ ವರ್ಣಿಸುತ್ತಿರುವರು. ಮತ್ತು ಈಶ್ವರನ ನಿಶ್ವಾಸವಾಗಿರುವ ಸಕಲ ವೇದಗಳಿಂದಲೂ ಶಂಕರನು ಸ್ತುತಿಸಲ್ಪಡುತ್ತಿರುವನು. ||೫೪||

ಋಗ್ವೇದವು ಪೂರ್ವದಿಗ್ಭಾಗದ ಸಭೆಯಲ್ಲಿ ತನ್ನ ಇಪ್ಪತ್ತೊಂದು ಶಾಖೆಗಳಿಂದ ಕೂಡಿ ಪರಮೇಶ್ವರನನ್ನು ಸ್ತುತಿಸುತ್ತಿರುವುದು. ||೫೫||

ರತ್ನಸಭೆಯಲ್ಲಿ ಯಜುರ್ವೇದವು, ನೂರು ಶಾಖೆಗಳಿಂದ ಕೂಡಿದ್ದಾಗಿ, ಕೈಜೋಡಿಸಿಕೊಂಡು ಸಂತೋಷದಿಂದ ನಿಂತು, ಮಹಾದೇವನನ್ನು ಸ್ತುತಿಸುತ್ತಿರುವುದು. ||೫೬||

ಕಲಧೌತಸಭಾಯಾಂ ತು ಸಹಸ್ರವರಶಾಖಿಕಃ ।
ಸ್ತೌತಿ ತತ್ರ ಮಹಾದೇವಂ ಸಾಮವೇದೋಽಥ ಸಾಮಭಿಃ ॥೫೭॥

ಚಿತ್ಸಭಾಯಾಂ ತಥಾಥರ್ವವೇದೋ ವಿಂಶತ್ಸ್ವಶಾಖಿಕೈಃ ।
ಸ್ತೌತಿ ದೇವಂ ಶಿರೋಭಿಸ್ಸ್ವೈರಥರ್ವೈರೀಶತುಷ್ಟಿದೈಃ ॥೫೮॥

ಸಭಾಸು ಚ ದಿವಸ್ಪತಿಪ್ರಕಟಭಾನುಶೀತಾಂಶುಷು ।
ಸ್ಫುರತ್ತ್ವಿಷಿ ಶಿಖಿದ್ಯುತಿಪ್ರಥಿತರತ್ನಗರ್ಭೋದ್ಭವ ।
ಪ್ರಕಾಶಕಲಿತಾಸ್ಪದೇ ನಟತಿ ನೃತ್ತಪಾರಂಗತಃ ॥೫೯॥

ಸಭಾಪತಿರತೀಂದ್ರಿಯಃ ಪ್ರಮಥನಾಥಸಂಘೈರ್ವೃತೋ ।
ಪ್ಯನಂತಮಹಿಮಾರಸಶ್ರುತಿಶಿಖಾಚ್ಛಪಾಲೀಗತಃ ।
ಸುರೇಂದ್ರಮಕುಟೀತಟೀ ವಿಘಟಿತಾಚ್ಛರತ್ನಚ್ಛವಿಃ ।
ಪ್ರಸನ್ನನಖಸಂತತಿರ್ವಿಧಿಹರೀಂದ್ರದೇವೈಸ್ಸ್ತುತಃ ॥೬೦॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಸಭಾವರ್ಣನಂ ನಾಮ
ದ್ವಾತ್ರಿಂಶೋಽಧ್ಯಾಯಃ

ಸುವರ್ಣನಿರ್ಮಿತವಾದ ಪಶ್ಚಿಮ ಸಭೆಯಲ್ಲಿ ಸಾಮವೇದವು ತನ್ನ ಸಹಸ್ರ ಶಾಖೆಗಳಿಂದಲೂ ಮಹೇಶ್ವರನನ್ನು ಭಕ್ತಿಯಿಂದ ಸ್ತುತಿಸುತ್ತಿರುವುದು. ॥೫೭॥

ಅಥರ್ವಣವೇದವು ತನ್ನ ಇಪ್ಪತ್ತು ಶಾಖೆಗಳಿಂದಲೂ, ಚಿತ್ಸಭೆಯಲ್ಲಿ ಈಶ್ವರನಿಗೆ ತೃಪ್ತಿಯನ್ನುಂಟುಮಾಡುತ್ತಾ ಪರಮೇಶ್ವರನನ್ನು ಹೊಗಳುತ್ತಿರುವುದು. ॥೫೮॥

ಸೂರ್ಯಚಂದ್ರರ ಸಂಪೂರ್ಣವಾದ ಕಾಂತಿಯಿಂದ ಬೆಳಗುತ್ತಿರುವ ಈ [illegible] ಸಭೆಗಳಲ್ಲಿಯೂ, ನಾಟ್ಯಶಾಸ್ತ್ರದಲ್ಲಿ ಪಾರಂಗತನಾದ ಶಂಕರನು, ನಾಟ್ಯವಾಡುವನು. ಆ ಕಾಲದಲ್ಲಿ ಸಭೆಯಂತೂ, ಅಗ್ನಿಯಂತೆ ಜ್ವಲಿಸುವ ರತ್ನಗಳ ದಿವ್ಯವಾದ ಕಾಂತಿಯಿಂದ ವಿಶೇಷವಾಗಿ ರಂಜಿಸುತ್ತಿರುವುದು. ॥೫೯॥

ಈ ಸಭೆಗಳಿಗೆ ಒಡೆಯನೂ, ಇಂದ್ರಿಯಗಳಿಗೆ ಅಗೋಚರನೂ ಆದ ಮಹಾದೇವನು, ಮಹಿಮಾಶಾಲಿಯಾಗಿ, ವೇದವೇದಾಂತಗಳ ಶಿರೋಭೂತನಾಗಿ,

ಪ್ರಕಾಶಿಸುತ್ತಿರುವನು. ಅಲ್ಲದೆ ಬ್ರಹ್ಮ, ವಿಷ್ಣು ರುದ್ರರಿಂದ ಸ್ತುತಿಸಲ್ಪಡುವವನಾಗಿ, ದೇವೇಂದ್ರನೇ ಮೊದಲಾದ ದೇವತೆಗಳ ಕಿರೀಟದ ರತ್ನಕಾಂತಿಯಿಂದ ಪ್ರಸನ್ನವಾಗಿರುವ ತನ್ನ ಕಾಲುಗುರುಗಳಿಂದ ಕೂಡಿದವನಾಗಿ, ಸರ್ವರಿಗೂ ಪ್ರಸನ್ನನಾಗಿರುವಂತೆ ತೋರುತ್ತಿರುವನು. ||೬೦||

ಇಲ್ಲಿಗೆ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಸಭಾವರ್ಣನೆಯೆಂಬ

ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತ್ರಯಸ್ತ್ರಿಂಶೋಽಧ್ಯಾಯಃ

### ಸಭಾಸು ನೃತ್ತವರ್ಣನಂ

|| ಸ್ಕಂದ ಉವಾಚ ||

ಸನಾತನಸನಂದೇನ ಸಾನಂದೇನ ಮಹೇಶ್ವರಃ ।
ಪಾರ್ವತೀಹೃದಯಾನಂದೋ ದೇವೋ ಯತ್ರ ಚ ತಾಸ್ಸಭಾಃ ||೧||

ಸದಸಸ್ಪತಿರೀಶಾನೋ ಗಣಬೃಂದನಿಷೇವಿತಃ ।
ಮಯಾ ದ್ವಿರದವಕ್ತ್ರೇಣ ನಂದಿಭೃಂಗಿರಿಟೇಶ್ವರೈಃ ||೨||

ತಂಡುಹುಂಡತುಹುಂಡಾದ್ಯೈರ್ಬಾಣರಾವಣಚಂಡಿಕೈಃ ।
ದೇವ್ಯಾಸ್ಸದಗ್ರೇ ನಟನಂ ಸಾಟೋಪಂ ಕರ್ತುಮುದ್ಯತಃ ||೩||

### ಶ್ರೀಶಿವರಹಸ್ಯದಲ್ಲಿ ಮೂವತ್ತುಮೂರನೆಯ ಅಧ್ಯಾಯ

ಕುಮಾರಸ್ವಾಮಿಯು ಮುಂದಿನ ವಿಷಯವನ್ನು ಜೈಗೀಷವ್ಯನಿಗೆ ಹೀಗೆ ವಿವರಿಸಿದನು.

ಆ ಸಭೆಗಳಲ್ಲಿ ಪಾರ್ವತೀ ಮನೋಹರನಾದ ಮಹೇಶ್ವರನು. ಸನಾತನ, ಸನಂದನ ಮೊದಲಾದ ಆನಂದಭರಿತರಾದ ಋಷಿವರ್ಯರಿಂದ ಕೂಡಿರುವನು. ||೧||

ಸಕಲ ಸಭೆಗಳಿಗೂ ಅಧಿಪತಿಯಾದ ಮಹೇಶ್ವರನು ಸಕಲ ಗಣಗಳಿಂದ ಸೇವಿಸಲ್ಪಡುವವನಾಗಿ, ಆನಂದದಿಂದಿರುವನು. ನಾನೂ, ನೃತ್ಯ ಗಣಪತಿಯೂ ನಂದಿ, ಭೃಂಗಿ, ರಿಟಿ, ಮೊದಲಾದವರೊಡನೆ ಶಂಕರನನ್ನು ಸೇವಿಸುತ್ತಿದ್ದೆವು. ||೨||

ತಂಡು, ಹುಂಡ, ತುಹುಂಡ, ಬಾಣ, ರಾವಣ, ಚಂಡಿಕ, ಮೊದಲಾದವರೂ ಸ್ವಾಮಿಯನ್ನು ಸೇವಿಸುತ್ತಿರುವರು. ಹೀಗಿರುವಾಗ ಅಲ್ಲಿ ಶಾಂತಿಕರನ ದೇವಿಯ ಎದುರಿನಲ್ಲಿ ಆಟೋಪದಿಂದ ಶಂಕರನು ನಾಟ್ಯವಾಡಲು ಆರಂಭಿಸುವನು. ||೩||

ಸಭಾಸು ತಾಸು ಸರ್ವಾಸು ಸಭಾಪತಿರುಮಾಪತಿಃ ।
ಸಾಯಂ ಸಾಯಂ ಪ್ರದೋಷೇಷು ಮಹಾತಾಂಡವಪಂಡಿತಃ ॥೪॥

ಅಪಸ್ಮಾರೋಪರಿ ಲಸತ್ಪಾದಪಂಕಜಭಾಸುರಃ ।
ಗಜೇಂದ್ರಕೃತ್ತಿವಸನೋ ಜಟಾಜೂಟತಟಿದ್ದ್ಯುತಿಃ ॥೫॥

ಜಟಾಕುಹರಗರ್ಭಸ್ಥಗಂಗಾತುಂಗತರಂಗಧೃಕ್ ।
ತತ್ರೈವೋತ್ಫುಲ್ಲಕಲ್ಹಾರಮಿತ್ರಾಚ್ಛಾದಿತಮಸ್ತಕಃ ॥೬॥

ಗರನೀಲಮಹಾಕಂಠಃ ಕುಂಡಲೀಶ್ವರಕುಂಡಲಃ ।
ಸೋಮಧಾಮಸಮಾನಾಸ್ಯಶ್ಚಾಂಪೇಯರದನಾಸಿಕಃ ॥೭॥

ನಯನತ್ರಿತಯೋತ್ಫುಲ್ಲಪಂಕಜೋತ್ಫುಲ್ಲಸುಂದರಃ ।
ತ್ರಿಪುಂಡ್ರರೇಖಾಸತ್ಫಾಲೋ ಭಸ್ಮಾಚ್ಛಾದಿತವಿಗ್ರಹಃ ॥೮॥

ಎಲ್ಲಾ ಸಭೆಗಳಲ್ಲಿಯೂ ಉಮಾಪತಿಯಾದ ಶಂಕರನು ಪ್ರತಿಪ್ರದೋಷ ಕಾಲಗಳಲ್ಲಿಯೂ ನಾಟ್ಯವನ್ನಾಡುವನು. ॥೪॥

ತಾಂಡವಕಾಲದಲ್ಲ ಅಪಸ್ಮಾರ (ಅಂಧಕಾಸುರ) ನ ಮೇಲೆ ತನ್ನ ಪ್ರಕಾಶಮಾನವಾದ ಪಾದಕಮಲವನ್ನಿಟ್ಟು, ಗಜಚರ್ಮಾಂಬರಧಾರಿಯಾಗಿ, ಮಿಂಚಿನಂತೆ ಹೊಳೆಯುವ ಜಟಾಜೂಟದಿಂದ ಪ್ರಕಾಶಿತನಾಗಿರುವನು. ॥೫॥

ಶಂಕರನ ಜಟಾಗುಹೆಯ ಮಧ್ಯದಲ್ಲಿ ಗಂಗಾನದಿಯು ಅಲೆಗಳಿಂದ ಕೂಡಿ ಅಲ್ಲಾಡುತ್ತಿರುವುದು. ಅಲ್ಲಿಯೇ ಅರಳಿದ ಕಮಲಗಳೂ, ಅವುಗಳನ್ನು ಅರಳಿಸುವ ಸೂರ್ಯನೂ ನೆಲಸಿರುವರು. ಇಂತಹ ಪವಿತ್ರವಸ್ತುಗಳನ್ನು ಶಿರಸ್ಸಿನಲ್ಲಿ ತಳೆದು ಸ್ವಾಮಿಯು ನಾಟ್ಯವಾಡುವನು. ॥೬॥

ಶಂಕರನ ಕಂಠಪ್ರದೇಶವು ವಿಷದಿಂದ ನೀಲವಾಗಿರುವುದು. ಆದಿಶೇಷನೇ ಶಂಕರನಿಗೆ ಕರ್ಣಕುಂಡಲವಾಗಿರುವನು. ಮುಖವು ಚಂದ್ರನಂತೆ ಆಹ್ಲಾದಕರವಾಗಿರುವುದು. ಸಂಪಿಗೆಯ ಎಸಳಿನಂತೆ ಶಂಕರನ ಮೂಗು ಮನೋಹರವಾಗಿರುವುದು. ॥೭॥

ಈಶ್ವರನ ಮೂರು ಕಣ್ಣುಗಳೂ, ಅರಳಿದ ಕಮಲಗಳಂತೆ ಸುಂದರವಾಗಿರುವುವು. ಹಣೆಯಲ್ಲಿ ತ್ರಿಪುಂಡ್ರರೇಖೆಗಳೂ ದೇಹದಲ್ಲಿ ಶುಭ್ರವಾದ ಭಸ್ಮವೂ ವಿರಾಜಿಸುತ್ತಿರುವುದು. ॥೮॥

ವಾಮೇನ ಪಾಣಿನಾ ಲಂಬಿನಖರಕ್ತಾಗ್ರಾಲಕ್ತಕಃ ।
ಧಗದ್ಧಗಿತರತ್ನಾಚ್ಛಪದಕಾಲಂಬಿಮಾಲಿಕಃ ॥೯॥

ಮಹಾಹೀರಮಣಿವ್ರಾತಮುಕ್ತಾರುದ್ರಾಕ್ಷಮಾಲಿಕಃ ।
ಕಾಕೋದರಫಣಾರತ್ನಮಾಲಾಕೀಲಿತಕಂಧರಃ ॥೧೦॥

ರತ್ನಗ್ರೈವೇಯಲಲಿತಃ ಕಂಕಣಾಸಕ್ತಸತ್ಕರಃ ।
ಕ್ವಣತ್ಕಿಂಕಿಣಿಕಾಜಾಲಕ್ಷುದ್ರಘಂಟಾಲಿಕಾಂಚಿಕಃ ॥೧೧॥

ಪಾಣಿನಾನ್ಯೇನ ಡಮರುಂ ತಥಾನ್ಯೇನೋಜ್ಜ್ವಲಪ್ರಭಂ ।
ಸಪ್ತಜಿಹ್ವಕೃತೋರ್ಧ್ವಾಂಗಶಿಖಾಕಾಶಿತಸತ್ಕರಃ ॥೧೨॥

ಭಕ್ತಾಭಯಕರಂ ಸಾಕ್ಷಾದ್ರತ್ನೋರ್ಮಿಕವರಾಂಗುಲಿಃ ।
ಕಟೀತಟಿಪಟೋದ್ಭಾಸಿಪುಂಡರೀಕಾಜಿನೋಜ್ಜ್ವಲಃ ॥೧೩॥

ಎಡಗೈಯ್ಯ ಉಗುರುಗಳು ಅರಗಿನ ರಸದಿಂದ ಬಳಿದುಕೊಂಡು ಕೆಂಪಾಗಿ ಕಾಣುತ್ತಿವೆ. ಅರ್ಧನಾರೀಶ್ವರನಾದ ಶಂಕರನ ಎಡಭಾಗದಲ್ಲಿ ಪದಕಗಳಿಂದ ಕೂಡಿ ನೇತಾಡುವ ರತ್ನಹಾರಗಳು ಕಂಗೊಳಿಸುತ್ತಿರುವುವು. ॥೯॥

ಅನೇಕ ಹೀರರತ್ನಗಳಿಂದ ಪ್ರೋತವಾದ ರುದ್ರಾಕ್ಷಿಯ ಸರಗಳು ಕಂಠದಲ್ಲಿ ಶೋಭಿಸುತ್ತಿವೆ. ನಾಗರತ್ನಗಳ ಹಾರವೂ ಒಂದೆಡೆ ಕಂಠವನ್ನು ಅಲಂಕರಿಸುತ್ತಿವೆ. ॥೧೦॥

ಕಂಠದಲ್ಲಿ ರತ್ನಹಾರವೂ, ಕೈಯ್ಯಲ್ಲಿ ಶುಭ್ರವಾದ ಕೈಬಳೆಗಳೂ. ಸೊಂಟದಲ್ಲಿ ಧ್ವನಿಮಾಡುವ ಕಿರುಗೆಜ್ಜೆಗಳಿಂದ ಅಲಂಕೃತವಾದ ಒಡ್ಯಾಣವೂ ಶೋಭಿಸುತ್ತಿರುವುದು. ॥೧೧॥

ಒಂದು ಕೈಯಿಂದ ಡಮರುಗವನ್ನು ಹಿಡಿದಿರುವನು. ಮತ್ತೊಂದರಲ್ಲಿ ಪ್ರಕಾಶಮಾನವಾಗಿ ಜ್ವಲಿಸುವ ಅಗ್ನಿಯಿದೆ. ತಲೆಯಲ್ಲಿ ಅಗ್ನಿಯ ತೇಜಸ್ಸು ಒಡೆದು ಮೂಡುತ್ತಿರುವುದು. ॥೧೨॥

ಒಂದು ಹಸ್ತವು ಅಭಯಮುದ್ರೆಯುಳ್ಳದ್ದಾಗಿರುವುದು. ಬೆರಳಲ್ಲಿ ರತ್ನದ ಉಂಗುರಗಳು ಹೊಳೆಯುವುವು. ಸೊಂಟದ ಭಾಗದಲ್ಲಿ ಶೋಭಿಸುವ ವ್ಯಾಘ್ರ ಚರ್ಮವು ಬಹುವಾಗಿ ವಿರಾಜಿಸುತ್ತಿರುವುದು. ॥೧೩॥

**ತತ್ಪುಚ್ಛಗುಚ್ಛಸುಭಗಲಂಬಮಾನಚಲದ್ದ್ಯುತಿಃ ।**
**ಬ್ರಹ್ಮಮುಂಡಮಹಾಷಂಡಮಾಲಾಲಲಿತಕಂಧರಃ ॥೧೪॥**

**ನೃತ್ಯಜ್ಝಣಝ್ಝಣಾರಾವಮಣಿಮಂಜೀರರತ್ನಪಾತ್ ।**
**ಸಾಕುಂಚಿತೇನ ನೃತ್ಯೇನ ಪೋಷಯಂತಂ ಜಗತ್ತ್ರಯಂ ॥೧೫॥**

**ಮಹಾರತ್ನಪರಿಷ್ಕಾರಿಪೀಠಸಂಸ್ಥಾಂ ಮಹೇಶ್ವರೀಂ ।**
**ಪಶ್ಯಂದರದಲಾಂಭೋಜಸನ್ನಿಭಾಮಲಲೋಚನೈಃ ॥೧೬॥**

**ಸುಧಾಧಾಮತಿರಸ್ಕಾರಿ ದೇವ್ಯಾ ವದನಪಂಕಜಂ ।**
**ಲೀಲಾಲಕೋದ್ಯತ್ತಿಲಕಂ ರತ್ನತಾಟಂಕಮಂಡಿತಂ ॥೧೭॥**

ವ್ಯಾಘ್ರಾಜಿನದ ಪುಚ್ಛಭಾಗದಲ್ಲಿರುವ ಕೇಶದ ಗೊಂಚಲು ಲಂಬಮಾನವಾಗಿರುವುದರಿಂದ ಅದರ ಸೊಬಗು ವಿಶೇಷವಾಗಿ ಕಂಡುಬರುತ್ತಿರುವುದು. ಬ್ರಹ್ಮಕಪಾಲದೊಂದಿಗೆ ಅನೇಕ ರಾಕ್ಷಸಮುಂಡಗಳು ಪರಶಿವನ ಕಂಠದಲ್ಲಿ ಮಾಲಾರೂಪದಲ್ಲಿ ವಿರಾಜಿಸುತ್ತಿರುವುವು. ॥೧೪॥

ಝಣಝಣಧ್ವನಿಗೈಯ್ಯುವ ರತ್ನದ ಗೆಜ್ಜೆಗಳು ಶಂಕರನ ಪಾದವನ್ನು ಬಹುವಾಗಿ ಅಲಂಕರಿಸುತ್ತಿವೆ. ಅಂತೂ ಮಹೇಶ್ವರನು ಮಂಡಿಯ ವರೆಗೂ ಬಗ್ಗಿ ಮಾಡುವ ನಾಟ್ಯದಿಂದ ಮೂರು ಲೋಕವನ್ನೂ ಸಂರಕ್ಷಿಸುತ್ತಿರುವನು. ॥೧೫॥

ತನ್ನ ನಾಟ್ಯಕಾಲದಲ್ಲಿ ಮಹೇಶ್ವರನು, ಸ್ವಲ್ಪ ಅರಳಿ ಕಮಲಕ್ಕೆ ಸದೃಶವಾದ ತನ್ನ ಅರ್ಧನಿಮೀಲಿತ ನೇತ್ರದಿಂದ ರತ್ನಪೀಠದಲ್ಲಿ ಮಂಡಿಸಿರುವ ಪಾರ್ವತಿಯನ್ನು ನೋಡುವನು. ॥೧೬॥

ದೇವಿಯ ಮುಖಕಮಲವಾದರೋ ಸೌಂದರ್ಯದಲ್ಲಿ ಚಂದ್ರನ ಕಾಂತಿಯನ್ನು ತಿರಸ್ಕರಿಸತಕ್ಕದ್ದಾಗಿರುವುದು. ಲೀಲಾರ್ಥವಾಗಿ ಬಿಟ್ಟಿರುವ ಮುಂಗುರುಳುಗಳು ದೇವಿಯ ವದನವನ್ನು ಅಲಂಕರಿಸುತ್ತಿರುವುವು. ರತ್ನಮಯವಾದ ಓಲೆಗಳು ದೇವಿಯ ಕಿವಿಯನ್ನು ಪ್ರಕಾಶಮಯವನ್ನಾಗಿ ಮಾಡಿರುವುವು. ॥೧೭॥

ಉದ್ಯತ್ಕವಿನಿಭಾತ್ಯಚ್ಛಮುಕ್ತಾನಾಸಾ ಮನೋರಮಂ ।
ಕಂಠತ್ರಿವಲಿಗಂಭೀರರತ್ನಗ್ರೈವೇಯಭಾಸುರಂ ॥೧೮॥

ಲಲಚ್ಚಿಂತಾಕಸುಭಗಂ ಕಂಠಮಂಡಲಮೀಶ್ವರಿಃ ।
ಉತ್ತುಂಗಕರಿಕುಂಭಾಭಸ್ವರ್ಣಕುಂಭಕುಚಾಂ ಶುಭಾಂ ॥೧೯॥

ತ್ರಿವಲೀಲಲಿತೋದಾರತ್ರಿಜಗತ್ಸಂಪುಟೋದರಾಂ ।
ಮೃಗೇಂದ್ರಕಟಿಸಂಕಾಶರತ್ನಕಾಂಚಿತಕಾಂಚಿಕಾಂ ॥೨೦॥

ಕನಕಾಂಬರಚಾಪಾರಧಾರಾಸಾರಜಿತಾಂಬರಾಂ ।
ಚಂಪಕಾಶೋಕಪುನ್ನಾಗಸೌಗಂಧಿಕಲಸತ್ಕಚಾಂ ॥೨೧॥

ವೇಣೀಮಂಡಲಮಧ್ಯಸ್ಥರತ್ನಸೀಮಂತಸುಂದರಾಂ ।
ಅಲಿಕಾಲಂಬಿಫಾಲಾಂ ಹಿ ಶೋಭಿಸಿಂದೂರರೇಖಿಕಾಂ ॥೨೨॥

ದೇವಿಯ ಮೂಗಿನಲ್ಲಿರುವ ಮುತ್ತಿನ ಮೂಗುಬೊಟ್ಟು, ಉದಯಿಸುವ ಶುಕ್ರಗ್ರಹದಂತೆ ಹೊಳೆಯುತ್ತಿರುವುದು. ಕತ್ತಿನಲ್ಲಿ ಮೂರು ಸರಗಳ [illegible] ಹೊಳೆಯುವ ರತ್ನಹಾರಗಳು ಪ್ರಕಾಶಮಾನವಾಗಿರುವುವು. ||೧೮||

ದೇವಿಯ ಕಂಠದಲ್ಲಿ ಚಿಂತಾಕವೆಂಬ ಮುತ್ತಿನ ಪದಕವು ಹೊಳೆಯುತ್ತಿರುವುದು. ದೇವಿಯ ಕುಚಕಲಶಗಳಾದರೋ ಸುವರ್ಣಕುಂಭದಂತೆ ಶೋಭಿಸುತ್ತ, ಎತ್ತರವಾದ ಆನೆಯ ಕುಂಭಸ್ಥಳಗಳ ಸಾಮ್ಯವನ್ನು ಪಡೆದಿರುವುವು. ||೧೯||

ದೇವಿಯ ತ್ರಿವಲಿಗಳಲ್ಲಿ ಜಗತ್ತ್ರಯವೂ ಅಡಗಿರುವುದು. ಅದರ ಮೇಲೆ ರತ್ನಮಯವಾದ ಒಡ್ಯಾಣವಿರುವುದು. ಹಿಗ್ಗಿರುವ ಸೊಂಟಭಾಗವು ಸಿಂಹದ ಕಟಿಭಾಗಕ್ಕೆ ಸರಿಸಮವಾಗಿ ಶೋಭಿಸುತ್ತಿರುವುದು. ||೨೦||

ದೇವಿಯು ಧರಿಸಿರುವ ಸುವರ್ಣಮಯವಾದ ಸೀರೆಯು ಅಂತರಿಕ್ಷದ ಕಾಂತಿಯನ್ನು ಮಂಕುಮಾಡಿರುವುದು. ತನ್ನ ಕೇಶಪಾಶದಲ್ಲಿ ಸಂಪಿಗೆ, ಅಶೋಕ, ನಾಗಸಂಪಿಗೆ, ಕಲ್ಹಾರ ಮುಂತಾದ ಪುಷ್ಪಗಳನ್ನು ಮುಡಿದಿರುವಳು. ||೨೧||

ಜಡೆಯ ಮಧ್ಯದಲ್ಲಿರುವ ರತ್ನಸೀಮಂತಮಣಿಯು (ಜಡೆಬಿಲ್ಲೆ) ಬಹಳ ಸುಂದರವಾಗಿರುವುದು. ಹಣೆಯಲ್ಲಿ ಮುಂಗುರುಳುಗಳು ಶೋಭಿಸುತ್ತಿರುವುವು. ಸಿಂದೂರಚೂರ್ಣದ ರೇಖೆಯು ಫಾಲವನ್ನು ಮತ್ತೂ ರಮ್ಯಗೊಳಿಸಿರುವುದು. ||೨೨||

ಕ್ವಣನ್ಮಣಿಗಣಾಪಾರಕಂಕಣೈರ್ನಾಗಬಂಧಕೈಃ ।
ರತ್ನಹಸ್ತಸರಾಪಾರಚಲದ್ವಯಲಸತ್ಕರಾಂ ॥೨೩॥

ರತ್ನಾಂಗುಲೀಯವಿಲಸದ್ವಲಯಾಂಗುಷ್ಠವೇಷ್ಟಿತಾಂ ।
ಮಹಾಹೀರೈಕಫಲಕಕಲ್ಪಿತಾಂಗುಷ್ಠವೇಷ್ಟನೀಂ ॥೨೪॥

ಆರಕ್ತಾರಕ್ತಪಾದಾಬ್ಜರಂಗರಂಜಿತಪಾದುಕಾಂ ।
ಪಾದಾಂಗುಲೀಕೃತಾಪಾರಝುಣಜ್ಝಣಮಧುವ್ರತಾಂ ॥೨೫॥

ಮಣಿಮಂಜೀರಜಾರಾವಝುಣಜ್ಝಣಿತಭೂತಲಾಂ ।
ಪಾಟೀರಾಗರುಕಸ್ತೂರೀಕರ್ಪೂರಾಗಂಧಮೇದುರಾಂ ॥೨೬॥

ಪಟವಾಸಮಹಾಗಂಧನಂದಿತಾಖಿಲದಿಕ್ತಟಾಂ ।
ಸೌಂದರ್ಯಧಾರಾಸರ್ವಸ್ವಾಕಾರಾಂ ತಾರಾಧಿಪಾನನಾಂ ॥೨೭॥

ದೇವಿಯ ತೋಳಿನಲ್ಲಿ ಮಣಿಗಳಿಂದ ಕೂಡಿದ ಕಂಕಣಗಳೂ ನಾಗಾಭರಣಗಳೂ ಕಾಣುತ್ತಿರುವುವು. ಮುಂಗೈಯಲ್ಲಿ ರತ್ನಮಯವಾಗಿ ಕೈಬಳೆಗಳು ಮಾಲಾಕಾರದಲ್ಲಿ ಸರ್ವದಾ ಚಲಿಸುತ್ತಾ ಪ್ರಕಾಶಿಸುತ್ತಿರುವುವು. ||೨೩||

ರತ್ನದ ಉಂಗುರಗಳು ಕೈಬೆರಳಿನ ಸುತ್ತಲೂ ಪ್ರಕಾಶಿಸುತ್ತಿವೆ. ಹೆಬ್ಬೆರಳಿನ ಮೇಲೆ ಅಗಲವಾದ ಹೀರರತ್ನದ ಹೊಳಪಿನಿಂದ ರಂಜಿಸುವ ಅಂಗುಳೀಯಕವಿರುವುದು. ||೨೪||

ದೇವಿಯ ಸ್ವಭಾವಕಾಂತಿಯಿಂದ ಕೆಂಪಾಗಿ ಕಾಣುತ್ತಿರುವ ಪಾದಕಮಲಗಳು ಪಾದುಕೆಗಳನ್ನು ಪಡೆದು, ತನ್ನ ರಾಗದಿಂದ ಅವುಗಳನ್ನೂ ರಂಜಿತವನ್ನಾಗಿ ಮಾಡಿವೆ. ಈ ಪಾದಕಮಲಗಳ ಮಕರಂದ ಪಾನಕ್ಕಾಗಿ ದುಂಬಿಗಳು ಗುಂಪುಗುಂಪಾಗಿ ಬಂದು ಝೇಂಕರಿಸುತ್ತಿವೆ. ||೨೫||

ಮಣಿಮಯವಾದ ಗೆಜ್ಜೆಗಳ ಧ್ವನಿಯಿಂದ ಭೂತಲವೆಲ್ಲಾ ಶಬ್ದಾಯಮಾನವಾಗಿರುವುದು. ದೇಹದಲ್ಲಿ ಲಿಪ್ತವಾಗಿರುವ ಶ್ರೀಗಂಧ, ಅಗುರು, ಕಸ್ತೂರೀ, ಕರ್ಪೂರ ಇವುಗಳ ವಾಸನೆಯು ಸರ್ವತ್ರ ವ್ಯಾಪ್ತವಾಗಿರುವುದು. ||೨೬||

ದೇವಿಯು ಉಟ್ಟಿರುವ ಸೀರೆಯು ಅತಿ ಸುಗಂಧಮಯವಾಗಿರುವುದರಿಂದ ಆ ಗಂಧವು ಸಕಲ ದಿಕ್ತಟಗಳನ್ನೂ ಗಮಗಮಾಯಮಾನವನ್ನಾಗಿ ಮಾಡಿರುವುದು.

ಹಲ್ಲಕಾಕ್ರಾಂತಸುಕರಾಂ ತಥಾನ್ಯೇನ ವಿಲಂಬಿನಾ ।
ಪಾಶಾಂಕುಶಾಭಯವರಧರಾಂ ಶ್ರೀಭುವನೇಶ್ವರೀಂ ॥೨೮॥

ನಿರ್ಯತ್ಕಟಾಕ್ಷಾಂಕುರತಃ ಪಶ್ಯಂತೀಮಾನನಂವಿಭೋಃ ।
ಪಶ್ಯನ್ ಸಭಾಸು ತಾಂ ದೇವೀಂ ಸದಾ ನೃತ್ಯತಿ ಶಂಕರಃ ॥೨೯॥

ನಂದಿಭೃಂಗಿಮಹಾಕಾಲಸ್ಕಂದಹೇರಂಬಸಂವೃತಃ ।
ರಮ್ಯವಾದ್ಯೈರನ್ಯೈಸ್ತ್ನಾಯಂ ವೇದಘೋಷೈಶ್ಚ ಶಂಕರಃ ॥೩೦॥

ತತ್ರ ತತ್ರ ಸಭಾಸ್ಥಾನೇ ನೃತ್ಯತ್ಯಂಬಾಸಮನ್ವಿತಃ ।
ತಚ್ಛೃಣುಧ್ವಂ ಮುನಿಶ್ರೇಷ್ಠಾ ಗಣೇಂದ್ರಾಸ್ಸುರಸತ್ತಮಾಃ ॥೩೧॥

---

ಸೌಂದರ್ಯಕ್ಕೆ ನಿಧಿಯೆನಿಸಿ ದೇವಿಯ ಆನನವು ಚಂದ್ರನಂತೆ ಸರ್ವದಾ ಪ್ರಕಾಶಿಸುತ್ತಿರುವುದು. ॥೨೭॥

ಹಲ್ಲಕ (ಸೌಗಂಧಿಕ) ಪುಷ್ಪವನ್ನು ಒಂದು ಕೈಯ್ಯಲ್ಲಿ ಹಿಡಿದಿರುವಳು. ಮತ್ತೊಂದರಲ್ಲಿ ವರದಮುದ್ರೆಯನ್ನು ತೋರ್ಪಡಿಸುವಳು. ಅಂತೂ ಲೋಕಮಾತೆಯಾದ ದೇವಿಯು, ತನ್ನ ನಾಲ್ಕು ಕೈಗಳಲ್ಲಿಯೂ ಕ್ರಮವಾಗಿ, ಪಾಶ, ಅಂಕುಶ, ವರದ, ಈ ಆಯುಧಗಳನ್ನೂ ಮುದ್ರೆಗಳನ್ನೂ ಧರಿಸಿ ವಿರಾಜಿಸುತ್ತಿರುವಳು. ॥೨೮॥

ದೇವಿಯು ತನ್ನ ಕಟಾಕ್ಷದಿಂದ ಪರಶಿವನ ಮುಖವನ್ನು ನೋಡುವಳು. ಪರಮೇಶ್ವರನೂ ಸಹ ತನ್ನ ನಾಲ್ಕು ಸಭೆಗಳಲ್ಲಿಯೂ ಮಹೇಶ್ವರಿಯನ್ನು ನೋಡುತ್ತಾ ನಾಟ್ಯವಾಡುವನು. ॥೨೯॥

ಶಂಕರನ ನಾಟ್ಯಕಾಲದಲ್ಲಿ ನಂದಿ, ಭೃಂಗಿ, ಮಹಾಕಾಲ, ಸ್ಕಂದ, ಗಣಪತಿ ಇವರೆಲ್ಲರೂ ಜೊತೆಯಲ್ಲಿಯೇ ಇರುವರು. ಮನೋಹರವಾದ ವಾದ್ಯಘೋಷಗಳೂ, ಇಂಪಾದ ವೇದಘೋಷಗಳೂ, ಅಲ್ಲಿ ಮೊಳಗುತ್ತಿರುವುವು. ॥೩೦॥

ಕೆಲವುಸಾರಿ ಮಹೇಶ್ವರನು ತನ್ನ ಸಭೆಗಳಲ್ಲಿ ಪಾರ್ವತಿಯ ಸಮೇತನಾಗಿ ನಾಟ್ಯವಾಡುವನು. ಎಲೈ ಋಷಿಶ್ರೇಷ್ಠರೇ, ದೇವತೆಗಳೇ, ಆ ಸೊಬಗನ್ನು ಕೇಳುವವರಾಗಿರಿ ಎಂದು ಕುಮಾರಸ್ವಾಮಿಯು ಅಲ್ಲಿ ಸೇರಿದ್ದವರಿಗೆಲ್ಲಾ ನಾಟ್ಯದ ಸೊಬಗನ್ನು ವಿವರಿಸಲಾರಂಭಿಸಿದನು. ॥೩೧॥

ರಾಜದ್ರಾಜಕಲಾವಿರಾಜಿತಜಟಾರಾಜೀರಜೋಘ್ನಂ ಸತಾಂ
ರಾಮಾಲಂಕೃತವಾಮಭಾಗಮನಿಶಂ ಶ್ರೀರಾಜರಾಜಾರ್ಚಿತಂ ।
ನೃತ್ಯಂತಂ ನೃಶಿರಃಕಪಾಲಕಲಿಕಾಮಾಲಾಸ್ಫುರದ್ವಕ್ಷಸಂ
ನೃತ್ಯಂತಂ ರಜತಾದ್ರಿಹೇಮಸದಸಿ ಶ್ರೀಧೂರ್ಜಟಿಂ ಭಾವಯೇ ॥೩೨॥

ನೃತ್ಯದ್ಬ್ರಹ್ಮಕಪಾಲಘಟ್ಟನಪತದ್ಬ್ರಹ್ಮಾಂಡಕೋಟಿಸ್ರವ
ದ್ವರ್ಷಾಧಾರಸುಪೂರಪೂರಿತಜಟಾಗಂಗಾತರಂಗೋದ್ಭಟಂ ।
ಸೇವಾರ್ಥಾಗತವಿಷ್ಣುಮುಖ್ಯಸುರತಾಬದ್ಧಾಂಜಲಿಪ್ರಾರ್ಥನಂ
ನೃತ್ಯಂತಂ ರಜತಾದ್ರಿಹೇಮಸದಸಿ ಶ್ರೀಧೂರ್ಜಟಿಂ ಭಾವಯೇ ॥೩೩॥

ನಾಟ್ಯಕಾಲದಲ್ಲಿ ಪರಮೇಶ್ವರನ ಜಟಾಜೂಟವು ಚಂದ್ರನ ಕಾಂತಿಯಿಂದ ಹೊಳಪುಗೊಡುತ್ತಿರುವುದು. ಈ ಸಾತ್ವಿಕವಾದ ಕಳೆಯು ಸತ್ಪುರುಷರ ರಜೋಗುಣವನ್ನೆಲ್ಲಾ ನಾಶಮಾಡತಕ್ಕದ್ದಾಗುವುದು. ಮತ್ತು ಸರ್ವದಾ ಮಹೇಶ್ವರನು ತನ್ನ ವಾಮಭಾಗದಲ್ಲಿ ದೇವಿಯನ್ನು ಕೂಡಿಯೇ ನಾಟ್ಯವಾಡುತ್ತಿರುವನು. ಧನಾಧಿಪನಾದ ಕುಬೇರನೂ ಸಹ ಇಂತಹ ಮಹೇಶ್ವರನನ್ನು ಪೂಜಿಸುತ್ತಿರುವನು. ನರ್ತನ ಕಾಲದಲ್ಲಿ ಮಹೇಶ್ವರನ ಎದೆಯಮೇಲೆ, ರುಂಡಾಮಾಲೆಗಳೂ ಬ್ರಹ್ಮಕಪಾಲವೂ ಕುಣಿಯುತ್ತಿರುವುವು. ಈ ಸೌಭಾಗ್ಯದಿಂದ ಕೈಲಾಸಪರ್ವತದ ಸುವರ್ಣಸಭೆಯಲ್ಲಿ ನಾಟ್ಯವಾಡುತ್ತಿರುವ ಪರಶಿವನನ್ನು ನಾನು ಸರ್ವದಾ ಧ್ಯಾನಿಸುವೆನು. ॥೩೨॥

ತಾಂಡವೇಶ್ವರನ ನರ್ತನಕಾಲದಲ್ಲಿ ಬ್ರಹ್ಮಕಪಾಲವು ಚಲಿಸುವುದರಿಂದ ಬ್ರಹ್ಮಾಂಡವೇ ಅಲ್ಲಾಡುತ್ತಿರುವುದು. ಈ ಕಪಾಲದ ಹೊಡೆತದಿಂದ ಅತಿಶಯವಾದ ವೃಷ್ಟಿಯು ಜಗತ್ತನ್ನೆಲ್ಲಾ ಆವರಿಸುವುದು. ಇದರಿಂದ ಗಂಗಾನದಿಯ ಪ್ರವಾಹವು ಹೆಚ್ಚಿ ಶಂಕರನ ಜಟೆಯಲ್ಲಿ ಅಲೆಗಳಿಂದ ತುಳುಕಾಡುತ್ತಿರುವುದು. ಇದೇ ಸಮಯವನ್ನೇ ಕಾದಿದ್ದು ವಿಷ್ಣುವೇ ಮೊದಲಾದ ಸಕಲ ದೇವತೆಗಳೂ ಅಲ್ಲಿಗೆ ಬಂದು ಅಂಜಲಿಬದ್ಧರಾಗಿ ನಿಂತು ಶಂಕರನನ್ನು ಬಹುವಾಗಿ ಪ್ರಾರ್ಥಿಸುತ್ತಿರುವರು. ಹೀಗೆ ಕೈಲಾಸದ ಹೇಮಮಂಟಪದಲ್ಲಿ ನಾಟ್ಯವನ್ನಾಡುತ್ತಿರುವ ಮಹಾದೇವನನ್ನು ನಾನು ಸರ್ವದಾ ಸ್ಮರಿಸುವೆನು. ॥೩೩॥

ತಂಡೌ ವಾದಿನಿ ಡಿಂಡಿಮಂ ಡಮರುಕಾಮಾಖಂಡಲೇ ವಾದ್ಯತಿ
ಬ್ರಹ್ಮಣ್ಯಂಬುಜಲೋಚನೇ ಚ ನಮತಿ ಶ್ರೀಚಂಡಿಕೇಶೇ ಕರೈಃ ।
ಘಂಟಾಡೋಲನತತ್ಪರೇ ಸುರನುತಂ ಶ್ರೀತಾಂಡವೇ ಪಂಡಿತಂ
ನೃತ್ಯಂತಂ ರಜತಾದ್ರಿಹೇಮಸದಸಿ ಶ್ರೀಧೂರ್ಜಟಿಂ ಭಾವಯೇ ॥೩೪॥

ಶೀರ್ಷಾಬದ್ಧಕಪಾಲಮಾಲಮಮಲಂ ನೃತ್ಯಜ್ಜಟಾಮಂಡಲಂ ।
ಭೂಷಾವೇಷವಿಷಾಗ್ನಿಮಿಶ್ರಿತಸುಧಾಧಾರೇಷದುಷ್ಣಾರ್ಚಿಷಂ ।
ನೃತ್ಯಂತಂ ರಮಣೀಮುದೇ ನಿಗಮವಾಜ್ಮೂರ್ಧಾಧಿರೂಢಂ ಶಿವಂ ।
ನೃತ್ಯಂತಂ ರಜತಾದ್ರಿಹೇಮಸದಸಿ ಶ್ರೀಧೂರ್ಜಟಿಂ ಭಾವಯೇ ॥೩೫॥

ಪಾದಾಬದ್ಧಹರೀಶಕಂಕಣರಣತ್ಕಾರೌಘನಿಷ್ಪಂದಿತ ।
ಬ್ರಹ್ಮಾದ್ಯಾಖಿಲಜಂಗಮಂ ಬಹುಭುಜಾಲಂಕಾರದೇವ್ಯಾಃ ಪುರಃ ।

ನರ್ತನ ಸೌಕರ್ಯಕ್ಕಾಗಿ ತಂಡುವು ಡಿಂಡಿಮವಾದ್ಯವನ್ನು ಬಾರಿಸುವನು. ಇಂದ್ರನು ಡಮರುಗವನ್ನು ಹೊಡೆಯುವನು. ಅಕ್ಕಪಕ್ಕದಲ್ಲಿ ಬ್ರಹ್ಮ, ವಿಷ್ಣು ಇವರು ಕೈಜೋಡಿಸಿ ನಿಂತಿರುವರು. ಚಂಡಿಕೇಶ್ವರನು ಘಂಟಾನಾದ ಮಾಡುತ್ತಿರುವನು. ದೇವತೆಗಳೆಲ್ಲರೂ ಇದನ್ನು ನೋಡಿ ಆನಂದಪಡುತ್ತಿರುವರು. ಸುವರ್ಣ ಮಂಟಪದಲ್ಲಿ ಹೀಗೆ ನರ್ತನಮಾಡುತ್ತಿರುವ ಧೂರ್ಜಟಿಯನ್ನು ಸರ್ವದಾ ಅನುಸಂಧಾನ ಮಾಡುವೆನು. ||೩೪||

ಶಿರೋಮಾಲೆಗಳನ್ನು ಧರಿಸಿ ನರ್ತನಮಾಡುತ್ತಿರುವ ಶಂಕರನ ಜಟಾಜೂಟವೂ ಸಹ ಕುಣಿಯುತ್ತಿರುವಂತೆಯೇ ತೋರಿಬರುತ್ತಿರುವುದು. ಅಲ್ಲದೆ ಶಂಕರನು ಶಿರಸ್ಸಿನಲ್ಲಿ ಧರಿಸಿಕೊಂಡಿರುವ ಶೀತಲಚಂದ್ರನೂ ಸಹ ಹತ್ತಿರವಿರುವ ವಿಷಜ್ವಾಲೆಯಿಂದಲೂ, ಅಗ್ನಿಯತಾಪದಿಂದಲೂ, ಕಾದು ಸ್ವಲ್ಪ ಬೆಚ್ಚಗಾಗಿಯೇ ತೋರಿಬರುತ್ತಿರುವನು. ಪರಶಿವನ ನಾಟ್ಯವಾದರೋ ಪಾರ್ವತಿಯ ಸಂತೋಷಕ್ಕಾಗಿಯೇ ಪ್ರವೃತ್ತವಾಗಿರುವುದು. ಶಂಕರನು ವೇದವೇದಾಂತಾದಿಗಳಲ್ಲಿ ಮುಖ್ಯಸ್ಥಾನವನ್ನು ಹೊಂದಿ ರಂಜಿಸುತ್ತಿರುವನು. ಇಂತಹ ಮಹಾಮಹಿಮನಾದ ಧೂರ್ಜಟಿಯನ್ನು ಸರ್ವದಾ ಮನನಮಾಡುವೆನು. ||೩೫||

ಶಂಕರನು ಆದಿಶೇಷನನ್ನೇ ಬಳೆಯನ್ನಾಗಿಟ್ಟು ನರ್ತನಮಾಡುವನು. ಅವನ ಚಲನೆಯಿಂದಲೂ, ಗೆಜ್ಜೆಗಳ ಧ್ವನಿಯಿಂದಲೂ ಬ್ರಹ್ಮನೇ ಮೊದಲಾದ ಜಂಗಮ

**ಮಂದಸ್ಮೇರವಿರಾಜಮಾನವದನಾಂಭೋಜಂ ನಟಂತಂ ಶಿವಂ ।**
**ಕೈಲಾಸಾಚಲಶಾತಕುಂಭಸದಸಿ ಶ್ರೀಶಂಭುಮಾಲೋಕಯೇ ॥೩೬॥**

**ಇತ್ಥಂ ನೃತ್ಯತಿ ದೇವೇಶಸ್ಸಾಯಂ ದೇವ್ಯಾ ಸದಾಶಿವಃ ।**
**ಕೈಲಾಸಹೇಮಸದಸಿ ಪ್ರಾಚ್ಯಾಂ ಗಣವರ್ಯೈರ್ವೃತಃ ॥೩೭॥**

**ತದ್ದಕ್ಷಿಣೇ ರತ್ನಕ್ಲ್ಪಪ್ತಸದೋ ಮಧ್ಯೇ ಮಹೇಶ್ವರಃ ।**
**ನೃತ್ಯತ್ಯಂಬಾಮುದೇ ದೇವಸ್ತಚ್ಛೃಣುಷ್ವ ಮುನೀಶ್ವರ ॥೩೮॥**

॥ ಸ್ಕಂದ ಉವಾಚ ॥

**ಗಂಡಾಂದೋಲಿತ ಕುಂಡಲೀಶ್ವರಮಹಾಶ್ರೀಕುಂಡಲಂ ತಾಂಡವೇ ।**
**ಪಾಂಡಿತ್ಯಂ ಘಟಯಂತಮಂಡಜಮುಖೈಶ್ಚಂಡೇಶ್ವರಾದ್ಯೈರ್ಗಣೈಃ ।**

---

ಜಗತ್ತೆಲ್ಲವೂ ನಡುಗಿಹೋಗುತ್ತಿರುವುದು. ಇಂತಹ ತಾಂಡವೇಶ್ವರನು ಅಲಂಕಾರ ದಿಂದ ಶೋಭಿಸುತ್ತಿರುವ ದೇವಿಯ ಮಂದಸ್ಮಿತದ ಮುಖಕಮಲವನ್ನು ನೋಡುತ್ತಾ, ಆನಂದದಿಂದ ತನ್ನ ನಾಟ್ಯವನ್ನು ಮುಂದುವರಿಸುವನು. ಕೈಲಾಸಾಚಲದ ಸುವರ್ಣ ಮಂಟಪದಲ್ಲಿ ಮೆರೆಯುವ ಅಂತಹ ತಾಂಡವೇಶ್ವರಸ್ವಾಮಿಯನ್ನು ಸರ್ವದಾ ನಿದಿಧ್ಯಾಸನಮಾಡುವೆನು. ॥೩೬॥

ಹೀಗೆ ಸದಾಶಿವನು ದೇವಿಯೊಡಗೂಡಿ ಪ್ರದೋಷಕಾಲದಲ್ಲಿ ಕೈಲಾಸ ಪ್ರಾಗ್ಭಾಗದ ಸುವರ್ಣಮಂಟಪದಲ್ಲಿ ಪ್ರಮಥಗಣಗಳಿಂದ ಕೂಡಿ ನಾಟ್ಯವಾಡುವನು. ॥೩೭॥

ಅಲ್ಲಿಂದ ಮುಂದೆ ದಕ್ಷಿಣಭಾಗದಲ್ಲಿರುವ ರತ್ನಮಂಟಪದಲ್ಲಿ ನಿಂತು ಶಂಕರನು ದೇವಿಯ ತೃಪ್ತಿಗಾಗಿ ನಾಟ್ಯವಾಡುವನು. ಎಲೈ ಋಷಿಯೇ, ಅದನ್ನು ಕೇಳು ವಿವರಿಸುವೆನು, ಎಂದು ಕುಮಾರಸ್ವಾಮಿಯು ಶಂಕರನ ನಾಟ್ಯವನ್ನು ಮತ್ತೆ ವಿವರಿ ಸಲಾರಂಭಿಸಿದನು. ॥೩೮॥

ಪರಮೇಶ್ವರನಿಗೆ ಆದಿಶೇಷನೇ ಕರ್ಣಕುಂಡಲವಾಗಿರುವನು. ತಾಂಡವ ಕಾಲದಲ್ಲಿ ಆದಿಶೇಷನ ಫಣಾರತ್ನಕಾಂತಿಯು ಪರಶಿವನ ಗಂಡಸ್ಥಲದ ಮೇಲೆ ಬಿದ್ದು ಅದನ್ನು ಪ್ರಕಾಶವಿಶಿಷ್ಟವನ್ನಾಗಿ ಮಾಡುತ್ತಿರುವುದು. ಪಕ್ಷಿಯ ಮುಖದಂತೆ ಮುಖ ವುಳ್ಳ ಚಂಡೇಶ್ವರನೇ ಮೊದಲಾದವರು ತಾಂಡವೇಶ್ವರನನ್ನು ಸ್ತುತಿಸುವುದರ

ಸ್ತೋತ್ರೀಷ್ಯಂತಂ ನಿಗಮಾಂತಸಾರವಚಸಾನೋಽಷ್ಟೈರನೋಽಷ್ಟೈಶ್ಶಿವಂ ।
ನೃತ್ಯಂತಂ ರಜತಾದ್ರಿರತ್ನಸದಸಿ ಶ್ರೀನೀಲಕಂಠಂ ಭಜೇ ॥೩೯॥

ತಂಡೂದ್ಗಾನುಗಿರೋ ಜಯಂತಿ ಸವಿಧಂ ಶ್ರೀಕೈಟಭಾರೇ ತ್ಯಜ
ಬ್ರಹ್ಮನ್ ಬ್ರಹ್ಮರವಾಂಶ್ಚ ಸಂಹರ ಹರೇ ದೂರಂ ಪರಂ ಸಾರಯ ।
ಇತ್ಥಂ ನರ್ತಕಚಕ್ರವರ್ತಿನಿಕಟೇ ನೃತ್ಯೋನ್ಮುಖೇ ತಾದೃಶಂ
ನೃತ್ಯಂತಂ ರಜತಾದ್ರಿರತ್ನಸದಸಿ ಪಶ್ಯಾಮಿ ಶಂಭುಂ ಸದಾ ॥೪೦॥

ನೃತ್ತಾಂದೋಲಚಲಚ್ಛಿಖಾಮೃತಗಲತ್ಖಂಡೇಂದುಸಾಂದ್ರೋಚ್ಚಯೇ
ಭ್ರಾಜತ್ಪಾಟಲಮಂಡಲಾರುಣಲಸದ್ವೃಂದಾರಕಾಣಾಂ ಗಣೇ ।
ನುಗ್ನೋ ಭುಗ್ನವಲಗ್ನನಗ್ನನಿಭೃತೇ ಚೂಡಾಹಿಬೃಂದೋಚ್ಛ್ವಸ
ನ್ನೃತ್ಯಂತಂ ರಜತಾದ್ರಿರತ್ನಸದಸಿ ಪಶ್ಯಾಮಿ ಶಂಭುಂ ಸದಾ ॥೪೧॥

---

ಮೂಲಕ ತಮ್ಮ ಪಾಂಡಿತ್ಯವನ್ನು ತೋರ್ಪಡಿಸುತ್ತಿರುವರು. ಮತ್ತು ಬ್ರಹ್ಮಾದಿಗಳು ಉಪನಿಷದ್ವಾಕ್ಯಗಳಿಂದ ಭಗವಂತನನ್ನು ಬಹಳವಾಗಿ ಸ್ತುತಿಸುತ್ತಿರುವರು. ಹೀಗೆ ಪರಶಿವನು ಕೈಲಾಸದ ರತ್ನಮಂಟಪದಲ್ಲಿ ತಾಂಡವವಾಡುತ್ತಿರುವನು. ಅಂತಹ ನೀಲಕಂಠನಾದ ಪರಶಿವನನ್ನು ನಾನು ಸರ್ವದಾ ಸೇವಿಸುವೆನು. ॥೪೦॥

ಪರಮೇಶ್ವರನು ನಾಟ್ಯವಾಡುವ ಕಾಲದಲ್ಲಿ ತಂಡುವು ಹತ್ತಿರದಲ್ಲಿ ನಿಂತು, "ಎಲೈ ಕೈಟಭಾರಿಯಾದ ವಿಷ್ಣುವೇ, ದೂರಸಿಲ್ಲು. ಬ್ರಹ್ಮನೇ ವೇದಘೋಷವನ್ನು ಕಮ್ಮಿಮಾಡು. ನರ್ತನಕ್ಕೆ ಸ್ಥಳವನ್ನು ಕೊಡಿ" ಎಂದು ಗರ್ಜಿಸುತ್ತಾ ಶಂಕರನ ನಾಟ್ಯಕ್ಕೆ ಇತರರಿಂದ ಯಾವ ವಿಧವಾದ ತೊಂದರೆಯೂ ಉಂಟಾಗದಂತೆ ನೋಡಿ ಕೊಳ್ಳುತ್ತಿರುವನು. ಇಂತಹ ಸರ್ವೋತ್ಕೃಷ್ಟಗಳಾದ ತಂಡುವಿನ ವಾಕ್ಯಗಳಿಂದ ಕೂಡಿ, ರತ್ನಸಭೆಯಲ್ಲಿ ನರ್ತಿಸುವ ನಾಟ್ಯಚಕ್ರವರ್ತಿಯಾದ ಪರಮೇಶ್ವರನನ್ನು ನಾನು ಯಾವಾಗಲೂ ಧ್ಯಾನಿಸುತ್ತಿರುವೆನು. ॥೪೦॥

ಪರಶಿವನು ನರ್ತನದ ತೂಗಾಟದಲ್ಲಿರುವಾಗ ತಲೆಯಮೇಲಿರುವ ಅರ್ಧ ಚಂದ್ರನಿಂದ ಅಮೃತವು ಅಧೋಭಾಗಕ್ಕೆ ಸುರಿಯುತ್ತಿರುವುದು. ತಮ್ಮ ತಮ್ಮ ತೇಜಃಪುಂಜದಲ್ಲಿದ್ದು ಹೊಳೆಯುತ್ತಿರುವ ದೇವತೆಗಳ ಸಮೂಹವು ಎಡಬಿಡದೆ ಸ್ವಾಮಿಯ ನರ್ತನವನ್ನೇ ನಿರೀಕ್ಷಿಸುತ್ತಿರುವುದು. ಮತ್ತು ನರ್ತನದ ರಭಸದಲ್ಲಿ ಸೊಂಟವನ್ನು ಬಗ್ಗಿಸುವುದರಿಂದಲೂ, ಎತ್ತುವುದರಲ್ಲಿಯೂ, ಓಡಾಟದಲ್ಲಿಯೂ,

**ನೃತ್ತಾರ್ತಸ್ಯ ಪದದ್ವಯೋಃ ಪ್ರ್ಲುತಿಚಲದ್ಧೇಮಾದ್ರಿಸೋಮಾರ್ಕಮಾ**
**ಕ್ಷ್ಮಾಕೃಶೇಷಾದಿಕಕಂಪನಂ ವಿದಧತಂ ನೃತ್ಯಂತಮೀಷತ್ಸ್ಮಿತಂ ।**
**ದೇವೀ ಪಶ್ಯತಿ ಶಂಕರಂ ಚ ಸುಮಹತ್ಸಾನಂದನಂದೋನ್ಮುಖಂ**
**ನೃತ್ಯಂತಂ ರಜತಾದ್ರಿರತ್ನಸದಸಿ ಪಶ್ಯಾಮಿ ಶಂಭುಂ ಸದಾ ॥೪೨॥**

**ಯಸ್ಮಿನ್ನೃತ್ಯತ್ಯನೀಶೇ ವಿದಧತಿ ಭರಿತಾನಂದಸಂದೋಹಧಾಮ್ನಿ**
**ಭೂಷಾಸ್ಪಂದನಹಾನಿಶಂಕಿಹೃದಯೋ ಮಂದಂ ವಿಧತ್ತೇ ಪದಂ ।**
**ಯೋ ವಾಸಶ್ಶಿಥಿಲಂ ಭವೇದಿತಿ ಕರಾನಾತನ್ವತೇ ನಿಸ್ಯದಾನ್**
**ಕೇಶಾಕುಂಚನತಃ ಕರೋತಿ ಭಗವಾನ್ ಕೇಂದೂ ಚ ಚಕ್ರೋತ್ತಮೌ॥೪೩॥**

**ನಾನರ್ತಿ ಪ್ರಸಭಂ ಪ್ರಸನ್ನಹೃದಯೋ ರಾತ್ನೇ ಸಭಾಯಾಂ ಶಿವಃ ॥೪೪॥**

ಶಿವನ ಶಿರಸ್ಸಿನಲ್ಲಿ ಹುದುಗಿರುವ ಸರ್ಪಗಳು ಆಯಾಸದಿಂದ ಉಸುರುಬಿಡುತ್ತಿರುವುವು. ಇಷ್ಟು ವೇಗದಿಂದ ರತ್ನಸಭೆಯಲ್ಲಿ ನೃತ್ಯವಾಡುತ್ತಿರುವ ಶಂಭುವನ್ನು ಬಿಡದೆ ನೋಡುತ್ತಿರುವೆನು. ॥೪೧॥

ಪರಮೇಶ್ವರನು ತಾನೇತಾನಾಗಿ ನರ್ತನಮಾಡುತ್ತಿರುವಾಗ, ಶಂಕರನ ಪಾದ ಘಾತಕ್ಕೆ ಸಿಕ್ಕಿ ಸುವರ್ಣಾಚಲ, ಸೂರ್ಯ, ಚಂದ್ರ, ಭೂಮಿ, ಆದಿಶೇಷ ಇವರೆಲ್ಲರೂ ನಡುಗಿ ಹೋಗುತ್ತಿರುವರು. ಇಂತಹ ನಾಟ್ಯವೇಗದಲ್ಲಿ ಮುಳುಗಿಹೋಗಿರುವ ತನ್ನ ಪತಿಯನ್ನು ದೇವಿಯು ಆನಂದಭರಿತವಾದ ಕಣ್ಣುಗಳಿಂದ ನೋಡಿ ಸಂತೋಷಪಡು ತ್ತಿರುವಳು. ಅಂತಹ ಪರಶಿವನನ್ನು ನಾನು ಸರ್ವದಾ ನೋಡುತ್ತಿರುವೆನು. ॥೪೨॥

ಶಂಕರನು ಆನಂದಭರಿತನಾಗಿ ನಾಟ್ಯವಾಡುವ ಕಾಲದಲ್ಲಿ, ನಾಟ್ಯವೇಗದಿಂದ ಒಡವೆಗಳು (ಸರ್ಪಗಳು) ಜಾರಿ ಬಿದ್ದು ಹೋಗುವುವೆಂಬ ಶಂಕೆಯಿಂದ ತನ್ನ ಕಾಲು ಗಳನ್ನು ನಿದಾನವಾಗಿಡುವನು. ತಾನು ಉಟ್ಟಿರುವ ಗಜಚರ್ಮವು ಜಾರಿಬೀಳುವು ದೆಂಬ ಅನುಮಾನದಿಂದ ತನ್ನ ಕೈಗಳನ್ನು ನಿದಾನವಾಗಿ ಚಲಿಸುವಂತೆ ಮಾಡು ವನು. ತಲೆಯಲ್ಲಿರುವ, ಗಂಗೆಯೂ, ಚಂದ್ರನೂ, ಬೀಳುವರೆಂಬ ಭಯದಿಂದ ತನ್ನ ಕೇಶವನ್ನು ಅವರಿಗೆ ರಕ್ಷಣೆಯನ್ನಾಗಿ ಮಾಡಿ ನಿಲ್ಲಿಸಿಕೊಳ್ಳುವನು. ॥೪೩॥

ಹೀಗೆ ಶಂಕರನು ಪ್ರಸನ್ನಮನಸ್ಕನಾಗಿ ರತ್ನಸಭೆಯಲ್ಲಿ ಉಳಿದವರಿಗೆ ತೊಂದರೆ ಯಾಗುವುದೆಂದು ಎಂದೂ ವೇಗವಾಗಿ ನರ್ತನಮಾಡುವುದಿಲ್ಲ. ॥೪೪॥

ಇತ್ಥಂ ರಾಜತಶೈಲೇ ಚ ದೇವೋ ರತ್ನಸಭಾಂತರೇ
ನೃತ್ತಂ ವಿತನುತೇ ದೇವ್ಯಾಃ ಪುರತಸ್ಸಾಯಮೀಶ್ವರಃ ॥೪೫॥

ಪಶ್ಚಾತ್ಸಭಾಯಾಂ ರಜತಕಲ್ಪಿತಾಯಾಂ ಮಹೇಶ್ವರಃ ।
ನೃತ್ಯತ್ಯಂಬಾಮುಖಂ ವೀಕ್ಷ್ಯ ಗಣಬೃಂದಸಮನ್ವಿತಃ ॥೪೬॥

॥ ಸ್ಕಂದ ಉವಾಚ ॥

ನೃತ್ಯಂತಂ ಹರಿಭೂಷಣಂ ವಿಧಿಶಿರೋಬೃಂದಾಲಿಮಾಲಾಲಸ
ದ್ವಾಮಾಂಗಾಕೃತಿಸತ್ಸ್ತ್ರಿಯಾ ಯುತಪದೇ ಕೇಯೂರಶಿಂಜತ್ಸ್ವನಂ ।
ಕಟ್ಯಾಂ ಸಾಮಜಚರ್ಮವಸ್ತ್ರಕಲಿತಂ ನೃತ್ಯಂತಮಾಶಾವಸಂ
ಬದ್ಧಾರ್ಧಾಂಗಕಲೇನ ಬಾಲಕಲಿತೋತ್ತಂಸಾನ್ವಿತಾಂಸಾ ವಯಂ ॥೪೭॥

ನೃತ್ಯಂತಂ ಕಲಧೌತಸಾರಸದಸಿ ಧ್ಯಾಯಾಮಿ ನೃತ್ತೋನ್ಮುಖಂ ॥೪೮॥

ವಾಗ್ಗುಂಭಾನ್ವಿವಿಧಾನಕೃತ್ರಿಮಮಯಾನಂಭೋಜಜಾತೇ ವದ ।
ತ್ವಾನಂದಾಂಬುಧಿಮಗ್ನಚೇತಸಿ ಪರೇ ಗೋವಿಂದಪೂಜ್ಯೇ ಹರೇ ।

ಹೀಗೆ ಪರಮೇಶ್ವರನು ರಜತಮಯವಾದ ಕೈಲಾಸಪರ್ವತದ ರತ್ನಸಭೆಯಲ್ಲಿ ದೇವಿಯ ಎದುರಿಗೆ ಪ್ರದೋಷಕಾಲಿಕವಾದ ನಾಟ್ಯವನ್ನಾಡುವನು. ॥೪೫॥

ಹಾಗೆಯೇ ಪಶ್ಚಿಮದಿಕ್ಕಿನಲ್ಲಿರುವ ರಜತಸಭೆಯಲ್ಲಿಯೂ ಮಹೇಶ್ವರನು ಅಂಬಾ ಮುಖವನ್ನು ನೋಡುತ್ತಾ ಪ್ರಮಥಗಣಗಳಿಂದ ಕೂಡಿದವನಾಗಿ ನರ್ತನ ಮಾಡುವನು. ॥೪೬॥

ಶಂಕರನು ಸರ್ಪಭೂಷಣನಾಗಿ, ಬ್ರಹ್ಮಕಪಾಲವೇ ಮೊದಲಾದ ಶಿರೋಮಾಲೆಗಳನ್ನು ಧರಿಸಿದವನಾಗಿ, ವಾಮಭಾಗದಲ್ಲಿ ದೇವಿಯ ಆಕಾರವನ್ನು ಪಡೆದು, ಅಲ್ಲಿ ತೋರಿಬರುವ ಆಭರಣಗಳಿಂದ ಧ್ವನಿಗೈಯ್ಯುತ್ತಾ ನಾಟ್ಯವಾಡುತ್ತಿರುವನು. ಕಟಿಭಾಗದಲ್ಲಿ ಗಜಚರ್ಮವನ್ನು ಧರಿಸಿರುವನು. ಮತ್ತು ದಿಕ್ಕುಗಳನ್ನೇ ಬಟ್ಟೆಯನ್ನಾಗಿ ಹೊಂದಿರುವನು. ಶಿರಸ್ಸಿನಲ್ಲಿ ಅರ್ಧಚಂದ್ರನನ್ನು ಧರಿಸಿರುವನು. ಇಂತಹ ಪರಮೇಶ್ವರನಿಗೆ ನಾವೆಲ್ಲರೂ ಕೇವಲ ಬಾಲಭಾವವನ್ನು ತಳೆದಿರುವ ಸಾಮಾನ್ಯ ಮನುಷ್ಯರಂತಿರುವೆವು. ಹೀಗೆ ರಜತಸಭೆಯಲ್ಲಿ ನಾಟ್ಯಾಸಕ್ತನಾಗಿರುವ ಪರಮೇಶ್ವರನನ್ನು ನಾನು ಸರ್ವದಾ ಧ್ಯಾನಿಸುವೆನು. ॥೪೭॥

ಬ್ರಹ್ಮನು ಅರ್ಥಗರ್ಭಿತವಾದ ಮತ್ತು ಕೃತ್ರಿಮವಲ್ಲದೆ ಯಥಾವತ್ತಾಗಿ

ಮಂದಂ ಮಂದಮುರಂದಪಾಭಿರಖಿಲೇ ನೃಂದಾರಕಾಣಾಂ ಗಣೇ ।
ನೃತ್ಯಂತಂ ಕಲಧೌತಸಾರಸದಸಿ ಧ್ಯಾಯಾಮಿ ನೃತ್ಯೋನ್ಮುಖಂ ॥೪೮॥

ಯಸ್ಮಿನ್ ನೃತ್ಯತಿ ಜಂಗಮಾಚರಮಿದಂ ವಿಶ್ವಂ ನರೀನೃತ್ಯತಿ ।
ಯಸ್ಮಾದ್ಭಿನ್ನತಯಾ ನ ಕಿಂಚಿದಪಿ ವೈ ವಕ್ತುಂ ನ ಶಕ್ಯಂ ಬುಧೈಃ ।
ತಾದೃಕ್ಷಂ ನಟನಾರ್ಭಟೀಕೃತರುಚಿಂ ಭೂಷಾಹಿಶೇಷೋಜ್ಜ್ವಲಂ ।
ನೃತ್ಯಂತಂ ಕಲಧೌತಸಾರಸದಸಿ ಧ್ಯಾಯಾಮಿ ಶಂಭೋಃ ಪದಂ ॥೪೯॥

ಚೇತಸ್ತ್ವಂ ಭಜ ಯದ್ಗತೋ ನ ಪುನರಾವೃತ್ತಿಂ ಭಜೇನ್ಮಾನವೋ ।
ಯಸ್ಮಾಚ್ಚಿತ್ರತರಂ ನ ಕಿಂಚಿದಧಿಕಂ ತತ್ತಾದೃಶಂ ತಾಂಡವಂ ।
ಕುರ್ವಂತಂ ಕರುಣಾಂಬುಧಿಂ ತ್ರಿನಯನಂ ಶ್ರೀಕಾಲಕೂಟೋಜ್ಜ್ವಲಂ ।
ನೃತ್ಯಂತಂ ಕಲಧೌತಸಾರಸದಸಿ ಧ್ಯಾಯಾಮಿ ಶಂಭೋಃ ಪದಂ ॥೫೦॥

---

ಅರ್ಥಕೊಡುವ ವಾಗ್ಜಾಲಗಳಿಂದ ನಾಟ್ಯಾಚಾರ್ಯನಾದ ಮಹೇಶ್ವರನನ್ನು ಸ್ತುತಿಸುತ್ತಿರುವನು. ಆದರಿಂದ ಶಂಕರನು ಆನಂದಾಮೃತದ ಸಮುದ್ರದಲ್ಲಿ ಮುಳುಗಿರುವನಂತೆ ತೋರಿಬರುವನು. ಆನಂದಮಯನಾದ ಶಂಕರನನ್ನು ಗೋವಿಂದನೂ ಅತಿಶಯವಾಗಿ ಪೂಜಿಸುತ್ತಿರುವನು. ಅನೇಕ ದೇವತೆಗಳು ಶಂಕರನ ಭಕ್ತಿಮಕರಂದವನ್ನು ಪಾನಮಾಡುತ್ತಾ ಸ್ವಾಮಿಯ ನಾಟ್ಯವನ್ನೇ ಎದುರುನೋಡುತ್ತಿರುವರು. ಇಂತಹ ಕಲಧೌತಸಭೆಯಲ್ಲಿ ನರ್ತನಮಾಡುತ್ತಿರುವ ಮಹಾದೇವನನ್ನು ನಾನು ಮನಸಾ ಧ್ಯಾನಮಾಡುವೆನು. ॥೪೮॥

ಪ್ರಪಂಚವೆಲ್ಲವೂ ಈಶ್ವರಸ್ವರೂಪವೇ ಆದ್ದರಿಂದ, ಈಶ್ವರನು ನರ್ತನಮಾಡಿದರೆ, ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ನರ್ತನಮಾಡುವುದು. ಏಕೆಂದರೆ ಲೋಕವೆಲ್ಲವೂ ಪರಬ್ರಹ್ಮಸ್ವರೂಪವೇ. ಆದ್ದರಿಂದ ತದ್ಭಿನ್ನವಾದ ವಸ್ತುವು ಯಾವುದೂ ಇಲ್ಲವೆಂದು ತಿಳಿದವರು ಹೇಳುತ್ತಿರುವರು. ಲೋಕರೂಪಿಯಾದ ಶಂಕರನು ಸಮಸ್ತವಾದ ಆಭರಣಗಳಿಂದಲೂ ನಾಗಾಭರಣದಿಂದಲೂ ಕೂಡಿದವನಾಗಿ ರಜತ ಸಭೆಯಲ್ಲಿ ನಾಟ್ಯವಾಡುತ್ತಿರುವನು. ಅಂತಹ ಶಂಕರನ ಪಾದವನ್ನು ಧ್ಯಾನಮಾಡುವೆನು. ॥೪೯॥

ಯಾವ ಪರಮೇಶ್ವರನನ್ನು ಆರಾಧಿಸಿ ಮುಕ್ತನಾದ ಮನುಷ್ಯನು ಪುನರ್ಜನ್ಮವನ್ನು ಪಡೆಯಲಾರನೋ, ಅಂತಹ ಮಹೇಶ್ವರನನ್ನು ಎಲೈ ಮನಸ್ಸೇ, ಸರ್ವಥಾ

ಯಸ್ಮಿನ್ ಭ್ರಾಮ್ಯತಿ ಬಂಭ್ರಮೀತಿ ಸಕಲಂ ವಿಶ್ವಂ ಚರಾದ್ಯಾತ್ಮಕಂ
ಯಸ್ಮಿನ್ನುತ್ಪ್ಲುತಿಮಾಚರತ್ಯಖಿಲಂ ಬ್ರಹ್ಮಾಂಡಮುದ್ಭಿದ್ಯತೇ ।
ಯದ್ಭಾಸಾ ಪ್ರವಿಭಾಂತಿ ಭಾಸ್ಕರನಿಶಾನಾಥಾದಯಸ್ಸಂತತಂ
ನೃತ್ಯಂತಂ ಕಲಧೌತಸಾರಸದಸಿ ಧ್ಯಾಯಾಮಿ ಶಂಭೋಃ ಪದಂ ॥೫೧॥

ಯಸ್ಮಿನ್ನಾಪತಿತೇ ನ ಶರ್ಮ ಲಭತೇ ಕೂರ್ಮೋಽಪಿ ಭಗ್ನಾಸ್ಥಿಕೋ
ನೃತ್ತಾಯಾಸವಿನಿರ್ಗತೋರುನಯನಶ್ರೋತ್ರೋತ್ಥಫೂತ್ಕಾರಕಃ
ಸಾಂಗಾ ಸಾ ಶ್ರುತಿರಿತ್ಯುಪೇಂದ್ರಸದೃಶಾ ಸ್ತಸ್ಯಾಶ್ರಯಾಜ್ಜೀವಿನಃ ॥೫೨॥

ಧ್ಯಾನಮಾಡು. ಪರಮೇಶ್ವರನ ತಾಂಡವಕ್ಕಿಂತ ಆಶ್ಚರ್ಯಕರವಾದ ನಾಟ್ಯವು ಜಗತ್ತಿನಲ್ಲಿ ಮತ್ತೊಂದಿಲ್ಲ. ದಯಾಶಾಲಿಯೂ ನೇತ್ರತ್ರಯಾತ್ಮಕನೂ ಕಾಲಕೂಟಪಾನದಿಂದ ತೇಜಸ್ವಿಯೂ ಆದ ಪರಮೇಶ್ವರನು ರಜತಮಯವಾದ ಸಭೆಯಲ್ಲಿ ಮನೋಹರವಾಗಿ ನರ್ತಿಸುತ್ತಿರುವನು. ಅಂತಹ ಮಹಾನುಭಾವನನ್ನು ನಾನು ಸರ್ವದಾ ಧ್ಯಾನಮಾಡು ವೆನು. ॥೫೦॥

ಶಂಕರನು ನರ್ತನದ ಉದ್ದೇಶವಾಗಿ ಸುತ್ತಿದರೆ, ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಸುತ್ತುವುದು. ನಾಟ್ಯೋದ್ದೇಶಕವಾಗಿ ಶಂಕರನು ಹಾರುವುದಾದರೆ ಬ್ರಹ್ಮಾಂಡವೆಲ್ಲವೂ ಮೇಲಕ್ಕೆ ಕುಪ್ಪಳಿಸುವುದು. ಮಹೇಶ್ವರನ ತೇಜಸ್ಸನ್ನು ಪಡೆದೇ ಸೂರ್ಯ ಚಂದ್ರಾದಿಗಳು ಭೂಲೋಕದಲ್ಲಿ ಇಂದೂ ಪ್ರಕಾಶಿಸುತ್ತಿರುವರು. ಇಂತಹ ಸಕಲ ಜಗತ್ತಿಗೂ ಸ್ವಾಮಿಯಾಗಿ ರಜತಸಭೆಯಲ್ಲಿ ನಾಟ್ಯವಾಡುವ ಮಹೇಶ್ವರನ ಪಾದವನ್ನು ಸರ್ವದಾ ಧ್ಯಾನಮಾಡುವೆನು. ॥೫೧॥

ಪರಮೇಶ್ವರನನ್ನು ಸೇವಿಸದೇ ಇರುವವನು ಎಂದಿಗೂ ಸುಖವನ್ನು ಹೊಂದ ಲಾರನು. ಅವನ ಭಾರವನ್ನು ತಾಳಲಾರದೆ ಪ್ರಪಂಚವನ್ನು ಹೊತ್ತಿರುವ ಆದಿ ಕೂರ್ಮನ ಬೆನ್ನುಮೂಳೆಯು ಬಗ್ಗಿಹೋಗುವುದು. ಮತ್ತು ನಾಟ್ಯೇಶ್ವರನಾದ ಶಂಕರನ ಭಾರಕ್ಕೆ ಬಸವಳಿದು, ಕಣ್ಣು, ಕಿವಿಗಳಿಂದ ಉಸಿರು ಹೊರಬೀಳುತ್ತಿವೆ. ಅಂತೂ ಸಕಲಾಂಗಗಳಿಂದ ಕೂಡಿದ ವೇದಸ್ವರೂಪನೇ ಪರಶಿವನು ಎಂದು ವಿಷ್ಣುವೇ ಮೊದಲಾದ ದೇವತೆಗಳೂ ಇಂದೂ ಹೊಗಳುತ್ತಿರುವರು. ಶಂಕರನನ್ನು ಆಶ್ರಯಿಸಿ ಕೊಂಡೇ ಸರ್ವರೂ ಜೀವಿಸುತ್ತಿರುವರು. ॥೫೨॥

ಯಸ್ಯ ಸ್ವೇದಜಲಂ ಮಹೋದಧಿರಪಿ ಪ್ರೋದ್ಯನ್ಮಣೀನಾಂ ಗಣೋ ।
ರೌಪ್ಯಾದ್ರೌ ಕಲಧೌತಸಾರಸದಸಿ ಶ್ರೀನೀಲಕಂಠಂ ಭಜೇ ॥೫೩॥

ಏವಂ ಸ ನೃತ್ಯತೀಶಾನಃ ಕೈಲಾಸಕಲಧೌತಜೇ ।
ಸದಸಿ ಸ್ವೈರಮಂಬಾಯಾಃ ಪುರತಶ್ಚಶಿಶೇಖರಃ ॥೫೪॥

ಉತ್ತರೇ ಚಿತ್ಸಭಾಯಾಂ ತು ನೃತ್ಯತ್ಯಂಬಾಂ ವಿಲೋಕಯನ್ ।
ಗಣೇಂದ್ರೈಸ್ಸೇವಿತಪದೋ ಮಹಾದೇವೋ ಮಹೇಶ್ವರಃ ॥೫೫॥

॥ ಸ್ಕಂದ ಉವಾಚ ॥

[1] ಹ್ರೀಮತ್ಯಾ ಶಿವಯಾ ವಿರಾಣ್ಮಯ[2]ಮಯಂ ಹೃತ್ಪಂಕಜಸ್ಥಂ ಸದಾ ।
ಹ್ರೀಣಾನಾಂ ಶಿವಕೀರ್ತನೇ ಹಿತಕರಂ ಹೇಲಹೃದಾಂ ಮಾನಿನಾಂ ।
ಹ್ರೀಬೇರಾದಿಸುಗಂಧವಸ್ತ್ರರುಚಿರಂ ಹೇಮಾದ್ರಿಬಾಣಾಸನಂ ।
ಹ್ರೀಂಕಾರಾದಿಕಪಾದಪೀಠಮಮಲಂ ಹೃದ್ಯಂ ನಟೇಶಂ ಭಜೇ ॥೫೬॥

ಪರಮೇಶ್ವರನ ಬೆವರಿನ ನೀರೇ ಈಗ ರತ್ನಮಯವಾಗಿ ಕಂಡುಬರುವ ದೊಡ್ಡ ಸಮುದ್ರಗಳು. ಇಂತಹ ಮಹಾಮಹಿಮನಾದ ಪರಮೇಶ್ವರನು ಕೈಲಾಸ ಪರ್ವತದ ಬೆಳ್ಳಿಯ ಸಭೆಯಲ್ಲಿ ನರ್ತನಮಾಡುತ್ತಿರುವನು. ಈ ಮಹಾನುಭಾವ ನನ್ನು ನಾನು ಸರ್ವದಾ ಸೇವಿಸುವೆನು. ॥೫೩॥

ಹೀಗೆ ಕೈಲಾಸಪರ್ವತದ ರಜತಸಭೆಯಲ್ಲಿ ಚಂದ್ರಶೇಖರನು ದೇವಿಯ ಎದುರಿನಲ್ಲಿ ಸ್ವೇಚ್ಛೆಯಿಂದ ನರ್ತನಮಾಡುತ್ತಿರುವನು. ॥೫೪॥

ಹಾಗೆಯೇ ಕೈಲಾಸದ ಉತ್ತರಭಾಗದಲ್ಲಿರುವ ಚಿತ್ಸಭೆ (ಜ್ಞಾನಸಭೆ)ಯಲ್ಲಿ ದೇವಿಯನ್ನು ನೋಡುತ್ತಾ, ಪ್ರಮಥಗಣಗಳಿಂದ ಸೇವಿತನಾಗಿ ನಾಟ್ಯವಾಡುವನು.

ಪಾರ್ವತಿಯು ಹ್ರೀಂಕಾರಸ್ವರೂಪಳು. ಮತ್ತು ಸರ್ವದಾ ತನ್ನ ಹೃದಯ ಕಮಲದಲ್ಲಿ ವಿರಾಟ್ಸ್ವರೂಪನಾದ ಪರಮೇಶ್ವರನನ್ನು ಧ್ಯಾನಿಸುತ್ತಿರುವಳು. ಪರಶಿವ ನಾದರೋ, ಶಿವಕೀರ್ತನಮಾಡುತ್ತಾ ತನ್ನ ಭಕ್ತರೆನಿಸಿದವರಿಗೆ ಯಾವಾಗಲೂ ಹಿತವನ್ನು ಬಯಸತಕ್ಕವನು. ಮತ್ತು ಕುಂಕುಮಕೇಸರಿಯೇ ಮೊದಲಾದ ಸುಗಂಧ

1. ಹ್ರೀಮತ್ಯಾ (ಪಾ ರ) 2 ಮಹಂ (ಪಾ. ರ)

ಶ್ರೀಮದ್ ಜ್ಞಾನಸಭಾಂತರೇ ಪ್ರವಿಲಸಚ್ಛ್ರೀಪಂಚವರ್ಣಾಕೃತಿಂ ।
ಶ್ರೀವಾಣೀವಿನುತಾಂಘ್ರಿಪಂಕಜಯುಗಂ ಶ್ರೀವಲ್ಲಭೇನಾರ್ಚಿತಂ ।
ಶ್ರೀವಿದ್ಯಾಮನುಮೋದನಂ ಶ್ರುತಜನಶ್ರೀದಾಯಕಂ ಶ್ರೀಧರಂ ।
ಶ್ರೀಚಕ್ರಾಂತರವಾಸಿನಂ ಶಿವಮಹಂ ಶ್ರೀಮನ್ನಟೇಶಂ ಭಜೇ ॥೫೭॥

ನವ್ಯಾಂಭೋಜಮುಖಂ ನಮಜ್ಜನನಿಧಿಂ ನಾರಾಯಣೇನಾರ್ಚಿತಂ ।
ನಾಗೌಕೋ ನಗರೀನದೀವಿಲಸಿತಂ ನಾಗಾಜಿನಾಲಂಕೃತಂ ।
ನಾನಾರೂಪಕನರ್ತನಾದಿಚತುರಂ ನಾಲೀಕಜಾನ್ವೇಕ್ಷಿತಂ ।
ನಾದಾತ್ಮಾನಮಹಂ ನಗೇಂದ್ರತನಯಾನಾಥಂ ನಟೇಶಂ ಭಜೇ ॥೫೮॥

ವಸ್ತುಗಳಿಂದಲೂ, ವಸ್ತ್ರಗಳಿಂದಲೂ ಅಲಂಕೃತನಾಗಿರುವನು. ಮೇರುಪರ್ವತವೇ ಪರಮೇಶ್ವರನಿಗೆ ಬಿಲ್ಲಿನಂತಿರುವುದು. ಮಹೇಶ್ವರನ ಪಾದಪೀಠದಲ್ಲಿ ಹ್ರೀಂಕಾರಾತ್ಮಕವಾದ ಚಕ್ರವಿನ್ಯಾಸವು ಕಂಡುಬರುತ್ತಿರುವುದು. ಇಂತಹ ಪರಮೇಶ್ವರನನ್ನು ನಾನು ಸರ್ವದಾ ಧ್ಯಾನಮಾಡುತ್ತಿರುವೆನು. ||೫೬||

ನಾಟ್ಯಾಚಾರ್ಯನಾದ ಶಂಕರನು ಸಂಪದ್ಯುಕ್ತವಾದ ಜ್ಞಾನಸಭೆಯಲ್ಲಿ ಪಂಚವರ್ಣಗಳಿಂದ ವಿರಾಜಿಸುತ್ತಿರುವನು. ಲಕ್ಷ್ಮೀ, ಸರಸ್ವತಿಯರು ಸರ್ವದಾ ಮಹೇಶ್ವರನ ಪಾದಕಮಲವನ್ನು ಸೇವಿಸುತ್ತಿರುವರು. ಮಹೇಶ್ವರನು ವಿಷ್ಣುವಿಗೆ ಮುಖ್ಯ ಆರಾಧ್ಯದೇವನಾಗಿರುವನು. ಶ್ರೀವಿದ್ಯೆಯಲ್ಲಿ (ಮಂತ್ರಶಾಸ್ತ್ರ) ಸಂಪೂರ್ಣ ಅಭಿಮಾನಿಯಾಗಿ ವಿದ್ವಾಂಸರಿಗೆ ಶ್ರೇಯಸ್ಸನ್ನು ಅನುಗ್ರಹಿಸುತ್ತಿರುವನು. ಶ್ರೀರೂಪವಾದ ಹಾಲಾಹಲ ವಿಷವನ್ನು ಧರಿಸಿರುವವನು. ಶ್ರೀಚಕ್ರಾಂತರದಲ್ಲಿ ನೆಲಸಿ, ಶುಭದಾಯಕವಾಗಿರುವ ಇಂತಹ ಮಹೇಶ್ವರನನನ್ನು ನಾನು ಯಾವಾಗಲೂ ಅನುಸಂಧಾನಮಾಡುವೆನು. ||೫೭||

ಮಹಾದೇವನ ಮುಖವು ಅರಳಿದ ಹೊಸ ಕಮಲದಂತಿರುವುದು. ಅವನು ನಮಸ್ಕಾರಮಾಡುವ ಜನರನ್ನು ರಕ್ಷಿಸುವ ನಿಯಮವುಳ್ಳವನು. ನಾರಾಯಣನು ಸಾಕ್ಷಾತ್ತಾಗಿ ಮಹೇಶ್ವರನನ್ನು ಪೂಜಿಸುವವನಾಗಿದ್ದಾನೆ. ಪರಶಿವನು ಪಾತಾಳಲೋಕದಲ್ಲಿ ಹರಿಯುವ ದೇವಗಂಗೆಯಿಂದ ಅಲಂಕೃತನಾಗಿರುವನು. ಗಜಚರ್ಮವನ್ನು ಸರ್ವದಾ ಧರಿಸಿರುವನು. ನಾನಾವಿಧವಾದ ರೂಪಕಗಳಲ್ಲಿಯೂ, ನರ್ತನದಲ್ಲಿಯೂ, ನಿಪುಣ

ಮಧ್ಯಸ್ಥಂ ಮಧುವೈರಿಮಾರ್ಗಿತಪದಂ ಮದ್ವಂಶನಾಥಂ ಪ್ರಭುಂ
ಮಾರಾರಾತಿಮತೀವ ಮಂಜುವಪುಷಂ ಮಂದಾರಗೌರಪ್ರಭಂ ।
ಮಾಯಾತೀತಮಶೇಷಮಂಗಲನಿಧಿಂ ಮದ್ಭಾವನಾಭಾವಿತಂ
ಮಧ್ಯೇ ವ್ಯೋಮಸಭಾಗುಹಾಸ್ಥಮಖಿಲಂ ಮಾನ್ಯಂ ನಟೇಶಂ ಭಜೇ ॥೫೯॥

ಶಿಷ್ಟೈಃ ಪೂಜಿತಪಾದುಕಂ ಶಿವಕರಂ ಶೀತಾಂಶುರೇಖಾಧರಂ
ಶಿಲ್ಪಂ ಭಕ್ತಜನಾವನೇ ಶಿಥಿಲಿತಾಘೌಘಂ ಶಿವಾಯೋಃ ಪ್ರಿಯಂ ।
ಶಿಕ್ಷಾರಕ್ಷಣಮಂಬುಜಾಸನಶಿರೋಸಂಹಾರಶೀಲಂ ಪ್ರಭುಂ
ಶೀತಾಪಾಂಗವಿಲೋಚನಂ ಶಿವಮಹಂ ಶ್ರೀಮನ್ನಟೇಶಂ ಭಜೇ ॥೬೦॥

ನಾಗಿರುವವನು. ಕಮಲೋದ್ಭವನಾದ ಬ್ರಹ್ಮನಿಂದ ಅನುಸರಿಸಲ್ಪಟ್ಟಿರುವವನು. ನಾದಬ್ರಹ್ಮಸ್ವರೂಪನಾಗಿ, ಪಾರ್ವತೀಪತಿಯಾದ ಇಂತಹ ಮಹೇಶ್ವರನನ್ನು ನಾನು ಸರ್ವದಾ ಧ್ಯಾನಮಾಡುವೆನು. ||೫೮||

ಸರ್ವ ದೇವತಾಮಧ್ಯದಲ್ಲಿ ಕಂಡುಬರುವವನೂ, ಮಹಾವಿಷ್ಣುವಿನಿಂದ ಹುಡುಕಲ್ಪಟ್ಟ ಪಾದಮೂಲವುಳ್ಳವನೂ ಆದ ಪರಮೇಶ್ವರನು, ನನ್ನ ಜನ್ಮಕ್ಕೆ ಮೂಲಕಾರಣನು. ಮತ್ತೂ ಆ ಶಂಕರನು ಮನ್ಮಥನನ್ನು ನಾಶಗೊಳಿಸಿ, ಸುಂದರಾಂಗ ನಾಗಿ, ಮಂದಾರಪುಷ್ಪದಂತೆ ಶುಭ್ರವಾಗಿ ತೋರುತ್ತಿರುವನು. ಮಾಯೆಗೆ ಆತನು ಎಂದೂ ಅಧೀನನಲ್ಲ. ಸಕಲ ಸನ್ಮಂಗಳಗಳಿಗೂ ಆಶ್ರಯವಿತ್ತಿರುವವನು. ಸೋऽಹಂ ಭಾವದಿಂದ ಭಾವ್ಯನಾದವನು. ಆಕಾಶಮಧ್ಯದಲ್ಲಿ ಜ್ಞಾನಸಭೆಯಲ್ಲಿ ನಾಟ್ಯವಾಡು ತ್ತಿರುವ ಶ್ರೀ ಮಹೇಶ್ವರನನ್ನು ನಾನು ಸರ್ವದಾ ಧ್ಯಾನಮಾಡುವೆನು. ||೫೯||

ಸತ್ಪುರುಷರೆಲ್ಲರೂ ಮಹೇಶ್ವರನನ್ನು ಪೂಜಿಸುತ್ತಿರುವರು. ಆತನು ಸರ್ವದಾ ಶುಭಕರನು, ಚಂದ್ರಕಲಾಧಾರಿಯು. ಶಿಲ್ಪಕಲೆಯಲ್ಲಿ ಅಗ್ರಗಣ್ಯನು. ಭಕ್ತರಕ್ಷಣೆ ಯಲ್ಲಿಯೂ, ಅವರ ಪಾಪರಾಶಿಯನ್ನು ನಿವಾರಿಸುವುದರಲ್ಲಿಯೂ ದಕ್ಷನು. ಪಾರ್ವತಿಗೆ ಅತ್ಯಂತ ಪ್ರಿಯನಾದವನು. ದುಷ್ಟಶಿಕ್ಷಣದಲ್ಲಿ ಸಮರ್ಥನು. ಬ್ರಹ್ಮನ ತಲೆಯನ್ನು ಕಡಿದುಹಾಕಿದವನು. ಅಗ್ನಿನೇತ್ರನಾದರೂ ಶೀತಲವಾದ ಕಟಾಕ್ಷವುಳ್ಳವನು. ಇಂತಹ ನಟೇಶಮೂರ್ತಿಯಾದ ಪರಶಿವನನ್ನು ನಾನು ಸರ್ವದಾ ಸೇವಿಸುವೆನು.||೬೦||

ವಾಣೀವಲ್ಲಭವಂದ್ಯವೈಭವಯುತಂ ಮಂದಾರುಚಿಂತಾಮಣಿಂ
ವಾತಾಶಾಧಿಪಭೂಷಣಂ ವರಕೃಪಾವಾರಾಂನಿಧಿಂ ಯೋಗಿನಾಂ ।
ವಾಂಛಾಪೂರ್ತಿಕರಂ ವಲಾರಿವಿನುತಂ ವಾಹೀಕೃತಾಮ್ನಾಯಕಂ ।
ವಾಮಾಂಗಾತ್ತವರಾಂಗನಂ ಮಮ ಹೃದಾವಾಸಂ ನಟೇಶಂ ಭಜೇ ॥೬೧॥

ಯಕ್ಷಾಧೀಶಸಖಂ ಯಮಪ್ರಮಥನಂ ಯಾಮಿನ್ಯಧೀಶಾನನಂ ।
ಯಜ್ಞಧ್ವಂಸಕರಂ ಯತೀಂದ್ರವಿನುತಂ ಯಜ್ಞಕ್ರಿಯಾಧೀಶ್ವರಂ ।
ಯಾಜ್ಯಂ ಯಾಜಕರೂಪಿಣಂ ಯಮಮುಖೈರ್ಯತ್ನೋಪಲಭ್ಯಾಂಘ್ರಿಕಂ ।
ಯಾನೀಭೂತವೃಷಂ ಯತೀಂದ್ರವಿನುತಂ ಯಾಜ್ಯಂ ನಟೇಶಂ ಭಜೇ ॥೬೨॥

ವಾಣೀಪತಿಯಾದ ಬ್ರಹ್ಮನಿಂದ ಶಂಕರನು ಸದಾ ಪೂಜಿಸಲ್ಪಡುವನು. ದೇವತೆಗಳಿಗೆ ಚಿಂತಾಮಣಿಯಂತೆ ಸಕಲ ಇಷ್ಟಾರ್ಥಗಳನ್ನೂ ಒದಗಿಸತಕ್ಕವನು. ಆದಿಶೇಷನನ್ನೇ ಅಲಂಕಾರವನ್ನಾಗಿ ಮಾಡಿಕೊಂಡಿರುವನು. ದಯಾಸಮುದ್ರನಾಗಿ, ಯೋಗಿಗಳನ್ನು ರಕ್ಷಿಸುತ್ತಿರುವನು. ಭಕ್ತರ ಸಕಲೇಷ್ಟಾರ್ಥಗಳನ್ನೂ ಪೂರ್ತಿಗೊಳಿಸುವವನು. ದೇವೇಂದ್ರನಿಂದಲೂ ಸ್ತುತಿಸಲ್ಪಡುವವನು. ನಾಲ್ಕು ವೇದಗಳನ್ನೂ ನಾಲ್ಕು ಕುದುರೆಗಳನ್ನಾಗಿ ಮಾಡಿಕೊಂಡವನು. ಸರ್ವದಾ ವಾಮಭಾಗದಲ್ಲಿ ತನ್ನ ಪತ್ನಿಯನ್ನು ಕೂರಿಸಿಕೊಂಡಿರುವವನು. ಇಂತಹ ಮಹೇಶ್ವರನು ಸರ್ವದಾ ನನ ಹೃದಯಮಧ್ಯದಲ್ಲಿ ನೆಲಸಿರಲಿ. ॥೬೧॥

ಮಹೇಶ್ವರನು ಕುಬೇರನಿಗೆ ಪರಮಮಿತ್ರನು. ಕಾಲನನ್ನು ನಾಶಗೊಳಿಸಿದವನು. ಚಂದ್ರನನ್ನೇ ಶಿರಸ್ಸಿನಲ್ಲಿ ಧರಿಸಿರುವವನು. ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸಮಾಡಿದವನು. ಅನೇಕ ಯತಿಶ್ರೇಷ್ಠರಿಂದ ಸ್ತುತ್ಯನಾದವನು. ಸಕಲ ಯಾಗಗಳಿಗೂ ಅಧಿದೇವತೆಯಾಗಿ, ಯಾಗಸ್ವರೂಪನೂ, ಯಜಮಾನಸ್ವರೂಪಿಯೂ ಆಗಿರುವನು. ಯಮ, ನಿಯಮಾದಿಗಳನ್ನು ಅರಿತವರಿಂದ ಪೂಜಿಸಲ್ಪಡುವ ಪಾದವುಳ್ಳವನು. ವೃಷಭವನ್ನೇ ವಾಹನವನ್ನಾಗಿ ಮಾಡಿಕೊಂಡಿರುವವನು. ಯತೀಂದ್ರರಿಂದ ಸ್ತುತಿಸಲ್ಪಡುವವನು. ಇಂತಹ ಮಹೇಶ್ವರನನ್ನು ನಾನು ಯಾವಾಗಲೂ ಧ್ಯಾನಮಾಡುವೆನು. ॥೬೨॥

ಮಾಯಾ ಶ್ರೀವಿಲಸಚ್ಚಿದಂಬರಮಹಾಪಂಚಾಕ್ಷರೈರಂಕಿತಾನ್ ।
ಶ್ಲೋಕಾನ್ ಸಪ್ತ ಪಠಂತಿ ಯೇಽನುದಿವಸಂ ಚಿಂತಾಮಣೀನಾಮಕಾನ್ ।
ತೇಷಾಂ ಭಾಗ್ಯಮನೇಕಮಾಯುರಧಿಕಂ ವಿದ್ಯಾವರಾನ್ ಸತ್ಸುತಾನ್ ।
ಸರ್ವಾಭೀಷ್ಟಮಸೌ ದದಾತಿ ಸಹಸಾ ಶ್ರೀಚಿತ್ಸಭಾಧೀಶ್ವರಃ ॥೬೩॥

॥ ಸೂತ ಉವಾಚ ॥

ತಟನ್ನಿಭಜಟಾರ್ಭಟೀಪಟುರಿಟೀಡ್ಯವಾಗರ್ಭಟೀ
ನಿಟಾಲಕಕೃಪೀಡಕಂ ಭಜ ಭಜಾಮಹೇ ಧೂರ್ಜಟಿಂ ।
ಶಿವಂ ಕಟಿತಟಾರಟದ್ಯಮಕಠೋರತುಂಡಾರ್ಭಟೀ
ಚಪೇಟಿವರಶೂಲಕಂ ಕರಟಿಚರ್ಮಶೋಭತ್ಪಟಂ ॥೬೪॥

ಮೇಲೆ ಹೇಳಿರುವ ಏಳು ಶ್ಲೋಕಗಳೂ ಹ್ರೀ, ಶ್ರೀ, ನ, ಮ, ಶ್ಶಿ, ವಾ, ಯ, ಎಂಬ ಏಳು ಅಕ್ಷರಗಳನ್ನೇ ಆದಿಯಲ್ಲಿ ಉಳ್ಳವುಗಳಾಗಿ ರಚಿತವಾಗಿವೆ. ಈ ಸಪ್ತ ಶ್ಲೋಕಗಳ ಸಮೂಹಕ್ಕೆ ಚಿಂತಾಮಣೀಸ್ತೋತ್ರವೆಂದು ಹೆಸರು. ಇದು ಜ್ಞಾನಪ್ರದವಾದ ಶಿವಪಂಚಾಕ್ಷರಗಳಿಂದ ಕೂಡಿದುದು. ಈ ಸ್ತೋತ್ರವನ್ನು ಯಾರು ಸರ್ವದಾ ಪಠಿಸುವರೋ, ಅವರು ಅನೇಕವಾದ ಭೋಗಭಾಗ್ಯಗಳನ್ನು ಅನುಭವಿಸಿ, ಚಿರಾಯುಷ್ಮಂತರಾಗಿ ಸರ್ವಾಭೀಷ್ಟಗಳನ್ನೂ ಹೊಂದುವರು. ಚಿತ್ಸಭಾಧೀಶನಾಗಿರುವ ಮಹೇಶ್ವರನು ಅಂತಹವರನ್ನು ಅತಿ ಶೀಘ್ರವಾಗಿ ರಕ್ಷಿಸಿ ಅವರಿಗೆ ಮುಕ್ತಿಯನ್ನೀಯುವನು. ॥೬೩॥

ಮಿಂಚಿನಂತೆ ಹೊಳೆಯುವ ಜಡೆಗಳ ಹೊಳಪೂ, ರಿಟಿಯೆಂಬ ಭಕ್ತನು ತನ್ನ ವಾಕ್ಚಾತುರಿಯಿಂದ ಪರಶಿವನನ್ನು ಹೊಗಳುವ ಧ್ವನಿಯೂ, ಪರಶಿವನ ಸಮೀಪದಲ್ಲಿ ವಿಜೃಂಭಿಸುತ್ತಿರುವುದು. ಪರಶಿವನ ಹಣೆಯಲ್ಲಿ ಮುಂಗುರುಳು ಚಲಿಸುತ್ತಿರುವುದು. ಪರಮೇಶ್ವರನು ಹಿಂದೆ ಮಾರ್ಕಂಡೇಯನನ್ನು ಯಮನಿಂದ ರಕ್ಷಿಸಲೋಸುಗ ತನ್ನ ಕೈಯ್ಯಲ್ಲಿರುವ ತ್ರಿಶೂಲವನ್ನು ಯಮನ ಕೆನ್ನೆಗೆ ಸರಿಯಾಗಿ ಚುಚ್ಚಿ ಅವನನ್ನು ಸೋಲಿಸಿರುವನು. ಇಂತಹ ತ್ರಿಶೂಲವನ್ನು ಕೈಯ್ಯಲ್ಲಿ ಹಿಡಿದು, ಗಜಚರ್ಮವನ್ನು ವಸ್ತ್ರವನ್ನಾಗಿ ಮಾಡಿ, ಅದನ್ನು ಧರಿಸಿರುವ ಧೂರ್ಜಟಿಯನ್ನು ನಾನು ಸರ್ವದಾ ಸೇವಿಸುವೆನು. ॥೬೪॥

ಹತಾತ್ಕೃತಶತಾಸುರಮುಸುಖಭೇದಕೃತ್ತೀರಟಿ
ದ್ವಿಷಾತಶರಧಾರಿಣಂ ಕಮಠಪೃಷ್ಠಪಾದಂ ಶಿವಂ ।
ಭಜಾಮಿ ಜಠರೀಧೃತತ್ರಿಜಗದುನ್ಮೂಲಪೀಠೋತ್ಥಿತ
ಜನಾರ್ದನಪಟುಸ್ತವಂ ಹೃದಿ ಸುನಿಷ್ಠಿತಂ ಯೋಗಿನಾಂ ॥೬೫॥

ಕುಠಾರವರಧಾರಿಣಂ ಕುಮುದನಾಥಚೂಡಾಮಣಿಂ ।
ಕುರಂಗವರಭೂಷಣಂ ಭಜತ ನೀಲಕಂಠಂ ಸದಾ ॥೬೬॥

ಉತ್ಕೋಶಕಾಶಿತಮಹಾ[1]ಶಿವರಾತಖೇಟಿ
ನೀಲೋಚ್ಛ್ರಿತಾಚ್ಛಸುಕರೋರುಶಿರೋಧರಾಂಸಂ ।
[2]ರಕ್ಷಸ್ಸ್ಮೃತಿಪ್ರಜನಿತಾಪಗತಾದಿಸಂಜ್ಞಾ
ಪಸ್ಮಾರಮೌಲಿಪದ[3]ಪಂಕಜನಿಂ ಭಜಾಮಿ ॥೬೭॥

ಪರಮೇಶ್ವರನು ಸಕಲ ದುಷ್ಟರಾಕ್ಷಸರನ್ನೂ ನಾಶಮಾಡಿರುವನು. ಸಕಲ ರಾಕ್ಷಸರನ್ನೂ ನಾಶಗೊಳಿಸುವ ಮಹಾವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡಿರುವನು. ಆದಿಕೂರ್ಮದ ಮೇಲೆ ಪಾದವನ್ನಿಟ್ಟು ನಿಂತಿರುವವನು. ತನ್ನ ಹೊಟ್ಟೆಯಲ್ಲಿ ಮೂರು ಲೋಕಗಳನ್ನೂ ಅಡಗಿಸಿಕೊಂಡಿರುವವನು. ಜನಾರ್ದನನಿಂದಲೂ ಸ್ತುತಿಸಲ್ಪಡುವವನು. ಯೋಗಿಗಳ ಹೃತ್ಪದ್ಮದಲ್ಲಿ ಸರ್ವದಾ ನೆಲಸಿರುವವನು. ಇಂತಹ ಮಹಾದೇವನನ್ನು ಪೂಜಿಸುವೆನು. ॥೬೫॥

ಎಲೈ ಮಹರ್ಷಿವರ್ಯರೇ, ಕುಠಾರವನ್ನು ಕೈಯ್ಯಲ್ಲಿ ಧರಿಸಿ, ಚಂದ್ರನನ್ನು ಶಿರಸ್ಸಿನಲ್ಲಿಟ್ಟು, ದಿವ್ಯವಾದ ಜಿಂಕೆಯನ್ನೇ ಆಭರಣವನ್ನಾಗಿ ಮಾಡಿಕೊಂಡಿರುವ ನೀಲಕಂಠನನ್ನು ನಾನು ಸರ್ವದಾ ಧ್ಯಾನಮಾಡುವೆನು. ॥೬೬॥

ಮಹೇಶ್ವರನು ಒರೆಯಲ್ಲಿ ಪ್ರಕಾಶಿಸುವ ದೊಡ್ಡ ಕತ್ತಿಯನ್ನೂ, ಗುರಾಣಿಯನ್ನೂ ಧರಿಸಿರುವನು. ಈ ಆಯುಧಗಳ ಹೊಳಪು, ದೇಹಕಾಂತಿಯೊಡನೆ ಬೆರೆತು ಪರಶಿವನ ಕೈಗಳನ್ನೂ, ತೊಡೆಗಳನ್ನೂ, ಶಿರಸ್ಸನ್ನೂ, ಭುಜಗಳನ್ನೂ, ನೀಲವರ್ಣ ವಿಶಿಷ್ಟವನ್ನಾಗಿ ಮಾಡುತ್ತಿವೆ. ರಾಕ್ಷಸರ ಸ್ಮೃತಿಯನ್ನುಂಟುವ ಅಪಸ್ಮಾರ, (ಅಂಧ

1 ಮಹಾಶಿವರಾತ್ರ (ಪಾ. ರ)
2 ರಕ್ಷಃ ಸ್ಮೃತಿ ,,
3 ಪಂಕಜನೃತ್ತಲೀಲಂ ,,

ನಾದೋತ್ಥಡಂಬರಮಹಾಡಮರುಪ್ರಕಾಂಡ
ಮುತ್ಫುಲ್ಲಪಂಕೆಜವರಾನಲಮಿಾಶಿತಾರಂ ।
ಆರಾತ್ಪ್ರಣೇಮುರಮರಾ ರಜತಾಚಲಸ್ಥಂ
ಕೇಕ್ಯಾಖುವಾಹಗಣಸ್ಯೈಃ ಪರಮೇಶಮೇವಂ ॥೬೮॥

ನಂದೀಶಭೃಂಗಿರಿಟಿಯು ಸ್ಸುರನಂದಿಕಸೋಮನಂದಿ
ಚಂಡೀಶ ತುಂಡವರಹುಂಡತುಹುಂಡಭದ್ರಾಃ ।
ಶ್ರೀಬಾಣರಾವಣಗಣಾನನಕೋಟಿಚಂಡಾ
ಬ್ರಹ್ಮಾ ಹರೀಶ್ವರಮುಖಾ ಅಮರೇಂದ್ರಸಂಘಾಃ ॥೬೯॥

ಕಾಸುರ) ಮುಂತಾದ ರಾಕ್ಷಸರ ಶಿರೋಭಾಗವನ್ನು ಮೆಟ್ಟಿದ ಪಾದಕಮಲಗಳಿಂದ ಸ್ತುತ್ಯನಾಗಿರುವನು. ಇಂತಹ ಪದಪಂಕಜಗಳು ನಾಟ್ಯದಲ್ಲಿ ತೊಡಗಿ ನಾಟ್ಯದಿಂದ ಸರ್ವರ ಮನಸ್ಸನ್ನೂ ಆಹ್ಲಾದಗೊಳಿಸುತ್ತಿರುವುವು. ಹೀಗಿರುವ ಮಹೇಶ್ವರನ ಪಾದ ಪಂಕಜಗಳನ್ನು ಶಿರಸಾ ವಂದಿಸುವೆನು. ||೬೭||

ಶಂಕರನು ವಾದ್ಯನಾದಗಳಿಂದ ಕೂಡಿ ತಾನೂ ಸಹ ನಾಟ್ಯಕಾಲದಲ್ಲಿ ಡಮರುಗವನ್ನು ಬಾರಿಸುತ್ತಿರುವನು. ಪರಶಿವನ ನೇತ್ರಗಳಾದರೋ ಅರಳಿದ ಕಮಲ ಗಳಂತೆಯೂ, ಜ್ವಲಿಸುವ ಅಗ್ನಿಯಂತೆಯೂ ಇರುವುವು. ಸಮಸ್ತ ಲೋಕಕ್ಕೂ ಒಡೆಯನೆನಿಸಿ ಕೈಲಾಸಪರ್ವತದಲ್ಲಿ ನೆಲಸಿರುವ, ಪರಶಿವನನ್ನು ನವಿಲಿನ ಮೇಲೆ ಕುಳಿತಿರುವ ಸ್ಕಂದಸ್ವಾಮಿಯೂ, ಮೂಷಕವಾಹನನಾಗಿರುವ ಗಣಪತಿಯೂ ಸರ್ವದಾ ಸೇವಿಸುತ್ತಿರುವರು. ಇಂತಹ ಪರಮೇಶ್ವರನನ್ನು ಸರ್ವದಾ ಧ್ಯಾನಮಾಡ ಬೇಕು. ||೬೮||

ಮಹೇಶ್ವರನ ಸುತ್ತಲೂ ನಂದೀಶ್ವರ, ಭೃಂಗಿ, ರಿಟಿ, ಸುರನಂದಿ, ಸೋಮ ನಂದಿ, ಚಂಡೀಶ್ವರ, ತುಂಡ, ವರಹುಂಡ, ತುಹುಂಡ, ಭದ್ರ, ಬಾಣ, ರಾವಣ, ಗಣಪತಿ, ಚಂಡರೂಪಿಗಳಾದ ಕೋಟಿ ಸಂಖ್ಯೆಯ ಪ್ರಮಥಗಣಗಳು, ಬ್ರಹ್ಮ, ಹರಿ, ರುದ್ರ, ಇವರೇ ಮೊದಲಾದ ದೇವತೆಗಳ ಸಮೂಹವೂ, ಸರ್ವದಾ ನೆಲಸಿ, ಸೇವೆ ಮಾಡುತ್ತಿರುವರು. ||೬೯||

ಸ್ತಂಭೈರ್ವಿದ್ರುಮಪುತ್ರಿಕಾಘಘಟಿತೈರ್ಹೇಮ್ನ್ಯೈರ್ಮಹಾಮಾತೃಕೈಃ ।
ಭಾಸ್ವತ್ಸಾವರಣೈಶ್ಚ ಶಕ್ತಿಭಿರಪಿ ಪ್ರೋದ್ದಂಡಮಾಯಾಮಯೇ ।
ರಂಗೇ ಸರ್ವಜಗತ್ಕರಂಡಮಖಿಲಂ ಯಸ್ಯೇಕ್ಷಣಾಜ್ಜೃಂಭತೇ ।
ಯಸ್ಯೈವೇಕ್ಷಣತಶ್ಚ ರಕ್ಷಿತಮಿದಂ ತತ್ರೈವ ಲೀನಂ ಕ್ಷಣಾತ್ ॥೭೦॥

ಸೋಽಸ್ಯೇತಾದೃಶರಂಗಮಂಟಪಗತಸ್ಸರ್ವೈಶ್ಚ ಭೂತೈರ್ವೃತೋ ।
ರುದ್ರಾಣೀಸಹಿತೋ ಗಣೇಶಗುಹಯುಕ್ಪಾರ್ಶ್ವೇ ಸುರೇಂದ್ರೈರಪಿ ।
ಪಾಥೋಜಾಪ್ರಭವೇನ ಶ್ರೀಧರಭವೈರನ್ಯಾಸ್ಯವಾನಶ್ಚಿವೋ ।
ರುದ್ರಾಣೀಗಣಸೈಶ್ಚ ಸೇವಿತಪದೋ ಮೋದಾನ್ವಿತೋ ರಂಗಗಃ ॥೭೧॥

ಈಷತ್ಪಾದತಲಾಹತಿತ್ರುಟಿತಭೂಭಾಗಾಸಹಿಷ್ಣುತ್ರುಟಿ ।
ತ್ಸ್ಫೂರ್ಜತ್ಕರ್ಪಟಿಶರ್ಮದುರ್ವಿಧಮಹಾಕೂರ್ಮಸ್ತವಾಮ್ರೇಡಿತಂ ।

ಶಂಕರನು ನಾಟ್ಯವಾಡುವ ರಂಗಮಂಟಪವು ಹವಳದ ಬೊಂಬೆಗಳಿಂದ ಶೋಭಿಸುತ್ತಾ ಸುವರ್ಣಮಯವಾದ ಕಂಬಗಳಿಂದ ಬೆಳಗುತ್ತಿರುವುದು. ಮೇಲಿನ ಆವರಣವಂತೂ ವಜ್ರಾದಿಗಳಿಂದ ನಿರ್ಮಿತವಾಗಿ ತೇಜಸ್ಸಿನಿಂದ ಉರಿಯುತ್ತಿರುವಂತೆ ಕಾಣುವುದು. ಸಪ್ತಮಹಾಮಾತೃಕೆಯರೂ, ನವಶಕ್ತಿಗಳೂ ಶಂಕರನ ಅಕ್ಕಪಕ್ಕದಲ್ಲಿ ಕಂಡುಬರುತ್ತಿರುವರು. ಲೋಕನಾಥನಾದ ಶಂಕರನ ದೃಷ್ಟಿಯ ಬಲದಿಂದಲೇ ಸಕಲ ಜಗತ್ತೂ ಅಭಿವೃದ್ಧಿಪಡೆಯುತ್ತಿದೆ. ಅವನ ವೀಕ್ಷಣಬಲದಿಂದಲೇ ಈ ಲೋಕವೆಲ್ಲವೂ ರಕ್ಷಿತವಾಗಿದೆ. ಕೊನೆಗೆ ಈ ಬ್ರಹ್ಮಾಂಡವೆಲ್ಲಾ ಅವನಲ್ಲಿಯೇ ಐಕ್ಯವಾಗುವುದು. ॥೭೦॥

ಪರಶಿವನು ಮೇಲೆ ಹೇಳಿದಂತಹ ಸುಂದರಮಯವಾದ ರಂಗಮಧ್ಯದಲ್ಲಿ ಸಮಸ್ತ ಗಣಗಳಿಂದ ಪರಿವೃತನಾಗಿ ರಂಜಿಸುತ್ತಿರುವನು. ಪಾರ್ವತಿಯೊಡಗೂಡಿ, ಅಕ್ಕಪಕ್ಕದಲ್ಲಿ ತನ್ನ ಮಕ್ಕಳಾದ ಕುಮಾರಸ್ವಾಮಿ, ಮತ್ತು ಗಣಪತಿ ಇವರನ್ನು ಕೂಡಿಸಿಕೊಂಡಿರುವನು. ಕಮಲಭವನಾದ ಬ್ರಹ್ಮ, ವಿಷ್ಣು, ರುದ್ರ ಇವರೇ ಮೊದಲಾದ ದೇವಶ್ರೇಷ್ಠರೂ, ರುದ್ರಾಣಿಯ ಗಣಗಳೂ ಯಾವಾಗಲೂ ಶಂಕರನ ಪಾದಕಮಲವನ್ನೇ ಸೇವಿಸುತ್ತಿರುವರು. ॥೭೧॥

ಪರಮೇಶ್ವರನು ನಾಟ್ಯವಾಡುವಾಗ ತನ್ನ ಕಾಲಿನ ತುಳಿತದಿಂದ ಭೂಮಿಯನ್ನು ಹೊತ್ತಿರುವ ಆದಿಕೂರ್ಮನ ಪೃಷ್ಠಭಾಗವು ಮುರಿದುಹೋಗುವುದು. ಈ

**ಅಂಗುಲ್ಯಗ್ರಪತತ್ತದೀಯಪವನೋತ್ಕ್ಷಿಪ್ತಸ್ವಧಾಮಸ್ಥಿರ ।**
**ಬ್ರಹ್ಮಾಂಡಂ ಪರಮೇಶಿತು ರ್ವಿಜಯತೇ ನೃತ್ತಂ ಸಮಸ್ತಾದ್ಭುತಂ ॥೭೨॥**

**ನಮ್ರಾನ್ ಪಾಣಿಗಣಾನ್ ದಿಶಾವಧಿಕೃತೇ ಸ್ವೀಯಾನ್ ಕಪರ್ದಾನಪಿ ।**
**ವ್ಯೋಮಾಂತೇ ನತಿಕುಂಚಿತಾನಪಿ ಪುನಃ ಪಾತಾಲಮುಖ್ಯಾನಧಃ ।**
**ಲೋಕಾಖ್ಯಾನ್ ಸಮತೀತ್ಯ ಸ್ವೀಯಚರಣಾನ್ ಕುರ್ವನ್ನಿರಾಲಂಬನೋ ।**
**ನೃತ್ತಂ ಕೇವಲಮೀಶ್ವರೋ ವಿತನುತೇ ದೇವ್ಯಗ್ರತಃ ಕೇವಲಂ ॥೭೩॥**

॥ ಸೂತ ಉವಾಚ ॥

**ಸಭಾಸು ಚ ಸಭಾಪತಿರ್ಹರಿಹಿರಣ್ಯಗರ್ಭಾದಿಭಿ ।**
**ಸ್ಸನಂದನಸನಾತನೈರ್ಹರಸುನಂದಿನಂದ್ಯಾದಿಭಿಃ ।**

ದುಃಖವನ್ನು ಸಹಿಸಲಾರದೆ, ಮಹಾಕೂರ್ಮವು ಎರಡು ಮೂರು ಸಾರಿ ಶಂಕರನನ್ನು ಸ್ತುತಿಸಿ, ಆ ದುಃಖದಿಂದ ಪಾರಾಗುವನು. ನಾಟ್ಯಾರ್ಥವಾಗಿ ಅಂಗುಲಿಗಳನ್ನು ತಿರುಗಿಸುವುದರಿಂದ ಹುಟ್ಟುವ ವಾಯುವೇಗವು ಬ್ರಹ್ಮಾಂಡವನ್ನೆಲ್ಲಾ ಅಲುಗಾಡಿಸುವುದು. ಇಂತಹ ಮಹಾಮಹಿಮನಾದ ಪರಮೇಶ್ವರನ ನಾಟ್ಯವು ಅತ್ಯದ್ಭುತವಾಗಿ ಗೋಚರವಾಗುತ್ತಿರುವುದು. ॥೭೨॥

ನರ್ತನಕಾಲದಲ್ಲಿ ಪರಮೇಶ್ವರನು ತನ್ನ ಕೈಗಳನ್ನು ಬಗ್ಗಿಸಿಕೊಂಡಿದ್ದರೂ ಅವು ಸಮಸ್ತ ದಿಕ್ಕುಗಳ ಕೊನೆಯವರೆಗೂ ನೀಳವಾಗಿ ನಿಲ್ಲುತ್ತವೆ. ನಾಟ್ಯಚಮತ್ಕಾರದಿಂದ ಸ್ವಲ್ಪಭಾಗ ಮಡಿಸಿಕೊಂಡಿದ್ದರೂ ಶಂಕರನ ಜಟಾಜೂಟವು ಅಂತರಿಕ್ಷವನ್ನೆಲ್ಲಾ ಮುಚ್ಚಿಬಿಡುವುದು. ನರ್ತನೋದ್ದೇಶದಿಂದ ಸ್ವಲ್ಪ ಬಗ್ಗಿಸಿಕೊಂಡಿದ್ದರೂ ಮಹಾದೇವನ ಪಾದಗಳು ಪಾತಾಳಾದಿ ಸಕಲ ಲೋಕಗಳನ್ನೂ ಮೀರಿ ಮುಂದುವರಿದಿರುವುವು. ಇಂತಹ ನಾಟ್ಯಕೌಶಲದಿಂದ ನಿರಾಲಂಬವಾಗಿ ನಿಂತಿರುವ ಪರಮೇಶ್ವರನು ದೇವಿಯ ಎದುರಿನಲ್ಲಿ ತನ್ನ ತಾಂಡವನೈಪುಣ್ಯವನ್ನು ತೋರ್ಪಡಿಸುತ್ತಲಿರುವನು. ॥೭೩॥

ಹೀಗೆ ಸಭಾಪತಿಯಾದ ಮಹೇಶ್ವರನು, ಬ್ರಹ್ಮ, ವಿಷ್ಣು, ಸನಂದನ, ಸನಾತನ, ರುದ್ರ, ನಂದಿ, ಸುನಂದಿ ಇವರೇ ಮೊದಲಾದ ಗಣವರ್ಗಗಳಿಂದ ವಂದಿತನಾಗಿ ನಾಟ್ಯವಾಡುತ್ತಿರುವನು. ಅವರೆಲ್ಲರೂ ತಾವೇ ತಮ್ಮ ರತ್ನಮಯವಾದ ಮದ್ದಲೆ

ಕರಾಹತಿಮಣಿಪ್ರವರಮದ್ದಲಾದುತ್ಥಿತೈ ।
ಸ್ಸತಾಲವರಕಲ್ಪನೈರ್ನಟತಿ ನೃತ್ತರಂಗಸ್ಥಿತಃ ॥೭೪॥

ವೇದಾಧೀಶ್ವರ ವೇದ ಏವ ಭಗವನ್ ಭಕ್ತ್ಯಾ ತ್ವದೀಯಾಸ್ಸಭಾ ।
ನೌತಿ ಸ್ತೌತಿ ಭವಂತಮೇವ ಹಿ ತತೋ ದೇವಂ ಸಭಾಧೀಶ್ವರಂ ।
ವೇದೋ ವೇದ ನ ವೇದರೂಪಮಪಿ ತೇ ನೀರೂಪರೂಪಃ ಕಥಂ ।
ತಸ್ಮಾದೇವಮಹೋ ಮಹೇಶ್ವರ ಸದಾ ವಾಚಾನಿವೃತ್ತಸ್ತ್ವಯಿ ॥೭೫॥

ಪ್ರೌಢವಾಚಾವಚನೇನ ರೂಪಮಪಿ ತೇ ಜ್ಞಾತುಂ ನ ಶಕ್ಯಂ ಪರೈಃ ॥೭೬॥

ಇತಿ ಶ್ರೀ ಶಿವರಹಸ್ಯೇ ಪ್ರಥಮಾಂಶೇ ಸಭಾಸುನೃತ್ತವರ್ಣನಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ

---

ಯನ್ನು ತಾಳಕ್ಕೆ ಅನುಸಾರವಾಗಿ ಬಡಿಯುತ್ತಿರುವರು. ಆ ಧ್ವನಿಯನ್ನನುಸರಿಸಿ ಶಂಕರನು ನಾಟ್ಯರಂಗಮಂಟಪದಲ್ಲಿ ನರ್ತನವಾಡುತ್ತಿರುವನು. ॥೭೪॥

ಎಲೈ ವೇದಾಧಿಪತಿಯೇ? ನಿನ್ನ ಸಭಾ ಸೌಂದರ್ಯವನ್ನು ಸಕಲ ವೇದ ರಾಶಿಯೂ ನಿತ್ಯದಲ್ಲೂ ಸ್ತುತಿಸುತ್ತಿರುವುದು. ಸಭಾಧೀಶ್ವರನಾದ ನಿನ್ನನ್ನೂ ಆ ವೇದಗಳೆಲ್ಲವೂ ಶ್ಲಾಘಿಸುತ್ತಿರುವುವು. ವೇದರೂಪಿಯಾದ ನಿನ್ನ ಸ್ವರೂಪವನ್ನು ವೇದಗಳೇ ತಿಳಿಯಲಾರವು. ರೂಪವೇ ಇಲ್ಲದ ನಿನ್ನನ್ನು ಯಾರು ತಾನೆ ದೃಢವಾಗಿ ತಿಳಿಯಬಲ್ಲರು? ಮಹೇಶ್ವರನೇ, ನೀನು ಮಾತಿಗೆ ನಿಲುಕದವನು. ನಿನ್ನ ಸ್ವರೂಪ ವನ್ನು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ. ॥೭೫॥

ಕೇವಲ ಮಾತಿನ ಪ್ರೌಢಿಮೆಯಿಂದಲಂತೂ ನಿನ್ನ ರೂಪವನ್ನು ತಿಳಿಯಲು ಸಾಧ್ಯವೇ ಇಲ್ಲ. ಎಂದು ಸೂತಮಹರ್ಷಿಯು ಪರಶಿವನನ್ನು ಸ್ತುತಿಸುತ್ತಾ ಹೀಗೆ ವಾಜಶ್ರವಾದಿಗಳಿಗೆ ತಿಳಿಸಿದರು. ॥೭೬॥

ಇಲ್ಲಿಗೆ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಸಭೆಗಳಲ್ಲಿ ಮಹೇಶ್ವರನ
ನಾಟ್ಯವರ್ಣನೆಯೆಂಬ ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

# ಅಥ ಶ್ರೀಶಿವರಹಸ್ಯೇ

## ಚತುಸ್ತ್ರಿಂಶೋಽಧ್ಯಾಯಃ

### ಚತುರ್ವಿಧಪುರುಷಾರ್ಥಮಂಟಪವರ್ಣನಂ

॥ ಸ್ಕಂದ ಉವಾಚ ॥

ತಚ್ಛೈಲಮೌಲಿಪ್ರಾಕಾರೋ ನಾನಾಸೌಧಾಂತರೇ ಸ್ಥಿತಃ ।
ಚಂದ್ರೋಪಲಶಿಲಾಸಾರೈಃ ಕಲ್ಪಿತೋಽಸ್ತಿ ಶಿವೇನ ಹಿ ॥೧॥

ಖಂಡಸ್ಫುಟಿತಸಂಧಾನರಹಿತೋಽಖಂಡ ಏವ ಹಿ ।
ಪರ್ವೋದ್ಯಚ್ಛರ್ವರೀನಾಥಕಲಾನಿಷ್ಯಂದಸಾರಕಃ ॥೨॥

ತ್ರಿಂಶತ್ಸಹಸ್ರಮಾನೇನ ಚಾಯಾಮೋರ್ಧ್ವವಿರಾಜಿತಃ ।
ಶುದ್ಧಸ್ಫಟಿಕಸಂಕ್ಲುಪ್ತವೃಷಭೈಃ ಪರಿಶೋಭಿತಃ ॥೩॥

## ಶ್ರೀಶಿವರಹಸ್ಯದಲ್ಲಿ ಮೂವತ್ತುನಾಲ್ಕನೆಯ ಅಧ್ಯಾಯ

ಕೈಲಾಸಪರ್ವತದ ಶಿಖರಕ್ಕೆ ಒಂದು ಪ್ರಾಕಾರವಿರುವುದು. ಆ ಪ್ರಾಕಾರದ ಮಧ್ಯಭಾಗದಲ್ಲಿ ಅನೇಕ ದಿವ್ಯಹರ್ಮ್ಯಗಳಿರುವುವು. ಮತ್ತು ಅದು ಚಂದ್ರಕಾಂತ ಶಿಲೆಗಳಿಂದ ಕೂಡಿದ್ದಾಗಿ ಸಾಕ್ಷಾತ್ಪರಮೇಶ್ವರನ ಇಷ್ಟದಂತೆಯೇ ಕಲ್ಪಿತವಾಗಿ ರುವುದು, ಎಂದು ಸ್ಕಂದಸ್ವಾಮಿಯು ಮುಂದಿನ ಕಥಾಭಾಗವನ್ನು ಜೈಗೀಷವ್ಯಾದಿ ಗಳಿಗೆ ವಿವರಿಸಲಾರಂಭಿಸಿದನು. ॥೧॥

ಆ ಪ್ರಾಕಾರವು ಖಂಡವಾದ ಮತ್ತು ಒಡೆದಿರುವ ಕಲ್ಲುಗಳಿಂದ ಜೋಡಿಸಿ ಕಟ್ಟಿದುದಲ್ಲ. ಒಟ್ಟು ಪ್ರಾಕಾರವೆಲ್ಲಾ ಅಖಂಡವಾದ ಶಿಲೆಯೊಂದರಿಂದಲೇ ನಿರ್ಮಿತ ವಾಗಿರುವುದು. ಅಂತಹ ಶುಭ್ರವಾದ ಚಂದ್ರಕಾಂತಶಿಲೆಯು, ಪರ್ವಕಾಲದ ಪೂರ್ಣ ಚಂದ್ರನ ತಲೆಯನ್ನು ಬೀರತಕ್ಕದ್ದಾಗಿರುವುದು. ಅದರ ವಿಸ್ತಾರವು ಮೂವತ್ತು ಸಹಸ್ರ ಯೋಜನಾತ್ಮಕವಾಗಿರುವುದು. ಎತ್ತರವೂ ಅಷ್ಟೇ ಇರುವುದು. ಪ್ರಾಕಾರದ

ಇಂದ್ರನೀಲಾಮಲಾಕ್ಷೈಶ್ಚ ವಿಶಾಣೈಶ್ಚೈವ ಶೋಭಿತೈಃ ।
ತತ್ಪ್ರಾಕಾರಾಖಂಡಭಿತ್ತೌ ತು ಸಂಸ್ಥಿತಾ ಗೋಪುರೇಷು ಚ ॥೪॥

ಪ್ರಾಕಾರಗೋಪುರಂ ತತ್ರ ದಶಸಾಹಸ್ರಮುಚ್ಛ್ರಿತಂ ।
ರುದ್ರಾವತಾರಚರಿತಂ ಮಣಿಕುಂಭವರಾಂಚಿತಂ ॥೫॥

ಶೋಭಿತಂ ಪೂರ್ವಭಾಗಸ್ಥಂ ತತ್ಪ್ರಾಕಾರವರಸ್ಯ ಚ ।
ದಕ್ಷಿಣೇ ಚಾಪಿ ತಾದೃಕ್ಷಂ ಮಹಾಸ್ಫಟಿಕಕಲ್ಪಿತಂ ॥೬॥

ರುದ್ರಾವತಾರಕ್ರೀಡಾಭಿರ್ವೃಷಭೈಃ ಕಲಶೈರಪಿ ।
ಶೋಭಿತಂ ತತ್ರ ತದ್ಭಾತಿ ದಶಸಾಹಸ್ರಮಾನತಃ ॥೭॥

ಮಧ್ಯಭಾಗದಲ್ಲೆಲ್ಲಾ ಶುದ್ಧವಾದ ಸ್ಫಟಿಕ ಶಿಲೆಗಳಿಂದ ನಿರ್ಮಿತವಾದ ವೃಷಭ ವಿಗ್ರಹಗಳಿರುವುವು. ॥೨-೩॥

ಆ ವೃಷಭ ವಿಗ್ರಹಗಳಲ್ಲಿ ಕಣ್ಣುಗಳನ್ನು ಮತ್ತು ಕೊಂಬುಗಳನ್ನು ಇಂದ್ರ ನೀಲಮಣಿಗಳಿಂದ ನಿರ್ಮಿಸಿರುವರು. ಅಂತಹ ಬೊಂಬೆಗಳು ಆ ಪ್ರಾಕಾರದ ಗೋಡೆ ಗಳಲ್ಲಿಯೂ, ಗೋಪುರಗಳಲ್ಲಿಯೂ ಬಹಳವಾಗಿರುವುವು. ॥೪॥

ಪ್ರಾಕಾರ ಮತ್ತು ಗೋಪುರಗಳ ಎತ್ತರವು ಹತ್ತುಸಾವಿರ ಯೋಜನ ಪರಿಮಿತಿ ಯಲ್ಲಿರುವುದು. ಮತ್ತು ರುದ್ರಾವತಾರದ ಬೊಂಬೆಗಳನ್ನೂ, ರತ್ನಮಯವಾದ ಕಲಶಗಳನ್ನೂ ಹೊಂದಿ ಅಲಂಕೃತವಾಗಿರುವುದು. ॥೫॥

ಆ ಪ್ರಾಕಾರದ ಪೂರ್ವಭಾಗವು ಈ ರೀತಿ ಶೋಭಿತವಾಗಿರುವುದು. ದಕ್ಷಿಣ ಭಾಗದಲ್ಲಿಯೂ ಸಹ ಇದೇ ರೀತಿ ಮಹಾಸ್ಫಟಿಕದಿಂದ ಕಲ್ಪಿತವಾಗಿರುವ ಮತ್ತೊಂದು ಪ್ರಾಕಾರವಿರುವುದು. ॥೬॥

ರುದ್ರಾವತಾರದ ಬೊಂಬೆಗಳಿಂದಲೂ, ವೃಷಭವಿಗ್ರಹಗಳಿಂದಲೂ, ಕಲಶಗ ಳಿಂದಲೂ ಕೂಡಿ, ಹತ್ತುಸಾಹಸ್ರಯೋಜನ ಪ್ರಮಾಣದಲ್ಲಿ ಆ ಪ್ರಾಕಾರವು ಪ್ರಕಾಶಿ ಸುತ್ತಿರುವುದು. ॥೭॥

ಋದ್ರಾವತಾರಕ್ರೀಡಾಭಿರಂಚಿತಂ ವೃಷಭೈರಪಿ ।
ಪಶ್ಚಿಮೇ ಭಾತಿ ತೇಜಿಷ್ಠಂ ಸ್ಫಟಿಕೋಪಲಗೋಪುರಂ ॥೮॥

ತದುತ್ತರೇಪಿ ಸ್ಫಟಿಕಧವಲಂ ಗೋಪುರೋತ್ತಮಂ ।
ರುದ್ರಾವತಾರೈಃ ಕಲಶೈಶ್ಶೋಭಿತಂ ವೃಷಭೈರಪಿ ॥೯॥

ಸಹಸ್ರತಲಭಾಗೈಶ್ಚ ಶಿಖರೋದ್ಯತ್ಪತಾಕಕೈಃ ।
ಮುಕ್ತಾಗುಚ್ಛೈಃ ಪ್ರವಾಲಾಲಿಮಾಲಾಜಾಲಿಕಶೋಭಿತೈಃ ॥೧೦॥

ದೇವಕೋಷ್ಠೈಃ ಕೋಣಕೋಷ್ಠೈಃ ಕಪೋತೈಃ ಪಾಲಿಪಾಲಿಭಿಃ ।
ಮಹಾವಲಭಿಕೋದ್ದಾಮಸ್ತಂಭವಿದ್ರುಮಪುತ್ರಿಕೈಃ ॥೧೧॥

ಪ್ರಾಕ್ಸಂಸ್ಥೋ ಮಂಟಪಸ್ತತ್ರ ವ್ಯಾಯಾಮೋಚ್ಛ್ರಾಯಸುಂದರಃ ।
ಸಿಂಹಶಾರ್ದೂಲಶರಭಮಾತಂಗತುರಗಾಕೃತಿಃ ॥೧೨॥

---

ಅದೇ ರೀತಿ ಪಶ್ಚಿಮ ದಿಕ್ಕಿನಲ್ಲಿಯೂ ಸಹ ರುದ್ರಾವತಾರದ ವಿಗ್ರಹಗಳಿಂದಲೂ, ವೃಷಭಗಳಿಂದಲೂ ಕೂಡಿದ್ದಾಗಿ, ಸ್ಫಟಿಕಶಿಲಾವಿಶಿಷ್ಟಗಳಾದ ಗೋಪುರಗಳಿಂದ ವಿರಾಜಿಸುವ ಪ್ರಾಕಾರವೊಂದು ಶೋಭಿಸುತ್ತಿರುವುದು. ॥೮॥

ಉತ್ತರ ದಿಕ್ಕಿನಲ್ಲಿಯೂ ಅದರಂತೆ ಸ್ಫಟಿಕಶಿಲಾನಿರ್ಮಿತವಾದ ಗೋಪುರವು ರತ್ನಕಲಶಗಳಿಂದಲೂ, ವೃಷಭವಿಗ್ರಹಗಳಿಂದಲೂ ವಿರಾಜಿಸುತ್ತಿರುವುದಾಗಿರುವುದು. ॥೯॥

ಅದಕ್ಕೆ ಸಹಸ್ರಾರು ಒಳಅಂಗಳಗಳಿರುವುವು. ಅನೇಕ ಶಿಖರಗಳೂ, ಅವುಗಳಲ್ಲಿ ಹಾರಾಡುವ ಬಾವುಟಗಳೂ, ಅಲ್ಲಲ್ಲಿ ವಿರಾಜಿಸುವ ಪ್ರವಾಲ, ಭ್ರಮರ, ಇವುಗಳಿಂದ ಆವೃತವಾದ ಮುತ್ತಿನ ಮತ್ತು ಪುಷ್ಪಮಾಲೆಗಳೂ ಬಹಳವಾಗಿ ಕಂಡುಬರುತ್ತಿರುವುವು. ॥೧೦॥

ಅದರಲ್ಲಿ ಅನೇಕ ದೇವರ ಮನೆಗಳೂ, ಮೂಲೆಯಲ್ಲಿರುವ ಕೋಣೆಗಳೂ, ಕಪೋತಪಾಲಿಕೆಗಳೂ ಮುತ್ತು ರತ್ನಗಳಿಂದ ನಿರ್ಮಿತವಾದ ವಿಗ್ರಹಗಳನ್ನೊಳಗೊಂಡ ಸ್ತಂಭಗಳೂ, ಮುಂಜೂರುಗಳೂ ಅತಿಶಯವಾಗಿ ಕಂಡುಬರುತ್ತಿರುವುವು. ॥೧೧॥

ಅವರಲ್ಲಿ ಪೂರ್ವದಿಗ್ಭಾಗದಲ್ಲಿರುವ ಮಂಟಪವು ಅತಿ ವಿಶಾಲವಾಗಿಯೂ ಎತ್ತರವಾಗಿಯೂ ಇರುವುದು. ಸಿಂಹ, ಹುಲಿ, ಶರಭ, ಆನೆ, ಕುದುರೆ ಇವುಗಳ ಆಕಾರದ ಬೊಂಬೆಗಳು ಅಲ್ಲಿ ಬಹಳವಾಗಿರುವುವು. ॥೧೨॥

ಶುಕಭೇರುಂಡ ಹಂಸಾಭ್ಯೈಸ್ತಂಭೈರ್ಮಣಿಕೃತೈರ್ಯುತಃ ।
ಸಿಂಹಮೌಲಿಮಹಾಪಾಲಿಕನ್ಯಕಾಲಿವಿರಾಜಿತೈಃ ॥೧೩॥

ರತ್ನಯುಕ್ತಸ್ತಂಭಯುತಶ್ಚಾಗರ್ಭಗೃಹಗೋಪುರಂ ।
ವಿಸ್ತೃತೋ ವೇದಿಕಾಭಿಶ್ಚ ರಕ್ತಪದ್ಮಚ್ಛವಿರ್ಮಹಾನ್ ॥೧೪॥

ಸ್ವಚ್ಛಾದರ್ಶತಲಾಕಾರಮಣಿಸುಂದರಭಿತ್ತಿಕಃ ।
ಧೂಪೈಸ್ತನ್ಮಣಿದೀಪೈಶ್ಚ ವಿದ್ಯೋತಿತದಿಗಂತರಃ ॥೧೫॥

ಪಾಟೀರಸಾರಕರ್ಪೂರಗಂಧಸಾರಾದಿಸಿಕ್ತಭೂಃ ।
ಸುಮನಾನೋದಿಮಂದಾರರತ್ನಮಾಲಾಪರಿಷ್ಕೃತಃ ॥೧೬॥

ತತ್ರಾಚ್ಛಹರಿದುದ್ದಾಮ ಮಣಿಸಪ್ತಚ್ಛದಾವೃತಃ ।
ತತ್ರಾಚ್ಛವಿದ್ರುಮಾಸಾರಮುಕ್ತಾಸರವಿಲಂಬಿತಃ ॥೧೭॥

ಗಿಳಿ, ಗಂಡಭೇರುಂಡ, ಹಂಸ, ಮುಂತಾದ ಪಕ್ಷಿವರ್ಗಗಳನ್ನು ರತ್ನಗಳಲ್ಲಿ ನಿರ್ಮಿಸಿ ಕಂಬಗಳಿಗೆ ಹದ್ದಿರುವರು. ಸಿಂಹದ ಮೇಲೆ ಕುಳಿತು, ಕಲಶಗಳನ್ನು ಕೈಯ್ಯಲ್ಲಿ ಹಿಡಿದಿರುವ ಕನ್ಯಕಾ ಸಮೂಹಗಳ ವಿಗ್ರಹಗಳನ್ನು ಅಲ್ಲಿ ಕಾಣಬಹುದು. ||೧೩||

ರತ್ನಮಯವಾದ ಕಂಬಗಳಿಂದ ಅಲಂಕೃತವಾದ ಗರ್ಭಗೃಹವೊಂದಿರುವುದು. ಅಲ್ಲಿ ದಿವ್ಯವಾದ ಗೋಪುರವೊಂದು ಕಾಣಿಸುತ್ತಿರುವುದು. ಅನೇಕ ಜಗಲಿಗಳೂ, ರಕ್ತಕಮಲಕಾಂತಿಯೂ, ಅಲ್ಲಿ ವಿಶೇಷವಾಗಿ ಕಾಣುತ್ತಿರುವುವು. ||೧೪||

ನಿರ್ಮಲವಾದ ರತ್ನಗನ್ನಡಿಗಳಲ್ಲಿ ಸುಂದರವಾದ ಗೋಡೆಗಳು ಪ್ರಕಾಶಿಸುತ್ತಿರುವುವು. ಅಲ್ಲಿ ಸುಗಂಧಮಯವಾದ ಧೂಪವೂ, ರತ್ನದೀಪಗಳೂ ಆಕಾಶಮಂಡಲವನ್ನು ಬೆಳಗಿಸುತ್ತಿರುವುವು. ||೧೫||

ಅಲ್ಲಿನ ಭೂಪ್ರದೇಶವೆಲ್ಲಾ ಶ್ರೀಗಂಧದ ಮತ್ತು ಕರ್ಪೂರಗಳ ಮತ್ತು ದಿವ್ಯಗಂಧೋದಕಗಳಿಂದ ಸಾರಿಸಲ್ಪಟ್ಟಿರುವುದು. ಮತ್ತು ಅದು ಸುಗಂಧಮಯವಾದ ಮಂದಾರಪುಷ್ಪವೇ ಮೊದಲಾದ ಪುಷ್ಪಮಾಲೆಗಳಿಂದ ಅಲಂಕೃತವಾಗಿರುವುದು. ||೧೬||

ಅಲ್ಲಿಯೇ ಹರಿದ್ವರ್ಣದ ಮತ್ತು ರತ್ನಮಯವಾದ ಏಳೆಲೆ ಬಾಳೆಗಿಡಗಳು ದ್ವಾರ

**ಅಮ್ಲಾನಕುಸುಮೋದ್ರಿಕ್ತರದಾಂತರಕೃತಾಂತರಃ**
**ತತ್ರ ತದ್ಭಿತ್ತಿಗಾನೇಕನವರತ್ನವಿಚಿತ್ರಿತಃ** ॥೧೮॥

**ರುದ್ರಾವತಾರಕ್ರೀಡಾದಿತತ್ತನ್ಮಣಿಸುವಿಗ್ರಹಃ ।**
**ಮೋಕ್ಷಲಕ್ಷ್ಮೀವಿಲಾಸಾಖ್ಯೋ ಮಂಟಪೋ ಭಾತಿ ಪೂರ್ವತಃ** ॥೧೯॥

**ದಕ್ಷಿಣೇಽಪ್ಯಯುತಸ್ತಂಭನಾನಾಮಣಿಗಣೈಶ್ಚಿತಃ ।**
**ಆಗರ್ಭಗೃಹಮುತ್ಸೇಧವಿಸ್ತೃತೋ ಗೋಪುರಾವಧಿ** ॥೨೦॥

**ಸಾರೂಪ್ಯಮೋಕ್ಷದಾನಾಖ್ಯೋ ಭಾತಿ ರತ್ನಪರಿಷ್ಕೃತಃ ।**
**ಗೋಮೇದಕಾಂತಿವಿಲಸದ್ಧೀರಧೀರಾವೃತಾಂತರಃ** ॥೨೧॥

ಪ್ರದೇಶದಲ್ಲಿ ಕಟ್ಟಲ್ಪಟ್ಟಿರುವುವು. ಅದರ ಸುತ್ತಲೂ ಹವಳಗಳ ಮತ್ತು ಮುತ್ತಿನ ಸರಗಳನ್ನು ನೇತುಹಾಕಿರುವರು. ॥೧೭॥

ದಂತಮಯವಾದ ಕುಂಡಗಳಲ್ಲಿ ಯಾವಾಗಲೂ ಒಣಗದಂತಹ ಹೂವಿನ ಗೊಂಚಲುಗಳನ್ನಿಟ್ಟಿರುವರು. ಮತ್ತು ಗೋಡೆಗಳಲ್ಲೆಲ್ಲಾ ನವರತ್ನಗಳನ್ನು ಜೋಡಿಸಿ ಅಲಂಕರಿಸಿರುವರು. ॥೧೮॥

ಅಲ್ಲಲ್ಲಿ ರುದ್ರಾವತಾರ ಪ್ರದರ್ಶಕವಾದ ಬೊಂಬೆಗಳೂ ಕಂಡುಬರುತ್ತಿರುವುವು. ಇಂತಹ ಪ್ರಾಕಾರದ ಮುಂದಿನ ಮಂಟಪಕ್ಕೆ ಮೋಕ್ಷಲಕ್ಷ್ಮೀ ವಿಲಾಸವೆಂಬ ಹೆಸರಿರುವುದು. ॥೧೯॥

ದಕ್ಷಿಣಭಾಗದಲ್ಲಿಯೂ, ಹತ್ತುಸಾವಿರ ರತ್ನಮಯವಾದ ಕಂಬಗಳಿಂದಕೂಡಿ, ಗೋಪುರ ಪರ್ಯಂತವಾಗಿ ಎತ್ತರವಾಗಿರುವ ಮಂಟಪವೊಂದಿರುವುದು. ಅದರಲ್ಲಿ ಗರ್ಭಗೃಹವೂ ಕಂಡುಬರುತ್ತಿದೆ. ॥೨೦॥

ಸಾರೂಪ್ಯಮೋಕ್ಷದಾನವೆಂಬ ಒಂದು ಮಂಟಪವು ಅಲ್ಲಿ ರತ್ನಮಯವಾಗಿ ತೋರಿಬರುತ್ತಿರುವುದು. ಅದರಲ್ಲಿಯೂ ಗೋಮೇದವೇ ಮೊದಲಾದ ಅನೇಕ ರತ್ನಗಳು ಕಾಂತಿಮತ್ತಾಗಿ ಹೊಳೆಯುತ್ತಿರುವುವು. ॥೨೧॥

ಸುರತ್ನಮುಕುರಾಕಾರಭಿತ್ತಿರಂಗೈಕಸುಂದರಃ ।
ತತ್ರತ್ಯಮಣಿಮಾಣಿಕ್ಯಗಣಕಾಂತಿತತಾಂತರಃ ॥೨೨॥

ಕಸ್ತೂರೀತಗರಾಮೋದಗಂಧವಾರಿಸುಪಂಕಿಲಃ ।
ನಂದನಾಪಾರಕುಸುಮಮಾಲಾಜಾಲವೃತಾಂತರಃ ॥೨೩॥

ರಂಭಾಪೂಗೀಫಲಾಲಂಬಿಗುಚ್ಛಪಾಲೀವಿರಾಜಿತಃ ।
ರತ್ನೋದ್ಗೀರ್ಣಾಗರುಸ್ತಂಭೈರ್ಮರಾಲಾವಲಿಶೋಭಿತಃ ॥೨೪॥

ತದ್ಭಿತ್ತಿನಿಚಿತಾಪಾರರುದ್ರಕ್ರೀಡಾದಿವಿಗ್ರಹೈಃ ।
ತತ್ತದ್ಭೂಷಾವಿಶೇಷೇಷು ಯೋ ಯೋ ರಾಗಸ್ತಥಾ ತಥಾ ॥೨೫॥

ತತ್ತನ್ಮಣಿಕೃತಾನೇಕಸುಂದರೈಶ್ಶಿವವಿಗ್ರಹೈಃ ।
ಗುಗ್ಗುಲೂದ್ದಾಮಸುಭಗಗಂಧಧೂಪವಿಧೂಪಿತಃ ॥೨೬॥

ರತ್ನಮಯವಾದ ಕನ್ನಡಿಯಂತೆ ಹೊಳೆಯುತ್ತಿರುವ ಗೋಡೆಗಳಲ್ಲಿ ಆ ರಂಗಮಂಟಪದ ಸೌಂದರ್ಯವು ಪ್ರತಿಫಲಿಸುತ್ತಿರುವುದು. ಮತ್ತು ಮಣಿಗಳ, ಮಾಣಿಕ್ಯಗಳ ಕಾಂತಿಯು ಸುತ್ತಲೂ ವ್ಯಾಪಿಸುತ್ತಿರುವುದು. ॥೨೨॥

ಆ ಭಾಗವು ಕಸ್ತೂರಿ, ತಗರ, ಶ್ರೀಗಂಧ ಮುಂತಾದ ಸುಗಂಧ ವಸ್ತುಗಳ ಕೆಸರಿನಿಂದ ಬಳಿಯಲ್ಪಟ್ಟದ್ದಾಗಿರುವುದು. ನಂದನವನದ ಅಪಾರ ಹೂವುಗಳ ಮಾಲೆಯಿಂದ ತುಂಬಿ ಶೋಭಿಸುತ್ತಿರುವುದು. ॥೨೩॥

ಬಾಳೆ, ಅಡಕೆ, ಮುಂತಾದ ಫಲಭರಿತಗಳಾದ ಗೊನೆಗಳನ್ನು ತಂದು ಅಲ್ಲಿಗೆ ನೇರವಾಗಿ ಕಟ್ಟಿರುವರು. ರತ್ನಮಯವಾದ ಅಗರುವಿನ ಕಂಬಗಳಲ್ಲಿ ಹಂಸಗಳ ಪಂಕ್ತಿಯು ವಿಹರಿಸುವಂತೆ ಕಾಣುತ್ತಿರುವುದು. ॥೨೪॥

ಆ ಗೋಡೆಗಳಲ್ಲೆಲ್ಲಾ ರುದ್ರಾವತಾರದ ವಿಗ್ರಹಗಳಿವೆ. ಅವುಗಳೆಲ್ಲಾ ರತ್ನಗಳಿಂದ ಅಲಂಕೃತವಾಗಿವೆ. ಯಾವ ಯಾವ ಬಣ್ಣಗಳು ಯಾವ ಯಾವ ಅಂಗಗಳಿಗೆ ಆವಶ್ಯಕವೋ, ಅದೇ ವರ್ಣದ ರತ್ನಗಳನ್ನೇ ಅಲ್ಲಿ ಮೆಟ್ಟಿರುವರು. ॥೨೫॥

ಮತ್ತು ಅದೇ ವರ್ಣದ ರತ್ನಗಳಿಂದಲೇ ಆ ಶಿವವಿಗ್ರಹಗಳನ್ನೂ ಮಾಡಿ ನಿರ್ಮಿಸಿರುವರು. ಆ ವಿಗ್ರಹಗಳು ಗುಗ್ಗುಲು, ಗಂಧ, ಇನ್ನೂ ಸುಗಂಧ ವಸ್ತುಗಳು ಇವುಗಳ ಗಂಧದಿಂದ ಸುವಾಸಿತವಾಗಿರುವುವು. ॥೨೬॥

ಪಶ್ಚಿಮೋ ಗರ್ಭಗೃಹತೋ ಗೋಪುರಾವಧಿವಿಸ್ತೃತಃ ।
ಸುಭಗೋ ಭಾತಿ ನಿಯುತಸ್ತಂಭಮಂಡಿತಭೂತಲಃ ॥೨೭॥

ಸಾಲೋಕ್ಯಮೋಕ್ಷದಾನಾಖ್ಯೋ ಮಂಟಪೋಽಯುತಪಾದಭಾಕ್ ।
ತತ್ರ ವೈಡೂರ್ಯರಚಿತಸ್ತಂಭಾ ಖಂಡ್ಯೈಕಸಾರಭೂಃ ॥೨೮॥

ತತ್ಪ್ರೋತ್ಪ್ರಸಾರಧಾರಾಭಿರ್ವಿಸ್ಮಯಾಕರಕಾಂತಿಭೂಃ ।
ಸಿಂಹಮೌಲಿಮಹಾಪೀಠಕಪೋತಾವಲಿಸುಂದರಃ ॥೨೯॥

ಮಣಿರತ್ನಚಿತಾನೇಕಪಾಲಿಪಾಲೀವರಾಶ್ರಯಃ ।
ಕೇಸರಾಂಬುಯುತಾಸಾರ ಮೃಗಮೋದಯುತೈರ್ಘಟೈಃ ॥೩೦॥

ಗಂಧಾಂಬುಸಿಕ್ತತಲಕೋ ಮಣಿಮಾಲಾವಿಭೂಷಿತಃ ।
ಹೀರಸಾರಮಹಾಮುಕ್ತಾ ಮಣಿಹಾರಾವಲಂಬಿತಃ ॥೩೧॥

ಇದರ ಪಶ್ಚಿಮಭಾಗದಲ್ಲಿ ಗೋಪುರ ಪರ್ಯಂತವಾಗಿರುವ ಹತ್ತುಸಾವಿರ ಕಂಬಗಳಿಂದ ಅಲಂಕೃತವಾದ ಮಂಟಪವೊಂದಿರುವುದು. ॥೨೭॥

ಅದಕ್ಕೆ ಸಾಲೋಕ್ಯ ಮೋಕ್ಷದಾನವೆಂಬ ಹೆಸರಿದೆ. ಅದಕ್ಕೂ ಹತ್ತುಸಾವಿರ ಕಂಬಗಳಿವೆ. ವೈಡೂರ್ಯಮಣಿಮಯವಾದ ಕಂಬಗಳೂ ನೆಲವೂ ಅಲ್ಲಿ ತೋರಿಬರುವುವು. ॥೨೮॥

ಅದರ ಕಾಂತಿಯಿಂದ ಕೂಡಿದ ಆ ಪ್ರದೇಶವು ಅತ್ಯಾಶ್ಚರ್ಯಕರವಾಗಿ ಕಾಣುತ್ತಿರುವುದು. ಸಿಂಹಾಸನವೂ, ಅದರ ಸುತ್ತಲೂ ವಿರಾಜಿಸುವ ಕಪೋತಪಾಲಿಕೆಗಳೂ ಬಹು ರಮ್ಯವಾಗಿರುವುವು. ॥೨೯॥

ಮಣಿಮಯವಾದ ರತ್ನಗಳಿಂದ ಕೂಡಿ ಆ ಕಪೋತಪಾಲಿಕೆಗಳು ಬಹು ಸುಂದರವಾಗಿರುವುವು. ಮತ್ತು ಅಲ್ಲಿ ಕೇಸರಿಯ ನೀರಿನಿಂದ ತುಂಬಿದ ಗಡಿಗೆಗಳು ಅಸಂಖ್ಯಾತವಾಗಿರುವುವು. ॥೩೦॥

ಗಂಧೋದಕವನ್ನು ನೆಲಕ್ಕೆಲ್ಲಾ ಎರಚಿರುವರು. ರತ್ನಮಾಲೆಗಳು ಎಲ್ಲೆಲ್ಲೂ ಅಲಂಕೃತವಾಗಿರುವುವು. ಹೀರರತ್ನಗಳಿಂದ ಕೂಡಿರುವ ರತ್ನಹಾರಗಳು ಅತಿಶಯವಾಗಿ ಹೊಳೆಯುತ್ತಿರುವುವು. ॥೩೧॥

ತತ್ರ ವೈಡೂರ್ಯಫಲಕಚಿತೋರ್ಧ್ವತಲಕಾಂತಿಕಃ ।
ನಿರ್ಯತ್ಕಾಂತ್ಯಾ ಕಾಂತತರೋ [1]ವಿಚಿತಾಖಿಲಚಿತ್ರಕಃ ॥೩೨॥

ಕೃಷ್ಣಾಗರುಮಹಾರಮ್ಯಧೂಮಧೂಪಸವಾಕುಲಃ ।
ಮಣಿಕ್ಲಪ್ತಾಚ್ಛಭಿತ್ತಿಶ್ಚ ರುದ್ರಕ್ರೀಡಾದಿಶೋಭಿತಃ ॥೩೩॥

ಶೋಭನೋ ನಿತರಾಂ ಭಾತಿ ಮಣಿರತ್ನಾಲಿಸುಂದರಃ ।
ಸುರತ್ನಕೇತಕೀ ತಾಲೀ ಫಲಾಲಂಬಿತಪದ್ಮಕೈಃ ॥೩೪॥

ಮಹಾಸಿಂಹಾಸನೈಃ ಪೀಠೈಃ ಪಾಲೀಪಾಲಿವಿರಾಜಿತಃ ।
ಪ್ರವಾಲಮುಕ್ತಾಪಾದ್ಯೈಶ್ಚ ಸುರೌಪ್ಯಮಣಿಪಾದುಕೈಃ ॥೩೫॥

ಮಂಚೋರ್ಧ್ವಮಂಟಪಾಲಂಬಿಮುಕ್ತಾಜಾಲವಿತಾನಕೈಃ ।
ಪುಷ್ಪಶಯ್ಯಾಪರಿಕರೈರುಪಧಾನೈರ್ಮನೋಹರೈಃ ॥೩೬॥

ಅಲ್ಲಿ ವೈಡೂರ್ಯ ಮಣಿಗಳ ಹಲಗೆಗಳಿಂದ ಹುಟ್ಟಿದ ಕಾಂತಿಯು ಸರ್ವವ್ಯಾಪಿಯಾಗಿರುವುದು. ಮತ್ತು ಸರ್ವತ್ರ ಪ್ರಸರಿಸುವ ಕಾಂತಿಯಿಂದ ಆ ಮಂಟಪವೆಲ್ಲಾ ಚಿತ್ರವಿಚಿತ್ರವಾಗಿರುವಂತೆ ತೋರಿಬರುತ್ತಿರುವುದು. ॥೩೨॥

ಕೃಷ್ಣಾಗರುವಿನಿಂದ ಹೊರಟ ಧೂಪವಾಸನೆಯು ಎಲ್ಲೆಲ್ಲಿಯೂ ಹರಡಿರುವುದು. ಗೋಡೆಗಳೆಲ್ಲವೂ ಮಣಿಕಾಂತಿಯಿಂದ ಕೂಡಿ ರುದ್ರಕ್ರೀಡಾದಿಗಳನ್ನು ತಿಳಿಯಪಡಿಸುವ ವಿಗ್ರಹಗಳಿಂದ ತುಂಬಿಹೋಗಿರುವುದು. ॥೩೩॥

ಮತ್ತೂ ಮಣಿಗಳಿಂದಲೇ ಕಲ್ಪಿತವಾದ ದುಂಬಿಗಳ ಆಕಾರದಿಂದ ಆ ಗೋಡೆಗಳು ಶೋಭಿಸುತ್ತಿರುವುವು. ಅಲ್ಲದೆ ರತ್ನಮಯವಾದ ಕೇತಕೀ, ತಾಳೆ, ಇವುಗಳ ಫಲಗಳಿಂದ ಕೂಡಿ, ಕಮಲಗಳಿಂದ ಪ್ರಕಾಶಿಸುತ್ತಿರುವ, ॥೩೪॥

ಅನೇಕ ಸಿಂಹಾಸನಗಳೂ, ಸುತ್ತಲೂ ವಿರಾಜಿಸುತ್ತಿರುವ ಕಪ್ಪೋತಪಾಲಿಕೆಗಳೂ ಕಂಗೊಳಿಸುತ್ತಿರುವುವು. ಆ ಸಿಂಹಾಸನಗಳಿಗೆ ಹವಳದ ಮತ್ತು ಮುತ್ತಿನ ಕಾಲುಗಳೂ, ಕಾಲುಗಳಿಗೆ ಬೆಳ್ಳಿಯ ಮತ್ತು ಮಣಿಮಯವಾದ ಪೀಠಗಳೂ ವಿರಾಜಿಸುತ್ತಿರುವುವು. ॥೩೫॥

ಮಂಚಗಳ ಮೇಲೆ ಮೇಲ್ಕಟ್ಟುಗಳು ಮುಕ್ತಾಹಾರಗಳಿಂದ ಅಲಂಕೃತ

1. ಬಿಂಬಿತಾಖಿಲಚಿತ್ರಕಃ (ಪಾ. ರ)

ವಾಸಿತೈರ್ಗಂಧಬಹಲಶುಭ್ರಾಸ್ತೀರ್ಣಪಟಾವೃತೈಃ ।
ಸುರುದ್ರವೀಣಾನಾದೈಶ್ಚ ನಾದಿತೈರ್ದುಂದುಭೀರವೈಃ ॥೩೭॥

ತತ್ರ ಮಂಟಪವರ್ಯೇಷು ಚೈಕಾಕಾರತಯಾ ಸ್ಥಿತಂ ।
ಪಶ್ಚಾದಾಗೋಪುರತಲಮಾಗರ್ಭಗೃಹಸನ್ನಿಧಿ ॥೩೮॥

ತದುತ್ತರೇ ಚಕಾಸ್ತೀಶಮಂಟಪೋ ರತ್ನಸುಂದರಃ ।
ಆಗೋಪುರಗೃಹಂ ಶಂಭೋರಯುತಾಚ್ಛ್ರಿತಪಾದುಕಃ ॥೩೯॥

ಪುಷ್ಪರಾಗಮಣೀಕ್ಲೃಪ್ತಶ್ಚೋರ್ಧ್ವಾಧಸ್ತಲಮಂಡಿತಃ ।
ತತ್ಕಾಂತಿಕಾಂಚಿತೋಗಮವಿದ್ರುಮಾಮಲಪುತ್ರಿಕಃ ॥೪೦॥

ವಾಗಿವೆ. ಮತ್ತು ಹೂವಿನ ಹಾಸಿಗೆಗಳೂ, ಮನೋಹರವಾದ ದಿಂಬುಗಳೂ ಆ ಮಂಚವನ್ನು ಅಲಂಕರಿಸುತ್ತಿರುವುವು. ||೩೬||

ಸುವಾಸನಾ ವಿಶಿಷ್ಟವಾದ ವಸ್ತ್ರಗಳಿಂದ ಕೂಡಿ ಆ ಪ್ರದೇಶವೆಲ್ಲಾ ಸುಗಂಧಮಯವಾಗಿರುವುದು. ಮತ್ತು ರುದ್ರವೀಣೆಯ ಇಂಪಾದ ಧ್ವನಿಯೂ, ನಗಾರಿಗಳ ಗಂಭೀರಶಬ್ದವೂ ಅಲ್ಲಿ ಕೇಳಿ ಬರುತ್ತಿರುವುದು. ||೩೭||

ಆ ಮಂಟಪಗಳಲ್ಲಿ ಎಲ್ಲವೂ ಒಂದೇ ಆಕಾರದಿಂದ ನಿರ್ಮಿತವಾದವುಗಳಾಗಿವೆ. ಗೋಪುರದಿಂದ ತಲಪ್ರದೇಶದವರೆಗೂ, ಗರ್ಭಗೃಹದಿಂದ ಪ್ರಾಕಾರದವರೆಗೂ ಎಲ್ಲಾ ಪ್ರದೇಶವೂ ಒಂದೇ ವಿಧವಾದ ಸೌಂದರ್ಯದಿಂದ ಕೂಡಿದ್ದಾಗಿಯೇ ತೋರುವುದು. ||೩೮||

ಆ ಪ್ರಾಕಾರದ ಉತ್ತರದ ಭಾಗದಲ್ಲಿ ಈಶಮಂಟಪವೆಂಬ ಮತ್ತೊಂದು ಮಂಟಪವಿರುವುದು. ಅದು ರತ್ನಮಯವಾಗಿರುವುದು. ಮತ್ತು ಗೋಪುರದಿಂದ ಹಿಡಿದು ತಲದವರೆಗೂ ಒಂದೇ ರೀತಿಯಾಗಿ ಸುಂದರವಾಗಿರುವುದು. ಅದಕ್ಕೂ ಹತ್ತು ಸಾವಿರ ಕಂಬಗಳಿವೆ. ||೩೯||

ಆ ಮಂಟಪವೆಲ್ಲಾ ಪುಷ್ಪರಾಗಮಣಿಯಿಂದಲೇ ನಿರ್ಮಿತವಾದುದು. ಮೇಲು ಮತ್ತು ಒಳಭಾಗವೆಲ್ಲಾ ಪುಷ್ಪರಾಗಮಣಿಗಳ ಕಾಂತಿಯಿಂದ ಕೂಡಿದ್ದಾಗಿ, ಶುಭ್ರವಾದ ಹವಳಗಳ ಬೊಂಬೆಗಳಿಂದ ಪ್ರಕಾಶಿತವಾಗಿರುವುದು. ||೪೦||

ಸಾರಂಗಶುಕಮಾತಂಗಕುರಂಗವಿಹಗಾಕೃತಿಃ ।
ಸ್ತಂಭೈಶ್ಚೋಭಿತಭೂಭಾಗಮಣಿಸಾರಾಲಿಕೀಲಿತಃ ॥೪೧॥

ರತ್ನಜಾಲಕನಿರ್ಯದ್ಭಾತಲರಂಜಿತದಿಙ್ಮುಖಃ ।
ಸುರತ್ನವಲಭೀಕೀರ್ಣಸ್ವಚ್ಛಭಿತ್ತಿವರಾಂಚಿತಃ ॥೪೨॥

ತತ್ರ ರುದ್ರಾವತಾರಾದಿಮಣಿಕಲ್ಪಿತವಿಗ್ರಹಃ ।
ಶರಚ್ಚಂದ್ರಪ್ರಭಾಜಾಲತಿರಸ್ಕಾರಿತಲೋಚ್ಛ್ರಯಃ ॥೪೩॥

ಸುರತ್ನಕೇತಕೋದ್ದಾಮಲಲನ್ನಾರೇಲಗುಚ್ಛಕಃ ।
ಗಂಧಕರ್ಪೂರಪಾಟೀರದ್ರವಭಾರ್ಯೈಕಗಂಧಭೂಃ ॥೪೪॥

ವಿತಾನೋತ್ತಾನಿತತಲೋ ರತ್ನರಂಭಾಪರಿಷ್ಕೃತಃ ।
ಸಾಂಬ್ರಾಣ್ಯಗುರುಧೂಪೈಶ್ಚ ನಿತ್ಯಂ ಘುಮುಘುಮಾಯಿತಃ ॥೪೫॥

---

ಸಾರಂಗ, ಗಿಳಿ, ಆನೆ, ಜಿಂಕೆ, ಪಕ್ಷಿ ಇವುಗಳ ಆಕಾರದ ಬೊಂಬೆಗಳೂ ಬಹಳವಾಗಿರುವುವು. ಕಂಬಗಳಲ್ಲಿ ಕೆತ್ತಿರುವ ರತ್ನಗಳ ಕಾಂತಿಯಿಂದ ಆ ಮಂಟಪದ ಭೂಭಾಗವೆಲ್ಲಾ ಅಲಂಕೃತವಾಗಿರುವುದು. ॥೪೧॥

ರತ್ನಕಾಂತಿಗಳಿಂದ ಹೊಳೆಯುವ ಆ ಪ್ರದೇಶವು ಸಕಲ ದಿಕ್ಕುಗಳನ್ನೂ ಬೆಳಗಿಸುತ್ತಿರುವುದು. ಕಪೋತಪಾಲಿಕೆಗಳಿಂದ ಕೂಡಿರುವ ಮುಂಜೂರುಗಳಿಂದಲೂ, ಸುವರ್ಣಮಯವಾದ ಗೋಡೆಗಳಿಂದಲೂ ಆ ಪ್ರದೇಶವು ಮನೋಹರವಾಗಿರುವುದು. ॥೪೨॥

ಅಲ್ಲಿಯೂ ಶಂಕರನ ಅವತಾರಗಳನ್ನು ಸೂಚಿಸುವ ವಿಗ್ರಹಗಳೂ, ಶರಚ್ಚಂದ್ರನ ಕಾಂತಿಯನ್ನು ತಿರಸ್ಕರಿಸುವ ಗೋಡೆಯ ಬೆಳಕೂ ಕಂಡುಬರುತ್ತಿರುವುದು. ॥೪೩॥

ರತ್ನಮಯವಾದ, ಕೇತಕೀಫಲಗಳ ಮತ್ತು ತೆಂಗಿನಕಾಯಿಗಳ ಗೊಂಚಲುಗಳು ಬಹಳವಾಗಿರುವುವು. ಅಲ್ಲಿನ ಭೂಭಾಗವೆಲ್ಲಾ ಗಂಧ, ಕರ್ಪೂರ, ಶ್ರೀಗಂಧ ಇವುಗಳ ನೀರಿನಿಂದ ನೆನೆಸಲ್ಪಟ್ಟದ್ದಾಗಿರುವುದು. ॥೪೪॥

ಮೇಲೆ ರತ್ನದ ಮೇಲ್ಕಟ್ಟುಗಳಿವೆ. ಸುತ್ತಲೂ ಮಣಿಮಯವಾದ ಬಾಳೆಯ ಮರಗಳಿವೆ. ಸಾಂಬ್ರಾಣಿ, ಅಗುರು, ಧೂಪ ಇವುಗಳ ವಾಸನೆಯೂ ಸರ್ವದಾ ಅಲ್ಲಿ ನೆಲಸಿರುವುದು. ॥೪೫॥

ಪ್ರಫುಲ್ಲರತ್ನಚಾಂಪೇಯರತ್ನರಾಜಿವಿರಾಜಿತಃ ।
ನೀಲನೀಲೋತ್ಪಲೋತ್ಫುಲ್ಲಪೀಠಾಲಂಬಿಸರ್ವೈರ್ವೃತಃ ॥೪೬॥

ತತ್ರತ್ಯಸ್ತಂಭವಿತತಪುಷ್ಪರಾಗಮಣಿಪ್ರಭಃ ।
ತತ್ರಾಂತರ್ಮಂಟಪವರಂ ರಂಜಿತಂ ಮಣಿಕಾಂತಿಭಿಃ ॥೪೭॥

ಸುಗಂಧಗಂಧಜಾಮೋದಪಟವಾಸಾನುಮೋದಿತಃ ।
ವಾತಪೋತಸಮಾನೀತೈ ರಮ್ಯಶೀತತರಾವೃತೈಃ ॥೪೮॥

ತನ್ಮಂಟಪವರೇ ದೇವ್ಯಾ ದಿವ್ಯಸಿಂಹಾಸನಾಶ್ರಯಃ ।
ಆಸ್ತೇ ಗಣೈಃ ಪರಿವೃತೋಽಪಶ್ಯಂಸ್ತದ್ದೃಷ್ಟಿಕೌತುಕಂ ॥೪೯॥

ತತ್ರತ್ಯಮಂಟಪಸ್ಯಾಖ್ಯಾ ಶ್ರೀಮಹೇಶೇನ ಕಲ್ಪಿತಾ ।
ಸಾಯುಜ್ಯಲಕ್ಷ್ಮೀದಾನಾಖ್ಯೋ ರತ್ನಸುಂದರಕಲ್ಪಿತಃ ॥೫೦॥

ಅರಳಿದ ಸಂಪಿಗೆಯೂ, ನೀಲವಾದ ನೀಲೋತ್ಪಲಗಳೂ, ಪ್ರಕಾಶಮಾನವಾದ ರತ್ನಗಳೂ, ಅಲ್ಲಿ ಮಾಲಾಕಾರವಾಗಿ ಸುತ್ತಲೂ ನೇತಾಡುತ್ತಿರುವುವು. ॥೪೬॥

ಅಲ್ಲಿರುವ ಕಂಬಗಳಲ್ಲೆಲ್ಲಾ ಪುಷ್ಪರಾಗಮಣಿಗಳನ್ನು ಕೆತ್ತಿರುವರು. ಅದರ ಕಾಂತಿಯು ಸರ್ವತ್ರ ಹರಡಿರುವುದು. ಅದರ ಮಧ್ಯೆ ರತ್ನಕಾಂತಿಯಿಂದ ಕಂಗೊಳಿಸುವ ದಿವ್ಯವಾದ ಮಂಟಪವೊಂದು ಕಂಡುಬರುವುದು. ॥೪೭॥

ಸುಗಂಧಮಯವಾದ ವಸ್ತ್ರಗಳು, ಸುಗಂಧಭರಿತವಾದ ಶೀತಲ ಮಂದ ಮಾರುತದಿಂದ ಅಲ್ಲಿ ಹಾರಾಡುತ್ತಿರುವುವು. ॥೪೮॥

ಅಲ್ಲಿಯೇ ದೇವಿಗೆ ಆಶ್ರಯಗೊಡುವ ದಿವ್ಯಸಿಂಹಾಸನವೊಂದಿರುವುದು. ಅದು ಸಮಸ್ತ ಗಣಗಳಿಂದ ಪರಿವೃತವಾಗಿ ನೋಡುವವರಿಗೆ ಅತ್ಯಾಶ್ಚರ್ಯಪ್ರದವಾಗಿ ಕಂಡುಬರುತ್ತಿರುವುದು. ॥೪೯॥

ಆ ಮಂಟಪಕ್ಕೆ ಸಾಕ್ಷಾತ್ಪರಮೇಶ್ವರನೇ, "ಸಾಯುಜ್ಯ ಲಕ್ಷ್ಮೀದಾನ" ಎಂಬ ಹೆಸರನ್ನಿಟ್ಟಿರುವನು. ಅದು ರತ್ನಕಾಂತಿಯಿಂದ ಪ್ರಕಾಶಮಾನವಾಗಿ ತೋರಿಬರುತ್ತಿರುವುದು. ॥೫೦॥

ತತ್ರತ್ಯಾಮಲಮಂಟಪೇಷು ಭಗವಾನಾಸ್ತೇ ಸಹಾಂಬೋ ಮುದಾ ।
ಭಕ್ತಾನಾಂ ನಿವಹೇಷು ತತ್ರ ಸುಕೃತಾಪಾರೈಶ್ಚ ಭೂಷಾದಿಭಿಃ ।
ಸ್ವಸ್ವಾಪಾರರಸೈರ್ವರೈಸ್ಸುಮಧುರೋದಾರೈರ್ಗಣೇಂದ್ರೈರ್ವೃತ ।
ಸ್ತತ್ತತ್ಸ್ಥಾನವರಾರ್ಹಭೂಷಣವರಂ ಭಕ್ತೇಷು ಧತ್ತೇ ಶಿವಃ ॥೫೧॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಚತುರ್ವಿಧಪುರುಷಾರ್ಥಮಂಟಪ
ವರ್ಣನಂ ನಾಮ ಚತುಸ್ತ್ರಿಂಶೋಽಧ್ಯಾಯಃ

---

ಇಂತಹ ಮಂಟಪದಲ್ಲಿ ಶಂಕರನು ಪಾರ್ವತಿಯೊಡನೆ ಸರ್ವದಾ ನೆಲಸಿರುವನು. ಮತ್ತು ಸಮಸ್ತ ಪ್ರಮಥಗಣಗಳಿಂದಲೂ, ಭಕ್ತವೃಂದದಿಂದಲೂ ಕೂಡಿ, ಸರ್ವಾಭರಣಯುಕ್ತನಾಗಿ ಪ್ರಕಾಶಿಸುತ್ತಿರುವನು. ಸುಮಧುರವಾದ ಗುಣಗಳಿಂದಲೂ ದಯಾಪೂರಿತವಾಣಿಯಿಂದಲೂ ಭಗವಂತನು ತನ್ನ ಭಕ್ತರಿಗೆ ಬೇಕಾದ ವರಗಳನ್ನು ಅವರವರ ಯೋಗ್ಯತಾನುಸಾರವಾಗಿ ಅನುಗ್ರಹಿಸುತ್ತಲಿರುವನು. ॥೫೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಪ್ರಥಮಾಂಶದಲ್ಲಿ ಚತುರ್ವಿಧಪುರುಷಾರ್ಥಗಳೆಂಬ
ನಾಲ್ಕು ಮಂಟಪಗಳ ವರ್ಣನೆಯೆಂಬ
ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಪಂಚತ್ರಿಂಶೋಽಧ್ಯಾಯಃ

—∘∘—

### ಕೈಲಾಸಲಿಂಗವರ್ಣನಂ

|| ಸ್ಕಂದ ಉವಾಚ ||

ತತ್ರಾಚ್ಛಮಂಟಪಾಂತಸ್ಥಂ ಗೋಪುರಾಂತರಸುಂದರಂ ।
ಇಂದ್ರಚಾಪನಿಭಂ ದಿವ್ಯಂ ನಾನಾಮಣಿವಿರಾಜಿತಂ ॥೧॥

ಪ್ರಾಕಾರಂ ದಶಸಾಹಸ್ರಯೋಜನಾಯಾಮವಿಸ್ತರಂ ।
ಕ್ವಚಿತ್ಪೂರ್ವೇಷು ಹರಿತಂ ಕ್ವಚಿತ್ಕಜ್ಜಲಸನ್ನಿಭಂ ॥೨॥

ಕುರುವಿಂದಾಮಲಮಣಿಭಾಸ್ವತ್ಕಾಂತತರಾಕೃತಿ ।
ತಟಿತ್ಕೂಟನಿಭಂ ಚಾಪಿ ನೀಲಾಂಬುದನಿಭಂ ಕ್ವಚಿತ್ ॥೩॥

---

ಶ್ರೀಶಿವರಹಸ್ಯದಲ್ಲಿ ಮೂವತ್ತೈದನೆಯ ಅಧ್ಯಾಯ

ಈ ಚತುರ್ವಿಧ ಪ್ರಾಕಾರಗಳ ಮಧ್ಯದಲ್ಲಿ ಮತ್ತೊಂದು ಗೋಪುರವಿರುವುದು. ಅದು ಹತ್ತು ಸಹಸ್ರ ಯೋಜನವಿಸ್ತಾರವಾಗಿರುವುದು. ಇಂದ್ರಚಾಪದಂತೆ ನಾನಾ ವರ್ಣವುಳ್ಳದ್ದಾಗಿ, ನಾನಾವಿಧವಾದ ರತ್ನಗಳಿಂದ ಅಲಂಕೃತವಾಗಿರುವುದು. ಅದಕ್ಕೆ ಎತ್ತರವಾದ ಮತ್ತು ಸುಂದರವಾದ ಒಂದು ಗೋಪುರವಿರುವುದು. ಒಂದುಭಾಗದಲ್ಲಿ ಹರಿದ್ವರ್ಣವಾಗಿಯೂ, ಕೆಲವು ಕಡೆ ಕಾಡಿಗೆಯಂತೆ ಕಪ್ಪಾಗಿಯೂ ಕಾಣುತ್ತಿರುವುದು. ||೧-೨||

ಕುರುವಿಂದಪುಷ್ಪಗಳಂತೆ ಹೊಳೆಯುವ ರತ್ನಗಳಿಂದ ಕೆಲವು ಭಾಗವು ಅಲಂಕೃತವಾಗಿರುವುದು. ಮಿಂಚಿನ ರಾಶಿಯಂತೆಯೂ, ನೀಲಮೇಘದಂತೆಯೂ ಕೆಲವು ಭಾಗದಲ್ಲಿ ಹೊಳೆಯುತ್ತಿರುವುದು. ||೩||

ಬಾಲಸೂರ್ಯಕರಾಭಾಸಂ ಚೋದ್ಯದಿಂದುನಿಭಂ ಕ್ವಚಿತ್ ।
ಪಲಾಶಶಲ್ಮಲೀಪುಷ್ಪಸಂಕಾಶಂ ಕ್ವಚಿದೇವ ಹಿ ॥೪॥

ಇಂದ್ರನೀಲಾಮಲಮಣಿಪ್ರಭಾಸನ್ನಿಭಕಾಂಡಕಂ ।
ಇಂದ್ರಗೋಪಕಸಂಕಾಶಂ ಮಯೂರಗಲಸನ್ನಿಭಂ ॥೫॥

ಪಾರಾವತಗಲಾಭಾಸಂ ಕರ್ಣಿಕಾರಭನೀಯುತಂ ।
ಚಂದ್ರಭಾಸ್ವತ್ಕರಾಕಾರಕನದ್ಧೀರನಿಭಂ ಕ್ವಚಿತ್ ॥೬॥

ಗೋಮೇದಪುಷ್ಪರಾಗೋದ್ಯದ್ವೈಡೂರ್ಯರಸರಂಜಿತಂ ।
ಪ್ರವಾಲಮಣಿಮುಕ್ತಾಚ್ಛಧಾರಾಭವಿನಿಭಂ ಕ್ವಚಿತ್ ॥೭॥

ತತ್ಪ್ರಾಕಾರಪ್ರಭಾಜಾಲೈರ್ನಭೋ ವಿವಿಧಭಾಯುತಂ ।
ಮಣಿಮಾಣಿಕ್ಯಖಚಿತಗೋಪುರಾಲಿವಿರಾಜಿತಂ ॥೮॥

---

ಕೆಲವು ಕಡೆ ಬಾಲಸೂರ್ಯನ ಕಿರಣಗಳಂತೆ ಹೊಳೆಯುತ್ತಿರುವುದು. ಮತ್ತೆ ಕೆಲವು ಕಡೆ ಚಂದ್ರನಂತೆ ಪ್ರಕಾಶಿಸುತ್ತಿರುವುದು. ಮತ್ತೆ ಕೆಲವು ಸ್ಥಳದಲ್ಲಿ ಮುತ್ತುಗದ ಮತ್ತು ಬೂರುಗದ ಹೂವುಗಳಂತೆ ರಂಜಿಸುತ್ತಿರುವುದು. ॥೪॥

ಇಂದ್ರನೀಲಮಣಿಯ ಕಾಂತಿಯಂತೆ ಕಾಂತಿಯುಳ್ಳದ್ದಾಗಿ, ಕಾಮನ ಬಿಲ್ಲಿನಂತೆಯೂ, ನವಿಲುಕಂಠದಂತೆಯೂ ಪ್ರಕಾಶಮಾನವಾಗಿರುವುದು. ॥೫॥

ಕೆಲವು ಭಾಗವು ಪಾರಿವಾಳಗಳ ಕತ್ತಿನಂತೆಯೂ, ಕರ್ಣಿಕಾರ ಪುಷ್ಪಗಳಂತೆಯೂ, ಚಂದ್ರಕಾಂತಿಯಂತೆ ಹೊಳೆಯುವ ಹೀರಮಣಿಗಳಂತೆಯೂ ಹೊಳೆಯುತ್ತಿರುವುದು. ॥೬॥

ಗೋಮೇದಕ, ಪುಷ್ಪರಾಗ, ವೈಡೂರ್ಯ ಇವುಗಳ ರಸದಿಂದಲೂ, ಮುತ್ತು, ಹವಳ, ಇವುಗಳ ಶುಭ್ರವಾದ ಕಾಂತಿಯಿಂದಲೂ ಕೂಡಿದ್ದಾಗಿ ಪ್ರಕಾಶಮಾನವಾಗಿ ತೋರುತ್ತಿರುವುದು. ॥೭॥

ಆ ಪ್ರಾಕಾರಗಳ ಕಾಂತಿಸಮೂಹದಿಂದ ಅಂತರಿಕ್ಷವೆಲ್ಲವೂ ಪ್ರಕಾಶಮಯವಾಗಿರುವುದು. ಮಣಿಗಳಿಂದಲೂ, ಮಾಣಿಕ್ಯಗಳಿಂದಲೂ, ನಿರ್ಮಿತವಾದ ಗೋಪುರಗಳ ಸಮೂಹಗಳಿಂದಲೂ, ಅದು ಶೋಭಿಸುತ್ತಿರುವುದು. ॥೮॥

**ರುದ್ರಾವತಾರಚರಿತ್ರೈರ್ಮಣಿರಾಜದ್ವೃಷೈರ್ಯುತಂ ।**
**ಲಲಾಮಶೋಭಿಕಲಶೈಶ್ಚತುರ್ದಿಕ್ಷು ವಿರಾಜಿತಂ ॥೯॥**

**ತತ್ರಾಂತರ್ಗೃಹಮೀಶಸ್ಯ ಗರ್ಭಾಗಾರಂ ಮನೋಹರಂ ।**
**ನವರತ್ನಾಖಂಡಕ್ಲೃಪ್ತಸ್ತಂಭಪೀಠವಿರಾಜಿತಂ ॥೧೦॥**

**ತಚ್ಚಿಂತಾಮಣಿಭಾಜಾಲಭಾಸಿತಂ ಗರ್ಭಧಾಮ ತತ್ ।**
**ತದಗ್ರತೋ ಭಾತಿ ಶಂಭೋಸ್ಸಹಸ್ರಸ್ತಂಭಮಂಡಿತಃ ॥೧೧॥**

**ಸುಮುಕ್ತಿಮಂಟಪೋ ನಾಮ ಸರ್ವವೇದಶಿಖಾಸ್ತುತಃ ।**
**ತತ್ಪ್ರಭಾಭಾಸಿತಾ ಲೋಕಾ ಬ್ರಹ್ಮವಿಷ್ಣ್ವಾದಯಸ್ಸುರಾಃ ॥೧೨॥**

**ದಿಕ್ಪಾಲಯಕ್ಷರಕ್ಷೌಘನಾಗಾಪ್ಸರಸಕಿನ್ನರಾಃ ।**
**ಉರಗಾಸ್ತುರಗಾಶ್ಚೈವ ಸಾರಂಗಾಶ್ಚಾಮರಾಸ್ಸ್ವನಾಃ ॥೧೩॥**

ರುದ್ರಾವತಾರದ ಪ್ರತಿಮೆಗಳೂ, ಮಣಿಮಯವಾದ ವೃಷಭವಿಗ್ರಹಗಳೂ, ಸುತ್ತಲೂ ಪ್ರಕಾಶಿಸುವ ಕಲಶಗಳೂ, ನಾಲ್ಕು ದಿಕ್ಕುಗಳಲ್ಲಿಯೂ ಶೋಭಿಸುತ್ತಿರುವುವು. ||೯||

ಅಲ್ಲಿರುವ ಅಂತರ್ಗೃಹವೇ ಪರಶಿವನ ಗರ್ಭಗೃಹವಾಗಿರುವುದು. ಅದರಲ್ಲಿ ನವರತ್ನಮಯವಾದ, ಮತ್ತು ಸ್ತಂಭಗಳಿಂದ ಅಲಂಕೃತವಾದ ಪೀಠವೊಂದಿರುವುದು. ||೧೦||

ಗರ್ಭಗೃಹವಾದರೋ ಚಿಂತಾಮಣಿಗಳಿಂದ ನಿರ್ಮಿತವಾಗಿ ಪ್ರಕಾಶಯುಕ್ತ ವಾಗಿ ತೋರಿಬರುವುದು. ಅದರ ಮುಂಭಾಗದಲ್ಲಿ ಸಹಸ್ರ ಕಂಬಗಳಿಂದ ಅಲಂಕೃತ ವಾದ ಒಂದು ಮಂಟಪವಿರುವುದು. ||೧೧||

ಅದಕ್ಕೆ ಸುಮುಕ್ತಿಮಂಟಪವೆಂದು ಹೆಸರು. ಅದನ್ನು ಎಲ್ಲಾ ಉಪನಿಷತ್ತು ಗಳೂ ಸ್ತುತಿಸುತ್ತಿರುವುವು. ಅದರ ಕಾಂತಿಯಿಂದ ಸಕಲ ಲೋಕಗಳೂ, ಬ್ರಹ್ಮ, ವಿಷ್ಣುವೇ ಮೊದಲಾದ ಸಕಲ ದೇವತೆಗಳೂ ಹೊಳೆಯುತ್ತಿರುವರು. ||೧೨||

ಆ ಮಂಟಪದಲ್ಲಿ ದಿಕ್ಪಾಲಕರೂ, ಯಕ್ಷರೂ, ರಾಕ್ಷಸರೂ, ನಾಗರೂ, ಅಪ್ಸರಸ್ಸೂ, ಕಿನ್ನರರು, ಉರಗಗಳು, ತುರಗಗಳು, ಇವುಗಳ ಚಿತ್ರವನ್ನೆಲ್ಲಾ ನೋಡ ಬಹುದು. ಮತ್ತೂ ಸಾರಂಗ, ದೇವತೆಗಳು, ಕಿಂಪುರುಷರು, ಸಾಮಜರೆಂಬ

ಮಯೂರವಸ್ತ್ರಾಮಜಾಲಾವಾ ಹರಯಶ್ಶರಭಾಸ್ತಥಾ ।
ಭಲ್ಲೂಕಭೇಕಖಡ್ಗೈಶ್ಚ ಹರಿಣೈರ್ಮಹಿಷೈಸ್ತಥಾ ॥೧೪॥

ಕಲ್ಪಿತಾ ಮಣಿಜೋತ್ತುಂಗಸ್ತಂಭಧಾರಾಸು ಕೋಟಿಶಃ ।
ಮಣಿಜಾಲಕಸಂಛನ್ನೋ ರತ್ನಸೋಪಾನವೇದಿಕಃ ॥೧೫॥

ಪಟ್ಟಿಕಾತೋರಣೋಪೇತಃ ಪೀತಗೋಪಾನಸೀಯುತಃ ।
ತದಗ್ರರತ್ನಕಲಶೈರತ್ನಜಾಲಕಶೋಭಿತಃ ॥೧೬॥

ರತ್ನಗುಚ್ಛಮಹಾಮಾಲಾಜಾಲಾಕೀಲಿತಸುಂದರಃ ।
ಪ್ರಭಾಕರಸಹಸ್ರಾಭಶ್ಚೇಂದುಕೋಟಿಸಮಪ್ರಭಃ ॥೧೭॥

ಧೂಪಾಮೋದೈಕಬಹುಲೋ ಮಣಿದೀಪಪ್ರಭಾತತಃ ।
ವಿತಾನತಾನಸುಭಗೋ ಹರಿನ್ಮಣಿನಿಭಸ್ಸದಾ ॥೧೮॥

ದೇವತಾವಿಶೇಷಗಳೂ, ಲಾವರೆಂಬ ರಕ್ಷೋಭೇದಗಳೂ, ಸಿಂಹಗಳೂ, ಶರಭಗಳೂ, ಕರಡಿ, ಕಪಿ, ಖಡ್ಗ, ಹರಿಣ, ಎಮ್ಮೆ ಮುಂತಾದ ಪ್ರಾಣಿವರ್ಗಗಳೂ ಅಲ್ಲಿ ಕಂಡು ಬರುತ್ತಿರುವುವು. ॥೧೩-೧೪॥

ಮಣಿಖಚಿತವಾದ ಕಂಬಗಳಲ್ಲಿ ಮೇಲೆ ಹೇಳಿದ ಪ್ರಾಣಿವರ್ಗವೆಲ್ಲಾ ಕೋಟಿ ಸಂಖ್ಯೆಯಲ್ಲಿ ಕೆತ್ತಲ್ಪಟ್ಟಿದೆ. ಅದರ ಮೇಲೆ ರತ್ನದ ಸಾಲುಗಳೂ, ಕೆಳಭಾಗದಲ್ಲಿ ರತ್ನದ ಮೆಟ್ಟಲುಗಳೂ, ಜಗಲಿಗಳೂ ಶೋಭಿಸುತ್ತಿರುವುವು. ॥೧೫॥

ಪಟ್ಟಿಗಳನ್ನೂ ತೋರಣಗಳನ್ನೂ ಅಲ್ಲಲ್ಲಿ ಕಟ್ಟಿರುವರು. ಸೂರಿನ ಮೇಲು ಭಾಗದಲ್ಲಿರುವ ಮುಂಜೂರುಗಳಲ್ಲಿ ರತ್ನದ ಕಲಶಗಳನ್ನೂ, ರತ್ನಮಾಲೆಗಳನ್ನೂ ಬಂಧಿಸಿರುವರು. ॥೧೬॥

ರತ್ನದ ಗೊಂಚಲುಗಳಿಂದ ಕೂಡಿರುವ ಅನೇಕ ಸರಗಳು ಅಲ್ಲೆಲ್ಲಾ ಕಂಗೊಳಿಸುತ್ತಿರುವುದರಿಂದ, ಆ ಮುಕ್ತಿಮಂಟಪವು ಸಹಸ್ರ ಸೂರ್ಯರಂತೆಯೂ, ಕೋಟಿ ಚಂದ್ರರಂತೆಯೂ ಪ್ರಕಾಶಮಾನವಾಗಿರುವುದು. ॥೧೭॥

ಅದು ಸರ್ವದಾ ಧೂಪದ ವಾಸನೆಯಿಂದಲೂ, ರತ್ನದೀಪಗಳ ಕಾಂತಿಯಿಂದಲೂ ವಿಶಾಲವಾದ ಮೇಲ್ಕಟ್ಟುಗಳಿಂದಲೂ, ಕೂಡಿದ್ದಾಗಿ ಇಂದ್ರನೀಲಮಣಿಯಂತೆ ಪ್ರಕಾಶಮಾನವಾಗಿರುವುದು. ॥೧೮॥

ನಂದನಾನಂದಿತಸುಮಮಾಲಾಗುಚ್ಛಕಲಂಬಿತಃ ।
ಅಮ್ಲಾನಾರಕ್ತಕಮಲೋತ್ಪಲಮಾಲಾಲಸಚ್ಛವಿಃ ॥೧೯॥

ಪ್ರತ್ಯಗ್ರಕೇತಕೋದ್ದಾಮ ಗಂಧೋದ್ಯದ್ರತ್ನಪಿಂಜರಃ ।
ಉತ್ಫುಲ್ಲಚಂಪಕೋದ್ದಾಮ ಮಾಲಾಗಂಧಿತದಿಕ್ತಟಃ ॥೨೦॥

ಕದಂಬಬಂಧುರಾಮೋದಸುಂದರೋ ಮಣಿಭಾಸುರಃ ।
ತತ್ರ ಸಿಂಹಾಸನೈಶ್ಚಿತ್ರೈಃ ಕಲ್ಪಿತೈರ್ಮಣಿಭಿಸ್ತತೈಃ ॥೨೧॥

ಪದ್ಮರಾಗಾಮಲಮಣಿಕಾಂಚಿತಾದರ್ಶಭಿತ್ತಿಕಃ ।
ಪತಾಕಾಕುಂಭಕೋಟೀಭಿರ್ಮಣಿಕೋಟಿವೃಷೈಶ್ಚಿತಃ ॥೨೨॥

ನಂದನವನದಲ್ಲಿ ಬಿಟ್ಟಿರುವ ಪುಷ್ಪಮಾಲೆಗಳ ಗೊಂಚಲು ಅಲ್ಲಿ ಸಾಲು ಸಾಲಾಗಿ ಕಂಡುಬರುತ್ತಿರುವುದು. ಯಾವಾಗಲೂ ಬಾಡದಿರುವ ಕೆಂಪುಬಣ್ಣದ ಕಮಲಮಾಲೆಗಳಿಂದಲೂ, ಬಿಳಿಯಬಣ್ಣದ ಉತ್ಪಲಮಾಲೆಗಳಿಂದಲೂ ಅದು ಸುಂದರಮಯವಾಗಿರುವುದು. ||೧೯||

ಕೇತಕೀವೃಕ್ಷಗಳ ತುದಿಯಲ್ಲಿ ಹಾರಾಡುವ ಪರಾಗಗಳ ಸುವಾಸನೆಯು ರತ್ನಗಳ ಮೇಲೆ ವ್ಯಾಪಿಸಿ, ಆ ರತ್ನವೆಲ್ಲಾ ಸುವರ್ಣದ ಕಾಂತಿಯನ್ನು ಕೊಡುತ್ತಿರುವುದು. ಅರಳಿದ ಸಂಪಿಗೆಯ ಹೂವಿನ ಮಾಲೆಗಳ ಸುವಾಸನೆಯು ಸಕಲ ದಿಕ್ಕುಗಳಿಗೂ ವ್ಯಾಪಿಸಿರತಕ್ಕದ್ದಾಗಿದೆ. ||೨೦||

ಕದಂಬವೃಕ್ಷಗಳ ಸುವಾಸನೆಯಿಂದ ಆ ರತ್ನಮಂಟಪವು ಶೋಭಿಸುತ್ತಿರುವುದು. ಅಲ್ಲಿ ಚಿತ್ರವಿಚಿತ್ರವಾದ ರತ್ನಗಳಿಂದ ಕೂಡಿರುವ ದಿವ್ಯ ಸಿಂಹಾಸನಗಳು ಪ್ರಕಾಶಿಸುವುವು. ||೨೧||

ಪದ್ಮರಾಗಮಣಿಗಳಿಂದ ಕಟ್ಟುಹಾಕಿರುವ ರತ್ನಗನ್ನಡಿಗಳು ಆ ಮಂಟಪದ ಗೋಡೆಯಲ್ಲಿ ತೂಗುಹಾಕಲ್ಪಟ್ಟಿರುವುವು. ಆ ಮಂಟಪದ ಮೇಲೆ ಕೋಟಿಸಂಖ್ಯೆಯಲ್ಲಿ ಪತಾಕೆಗಳೂ, ಕಲಶಗಳೂ, ರತ್ನಮಯವಾದ ವೃಷಭನ ವಿಗ್ರಹಗಳೂ ಕಂಡುಬರುತ್ತಿರುವುವು. ||೨೨||

ಲಿಂಗಾಗ್ರೇ ಮಂಟಪೋ ಭಾತಿ ಕೈಲಾಸೇಶ್ವರಸನ್ನಿಧೌ ।
ತತೋಽಂತರೇ ಗರ್ಭಗೃಹಂ ಕೈಲಾಸೇಶಸ್ಯ ಸತ್ತಮ ॥೨೩॥

ನವರತ್ನಮಹಾಪೀಠಂ ವೇದಿಕಾತಲಸುಂದರಂ ।
ಗರ್ಭಕೋಷ್ಠೈಃ ಪಟ್ಟಿಕಾಭಿರ್ದೇವಕೋಷ್ಠೈರ್ವಿರಾಜಿತಂ ॥೨೪॥

ವಲಭೀತಲಸಂಚಾರಿಮರಾಲಕುಲಸುಂದರಂ ।
ಕಪೋತಪಾಲೀಪಾಲಿಸ್ಥಮಣಿಸಿಂಹವೃಷೈರ್ಯುತಂ ॥೨೫॥

ದಿಕ್ಪಾಲೈರ್ಬ್ರಹ್ಮವಿಷ್ಣ್ವಾದ್ಯೈರ್ದಕ್ಷಿಣಾಮೂರ್ತಿವಿಸ್ತೃತಂ ।
ದಕ್ಷಿಣೇ ಪಶ್ಚಿಮೇ ಚಾಪಿ ಪ್ರಾಗುತ್ತರದಿಶಿ ಪ್ರಭಾಃ ॥೨೬॥

ಲಿಂಗೋದ್ಭವಾಂಧಕಾರಾತಿತ್ರಿಪುರಾಸುರಸಂಹೃತಿಃ ।
ಬ್ರಹ್ಮವಿಷ್ಣೂದ್ಭವಶ್ಚಾಪಿ ತಾಂಡವೇಶಶ್ಚ ಸುಂದರಃ ॥೨೭॥

ಈ ಮಂಟಪವು ಕೈಲಾಸೇಶ್ವರಲಿಂಗದ ಎದುರಿನಲ್ಲಿಯೇ ಕಂಡುಬರುತ್ತಿರುವುದು. ಅದರ ಎದುರಿನಲ್ಲಿಯೇ ಕೈಲಾಸೇಶ್ವರಲಿಂಗದ ಗರ್ಭಗೃಹವಿರುವುದು. ॥೨೩॥

ಅಲ್ಲಿ ನವರತ್ನಮಯವಾದ ದಿವ್ಯಪೀಠವೊಂದಿರುವುದು. ಅದಕ್ಕೆ ಸುತ್ತಲೂ ಸುಂದರವಾದ ಜಗುಲಿಯಿರುವುದು. ಅಲ್ಲಿ ಅನೇಕ ಗರ್ಭಗೃಹಗಳೂ, ದೇವತಾಗೃಹಗಳೂ ಕಂಡುಬರುತ್ತಿರುವುವು. ॥೨೪॥

ಮುಂಜೂರಿನ ಮರದಮೇಲೆ ಅನೇಕ ಹಂಸಗಳು ರಮ್ಯವಾಗಿ ಓಡಾಡುತ್ತಿರುವುವು. ಅಲ್ಲಿಯೇ ಇರುವ ಕಪೋತಪಾಲಿಕೆಗಳಲ್ಲಿ ರತ್ನಮಯವಾದ ಸಿಂಹಗಳು ಮತ್ತು ವೃಷಭವಿಗ್ರಹಗಳು ಬಹಳವಾಗಿರುವುವು. ॥೨೫॥

ದಕ್ಷಿಣ, ಪಶ್ಚಿಮ, ಪೂರ್ವ, ಉತ್ತರ ಈ ನಾಲ್ಕು ದಿಕ್ಕುಗಳಲ್ಲಿಯೂ ಬ್ರಹ್ಮ, ವಿಷ್ಣು ಇವರೇ ಮೊದಲಾದ ದೇವತಾ ವಿಗ್ರಹಗಳೂ ದಕ್ಷಿಣಾಮೂರ್ತಿಯ ಪ್ರತಿಮೆಯೂ ಸುಂದರವಾಗಿ ಕಂಡು ಬರುತ್ತಿರುವುವು. ॥೨೬॥

ಶಂಕರನು ಲಿಂಗೋದ್ಭವವಾದ ಚಿತ್ರ, ಅಂಧಕಾಸುರ, ತ್ರಿಪುರಾಸುರರು ಇವರನ್ನು ಕೊಂದ ದೃಶ್ಯ, ಬ್ರಹ್ಮ, ವಿಷ್ಣು ಇವರು ಹುಟ್ಟಿದ ವಿವರ, ಸುಂದರವಾದ ತಾಂಡವೇಶ್ವರನ ನಾಟ್ಯ ಇವುಗಳು ಚಿತ್ರರೂಪವಾಗಿ ಅಲ್ಲಲ್ಲಾ ಕಂಡುಬರುತ್ತಿವೆ. ॥೨೭॥

ಕರಿಚರ್ಮಪರೀಧಾನೋ ಹೇರಂಬಸ್ಕಂದಸಂಯುತಃ ।
ಭಿಕ್ಷಾಟನಶ್ಚ ಕಂಕಾಲಶ್ಶೂಲಾಸಕ್ತಕರೋ ಹರಃ ॥೨೮॥

ಮೇಖಲಾವೃತಕಂಠೋದ್ಯತ್ಪಾದಾಂಭೋಜಾಕ್ತಪಾದುಕಃ ।
ಜಟಾಜಾಲಿತಸನ್ಮೌಲಿರಿಂದುಕುಂದಶತಾಚ್ಛಭಾಃ ॥೨೯॥

ಸೋಮಾವತಂಸೋಕ್ಷವಾಹೋ ಗಣಬೃಂದವೃತಃ ಕ್ವಚಿತ್ ।
ಉಮಯಾ ಸಂಸ್ಥಿತಃ ಪೀಠೇ ಪಶ್ಯನ್ ಗೌರೀಂ ಮನೋಹರಃ ॥೩೦॥

ಗೌರೀಪ್ರಸಾದನಪರಃ ಪಶ್ಯಂಸ್ತದ್ಧನುಕೋಕರಂ ।
ಅರ್ಧೇನ ನಾರೀವಪುಷಾ ಶೋಭಿತೋ ಹರಿಹೀರಭಾಃ ॥೩೧॥

ರತ್ನಾಹಿಕುಂಡಲಜ್ಯೋತಿಸೋಮಭಾಮುಖಮಾನನಃ ।
ವ್ಯಾಘ್ರರತ್ನಾಂಬರಧರಸ್ತ್ರಿಪುಂಡ್ರತಿಲಕೋಜ್ಜ್ವಲಃ ॥೩೨॥

---

ಒಂದು ಕಡೆ, ಗಜಚರ್ಮಾಂಬರಧಾರಿಯಾಗಿ, ಹೇರಂಬ, ಸ್ಕಂದ ಇವರೊಡಗೂಡಿ, ಬ್ರಹ್ಮಕಪಾಲವನ್ನು ಹಿಡಿದು, ತ್ರಿಶೂಲಧಾರಿಯಾಗಿ ಭಿಕ್ಷೆಬೇಡುತ್ತಿರುವ ಮಹೇಶ್ವರನ ಚಿತ್ರವು ಮನೋಹರವಾಗಿ ಕಾಣುತ್ತಿರುವುದು. ॥೨೮॥

ಅದೇ ಮಹೇಶ್ವರನು ಸೊಂಟದಲ್ಲಿ ಮೇಖಲೆಯನ್ನೂ, ಎತ್ತರವಾದ ಗ್ರೀವಾಪ್ರದೇಶವನ್ನೂ, ಕಾಲಿನಲ್ಲಿ ದಿವ್ಯವಾದ ಪಾದುಕೆಯನ್ನೂ, ಶಿರಸ್ಸಿನಲ್ಲಿ ಪ್ರಕಾಶಮಾನವಾದ ಜಟೆಯನ್ನೂ ಧರಿಸಿಕೊಡು ದಿವ್ಯರೂಪದಲ್ಲಿ ಶೋಭಿಸುತ್ತಿರುವನು. ॥೨೯॥

ಚಂದ್ರನಿಂದ ಶೋಭಿಸುವ ಶಿರಸ್ಸುಳ್ಳವನಾಗಿಯೂ, ವೃಷಭವಾಹನನಾಗಿಯೂ ಸಮಸ್ತ ಗಣಗಳಿಂದ ಪರಿವೃತನಾಗಿಯೂ, ಮಹಾದೇವನು ಪಾರ್ವತಿಯೊಡಗೂಡಿ ದಿವ್ಯಪೀಠದಲ್ಲಿ ಭಕ್ತರಿಗೆ ಅತ್ಯಂತ ಮನೋಹರನಾಗಿ ಕಾಣುತ್ತಿರುವನು. ॥೩೦॥

ಗೌರಿಯನ್ನು ಸಂತೋಷಪಡಿಸುವವನಾಗಿಯೂ, ವಕ್ರವಾಗಿರುವ ತನ್ನ ಧನುಸ್ಸಿನ ಅಗ್ರವನ್ನು ನೋಡುವವನಾಗಿಯೂ, ಅರ್ಧನಾರೀಶ್ವರನಾಗಿಯೂ ಇಂದ್ರನೀಲಮಣಿಗಳಿಂದ ಕೂಡಿದವನಾಗಿಯೂ ಪರಮೇಶ್ವರನು ಅಲ್ಲಿ ಶೋಭಿಸುತ್ತಿರುವನು. ॥೩೧॥

ರತ್ನದ ನಾಗಕುಂಡಲಗಳನ್ನು ಕಿವಿಯಲ್ಲಿ ಧರಿಸಿ ಪರಶಿವನು ಸಾಕ್ಷಾಚ್ಚಂದ್ರ

ಮಣಿರಿಂಖತ್ಸುಭೂಷಾಢ್ಯೋ ನಾನಾಭೂತಿಜಗಂಧಧೃಕ್ ।
ಕ್ವಣನ್ಮಂಜೀರಪಾದಾರ್ಧಶೇಷಾರ್ಧಹರಪಂಕಜಃ ॥೩೩॥

ಗರಕಂಠಾರ್ಧಕೋ ದಿವ್ಯಮಣಿಕಂಠಾರ್ಧಧೃಕ್ ಶಿವಃ ।
ನವಚಂದ್ರೋತ್ತಮಾಂಗೋತ್ಥಗಂಗಾರಯುವರಾಶ್ರಯಃ ॥೩೪॥

ವಾಮದಕ್ಷಿಣಭಾಗಸ್ಥಲೋಕೇಶಹರಿಸೇವಿತಃ ।
ಚಂಡಾಂಶುತನಯೋದ್ಭೀತಲಿಂಗಾಲಿಂಗದ್ವಿಜಾವನಃ ॥೩೫॥

ಗಂಗಾತರಂಗಕಲಿತಕಪರ್ದೇಣಾಂಕಶೋಭಿತಃ ।
ಮುರವೈರಿಮಹಾನೇತ್ರಪೂಜಿತಾಂಘ್ರಿಸರೋರುಹಃ ॥೩೬॥

ನಂತೆ ಮುಖವುಳ್ಳವನಾಗಿಯೂ ಹುಲಿಯ ಚರ್ಮವನ್ನು ಧರಿಸಿ ತ್ರಿಶೂಲಾಗ್ರದಿಂ ದಲಂಕೃತನಾಗಿ ಅತಿ ತೇಜಸ್ವಿಯಾಗಿಯೂ ಕಂಡುಬರುತ್ತಿರುವನು. ॥೩೨॥

ರತ್ನದಿಂದ ಹೊಳೆಯುವ ಒಡವೆಗಳಿಂದ ಅಲಂಕೃತನಾಗಿ, ನಾನಾವಿಧವಾದ ಸುಗಂಧಗಳನ್ನು ಲೇಪಿಸಿಕೊಂಡವನಾಗಿ, ಒಂದು ಪಾದದಲ್ಲಿ ಧ್ವನಿಮಾಡುವ ಗೆಜ್ಜೆ ಗಳನ್ನೂ, ಮತ್ತೊಂದು ಕಾಲಿನಲ್ಲಿ ಆದಿಶೇಷನನ್ನೂ ಪಡೆದು, ಪದಸೌಂದರ್ಯವನ್ನು ಹೊಂದಿರುವನು. ॥೩೩॥

ಕಂಠಪ್ರದೇಶದಲ್ಲಿ ವಿಷವನ್ನೂ, ರತ್ನಾಭರಣವನ್ನೂ, ಶಿರಸ್ಸಿನಲ್ಲಿ ಬಾಲಚಂದ್ರ ನನ್ನೂ, ಗಂಗಾಪ್ರವಾಹವನ್ನೂ ಹೊಂದಿದವನಾಗಿ ಪ್ರಕಾಶಿಸುತ್ತಿರುವನು. ॥೩೪॥

ಎಡಭಾಗ ಮತ್ತು ಬಲಭಾಗಗಳಲ್ಲಿ ಕ್ರಮವಾಗಿ ಬ್ರಹ್ಮನೂ, ವಿಷ್ಣುವೂ ಸೇವಿಸುತ್ತಿರುವರು. ಯಮನ ಭಯನಿವಾರಣೆಗಾಗಿ ಮಾರ್ಕಂಡೇಯನು ಲಿಂಗವನ್ನು ಆಲಂಗಿಸಿಕೊಂಡಿರುವುದೂ, ಅಂತಹ ಭಕ್ತನನ್ನು ಸಂರಕ್ಷಿಸುವುದೂ, ಈ ಭಾವ ಗರ್ಭಿತವಾದ ಪರಶಿವನ ಚಿತ್ರವೊಂದು ಅಲ್ಲಿ ತೋರುತ್ತಿರುವುದು. ॥೩೫॥

ಗಂಗಾನದಿಯ ಅಲೆಗಳಿಂದ ಕೂಡಿರುವ ಜಟಾಜೂಟವೂ, ಚಂದ್ರಬಿಂಬವೂ ಪರಶಿವನ ಶಿರಸ್ಸಿನಲ್ಲಿ ವಿರಾಜಿಸುತ್ತಿರುವುವು. ಮಹಾವಿಷ್ಣುವಿನ ನೇತ್ರಕಮಲದಿಂದ ಪರಶಿವನ ಪಾದವು ಪೂಜಿಸಲ್ಪಟ್ಟಿರುವುದು. ॥೩೬॥

ಬ್ರಹ್ಮಮುಂಡಲಲದ್ಗಂಡಕರ್ಣಕುಂಡಲಶೋಭಿತೈಃ ।
ಏವಂ ರುದ್ರಾವತಾರೈಶ್ಚಾಪ್ಯಖಂಡಮಣಿಕಲ್ಪಿತೈಃ ॥೩೭॥

ಚಂದ್ರಸ್ಫಟಿಕಹಾರೈಶ್ಚ ಪುಷ್ಪಗೋಮೇದನೀಲಜೈಃ ।
ಶ್ರೀಮಹೇಶಮಹಾದಿವ್ಯವಿಗ್ರಹೈಃ ಪರಿತೋ ವೃತೈಃ ॥೩೮॥

ದೇವ್ಯಾ ಹರಿನ್ಮಣಿಭವೈಃ ಪದ್ಮರಾಗಭವೈಸ್ತಥಾ ।
ಇಂದ್ರವಿಷ್ಣುವಿಧಾತ್ರೂಣಾಂ ದಿಕ್ಪಾಲಾನಾಂ ಚ ಮೂರ್ತಯಃ ॥೩೯॥

ತತ್ತದ್ಭಾಗಮಣೀಕ್ಲ್ಯಪ್ತಾಃ ಕಲ್ಪಿತಾ ಮಣಿಗರ್ಭಜಾಃ ।
ಮಧುರಸ್ಮಿತನೇತ್ರಾಸ್ಯತತ್ತದಂಗೈಕಭಾಸುರಾಃ ॥೪೦॥

ಕೈಯ್ಯಲ್ಲಿ ಹಿಡಿದಿರುವ ಬ್ರಹ್ಮಕಪಾಲದ ಮೇಲೆ ಪರಶಿವನ ಕರ್ಣಕುಂಡಲಗಳ ಕಾಂತಿಯು ಬಿದ್ದು ಅದು ಪ್ರಕಾಶಮಾನವಾಗಿರುವುದು. ಇಂತಹ ರುದ್ರಾವತಾರದ ಒಂದೊಂದು ಚಿತ್ರವೂ, ಒಂದೊಂದು ಅಖಂಡರತ್ನದಿಂದಲೇ ನಿರ್ಮಿತವಾಗಿರುವಂತೆ ತೋರಿಬರುತ್ತಿದೆ. ||೩೭||

ಅಲ್ಲಿ ಕಂಡುಬರುವ ಸಮಸ್ತ ಈಶ್ವರವಿಗ್ರಹಗಳಿಗೂ ಚಂದ್ರನಂತೆ ಶುಭ್ರವಾಗಿರುವ ಸ್ಫಟಿಕದ ಹಾರಗಳೂ, ಪುಷ್ಯರಾಗ ಮತ್ತು ಗೋಮೇದಕ, ನೀಲ ಈ ರತ್ನಗಳ ಹಾರಗಳೂ ಹಾಕಲ್ಪಟ್ಟಿವೆ. ಇಂತಹ ಶಂಕರನ ವಿಗ್ರಹಗಳು ಸುತ್ತಲೂ ವಿರಾಜಿಸುತ್ತಿವೆ. ||೩೮||

ಹಾಗೆಯೇ ಇಂದ್ರನೀಲಮಣಿಯಿಂದಲೂ, ಪದ್ಮರಾಗಮಣಿಗಳಿಂದಲೂ ನಿರ್ಮಿತವಾದ ದೇವಿಯ ವಿಗ್ರಹಗಳೂ ಇರುವುವು. ಅಲ್ಲದೆ ಇಂದ್ರ, ವಿಷ್ಣು, ಬ್ರಹ್ಮ ಮುಂತಾದ ದೇವಶ್ರೇಷ್ಠರ ಮತ್ತು ದಿಕ್ಪಾಲಕರ ಮೂರ್ತಿಗಳೆಲ್ಲಾ ಅಲ್ಲಿ ತೋರಿಬರುತ್ತಿರುವುವು. ||೩೯||

ಆ ಮೂರ್ತಿಗಳ, ಅಂಗಪ್ರತ್ಯಂಗಗಳಿಗೆ ಯಾವ ಯಾವ ವರ್ಣಗಳು ಆವಶ್ಯಕವೋ, ಅದೇ ಬಣ್ಣದ ರತ್ನಗಳಿಂದಲೇ ಆ ಅಂಗಗಳನ್ನು ನಿರ್ಮಿಸಿರುವರು. ಮುಗುಳ್ನಗೆ, ಕಣ್ಣುಗಳು, ಮುಖಗಳು ಇನ್ನೂ ಪ್ರಕಾಶಮಾನವಾದ ಇತರ ಅವಯವಗಳು, ಅವುಗಳ ವರ್ಣಕ್ಕೆ ಸರಿಸಮನಾದ ರತ್ನಗಳನ್ನು ತಂದು ಅವುಗಳನ್ನು ನಿರ್ಮಾಣಮಾಡಿರುವರು. ||೪೦||

ಮಣಿಮುಕ್ತಾಪ್ರವಾಲಾದಿಭೂಷಣಾವಲಿಭಾಸುರಾಃ ।
ತತ್ತತ್ಕೋಣಗತಾತ್ಯಚ್ಛರಾಜದ್ವೃಷಭಭಾಸುರಾಃ ॥೪೧॥

ಸಹಸ್ರದಶಮಾನೇನ ಯೋಜನಾಯಾಮಕಲ್ಪಿತಾಃ ।
ತತ್ರತ್ಯಮೂರ್ತಯಸ್ಸರ್ವಾಃ ಪಂಚಯೋಜನಮಾನತಃ ॥೪೨॥

ಕಲ್ಪಿತಾಶ್ಶ್ರೀಮಹೇಶೇನ ಮನಸೈವ ಮನೋರಮಾಃ ।
ಹೀರಸಾರಘನೋತ್ತುಂಗಪಂಚಾಶದ್ಯೋಜನೋಚ್ಛ್ರಯಂ ॥೪೩॥

ವೃತ್ತಾಯಾಮಮಹಾಶ್ಲಕ್ಷ್ಣ ಕೋಟಿಭಾಸ್ಕರಭಾತತಂ ।
ಕದಲೀಪುಷ್ಪಸಂಕಾಶಸಮುಚ್ಛ್ರಾಯೋರುಮಂಡಲಂ ॥೪೪॥

ಆ ವಿಗ್ರಹಗಳಿಗೆಲ್ಲಾ ರತ್ನ, ಹವಳ, ಮುತ್ತು ಮುಂತಾದುವುಗಳಿಂದ ಕಲ್ಪಿತವಾದ ಒಡವೆಗಳ ರಾಶಿಯನ್ನು ಹಾಕಿರುವರು. ಇನ್ನು ಆ ದೇವಾಲಯದ ಎಂಟು ದಿಕ್ಕುಗಳಲ್ಲಿಯೂ ವೃಷಭನ ವಿಗ್ರಹಗಳನ್ನು ಅಮೂಲ್ಯವಾದ ರತ್ನಗಳಿಂದ ಕೆತ್ತಿರುವರು. ॥೪೧॥

ಆ ವೃಷಭವಿಗ್ರಹಗಳು ಹತ್ತುಸಾವಿರ ಯೋಜನ ಪ್ರಮಾಣದಷ್ಟು ಪ್ರದೇಶದಲ್ಲಿ ಕಲ್ಪಿತವಾಗಿರುವುವು. ಉಳಿದ ಎಲ್ಲಾ ಮೂರ್ತಿಗಳೂ ಐದುಸಾವಿರ ಯೋಜನದಷ್ಟು ವಿಸ್ತಾರದಲ್ಲಿ ನಿರ್ಮಿತವಾಗಿವೆ. ॥೪೨॥

ಮಹೇಶ್ವರನೇ, ಅಷ್ಟು ವಿಸ್ತಾರವಾದ ಪ್ರದೇಶದಲ್ಲಿ ಈ ಮೂರ್ತಿಗಳನ್ನೆಲ್ಲಾ ಮನಸ್ಸಿನಿಂದಲೇ ಕಲ್ಪಿಸಿರುವನು. ಮತ್ತು ಅದೇರೀತಿ ಮಹೇಶ್ವರನು ಮಾನಸಸೃಷ್ಟಿಯಿಂದ ಗರ್ಭಗೃಹವನ್ನು ನಿರ್ಮಿಸಿರುವನು. ಅದು ಹೀರರತ್ನಗಳಿಂದ ಕೂಡಿದ್ದಾಗಿ ಐವತ್ತು ಯೋಜನದ ಔನ್ನತ್ಯದಲ್ಲಿರುವುದು. ॥೪೩॥

ಆ ಗರ್ಭಗೃಹವು ವರ್ತುಲಾಕಾರವಾಗಿರುವುದು. ಅದರ ಒಳಭಾಗವೆಲ್ಲಾ ಅತಿ ಮೃದುವಾಗಿ ಕೋಟಿಸೂರ್ಯರಂತೆ ಹೊಳೆಯುವ ಮಹಾರತ್ನಗಳಿಂದ ತೇಜಶ್ಶಾಲಿಯಾಗಿರುವುದು. ದೂರನೋಟಕ್ಕೆ ಬಾಳೆಮೋತೆಯಂತೆ ಎತ್ತರವಾಗಿಯೂ ಮಂಡಲಾಕಾರದಲ್ಲಿಯೂ ಕಂಡುಬರುವುದು. ॥೪೪॥

ಜ್ವಲದಿಂದುಮಹಾವೃತ್ತಬ್ರಹ್ಮಾಂಡೋದರದಾರಣಂ ।
ಗರ್ಭಗೇಹಂ ತತ್ರ ಶಂಭೋರ್ವೇದವೇದಾಂತಸಂಸ್ತುತಂ ॥೪೫॥

ಕೈಲಾಸಸಾರಸುಭಗಮಣಿವೇದಿವಿರಾಜಿತಂ ।
ತತ್ರೈವಾಂತರ್ಮಹಾಪೀಠೇ ಕೋಟಿದ್ಯುಮಣಿಸನ್ನಿಭೇ ॥೪೬॥

ಪ್ರಭಾಭಾಸಿಜಗಜ್ಜಾಲಂ ಚಂದ್ರಾಚ್ಛಸ್ಫಟಿಕೋಜ್ಜ್ವಲಂ ।
ಆಯಾಮವೃತ್ತಗೋಮುಖ್ಯಹರಿಬ್ರಹ್ಮೇರುಪೀಠಕಂ ॥೪೭॥

ಮಹಾಲಿಂಗಂ ಮಹಾಕಾರಮಖಂಡಸ್ಫಟಿಕೋಜ್ಜ್ವಲಂ ।
ತಲ್ಲಿಂಗಸಾರಧಾರಾಭಿಃ ಕೈಲಾಸೋಽಪ್ಯತಿಪಾಂಡರಃ ॥೪೮॥

ಭಾವಿಭಾಸಿತದಿಕ್ಚಕ್ರಂ ಸೌಧಗೋಪುರಮಂಡಿತಂ ।
ಅನರ್ಘ್ಯವರಸಂವೇಷ್ಟವೇಷ್ಟಿತಂ ಗಂಧಸುಂದರಂ ॥೪೯॥

ಅದು ಚಂದ್ರನಂತೆ ಜನಮನಾಹ್ಲಾದಕರವಾಗಿರುವುದು. ಇದರ ತುದಿಯು ಬ್ರಹ್ಮಾಂಡವನ್ನು ಮುಟ್ಟುತ್ತಿರುವಂತೆ ತೋರುತ್ತಿರುವುದು. ಇಂತಹ ಶಂಕರನ ಗರ್ಭಗೃಹವು ವೇದವೇದಾಂತ ಸಂಸ್ತುತವಾಗಿರುವುದು. ॥೪೫॥

ಕೈಲಾಸಪರ್ವತದಲ್ಲಿ ದೊರಕುವ ದಿವ್ಯರತ್ನಗಳಿಂದ ಅನೇಕ ಜಗಲಿಗಳು ಅಲ್ಲಿ ನಿರ್ಮಿತವಾಗಿವೆ. ಆ ಒಂದು ವೇದಿಕೆಯ ಮೇಲೆ ಕೋಟಿಸೂರ್ಯಸದೃಶವಾದ ಎತ್ತರವಾದ ಪೀಠವೊಂದಿರುವುದು. ॥೪೬॥

ಆ ಪೀಠದಮೇಲೆ ಅತಿಶಯವಾದ ಕಾಂತಿಯಿಂದ ಜಗತ್ತನ್ನೆಲ್ಲಾ ಬೆಳಗಿಸುವಂತಹ, ಸ್ಫಟಿಕಶಿಲಾ ನಿರ್ಮಿತವಾದ ದಿವ್ಯಲಿಂಗವಿರುವುದು. ಆ ಲಿಂಗದ ಸುತ್ತಲೂ ಉದ್ದವಾದ ಮತ್ತು ದುಂಡಾದ ವೃಷಭ, ವಿಷ್ಣು, ಬ್ರಹ್ಮ ಮುಂತಾದ ದೇವತಾಶ್ರೇಷ್ಠರ ಪೀಠಗಳಿವೆ. ॥೪೭॥

ಆ ಮಹಾಲಿಂಗವು ಅಖಂಡವಾದ ಸ್ಫಟಿಕಶಿಲಾನಿರ್ಮಿತವಾದದ್ದಾಗಿದೆ. ಅದರ ಕಾಂತಿಧಾರೆಯಿಂದ ಕೈಲಾಸಪರ್ವತವೇ ಅತ್ಯಂತ ಶುಭ್ರವಾದದ್ದಾಗಿ ಕಂಡುಬರುತ್ತಿರುವುದು. ॥೪೮॥

ಅದರ ಕಾಂತಿಯು ಸಕಲ ದಿಕ್ಕುಗಳನ್ನೂ ಬೆಳಗಿಸಿದೆ. ಆ ಮಹಾಲಿಂಗವು ಸೌಧದಿಂದಲೂ, ಗೋಪುರದಿಂದಲೂ ಅಲಂಕೃತವಾಗಿ ದಿವ್ಯವಾದ ವಸ್ತುಸಮೂಹದಿಂದ, ಸುತ್ತುವರಿಯಲ್ಪಟ್ಟಿರುವುದು. ಗಂಧದಿಂದ ಸುಂದರವಾಗಿರುವುದು. ॥೪೯॥

ರತ್ನಕಲ್ಹಾರಕಮಲಮಾಲಾಜಾಲೈರ್ವಿರಾಜಿತಂ ।
ಸಹಸ್ರನೀಲಮಣಿಜನೀಲೋತ್ಪಲಸರಾಂಚಿತಂ ॥೫೦॥

ಅಖಂಡಹರಿತೋದ್ದಾಮಮಣಿಬಿಲ್ವೋತ್ತಮಾಂಗಕಂ ।
ಉತ್ಫುಲ್ಲಸೂತ್ರವೈಡೂರ್ಯಚಂಪಕಾಚ್ಛಸರೈರ್ಯುತಂ ॥೫೧॥

ಪುಷ್ಪರಾಗಮಣೀಕ್ಲೃಪ್ತಂ ಸುಪಾಟಲಸರಾವೃತಂ ।
ನಿಷ್ಟಪ್ತಹೇಮಜಾತ್ಯಚ್ಛಕರ್ಣಿಕಾರಸರಾವೃತಂ ॥೫೨॥

ಹೀರಸಾರಮಹಾಧಾರಾಮಲ್ಲಿಕಾಚ್ಛಸರಾವೃತಂ ।
ಗೋಮೇದಕಮಣೀಕ್ಲೃಪ್ತಕರಂಡಕಸಹಾವೃತಂ ॥೫೩॥

ಮಂದಾರಕುಂದಬಂಧೂಕಬಕದ್ರೋಣಾರ್ಕರತ್ನಜೈಃ ।
ಸರಕೀಲಿತಸನ್ಮೌಲಿಸ್ಫಟಿಕೋಪಲಕಲ್ಪಿತೈಃ ॥೫೪॥

ರತ್ನನಿರ್ಮಿತವಾದ ಕಲ್ಹಾರ, ಕಮಲ ಇವುಗಳ ಮಾಲೆಗಳಿಂದ ಶಿವಲಿಂಗವು ಅಲಂಕೃತವಾಗಿದೆ. ಮತ್ತು ಸಹಸ್ರಸಂಖ್ಯೆಯ ನೀಲಮಣಿಗಳಿಂದ ಕೂಡಿ ನೀಲೋತ್ಪಲಸರಗಳಿಂದ ರಂಜಿತವಾಗಿರುವುದು. ॥೫೦॥

ಆ ಲಿಂಗದ ಶಿರೋಭಾಗದಲ್ಲಿ ಅಖಂಡವಾದ ಪಚ್ಚೆಯಿಂದ ನಿರ್ಮಿತವಾದ ಬಿಲ್ವದಳವಿರುವುದು. ಮತ್ತು ಅರಳಿದ ಸಂಪಿಗೆಹೂವುಗಳನ್ನು ವೈಡೂರ್ಯದಿಂದ ನಿರ್ಮಾಣಮಾಡಿ, ಅದನ್ನೇ ಸರವನ್ನಾಗಿ ಮಾಡಿ ಆ ಲಿಂಗಕ್ಕೆ ಧರಿಸಲ್ಪಟ್ಟಿದೆ. ॥೫೧॥

ಪುಷ್ಪರಾಗಮಣಿಗಳಿಂದ ಪಾದರೀ ಹೂವುಗಳನ್ನು ನಿರ್ಮಿಸಿ, ಅದರಿಂದ ಮಾಡಿದ ಸರವನ್ನು ಲಿಂಗಕ್ಕೆ ಸಮರ್ಪಣೆ ಮಾಡಿದೆ. ಶುದ್ಧವಾದ ಸುವರ್ಣದಿಂದ ನಿರ್ಮಿತವಾದ ಕರ್ಣಿಕಾರ ಪುಷ್ಪಗಳ ಸರವನ್ನೂ ಲಿಂಗದ ಮಧ್ಯಭಾಗದಲ್ಲಿ ಕಾಣಬಹುದಾಗಿದೆ. ॥೫೨॥

ಹೀರಮಣಿಗಳನ್ನೂ ಮಲ್ಲಿಕಾಪುಷ್ಪಗಳಂತೆ ಸರಮಾಡಿ ಅರ್ಪಣೆ ಮಾಡಲಾಗಿದೆ. ಗೋಮೇದಕಮಣಿಗಳಿಂದ ಪುಷ್ಪಕರಂಡಗಳನ್ನು ಮಾಡಿ ಮಾಲಾಕಾರವಾಗಿ ಅದನ್ನು ಅಲ್ಲಿಟ್ಟಿರುವರು. ॥೫೩॥

ಶ್ರೇಷ್ಠವಾದ ರತ್ನಗಳಿಂದಲೂ, ಉತ್ತಮವಾದ ಸ್ಫಟಿಕಶಿಲೆಗಳಿಂದಲೂ, ಮಂದಾರ, ಕೋಲುಮಲ್ಲಿಗೆ, ದಾಸವಾಳ, ಬಕ, ತುಂಬೆ, ಅರ್ಕಪುಷ್ಪ ಈ ಹೂವುಗಳ

ಮಣಿಪ್ರಭಾತತಾತ್ಯಚ್ಛಶೋಭಿತೋತ್ತುಂಗಮೌಕ್ತಿಕಂ ।
ಸಹಸ್ರಾಸ್ಯಮಹಾಶೇಷಫಣಾಮಣಿವಿರಾಜಿತಂ ॥೫೫॥

ಪದ್ಮರಾಗಮಹಾರಾಗತ್ರಿಪುಂಡ್ರತಿಲಕೋಜ್ಜ್ವಲಂ ।
ತತ್ಕಾಂತಿಕಾಂಚಿತಾ ಲೋಕಾಸ್ತದ್ಧಾರಾರಾರಸಾಗರಾಃ ॥೫೬॥

ತತ್ಕೈಲಾಸಮಹಾಸಾರಸಿಂಡಶೇಖರಪೂಜಿತಂ ।
ಕೈಲಾಸೇಶಾಖ್ಯಮಮಲಂ ಲಿಂಗಂ ಮಂಗಲದಾಯಕಂ

ಮಂಗಲಾಪತಿದೃಕ್ಪಾತಧಾರಾಸಾರವಿಜೃಂಭಿತಂ ।
ತಲ್ಲಿಂಗಮಹಿಮಾ ವೇದ್ಯೈರಪಾರಶಿಖರಾಶ್ರಯೈಃ ॥೫೮॥

ಆಕಾರವನ್ನು ಕಲ್ಪಿಸಿ, ಕೈಲಾಸಲಿಂಗದ ಮೇಲ್ಭಾಗದಲ್ಲಿ ಮಾಲೆಯನ್ನಾಗಿ ಮಾಡಿ ಹಾಕಿರುವರು. ||೫೪||

ಶಿವಲಿಂಗದ ಮೌಳಿಭಾಗವು ಮಣಿಪ್ರಭಾವಿಶೇಷದಿಂದ ಅತಿಶಯವಾಗಿ ಶೋಭಿಸುತ್ತಿರುವುದು. ಅದರಮೇಲೆ ಸಾವಿರ ಹೆಡೆಗಳಿಂದ ಕೂಡಿರುವ ಆದಿಶೇಷನು ತನ್ನ ಫಣಾರತ್ನಗಳಿಂದ ಲಿಂಗವನ್ನು ಪ್ರಕಾಶಗೊಳಿಸುತ್ತಿರುವನು. ||೫೫||

ಪದ್ಮರಾಗಗಳ ಅತಿಶಯವಾದ ಕಾಂತಿಯಿಂದ ತ್ರಿಪುಂಡ್ರವನ್ನೂ ತಿಲಕವನ್ನೂ ರಚಿಸಿರುವರು. ಆ ಕಾಂತಿಯಿಂದಲೇ ಲೋಕವೆಲ್ಲಾ ಅಲಂಕೃತವಾಗಿರುವುದು. ಅದರ ಕಾಂತಿಯೇ ಸಮುದ್ರರೂಪದಿಂದ ತೋರಿಬರುತ್ತಿರುವುದು. ||೫೬||

ಆ ಕೈಲಾಸಶಿಖರದ ಅಗ್ರಭಾಗದಲ್ಲಿರುವ ಈ ಕೈಲಾಸೇಶ್ವರ·ಲಿಂಗವು ಅತ್ಯಂತ ಪವಿತ್ರವಾದದ್ದು ಮತ್ತು ಮಂಗಳಪ್ರದವಾದದ್ದು. ||೫೭||

ಆ ಲಿಂಗವು ಪಾರ್ವತೀಪತಿಯಾದ ಪರಶಿವನ ಕಟಾಕ್ಷಧಾರೆಯಿಂದ ಅತ್ಯಂತವಾಗಿ ಶೋಭಿಸುತ್ತಿರುವುದು. ಅಲ್ಲದೆ ಅದೇ ಕೈಲಾಸಶಿಖರವನ್ನು ಆಶ್ರಯಿಸಿರುವ ಮಹಾಮಹಿಮರಾದ ಬ್ರಹ್ಮಾದಿ ದೇವತೆಗಳೂ ಸಹ ಸರಿಯಾಗಿ ಅದರ ಮಹಿಮೆಯನ್ನು ಅರಿಯಲಾರರು. ||೫೮||

ಬ್ರಹ್ಮವಿಷ್ಣ್ವಾದಿಭಿರ್ದೇವೈ ರುದ್ರೈರ್ವಾ ಮುನಿಭಿಸ್ತಥಾ ।
ನ ಶಕ್ಯೋ ಜ್ಞಾತುಮೀಶದ್ವಾ ಮೂಕಾ ವೇದೋಕ್ತಯೋ ಯಥಾ ॥೪೯॥

ಕೈಲಾಸಶೈಲಮಣಿಧಾಮನಿ ದಿವ್ಯಲಿಂಗಂ
ಕೈಲಾಸನಾಮಕಮಹೋ ತ್ರಿಜಗದ್ವಿಚಿತ್ರಂ ।
ತಲ್ಲಿಂಗಮೌಲಿಶಕಲೇಂದುಕಲಾಸುಭಾಭಿ
ರಾಪ್ಲಾವಿತೋರು ಶಿಖರೋತ್ರ ವಿಭಾತಿ ಶೈಲಃ ॥೫೦॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸಲಿಂಗವರ್ಣನಂ ನಾಮ
ಪಂಚತ್ರಿಂಶೋಽಧ್ಯಾಯಃ

ಬ್ರಹ್ಮಾದಿ ದೇವತೆಗಳಿಗೇ ಆಗಲಿ, ರುದ್ರಭೇದವಾದ ರುದ್ರಾಂಶಸ್ವರೂಪರಿಗೇ ಆಗಲಿ, ಮಹಾ ಮುನಿಗಳಿಗೇ ಆಗಲಿ, ಆ ಕೈಲಾಸಲಿಂಗದ ಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲ. ಮೂಕರಾದವರು ವೇದಾರ್ಥವನ್ನು ಹೇಗೆ ಪ್ರತಿಪಾದಿಸಲಾರರೋ, ಹಾಗೆಯೇ ಯಾರಿಂದಲೂ ಆ ಲಿಂಗಮಹಿಮೆಯು ಸುಲಭವಾಗಿ ಪ್ರತಿಪಾದಿಸಲ್ಪಡಲಾಗುವುದಿಲ್ಲ. ॥೪೯॥

ಈ ಲಿಂಗವು ಕೈಲಾಸಪರ್ವತದ ರತ್ನಮಯವಾದ ದೇವಾಲಯದಲ್ಲಿ ಪ್ರಕಾಶಿತವಾಗಿರುವುದು. ಈ ಲಿಂಗಕ್ಕೆ ಕೈಲಾಸೇಶ್ವರಲಿಂಗವೆಂದೇ ಹೆಸರಿರುವುದು. ಸೊಬಗಿನಿಂದ, ಮೂರುಲೋಕಗಳಿಗೂ ಆಶ್ಚರ್ಯವನ್ನುಂಟುಮಾಡತಕ್ಕದ್ದಾಗಿರುವುದು. ಈ ಲಿಂಗದ ಶಿರೋಭಾಗದಲ್ಲಿರುವ ಚಂದ್ರಕಲೆಯಿಂದ ಹೊರಟ ತೇಜಸ್ಸು ಕೈಲಾಸಪರ್ವತದ ಶಿಖರಭಾಗವನ್ನೆಲ್ಲಾ ಬೆಳಗಿಸುತ್ತಿರುವುದು. ಕೈಲಾಸೇಶ್ವರನ ಮಹಿಮೆ, ತೇಜಸ್ಸು, ವೈಚಿತ್ರ್ಯ ಈ ಗುಣಗಳಿಂದ ಸಂಪೂರ್ಣವಾದ ಆ ಕೈಲಾಸಪರ್ವತವು ತ್ರಾಂತಿ ಮುಳುಗಿಹೋಗಿರುವುದೋ ಎಂಬಂತೆ ತೋರಿಬರುತ್ತಿರುವುದು, ಎಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ಹೇಳಿದರು. ॥೫೦॥

ಇಲ್ಲಿಗೆ ಶಿವರಹಸ್ಯದ ಪ್ರಥಮಾಂಶದಲ್ಲಿ ಕೈಲಾಸಲಿಂಗವರ್ಣನೆಯೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಷಟ್‌ತ್ರಿಂಶೋಽಧ್ಯಾಯಃ

### ಕೈಲಾಸೇಶ್ವರಪೂಜಾವಿಧಾನಕಥನಂ

|| ಸ್ಕಂದ ಉವಾಚ ||

ತಲ್ಲಿಂಗಜಾತಾಸ್ಸರ್ವೇಽಪಿ ಭುವನಾನಿ ಚತುರ್ದಶ ।
ತಲ್ಲಿಂಗಜಾತಾ ದೇವಾದ್ಯಾ ಬ್ರಹ್ಮವಿಷ್ಣುಹರಾದಯಃ ॥೧॥

ತಲ್ಲಿಂಗೇಸಂಸ್ಥಿತಾ ಲೋಕಾಸ್ಸಪ್ತದ್ವೀಪವನಾಕರಾಃ ।
ಪ್ರಲಯೇಽಪಿ ಲಯಂ ಯಾಂತಿ ಸರ್ವೇ ಲೋಕಾಸ್ಸುರೈಸ್ಸಹ ॥೨॥

ಲಯನಾಲ್ಲಿಂಗಮಿತ್ಯುಕ್ತಂ ಲೀನಂ ಯಸ್ಮಿನ್‌ಜಗದ್ಧೃತಂ ।
ತಸ್ಮಾಲ್ಲಿಂಗಂ ಮುನೇ ಪ್ರೋಕ್ತಂ ತತ್ಕೈಲಾಸೇಶ್ವರಸಂಜ್ಞಿತಂ ॥೩॥

---

## ಶ್ರೀಶಿವರಹಸ್ಯದಲ್ಲಿ ಮೂವತ್ತಾರನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಮುಂದಿನ ಕಥೆಯನ್ನು ವಿವರಿಸುತ್ತಾ--"ಆ ಕೈಲಾಸಲಿಂಗದಿಂದಲೇ ಎಲ್ಲವೂ ಹುಟ್ಟಿರುವುದು. ಸಕಲ ಲೋಕಗಳೂ, ಬ್ರಹ್ಮ ವಿಷ್ಣು ರುದ್ರರೇ ಮೊದಲಾದ ತ್ರಿಮೂರ್ತಿಗಳೂ, ಸಮಸ್ತ ದೇವತೆಗಳೂ ಆ ಲಿಂಗದಿಂದ ಉತ್ಪತ್ತಿಯಾದವುಗಳೇ" ಎಂದು ಪ್ರಾರಂಭಿಸಿ ಕೈಲಾಸೇಶ್ವರ ಪೂಜಾವಿಧಾನವನ್ನು ಹೇಳಲಾರಂಭಿಸಿದನು. ||೧||

ಸಕಲಲೋಕಗಳೂ, ಸಪ್ತದ್ವೀಪಗಳೂ, ಅನೇಕ ವನಗಳೂ, ಸರೋವರಾದಿಗಳೂ, ಅಸಂಖ್ಯಾತವಾದ ಪ್ರಾಣಿವರ್ಗಗಳೂ, ದೇವತೆಗಳೂ ಪ್ರಳಯಕಾಲದಲ್ಲಿ ಆ ಲಿಂಗದಲ್ಲಿ ಐಕ್ಯವನ್ನು ಪಡೆಯುವುವು. ||೨||

ಈ ಜಗತ್ತೆಲ್ಲವೂ ಅಂತ್ಯಕಾಲದಲ್ಲಿ ಈ ಲಿಂಗದಲ್ಲಿ ಲಯವಾಗುವುದರಿಂದಲೇ ಇದು ಲಿಂಗವೆನಿಸಿಕೊಂಡಿರುವುದು. ಆದ್ದರಿಂದ ಎಲೈ ಜೈಗೀಷವ್ಯಾದಿ ಮಹರ್ಷಿಗಳೇ, ಸಕಲಲೋಕಗಳೂ ಪ್ರಲಯಕಾಲದಲ್ಲಿ ಆ ಲಿಂಗದಲ್ಲಿ ಅಡಗಿಹೋಗುವುವು. ||೩||

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಭೂಮೌ ತಚ್ಚ ಮಹಾಲಿಂಗಂ ಪ್ರತಿಷ್ಠಾಪ್ಯರ್ಚ್ಯಮೇವ ತು ॥೪॥

ಏಕಂ ಬ್ರಹ್ಮೈವ ತಲ್ಲಿಂಗಮಲಿಂಗಮಪಿ ಭೂಸುರಾಃ ।
ತದೇವ ಜ್ಯೋತಿಷಾಂ ಜ್ಯೋತಿಸ್ತದ್ವೈ ಚೇತನಚೇತನಂ ॥೫॥

ತಲ್ಲಿಂಗಂ ಸತ್ಯಮಾನಂದಮಖಂಡೈಕರಸಂ ಸದಾ ।
ತಲ್ಲಿಂಗದರ್ಶನೇ ವಾಪಿ ನ ವಾಗ್ಗಚ್ಛತಿ ನೋ ಮನಃ ॥೬॥

ನೇತಿ ನೇತಿ ಚ ವೇದಾಂತೈಸ್ತಲ್ಲಿಂಗಂ ಪ್ರತಿಪಾದ್ಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇಹ ನಾನಾಸ್ತಿ ಕಿಂಚನ ॥೭॥

ಪರಶಿವನ ಲಿಂಗದ ಸ್ವರೂಪವನ್ನು ವರ್ಣಿಸಲು ಸುಲಭವಲ್ಲ. ಅದರಲ್ಲಿ ಜಾತಿ ಕ್ರಿಯಾಗುಣಾದಿಗಳು ಇರುವುದಿಲ್ಲವಾದ್ದರಿಂದ ; ವರ್ಣಿಸುವವರ ಮನಸ್ಸು, ಮಾತು, ಆ ಕಾರ್ಯದಲ್ಲಿ ಯಶಸ್ವಿಯಾಗಲಾರದು. ಅಂತೂ ಈ ಮಹಾಲಿಂಗವು ಜಗತ್ಕರ್ತೃವೆನಿಸಿ, ಜಗತ್ತಿಗೆ ಮೂಲಕಾರಣವೆನಿಸಿರುವುದು. ||೪||

ಎಲೈ ಶಿವಪೂಜಕರೇ, ಪರಬ್ರಹ್ಮಸ್ವರೂಪವೂ ಸಜಾತೀಯಾದಿಭೇದರಹಿತವೂ ಆದ ಈ ಲಿಂಗವು ರೂಪಗುಣಾದಿಗಳಿಂದ ರಹಿತವಾಗಿದ್ದರೂ, ಲೋಕದಲ್ಲಿ ತೇಜಸ್ಸೆಂದು ಹೇಳಲ್ಪಡುವ ವಸ್ತುಗಳಿಗೆಲ್ಲಾ ತೇಜಸ್ಸನ್ನು ಕೊಡತಕ್ಕದ್ದು. ಅದೇ ಚೇತನಕ್ಕೆ ಚೈತನ್ಯವನ್ನು ಒದಗಿಸತಕ್ಕದ್ದು. ||೫||

ಆ ಲಿಂಗವೇ ಸತ್ಯಸ್ವರೂಪ, ಆನಂದಮಯ, ಅಖಂಡಸುಖಸಂಪತ್ತು. ಆ ಲಿಂಗದ ದರ್ಶನದಿಂದ, ಮಾತಾಗಲಿ, ಮನಸ್ಸಾಗಲಿ, ಪುನಃ ವ್ಯವಹಾರಮಾರ್ಗಕ್ಕೆ ಕಾಲಿಡುವುದಿಲ್ಲ. ||೬||

ಅದೇ ಲಿಂಗವನ್ನು ವೇದಾಂತಿಗಳು ನಿರ್ಗುಣವಸ್ತುವೆಂದು ಪ್ರತಿಪಾದಿಸುವರು. ಎಲೈ ಜೈಗೀಷವ್ಯಮುನಿಯೇ, ಅದೇ ಲಿಂಗವನ್ನು ನೀನು ಬ್ರಹ್ಮವೆಂದು ತಿಳಿ. ಏತದ್ಭಿನ್ನವಾದ ವಸ್ತುವು ಲೋಕದಲ್ಲಿ ಮತ್ತಾವುದೂ ಕಾಣಲಾರದು. ||೭||

ಋತಂ ಸತ್ಯಂ ಪರಂ ಬ್ರಹ್ಮ ತದಾತ್ಮಾ ಮನಸೋಽತಿಗಂ ।
ನಿರಿಂದ್ರಿಯಂ ನಿಷ್ಕಲಂಕಮಸಂಗಮಜರಂ ಹಿ ತತ್ ॥೮॥

ಪ್ರಭುಂ ಸಮಸ್ತಭೂತೋತ್ಥಸರ್ವಧರ್ಮವಿವರ್ಜಿತಂ ।
ಆಕಾಶಂ ತದನಾಕಾಶಂ ಸಾಕಾರಂ ಚ ನಿರಾಕೃತಿ ॥೯॥

ಕಾರಣಂ ಕಾರಣಾನಾಂ ಚ ಬ್ರಹ್ಮ ತಲ್ಲಿಂಗಮೇವ ಹಿ ।
ನಾಮರೂಪಾತಿಗಂ ಶಾಂತಂ ಗುಣಾತೀತಂ ಗುಣಾಸ್ಪದಂ ॥೧೦॥

ಅಪಾಣಿಪಾದಮತ್ಯಚ್ಛಮಾನಂದಘನಮದ್ವಯಂ ।
ಶಿವಸ್ಯ ನಿರ್ಗುಣಂ ರೂಪಮದೃಶ್ಯಮಕೃತಾತ್ಮಭಿಃ ॥೧೧॥

ತದೇವ ವ್ಯಾಪಕಂ ಭಾತಿ ತಲ್ಲಿಂಗಂ ತಮಸಃ ಪರಂ ।
ತನ್ನ ವೇದ್ಯೈಶ್ಚ ವೇದಾಂತೈರ್ಗುರುಭಿಶ್ಶ್ರುತಿಭಿಸ್ತದಾ ॥೧೨॥

---

ನಿಜಸ್ವರೂಪವಾಗಿ, ಸತ್ಯಸ್ವರೂಪವಾಗಿರುವ ಪರಬ್ರಹ್ಮವಸ್ತುವೆಂದರೆ ಅದೇ ಲಿಂಗವೇ. ಅದಕ್ಕೆ ಇಂದ್ರಿಯಾದಿಗಳಿಲ್ಲ. ಯಾವ ವಸ್ತುಸಂಸರ್ಗವೂ ಅಲ್ಲಿ ತೋರುವುದಿಲ್ಲ. ಜರಾದಿಗಳಿಲ್ಲ. ಆದ್ಯಂತವಿಲ್ಲ. ॥೮॥

ಸಕಲ ಲೋಕಕ್ಕೂ ಈ ಲಿಂಗವೇ ಪ್ರಭುವು. ಪಂಚಭೂತಗಳಲ್ಲಿ ಕಂಡುಬರುವ ಯಾವ ಧರ್ಮಗಳೂ ಈ ಲಿಂಗದಲ್ಲಿ ತೋರಿಬರಲಾರದು. ಆಕಾಶದಂತೆ ವಿಭುವಾಗಿರುವುದು, ಆದರೆ ಆಕಾಶವಲ್ಲ. ಭಕ್ತಿಮಾರ್ಗಗಾಮಿಗಳಿಗೆ ಆಕಾರವುಳ್ಳದ್ದಾಗಿ ಕಾಣುವುದು. ವಸ್ತುತಃ ಅದು ಆಕಾರರಹಿತವಾದದ್ದು. ॥೯॥

ಸಮಸ್ತ ಲೋಕಕ್ಕೂ ಈ ಲಿಂಗವೇ ಕಾರಣ. ಅದನ್ನೇ ಬ್ರಹ್ಮನೆಂದು ಕರೆಯುವರು. ಅದಕ್ಕೆ ನಾಮವಾಗಲಿ, ರೂಪವಾಗಲಿ ಇಲ್ಲ. ಶಾಂತವಾಗಿ ಯಾವ ಗುಣಗಳೂ ಇಲ್ಲದೆ ನಿರ್ಗುಣವಾಗಿ ಕಾಣುವ ವಸ್ತುವೆಂದರೆ ಇದೇ. ॥೧೦॥

ಇದಕ್ಕೆ ಕೈಕಾಲುಗಳಿಲ್ಲ. ಶುಭ್ರವಾದದ್ದು. ಆನಂದರೂಪಿಯಾಗಿ, ಏಕವಸ್ತುವೆನಿಸಿಕೊಂಡಿರತಕ್ಕದ್ದು. ಶಂಕರನ ನಿರ್ಗುಣವಾದ ಆಕಾರವು ಪಾಪಿಷ್ಠರಿಗೆ ಎಂದೂ ಗೋಚರಿಸಲಾರದು. ॥೧೧॥

ಅದು ಸರ್ವವ್ಯಾಪಕವಾಗಿ, ಮಾಯಾಸಂಬಂಧವಿಲ್ಲದೆ ಇರುವುದು. ವೇದಗಳಿಂದಲೂ, ಉಪನಿಷತ್ತುಗಳಿಂದಲೂ, ಸದ್ಗುರುಗಳ ಉಪದೇಶಬಲದಿಂದಲೂ ಸಹ ತಿಳಿಯಲಾಗದ ವಸ್ತುವಾಗಿರುವುದು. ॥೧೨॥

ನ ಪ್ರಾಪ್ಯಂ ಸರ್ವದಾ ಸರ್ವೈರ್ದ್ರಷ್ಟುಂ ತಚ್ಚಾಪ್ಯಥಾಶ್ರಿತುಂ ।
ತದೇವ ದೇವದೇವಸ್ಯ ನಿರ್ಗುಣಂ ರೂಪಮುದ್ಭೃತಂ ॥೧೩॥

ನಿರ್ಗುಣಂ ಚಾಪಿ ಲೋಕಾನಾಂ ದೃಷ್ಟಿಗೋಚರವತ್ ಸ್ಥಿತಂ ।
ತಲ್ಲಿಂಗಂ ಸರ್ವದಾ ಶಂಭುರ್ದೇವ್ಯಾ ಪೂಜಯತಿ ಸ್ವಯಂ ॥೧೪॥

ಬಾಹ್ಯೈರಾಭ್ಯಂತರೈಶ್ಚಾಪಿ ಪೂಜಾಭಿಃ ಪರಮೇಶ್ವರಃ ।
ತ್ರಿನೇತ್ರೋ ನೀಲಕಂಠಶ್ಚ ಚಂದ್ರಾರ್ಧಕೃತಶೇಖರಃ ॥೧೫॥

ಅಹಂ ಭಾವಾದಿರಹಿತೋ ಭಾವಾಭಾವವಿವರ್ಜಿತಃ ।
ಅಹಂ ಬ್ರಹ್ಮೈವೇದಮಿತಿ ಯಂ ವದಂತಿ ನರಾಸುರಾಃ ॥೧೬॥

ಧ್ಯಾನಧ್ಯೇಯಾತಿಗೋ ಭೂತ್ವಾ ಸ್ಥಿತಸ್ಸಮಾಹಿಮಾತಿಗಃ ।
ಏವಂ ಸಂಭಾವಯನ್ ದೇವ್ಯಾ ಶಿವ ಏವ ಹಿ ಕೇವಲಃ ॥೧೭॥

ಎಲ್ಲರಿಗೂ ಅದು ಸುಲಭಸಾಧ್ಯವಲ್ಲ. ಅದನ್ನು ಆಶ್ರಯಿಸುವುದಕ್ಕೂ ಮತ್ತೊಬ್ಬರಿಂದ ಸಾಧ್ಯವಿಲ್ಲ. ಏಕೆಂದರೆ ಆ ಲಿಂಗವೇ ದೇವದೇವನ ಉದ್ಭೃತವಾದ ನಿರ್ಗುಣರೂಪವು. ॥೧೩॥

ನಿರ್ಗುಣವಾದ ಆ ಲಿಂಗವೇ ಲೋಕಾತ್ಮನಾ ಪರಿಣತವಾಗಿ ಸರ್ವರಿಗೂ ದೃಷ್ಟಿಗೋಚರವಾಗಿದೆ. ಅಂತಹ ಲಿಂಗವನ್ನು ಪರಮೇಶ್ವರನು ದೇವಿಯೊಡಗೂಡಿ ತಾನೇ ಪೂಜಿಸುತ್ತಿರುವನು. ॥೧೪॥

ಮುಕ್ಕಣ್ಣನೂ, ನೀಲಕಂಠನೂ, ಚಂದ್ರಶೇಖರನೂ ಆದ ಶಂಕರನು ಬಾಹ್ಯಾಭ್ಯಂತರಿಕವಾದ ಪೂಜಾವಿಧಾನಗಳಿಂದ ಆ ಲಿಂಗವನ್ನು ಪೂಜಿಸುತ್ತಿರುವನು. ॥೧೫॥

ಅಹಂಭಾವಾದಿಗಳನ್ನು ತೊರೆದವನಾಗಿ, ಸಕಲ ಭಾವಗಳನ್ನೂ ಬಿಟ್ಟು, ಅಹಂಬ್ರಹ್ಮಾಸ್ಮಿ ಎಂಬ ಜ್ಞಾನದಿಂದ ಪರಶಿವನು ಪೂಜಿಸುತ್ತಿರುವನು. ಹಾಗೆ ಯಾರು ಧ್ಯಾನಮಾಡುವರೋ ಆ ಮನುಷ್ಯರೇ ದೇವತೆಗಳಿಗೆ ಸದೃಶರಾಗುವರು. ॥೧೬॥

ಶಂಕರನು ಧ್ಯಾನ, ಧ್ಯೇಯಭಾವವಿಲ್ಲದೆ ಸಮಾಹಿತ ಮನಸ್ಕನಾಗಿ ದೇವಿಯೊಡನೆ ಆ ಲಿಂಗವನ್ನು ಪೂಜಿಸುವನು. 'ಶಿವೋಽಹಂ' ಎಂಬ ಭಾವನೆಯೇ ಪೂಜೆಗೆ ಸರಿಯಾದ ಜ್ಞಾನವು. ॥೧೭॥

**ತಮಃಪರೋ ಮಹಾದೇವೋ ದೇವ್ಯಾ ಸಗುಣನಿರ್ಗುಣಃ ।**
**ಪೂಜಾಂ ಬಾಹ್ಯೋಪಚಾರಾದ್ಯೈರ್ಮನೋವಾಚಾಮಗೋಚರಃ ॥೧೮॥**

**ಕಲ್ಪಯತ್ಯೇವ ಮನಸಾ ಸರ್ವಕಾಲೇಷು ಶಂಕರಃ ।**
**ಪ್ರದೋಷೇಷು ವಿಶೇಷೇಣ ಕೈಲಾಸೇ ಚಂದ್ರಶೇಖರಃ ॥೧೯॥**

**ತತ್ಪೂಜಾಂ ಸಾವಧಾನೇನ ಸಮಾಹಿತಮನಾಶ್ಶೃಣು ।**
**ಚತುರ್ದೇಹಾತಿಗೋ ಭೂತ್ವಾ ಸರ್ವೇಂದ್ರಿಯವಿವರ್ಜಿತಃ ॥೨೦॥**

**ಅಹಂಭಾವಂ ಪರಿತ್ಯಜ್ಯ ಶಿವೋಽಹಂ ಕೇವಲೋಽದ್ವಯಃ ।**
**ವ್ಯಾಪ್ಯೇಷು ವ್ಯಾಪಕಶ್ಚಾಹಂ ಗುಣೇಷು ನಿಹತೋಽಸ್ಮ್ಯಹಂ ॥೨೧॥**

---

ಮಹಾದೇವನು ಮಾಯೆಗಿಂತ ಬೇರೆಯಾದವನು. ಮಾಯಾಸಂಬಂಧದಿಂದ ಸಗುಣನಾಗಿಯೂ, ಮಾಯಾರಹಿತ ಶುದ್ಧಭಾವದಿಂದ ನಿರ್ಗುಣನಾಗಿಯೂ ತೋರಿ ಬರುತ್ತಿರುವನು. ಅಂತೂ ಮಹೇಶ್ವರನ ಸ್ವರೂಪವನ್ನು ಮನಸ್ಸು ಮತ್ತು ಮಾತು ಇವುಗಳಿಂದ ವರ್ಣಿಸಲು ಅಸದಳ. ಇಂತಹ ಸ್ವಾಮಿಯು ಆ ಲಿಂಗಕ್ಕೆ ಬಾಹ್ಯೋಪಚಾರಗಳನ್ನು ಎಸಗುತ್ತಿರುವನು. ||೧೮||

ಸರ್ವಕಾಲಗಳಲ್ಲಿಯೂ ಶಂಕರನು ಆ ಲಿಂಗವಿಷಯಕವಾಗಿ ಧ್ಯಾನವನ್ನು ಮಾಡುತ್ತಲೇ ಇರುವನು. ಅದರಲ್ಲೂ ಪ್ರದೋಷಕಾಲದಲ್ಲಂತೂ ಕೈಲಾಸೇಶ್ವರ ಲಿಂಗವನ್ನು ವಿಶೇಷ ರೀತಿಯಲ್ಲಿ ಅರ್ಚನೆ ಮಾಡುವನು. ||೧೯||

ಎಲೈ ಜೈಗೀಷವ್ಯನೇ, ಈ ಈಶ್ವರಕೃತವಾದ ಪೂಜಾವಿಧಾನವನ್ನು ಸಾವಧಾನಚಿತ್ತದಿಂದ ಕೇಳುವವನಾಗು. ಪೂಜಾರಂಭದಲ್ಲಿ, ಚತುರ್ವೇದಕ್ಕೂ (ಶೈವಮತ ಪ್ರೋಕ್ತವಾದ ನಾಲ್ಕುದೇಹಗಳಿಗೂ,) ತಾನು ಸಿಕ್ಕಿದವನಲ್ಲವೆಂದು ಭಾವಿಸಬೇಕು. ಮತ್ತು ಇಂದ್ರಿಯಗಳಿಗೆ ಪರವಶನಾಗದೇ ತಾನು ಸರ್ವೇಂದ್ರಿಯಾತೀತನೆಂಬ ಭಾವನೆಯಿಂದ ಕೂಡಿರಬೇಕು. ||೨೦||

ಪೂಜಾರಂಭದಲ್ಲಿ ಅಹಂಭಾವವೆಂಬ ಮಮತೆಯನ್ನು ಬಿಟ್ಟು, ಸಚ್ಚಿದಾನಂದ ರೂಪಿಯೂ ಸಜಾತೀಯ ದ್ವಿತೀಯರಹಿತನೂ ಆದ ಶಿವಸ್ವರೂಪನೇ ಅಹಂಪದಾರ್ಥವೆಂದರಿತು, ವ್ಯಾಪ್ಯವಾಗಿರುವ ಸಕಲ ವಸ್ತುಗಳಲ್ಲಿಯೂ ವ್ಯಾಪಕನಾಗಿ, ಸರ್ವಗುಣಾತೀತನಾಗಿರುವ ಪರಮಾತ್ಮಸ್ವರೂಪವೇ ತಾನು ಎಂಬ ಭಾವನೆಯಿಂದ ಲಿಂಗವನ್ನು ಆರಾಧಿಸಬೇಕು. ||೨೧||

ನಾಂತೋ ನ ಚಾದಿಸ್ಸಕಲಶ್ಚಾಹಂ ವಿಶ್ವಂ ಸದೈವ ಹಿ ।
ವಿಶ್ವಾತೀತೋಽಹಮಜರೋಽಸಂಗೋಽಸಂಗವಿವರ್ಜಿತಃ ॥೨೨॥

ವ್ಯಾಪಕೋಽಹಂ ಸದಾ ಪೂರ್ಣೋ ಗುಣಜಾಲವಿವರ್ಜಿತಃ ।
ನೀರೂಪೋ ವಿಶ್ವಭೂತಾತ್ಮಾ ದೇಹಧರ್ಮವಿವರ್ಜಿತಃ ॥೨೩॥

ಆಕಾಶೋ ವ್ಯಾಪಕಶ್ಚೈಭಿರ್ಯಶ್ಚೀರ್ಣೋಽಸ್ಪೃಷ್ಟಮವಸ್ಥಿತಃ ।
ಸತ್ಯಂ ಜ್ಞಾನೋಽಹಮಾನಂದೋ ಬೋಧಬೋಧಕವರ್ಜಿತಃ ॥೨೪॥

ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಂ ।
ಮಯಿ ಸರ್ವಂ ಲಯಂ ಯಾತಿ ತದ್ಬ್ರಹ್ಮಾದ್ವಯಮಸ್ಮ್ಯಹಂ ॥೨೫॥

ಇತ್ಯೇವಂ ಭಾವಯನ್ ಧೀರೋ ಬಾಹ್ಯೇ ಲಿಂಗಂ ಸಮರ್ಚಯೇತ್ ।
ಧೃತಭಸ್ಮತ್ರಿಪುಂಡ್ರಾಂಕೋ ರುದ್ರಾಕ್ಷವರಭೂಷಣಃ ॥೨೬॥

ಪರಮಾತ್ಮನಿಗೆ ಕೊನೆಯಿಲ್ಲ, ಮೊದಲಿಲ್ಲ. ವಿಶ್ವವೇ ಅವನು. ವಿಶ್ವಸಂಬಂಧವಿಲ್ಲದವನೂ ಅವನೇ. ಆತನಿಗೆ ಮುಪ್ಪು, ಸಹವಾಸ, ಮತ್ತೊಂದುವಸ್ತು ಸಂಸರ್ಗ ಇವಾವುವೂ ಕಂಡುಬರಲಾರವು. ||೨೨||

ಸರ್ವವ್ಯಾಪಕನೂ, ಸಂಪೂರ್ಣವಸ್ತುವೂ, ನಿರ್ಗುಣನೂ, ರೂಪರಹಿತನೂ ವಿಶ್ವಭೂತಾತ್ಮನೂ, ದೇಹಿಗಳಿಗೆ ಒದಗುವ ಬಾಲ್ಯಾದಿ ಧರ್ಮಗಳಿಲ್ಲದವನೂ, ಪರಮಾತ್ಮನು ಎಂಬ ಭಾವನೆಯುಳ್ಳವನಾಗಬೇಕು. ||೨೩||

ಆಕಾಶದಂತೆ ಸರ್ವವ್ಯಾಪಕನು. ನಷ್ಟವಾಗುವ ವಸ್ತುಗಳಲ್ಲಿಯೂ ಅಡಗಿರುವವನು. ಸತ್ಯ, ಜ್ಞಾನ, ಆನಂದ, ಇವುಗಳೇ ಪರಮಾತ್ಮನ ಸ್ವರೂಪಗಳು. ಬೋಧನೆ ಮಾಡುವ, ಬೋಧಕರಾಗುವ ಕ್ರಿಯೆಗಳು, ಯಾವುವೂ ಪರಮಾತ್ಮನಲ್ಲಿ ಸೇರಲಾರವು. ||೨೪||

ನನ್ನಿಂದಲೇ ಸಕಲ ಜಗತ್ತೂ ಹುಟ್ಟಿದೆ. ನನ್ನಲ್ಲಿಯೇ ನಿಂತಿದೆ. ಕೊನೆಗೆ ಅಡಗುವುದೂ ನನ್ನಲ್ಲಿಯೇ. ಪ್ರಪಂಚವೂ ನಾನೂ ಬ್ರಹ್ಮವಸ್ತುವೊಂದರಲ್ಲಿಯೇ ಐಕ್ಯರಾಗುವೆವು. ||೨೫||

ಎಂಬ ಭಾವನೆಯಿಂದ, ಧೀರನಾದ ಶಿವಪೂಜಕನು ಪರಬ್ರಹ್ಮನನ್ನು ಮನಸ್ಸಿನಲ್ಲಿ ಹೀಗೆ ಭಾವಿಸುತ್ತಾ ಬಾಹ್ಯೋಪಚಾರಗಳಿಂದ ಶಿವಲಿಂಗವನ್ನು ಆರಾಧಿಸಬೇಕು.

ಪಂಚಾಸ್ಯಧ್ಯಾನನಿರತಃ ಪಂಚಾಕ್ಷರಪರಾಯಣಃ ।
ಪ್ರಾಙ್ಮುಖೋಽದಙ್ಮುಖೋ ವಾ ಪಿ ಸ್ಥಿತಶ್ಚೇಲಕುಶಾಸನೇ ॥೨೭॥

ಧ್ಯಾತ್ವಾ ಸ್ವಹೃತ್ಪದ್ಮಸಂಸ್ಥಂ ಶುದ್ಧಸ್ಫಟಿಕಸನ್ನಿಭಂ ।
ಪ್ರಸನ್ನಾಸ್ಯಂ ತ್ರಿನಯನಂ ತ್ರಿಪುಂಡ್ರಪರಿಶೋಭಿತಂ ॥೨೮॥

ಚಂದ್ರಾರ್ಧಮುಕುಟಂ ದೇವಂ ನೀಲಗ್ರೀವಮುಮಾಪತಿಂ ।
ಆವಾಹಯೇದ್ಬಾಹ್ಯಲಿಂಗೇ ಸ್ಫಾಟಿಕೇ ಬಾಣಧಾತುಜೇ ॥೨೯॥

ಮೃಲ್ಲಿಂಗೇ ಸಿಕತಾಯಾಂ ಚ ಪೂಜಯೇತ್ ಸ್ಥಾವರೇಽಪಿ ಚ ।
ಪಂಚಾಮೃತೈಃ ಪಂಚಗವ್ಯೈರ್ನೀರಧಾರಾದಿಭಿಶ್ಶಿವಂ ॥೩೦॥

ಭಸ್ಮ ಮತ್ತು ತ್ರಿಪುಂಡ್ರಗಳನ್ನೂ, ರುದ್ರಾಕ್ಷಿಯ ಆಭರಣವನ್ನೂ ಧರಿಸಿಕೊಂಡು ಪೂಜಾರಂಭಮಾಡುವುದೇ ಶ್ರೇಷ್ಠವು. ॥೨೬॥

ಪಂಚಮುಖಧಾರಿಯಾದ ಮಹೇಶ್ವರನನ್ನೇ ತಾನು ಧ್ಯಾನಮಾಡುತ್ತಾ, ಶಿವ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ, ಪೂರ್ವ, ಅಥವಾ ಉತ್ತರದಿಕ್ಕುಗಳಿಗೆ ಅಭಿಮುಖನಾಗಿ, ದರ್ಭಾಸನದಲ್ಲಿ ಕುಳಿತುಕೊಳ್ಳಬೇಕು. ॥೨೭॥

ಅನಂತರ ಸ್ಫಟಿಕ ಶಿಲೆಯಂತೆ ಶುಭ್ರವರ್ಣವುಳ್ಳವನಾಗಿ, ಪ್ರಸನ್ನವಾದ ಮುಖಮುದ್ರೆಯಿಂದಲೂ, ಮೂರುಕಣ್ಣುಗಳಿಂದಲೂ, ಅಲಂಕೃತನಾಗಿರುವ ಮಹೇಶ್ವರನನ್ನು ತನ್ನ ಹೃದಯ ಕಮಲದಲ್ಲಿ ಧ್ಯಾನಮಾಡಬೇಕು. ॥೨೮॥

ಹಾಗೆಯೇ ಎದುರಿಗಿರುವ ಸ್ಫಟಿಕಮಯವಾದ ಮತ್ತು ಬಾಣನಿರ್ಮಿತವಾದ ನರ್ಮದಾ ಲಿಂಗದಲ್ಲಿ ಚಂದ್ರಾರ್ಧಧಾರಿಯಾಗಿಯೂ, ನೀಲಗ್ರೀವನಾಗಿಯೂ ಇರುವ ಶಂಕರನನ್ನು ಆವಾಹಿಸಬೇಕು. ॥೨೯॥

ಮೃನ್ಮಯವಾದ, ಅಥವಾ ಸಿಕತಮಯವಾದ, ಅಥವಾ ಇತರ ವಿಧವಾದ ಸ್ಥಿರಲಿಂಗಗಳಲ್ಲಾಗಲಿ ಮೇಲೆ ಹೇಳಿದಂತೆ ಶಿವಾನುಸಂಧಾನಮಾಡಬಹುದು. ಅನಂತರ ಪಂಚಗವ್ಯಗಳಿಂದಲೂ, ಪಂಚಾಮೃತಗಳಿಂದಲೂ, ಜಲಧಾರೆಯಿಂದಲೂ ಶಿವಲಿಂಗವನ್ನು ಅಭಿಷೇಕಮಾಡಬೇಕು. ॥೩೦॥

ಪಂಚಬ್ರಹ್ಮೈಃ ಪಾವಮಾನ್ಯೈ ರುದ್ರೈರ್ವೇದಸಮುದ್ಭವೈಃ ।
ಅಭಿಷಿಚ್ಯ ಪ್ರಯತ್ನೇನ ಸಾಮಭಿಶ್ಚ ಮಹೇಶ್ವರಂ ॥೩೦॥

ವಸ್ತ್ರೈರಾವೇಷ್ಟ್ಯ ತಲ್ಲಿಂಗಂ ಗಂಧಲೇಪೇನ ಲೇಪಯೇತ್ ।
ಅಕ್ಷತಾಭಿಸ್ತಥಾ ರತ್ನಗೋಲಕೈರ್ಭೂಷಯೇಚ್ಛಿವಂ ॥೩೨॥

ಬಿಲ್ವಪತ್ರೈಶ್ಚ ಕಲ್ಹಾರೈಶ್ಚಂಪಕೈಃ ಕರವೀರಕೈಃ ।
ಪುಷ್ಪೈರಾರಣ್ಯಕೈಶ್ಚೈವ ತಥಾನ್ಯೈಶ್ಚ ಸುಗಂಧಿಭಿಃ

ಧೂಪೈಶ್ಚ ದೀಪೈರ್ನೈವೇದ್ಯೈಸ್ತಾಂಬೂಲೈರ್ಮಣಿದೀಪಕೈಃ ।
ನೀರಾಜನೈಶ್ಛತ್ರಮುಖ್ಯೈಶ್ಚಾಮರೈರ್ವ್ಯಜನೈರಪಿ ॥೩೪॥

ಪ್ರಣಾಮಸ್ತೋತ್ರಪಠನೈಃ ಪ್ರದಕ್ಷಿಣಸುನರ್ತನೈಃ ।
ಪುನಃ ಪ್ರದಕ್ಷಿಣೈಶ್ಚೈವ ಪಂಚಾಕ್ಷರಜಪೈಸ್ತಥಾ ॥೩೫॥

ಪಂಚಬ್ರಹ್ಮಾನುವಾಕಗಳಾದ ಸದ್ಯೋಜಾತಾದಿ ಮಂತ್ರಗಳಿಂದಲೂ, ಪವಮಾನ ಸೂಕ್ತಗಳಿಂದಲೂ, ಶ್ರೀರುದ್ರಪಾರಾಯಣದಿಂದಲೂ, ಇನ್ನು ಸಾಮವೇದ ಮಂತ್ರಗಳಿಂದಲೂ, ಮಹೇಶ್ವರನಿಗೆ ಅಭಿಷೇಕಮಾಡಬೇಕು. ॥೩೦॥

ಅನಂತರ ಆ ಲಿಂಗವನ್ನು ಶುಭ್ರವಸ್ತ್ರಗಳಿಂದ ಅಲಂಕರಿಸಿ, ಗಂಧವನ್ನು ಬಳಿಯಬೇಕು. ರತ್ನಮಯವಾದ ಪ್ರತಿಬಿಂಬದಿಂದಲೂ ಅಕ್ಷತೆಗಳಿಂದಲೂ ಶಿವಲಿಂಗವನ್ನು ಅಲಂಕರಿಸಬೇಕು. ॥೩೨॥

ಶಿವಾರ್ಚನೆಗೆ ಬಿಲ್ವಪತ್ರೆ, ಕಲ್ಹಾರಪುಷ್ಪ, ಸಂಪಿಗೆ, ಕಣಗಲು, ಇನ್ನೂ ಸುಗಂಧಮಯವಾದ ಅರಣ್ಯಪುಷ್ಪಗಳು ಶ್ರೇಷ್ಠವಾದವುಗಳು. ॥೩೩॥

ಧೂಪ, ದೀಪ, ನೈವೇದ್ಯ, ತಾಂಬೂಲ, ರತ್ನದೀಪ, ನೀರಾಜನ, ಛತ್ರಿ, ಚಾಮರ, ವ್ಯಜನ ಇವೇ ಮೊದಲಾದ ಉಪಚಾರಗಳಿಂದ ಪೂಜಿಸಬೇಕು. ॥೩೪॥

ನಮಸ್ಕಾರ, ಸ್ತೋತ್ರಪಠನ, ಪ್ರದಕ್ಷಿಣಾದಿಗಳು, ನರ್ತನನ್ನಮಾಡುವಿಕೆ, ಪುನಃ ಪುನಃ ಪ್ರದಕ್ಷಿಣನಮಸ್ಕಾರ, ಪಂಚಾಕ್ಷರೀಜಪ, ಇವೇ ಮೊದಲಾದವುಗಳಿಂದ ಶಂಕರನನ್ನು ತೃಪ್ತಿಪಡಿಸಬೇಕು. ॥೩೫॥

ಹೃತ್ಪದ್ಮೇ ಸನ್ನಿವೇಶ್ಯೇಶಂ ಪೂಜೋದ್ವಾಸನಮಾರಭೇತ್ ।
ಏವಂ ಪೂಜಾವಿಧಾನೇನ ಪೂಜಯೇತ್ಪರಮೇಶ್ವರಂ ॥೩೬॥

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಯೋಽರ್ಚಯೇನ್ನರಃ ।
ಸ ಏವ ಲಭತೇ ಜ್ಞಾನಮಾಭ್ಯಂತರವರಾರ್ಚನೈಃ ॥೩೭॥

ಕೈಲಾಸೇಶ್ವರಲಿಂಗಮೇತದಮಲಂ ಸ್ವರ್ಗಾಪವರ್ಗಪ್ರದಂ ।
ತನ್ನೈವಾಖಿಲವೇದಜಾಲತಿಲಕೈರ್ಜ್ಞಾತುಂ ನ ತತ್ಪಾರ್ಯತೇ ।
ಈಶೇನಾಪಿ ಗಜಾನನೇನ ಚ ಮಯಾ ದೇವ್ಯಾ ಗಣೇಂದ್ರೈರಪಿ ।
ವಿಷ್ಣುಬ್ರಹ್ಮಹರಾಮರೈರ್ಮುನಿಗಣೈಸ್ತಂತ್ರೈಸ್ತಥೈವಾಗಮೈಃ ॥೩೮॥

ತಲ್ಲೇಶಾಯುತಲೇಶಲೇಶಮಹಿಮಾ ಕೋಟ್ಯಂಶಕೋಟ್ಯಂಶಕಂ ।
ವಕ್ತುಂ ಶ್ರೋತುಮಥೇಕ್ಷಿತುಂ ತ್ರಿಭುವನೇ ನಾಸ್ತೀತಿ ಮನ್ಯೇ ದ್ವಿಜ ॥೩೯॥

---

ತನ್ನ ಹೃದಯಕಮಲದಲ್ಲಿ ಪರಮಾತ್ಮನನ್ನು ನಿಲ್ಲಿಸಿಕೊಂಡು, ಪೂಜಾನಂತರದಲ್ಲಿ ವಿಸರ್ಜನೆಮಾಡಬೇಕು. ಇದೇ ಪರಮೇಶ್ವರನ ಪೂಜಾವಿಧಾನ. ॥೩೬॥

ಹೀಗೆ ಪ್ರತಿದಿನವೂ, ಒಂದುವೇಳೆ, ಅಥವಾ ಎರಡುವೇಳೆ, ಅಥವಾ ತ್ರಿಕಾಲದಲ್ಲೂ ಭಕ್ತಿಯಿಂದ ಈಶ್ವರನನ್ನು ಆರಾಧಿಸಬೇಕು. ಯಾರು ಹೀಗೆ ಪೂಜಿಸುವರೋ ಅವರು ಜ್ಞಾನಿಗಳೆನಿಸುವರು. ॥೩೭॥

ಈ ಕೈಲಾಸೇಶ್ವರಲಿಂಗವು ಬಹಳ ಪವಿತ್ರವಾದದ್ದು. ಸ್ವರ್ಗ ಮತ್ತು ಮೋಕ್ಷ ಸುಖಗಳನ್ನು ಒದಗಿಸತಕ್ಕದ್ದು. ಅದರ ಮಹಿಮೆಯನ್ನು ಎಲ್ಲಾ ವೇದಗಳೂ ಉಪನಿಷತ್ತುಗಳೂ, ಶಾಸ್ತ್ರಸಮೂಹಗಳೂ ಸರಿಯಾಗಿ ಅರಿಯಲಾರವು. ಹೆಚ್ಚೇನು ? ನಾನೇ ಆಗಲಿ, ಗಣಪತಿ, ಪಾರ್ವತಿ, ಇನ್ನೂ ಉಳಿದ ಪ್ರಮಥಗಣಗಳು, ವಿಷ್ಣು, ಬ್ರಹ್ಮ, ರುದ್ರ, ದೇವತೆಗಳು, ಋಷಿವರ್ಗ, ಯಾರೂ, ಈ ಕೈಲಾಸೇಶ್ವರಲಿಂಗದ ಮಹಿಮೆಯನ್ನು ಸರಿಯಾಗಿ ಅರಿಯಲಾರರು. ಹೀಗಿರುವಾಗ, ಯಾವ ಆಗಮಗಳಾಗಲಿ, ಯಾವ ಮಂತ್ರಶಾಸ್ತ್ರಗಳಾಗಲಿ, ಈ ಲಿಂಗಮಹಿಮೆಯನ್ನು ನಿಸ್ಸಂಶಯವಾಗಿ ಹೇಗೆತಾನೇ ಬೋಧಿಸಿಯಾವು ? ಅಂತಹ ಮಹಾಮಹಿಮಾಸ್ಪದವಾದ ಲಿಂಗವೆಂದರೆ, ಕೈಲಾಸಲಿಂಗವೊಂದೇ, ॥೩೮॥

ಈ ಕೈಲಾಸಲಿಂಗದ ಮಹಿಮೆಯಲ್ಲಿ ಅತ್ಯಂತ ಲೇಶಾಂಶವನ್ನು, ಮಹಿಮೆಯನ್ನೂ, ಅದರಲ್ಲಿ ಕೋಟಿಭಾಗದ ಒಂದಂಶವನ್ನೂ ಪಡೆಯುವ ಶಕ್ತಿಯು ಈ

ಪಂಚಬ್ರಹ್ಮೈಃ ಪಾವಮಾನ್ಯೈ ರುದ್ರೈರ್ವೇದಸಮುದ್ಭವೈಃ ।
ಅಭಿಷಿಚ್ಯ ಪ್ರಯತ್ನೇನ ಸಾಮಭಿಶ್ಚ ಮಹೇಶ್ವರಂ ॥೩೧॥

ವಸ್ತ್ರೈರಾವೇಷ್ಟ್ಯ ತಲ್ಲಿಂಗಂ ಗಂಧಲೇಪೇನ ಲೇಪಯೇತ್ ।
ಅಕ್ಷತಾಭಿಸ್ತಥಾ ರತ್ನಗೋಲಕೈರ್ಭೂಷಯೇಚ್ಛಿವಂ ॥೩೨॥

ಬಿಲ್ವಪತ್ರೈಶ್ಚ ಕಲ್ಹಾರೈಶ್ಚಂಪಕೈಃ ಕರವೀರಕೈಃ ।
ಪುಷ್ಪೈರಾರಣ್ಯಕೈಶ್ಚೈವ ತಥಾನ್ಯೈಶ್ಚ ಸುಗಂಧಿಭಿಃ ॥೩೩॥

ಧೂಪೈಶ್ಚ ದೀಪೈರ್ನೈವೇದ್ಯೈಸ್ತಾಂಬೂಲೈರ್ಮಣಿದೀಪಕೈಃ ।
ನೀರಾಜನೈಶ್ಛತ್ರಮುಖ್ಯೈಶ್ಚಾಮರೈರ್ವ್ಯಜನೈರಪಿ ॥೩೪॥

ಪ್ರಣಾಮಸ್ತೋತ್ರಪಠನೈಃ ಪ್ರದಕ್ಷಿಣಸುನರ್ತನೈಃ ।
ಪುನಃ ಪ್ರದಕ್ಷಿಣೈಶ್ಚೈವ ಪಂಚಾಕ್ಷರಜಪೈಸ್ತಥಾ ॥೩೫॥

ಪಂಚಬ್ರಹ್ಮಾನುವಾಕಗಳಾದ ಸದ್ಯೋಜಾತಾದಿ ಮಂತ್ರಗಳಿಂದಲೂ, ಪವಮಾನ ಸೂಕ್ತಗಳಿಂದಲೂ, ಶ್ರೀರುದ್ರಪಾರಾಯಣದಿಂದಲೂ, ಇನ್ನೂ ಸಾಮವೇದ ಮಂತ್ರಗಳಿಂದಲೂ, ಮಹೇಶ್ವರನಿಗೆ ಅಭಿಷೇಕಮಾಡಬೇಕು. ॥೩೧॥

ಅನಂತರ ಆ ಲಿಂಗವನ್ನು ಶುದ್ಧವಸ್ತ್ರಗಳಿಂದ ಅಲಂಕರಿಸಿ, ಗಂಧವನ್ನು ಬಳಿಯಬೇಕು. ರತ್ನಮಯವಾದ ಪ್ರತಿಬಿಂಬದಿಂದಲೂ ಅಕ್ಷತೆಗಳಿಂದಲೂ ಶಿವಲಿಂಗವನ್ನು ಅಲಂಕರಿಸಬೇಕು. ॥೩೨॥

ಶಿವಾರ್ಚನೆಗೆ ಬಿಲ್ವಪತ್ರೆ, ಕಲ್ಹಾರಪುಷ್ಪ, ಸಂಪಿಗೆ, ಕಣಿಗಲು, ಇನ್ನೂ ಸುಗಂಧಮಯವಾದ ಅರಣ್ಯಪುಷ್ಪಗಳು ಶ್ರೇಷ್ಠವಾದವುಗಳು.॥೩೩॥

ಧೂಪ, ದೀಪ, ನೈವೇದ್ಯ, ತಾಂಬೂಲ, ರತ್ನದೀಪ, ನೀರಾಜನ, ಛತ್ರಿ, ಚಾಮರ, ವ್ಯಜನ ಇವೇ ಮೊದಲಾದ ಉಪಚಾರಗಳಿಂದ ಪೂಜಿಸಬೇಕು. ॥೩೪॥

ನಮಸ್ಕಾರ, ಸ್ತೋತ್ರಪಠನ, ಪ್ರದಕ್ಷಿಣಾದಿಗಳು, ನರ್ತನಸೇವಾದಿಪೂಜೆ, ಪುನಃ ಪುನಃ ಪ್ರದಕ್ಷಿಣನಮಸ್ಕಾರ, ಪಂಚಾಕ್ಷರೀಜಪ, ಇವೇ ಮೊದಲಾದವುಗಳಿಂದ ಶಂಕರನನ್ನು ತೃಪ್ತಿಪಡಿಸಬೇಕು. ॥೩೫॥

ಹೃತ್ಪದ್ಮೇ ಸನ್ನಿವೇಶ್ಯೇಶಂ ಪೂಜೋದ್ವಾಸನಮಾರಭೇತ್ ।
ಏವಂ ಪೂಜಾವಿಧಾನೇನ ಪೂಜಯೇತ್ಪರಮೇಶ್ವರಂ ॥೩೬॥

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಯೋಽರ್ಚಯೇನ್ನರಃ ।
ಸ ಏವ ಲಭತೇ ಜ್ಞಾನಮಾಭ್ಯಂತರವರಾರ್ಚನೈಃ ॥೩೭॥

ಕೈಲಾಸೇಶ್ವರಲಿಂಗಮೇತದತುಲಂ ಸ್ವರ್ಗಾಪವರ್ಗಪ್ರದಂ ।
ತಸ್ಮೈವಾಖಿಲವೇದಜಾಲತಿಲಕೈರ್ಜ್ಞಾತುಂ ನ ತತ್ಪಾರ್ಯತೇ ।
ಈಶೇನಾಪಿ ಗಜಾನನೇನ ಚ ಮಯಾ ದೇವ್ಯಾ ಗಣೇಂದ್ರೈರಪಿ ।
ವಿಷ್ಣುಬ್ರಹ್ಮಹರಾಮರೈರ್ಮುನಿಗಣೈಸ್ತಂತ್ರೈಸ್ತಥೈವಾಗಮೈಃ ॥೩೮॥

ತಲ್ಲೇಶಾಯುತಲೇಶಲೇಶಮಹಿಮಾ ಕೋಟ್ಯಂಶಕೋಟ್ಯಂಶಕಂ ।
ವಕ್ತುಂ ಶ್ರೋತುಮಥೇಕ್ಷಿತುಂ ತ್ರಿಭುವನೇ ನಾಸ್ತೀತಿ ಮನ್ಯೇ ದ್ವಿಜ ॥೩೯॥

---

ತನ್ನ ಹೃದಯಕಮಲದಲ್ಲಿ ಪರಮಾತ್ಮನನ್ನು ನಿಲ್ಲಿಸಿಕೊಂಡು, ಪೂಜಾನಂತರದಲ್ಲಿ ವಿಸರ್ಜನೆಮಾಡಬೇಕು. ಇದೇ ಪರಮೇಶ್ವರನ ಪೂಜಾವಿಧಾನ. ||೩೬||

ಹೀಗೆ ಪ್ರತಿದಿನವೂ, ಒಂದುವೇಳೆ, ಅಥವಾ ಎರಡುವೇಳೆ, ಅಥವಾ ತ್ರಿಕಾಲದಲ್ಲೂ ಭಕ್ತಿಯಿಂದ ಈಶ್ವರನನ್ನು ಆರಾಧಿಸಬೇಕು. ಯಾರು ಹೀಗೆ ಪೂಜಿಸುವರೋ ಅವರು ಜ್ಞಾನಿಗಳೆನಿಸುವರು. ||೩೭||

ಈ ಕೈಲಾಸೇಶ್ವರಲಿಂಗವು ಬಹಳ ಪವಿತ್ರವಾದದ್ದು. ಸ್ವರ್ಗ ಮತ್ತು ಮೋಕ್ಷಸುಖಗಳನ್ನು ಒದಗಿಸತಕ್ಕದ್ದು. ಅದರ ಮಹಿಮೆಯನ್ನು ಎಲ್ಲಾ ವೇದಗಳೂ ಉಪನಿಷತ್ತುಗಳೂ, ಶಾಸ್ತ್ರಸಮೂಹಗಳೂ ಸರಿಯಾಗಿ ಅರಿಯಲಾರವು. ಹೆಚ್ಚೇನು ? ನಾನೇ ಆಗಲಿ, ಗಣಪತಿ, ಪಾರ್ವತಿ, ಇನ್ನೂ ಉಳಿದ ಪ್ರಮಥಗಣಗಳು, ವಿಷ್ಣು, ಬ್ರಹ್ಮ, ರುದ್ರ, ದೇವತೆಗಳು, ಋಷಿವರ್ಗ, ಯಾರೂ, ಈ ಕೈಲಾಸೇಶ್ವರಲಿಂಗದ ಮಹಿಮೆಯನ್ನು ಸರಿಯಾಗಿ ಅರಿಯಲಾರರು. ಹೀಗಿರುವಾಗ, ಯಾವ ಆಗಮಗಳಾಗಲಿ, ಯಾವ ಮಂತ್ರಶಾಸ್ತ್ರಗಳಾಗಲಿ, ಈ ಲಿಂಗಮಹಿಮೆಯನ್ನು ನಿಸ್ಸಂಶಯವಾಗಿ ಹೇಗೆತಾನೇ ಬೋಧಿಸಿಯಾವು ? ಅಂತಹ ಮಹಾಮಹಿಮಾಸ್ಪದವಾದ ಲಿಂಗವೆಂದರೆ, ಕೈಲಾಸಲಿಂಗವೊಂದೇ, ||೩೮||

ಈ ಕೈಲಾಸಲಿಂಗದ ಮಹಿಮೆಯಲ್ಲಿ ಅತ್ಯಂತ ಲೇಶಾಂಶವನ್ನು, ಮಹಿಮೆಯನ್ನೂ, ಅದರಲ್ಲಿ ಕೋಟಿಭಾಗದ ಒಂದಂಶವನ್ನೂ ಪಡೆಯುವ ಶಕ್ತಿಯು ಈ

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸೇಶ್ವರ ಪೂಜಾವಿಧಾನಕಥನಂ
ನಾಮ ಷಟ್‌ತ್ರಿಂಶೋಽಧ್ಯಾಯಃ

ಮೂರು ಲೋಕದಲ್ಲಿ ಯಾವ ವಸ್ತುವಿಗಿದೆ? ಅಲ್ಲದೆ ಈ ಕೈಲಾಸಲಿಂಗದ ಮಹಿಮೆಯನ್ನು ಹೇಳುವುದಕ್ಕಾಗಲಿ, ಕೇಳುವುದಕ್ಕಾಗಲಿ ಯಾರಿಗೆ ಶಕ್ತಿಯಿರುವುದು" ಎಂದು ಹೇಳಿ ಕುಮಾರಸ್ವಾಮಿಯು ಸುಮ್ಮನಾದನು. ||೩೯||

ಇಲ್ಲಿಗೆ ಶ್ರೀ ಶಿವರಹಸ್ಯದ ಮೊದಲನೆಯ ಅಂಶದಲ್ಲಿ ಕೈಲಾಸೇಶ್ವರಪೂಜಾವಿಧಾನ
ಕಥನವೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು.

# ಅಥ ಶ್ರೀಶಿವರಹಸ್ಯೇ

## ಸಪ್ತತ್ರಿಂಶೋಽಧ್ಯಾಯಃ

### ಕೈಲಾಸಮಹಿಮಾವರ್ಣನಂ

|| ಸ್ಕಂದ ಉವಾಚ ||

ಏವಂ ಕೈಲಾಸಶೈಲೋಽಯಂ ವಿಹಿತಶ್ಶೂಲಪಾಣಿನಾ ।
ಮಣಿಪ್ರಾಕಾರಸೌಧಾಶ್ಚ ಗೋಪುರಾಣ್ಯಪಿ ಭೂಸುರ ||೧||

ರತ್ನಾನಾಂ ಗಿರಯಸ್ತತ್ರ ಗಣಾವಸಥಕಲ್ಪನಾಃ ।
ನಾನಾರುದ್ರಾವತಾರಾಣಾಂ ಸಭಾಮಂಟಪನಿರ್ಮಿತಾಃ ||೨||

ತಥಾ ನಾನ್ಯತ್ರ ರಮತೇ ಸರ್ವಾವಾಸೋಽಪಿ ಶಂಕರಃ ।
ದೇವ್ಯಾಪಿ ಸ್ಕಂದಹೇರಂಬನಂದಿಕೇಶಾದಿಭಿಃ ಪ್ರಿಯಃ ||೩||

### ಶ್ರೀಶಿವರಹಸ್ಯದಲ್ಲಿ ಮೂವತ್ತೇಳನೆಯ ಅಧ್ಯಾಯ

ಮತ್ತೆ ಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ಕೈಲಾಸವಾಸದ ಮಹಿಮಾ ವಿಷಯವನ್ನೆಲ್ಲಾ ಬೋಧಿಸತೊಡಗಿದನು. "ಎಲೈ ಮಹರ್ಷಿವರ್ಯರೇ, ಹೀಗೆ ಈ ಕೈಲಾಸಪರ್ವತವು ಶಂಕರನಿಂದ ಮಾನಸನಿರ್ಮಿತವಾಗಿರುವುದು. ರತ್ನಮಯವಾದ ಸೌಧಗಳೂ ಗೋಪುರಗಳೂ ಇವೆಲ್ಲವೂ ಶಿವನಿರ್ಮಾಣಕ್ಕೆ ಸೇರಿದವುಗಳೇ. ||೧||

ಅದರಲ್ಲಿ ರತ್ನಮಯವಾದ ಪರ್ವತಗಳೂ, ಪ್ರಮಥಗಣಗಳ ವಾಸಸ್ಥಾನಗಳೂ, ನಾನಾ ರುದ್ರಾವತಾರಗಳಿಂದ ಕೂಡಿರುವ ಸಭಾಮಂಟಪಗಳೂ ನಿರ್ಮಿತವಾಗಿರುವುವು. ||೨||

ಆದ್ದರಿಂದಲೇ ಶಂಕರನು, ದೇವಿಯೊಡನೆಯೂ, ಸ್ಕಂದಹೇರಂಬರೊಡನೆಯೂ ಅಲ್ಲಿಯೇ ಸದಾ ನೆಲಸಿರುವನು. ಮತ್ತೆಲ್ಲಿಯೂ ಸರ್ವವ್ಯಾಪಿಯಾದ ಶಂಕರನಿಗೆ ಇದಕ್ಕಿಂತಲೂ ಹೆಚ್ಚಾದ ಆನಂದಮಯ ಪ್ರದೇಶವು ಕಂಡುಬರುತ್ತಿಲ್ಲ. ||೩||

ಮಹೇಶಸ್ಯ ನಿವಾಸೋಽಯಂ ಗಿರೀಶೋ ಗಿರಿಶಸ್ಯ ತು ।
ನಾವಿಮುಕ್ತೇಽಪಿ ರಮತೇ ನ ತಥಾ ಹಿಮಭೂಧರೇ ॥೪॥

ಮಂದರೇ ನಿಷಧೇಽಪೀಶಸ್ತಥಾದ್ರೌ ಗಂಧಮಾದನೇ ।
ತಥಾನ್ಯೇಷು ನಗೇಂದ್ರೇಷು ಪ್ರೀತಿರ್ನೈವ ಪಿನಾಕಿನಃ ॥೫॥

ಲಿಂಗಾಲಯೋಽಯಂ ಕೈಲಾಸೋ ರಮ್ಯಸಾನುತರೂಜ್ಜ್ವಲಃ ।
ಸುರಮ್ಯಮಣಿಶೃಂಗಾಗ್ರಶ್ಚಾರುಸುಂದರಕಂದರಃ ॥೬॥

ಕಲಧೌತಪ್ರಭಾಧೂತದಿಕ್ತಮಸ್ತೋಮಸಂತತಿಃ ।
ಸರ್ವತೀರ್ಥಮಯಶ್ಶೈಲಸ್ಸರ್ವಲಿಂಗಮಯೋ ನಗಃ ॥೭॥

ಗಣೇಶ್ವರೋಽಯಂ ಕೈಲಾಸಸ್ಸರ್ವದಾ ಶಿವವಾಸಭೂಃ ।
ಸರ್ವಕ್ಷೇತ್ರಮಯಶ್ಶೈಲಃ ಕ್ಷೇತ್ರೇಶಾಶ್ರಯತಸ್ಸದಾ ॥೮॥

ನಿಜವಾಗಿಯೂ ಆ ಪ್ರದೇಶವು ಗಿರಿಶನಿಗೆ ಪ್ರೀತಿಪಾತ್ರವಾದ ಪ್ರದೇಶವಾಗಿರುವುದು. ಅವಿಮುಕ್ತಕ್ಷೇತ್ರವಾಗಲಿ, (ಕಾಶಿ) ಹಿಮಾಲಯವಾಗಲಿ ಶಂಕರನಿಗೆ ಅಷ್ಟು ಮೆಚ್ಚಿನ ಸ್ಥಳವಾಗಿರುವುದಿಲ್ಲ. ||೪||

ಮಂದರಪರ್ವತ, ನಿಷಧ, ಗಂಧಮಾದನ ಇನ್ನೂ ಇತರ ಪರ್ವತಪ್ರದೇಶಗಳು ಪರಶಿವನಿಗೆ ಆವಾಸಸ್ಥಾನಗಳಾಗಿದ್ದರೂ ಅವು ಕೈಲಾಸದಷ್ಟು ಪ್ರೀತಿಪಾತ್ರವಾದ ಸ್ಥಳಗಳಾಗಿಲ್ಲ. ||೫||

ಈ ಕೈಲಾಸವು ಸಕಲ ಶಿವಲಿಂಗಗಳಿಗೂ ನೆಲೆಮನೆಯಾಗಿದೆ. ಈ ಪರ್ವತದ ತಪ್ಪಲುಭಾಗವು ರತ್ನದಿಂದಲೂ, ಸುಂದರವಾದ ಮರಗಳಿಂದಲೂ ಮನೋಹರವಾಗಿರುವುದು. ಅಲ್ಲದೆ ಮಣಿಮಯವಾದ ಶಿಖರಗಳೂ, ರಮಣೀಯವಾದ ಗುಹೆಗಳೂ ಅಸಂಖ್ಯಾತವಾಗಿರುವುವು. ||೬||

ಅಲ್ಲಿರುವ ಸುವರ್ಣದ ಪ್ರಭೆಯಿಂದ ಸಕಲ ದಿಕ್ಕುಗಳಲ್ಲಿ ಅಡಗಿರುವ ಕತ್ತಲೆಯೆಲ್ಲಾ ಮಾಯವಾಗಿರುವುದು. ಸಕಲ ತೀರ್ಥಗಳೂ, ಸಮಸ್ತಲಿಂಗಗಳೂ ಆ ಪರ್ವತದಲ್ಲಿ ನೆಲಸಿರುವುವು. ||೭||

ಈ ಕೈಲಾಸವು ಪ್ರಮಥಗಣಗಳಿಗೆಲ್ಲಾ ಒಡೆಯನೆನಿಸಿಕೊಂಡಿದೆ. ಶಂಕರನ ಆವಾಸಸ್ಥಾನವೆನಿಸಿದೆ. ಎಲ್ಲಾ ಕ್ಷೇತ್ರಗಳೂ, ಕ್ಷೇತ್ರಾಧಿಪತಿಗಳೂ ಅಲ್ಲಿಯೇ ಕಂಡುಬರುವುವು. ||೮||

ಸರ್ವೌಷಧಿಮಯಶ್ಚಾಯಮೋಷಧೀಶಸಮಾಶ್ರಯಾತ್ ।
ವನಾಶ್ರಯೋಽಯಂ ಕೈಲಾಸೋ ವನಾಧಿಪಸಮಾಶ್ರಯಾತ್ ॥೯॥

ಮೃಗಾವಾಸೋ ಹಿ ಸತತಂ ಸದಾ ಪಶುಪತಿಪ್ರಿಯಂ ।
ನಾಸ್ಯ ರೂಪಮಹೋ ವೇದ್ಯೈರ್ಜ್ಞಾತುಮೇವ ನ ಶಕ್ಯತೇ ॥೧೦॥

ಕೈಲಾಸಾಪಾರಶಿಖರೈಸ್ಸರ್ವಲೋಕೋಽತಿಪಾವನಃ ।
ತನ್ಮೌಲಿತಲಸಂಸ್ಪೃಷ್ಟಾ ವಾತಾಃ ಪಾವನಪಾವನಾಃ ॥೧೧॥

ಬ್ರಹ್ಮಾದಯಸ್ಸ್ವಲೋಕಸ್ಥಾಃ ಪ್ರಾರ್ಥಯಂತ್ಯನಿಲಂ ತತಃ ।
ವಿಷ್ಣುಬ್ರಹ್ಮಾದಯೋ ದೇವಾ ಮುನಯೋಽಪಿ ಮುನೀಶ್ವರ ॥೧೨॥

ಈ ಕೈಲಾಸಪರ್ವತದಲ್ಲಿ ಸರ್ವವಿಧವಾದ ವನಸ್ಪತಿಗಳೂ ಇರುವುವು. ಏಕೆಂದರೆ ಓಷಧೀಶನಾದ ಚಂದ್ರನೇ ಇಲ್ಲಿ ನೆಲಸಿರುವನು. ಹಾಗೆಯೇ ವನಾಧಿಪನಾದ ವರುಣನೇ ಇಲ್ಲಿ ವಾಸಮಾಡುತ್ತಿರುವುದರಿಂದ ಸಕಲ ವನಗಳೂ ಇಲ್ಲಿ ಶೋಭಿಸುತ್ತಿವೆ. ॥೯॥

ಪಶುಪತಿಯಾಗಿ, ಪಶುಗಳನ್ನೆಲ್ಲಾ ಪ್ರೀತಿಯಿಂದ ಕಾಪಾಡುವ ಮಹೇಶ್ವರನೇ ಅಲ್ಲಿರುವುದರಿಂದ ಸಕಲ ಮೃಗಗಳೂ ಅಲ್ಲಿ ಸಂತೋಷದಿಂದ ವಿಹರಿಸುತ್ತಿರುವುವು. ಪರಮೇಶ್ವರನ ರೂಪವನ್ನಾಗಲಿ, ತೇಜಸ್ಸನ್ನಾಗಲಿ ಸರಿಯಾಗಿ ಅರಿತವರು ಯಾರು ತಾನೇ ಇರುವರು ? ॥೧೦॥

ಕೈಲಾಸದ ಅನೇಕ ಶಿಖರಗಳಿಂದಲೂ, ಸಮಸ್ತ ವಸ್ತುಗಳಿಂದಲೂ ಕೂಡಿರುವ ಈ ಸರ್ವಲೋಕವೂ ಅತ್ಯಂತ ಪವಿತ್ರವೆನಿಸಿರುವುದು. ಅಂತಹ ಶಿಖರಗಳ ಮೇಲೆ ಬೀಸುವಂತಹ ವಾಯುವು ಸರ್ವದಾ ಪೂಜ್ಯವೆನಿಸಿರುವುದು. ॥೧೧॥

ಕೈಲಾಸದ ಮೇಲೆ ಬೀಸುವಂತಹ ಪವಿತ್ರವಾಯುವನ್ನು, ಸ್ವರ್ಗನಿವಾಸಿಗಳಾದ, ಬ್ರಹ್ಮಾದಿ ದೇವತೆಗಳೂ, ವಿಷ್ಣುವೇ ಮೊದಲಾದ ದೇವತಾಶ್ರೇಷ್ಠರೂ ಸರ್ವದಾ ಪ್ರಾರ್ಥನೆಯಿಂದ ಸೇವಿಸುತ್ತಿರುವರು. ॥೧೨॥

ಕದಾಸ್ಮಾನ್ ಪಾವಯೇದ್ವಾಯುಃ ಕೈಲಾಸಶಿಖರಾಗತಃ ।
ಅಸ್ಮಾಭಿರ್ನ ತಪಸ್ತಪ್ತಂ ಕೈಲಾಸಾಲೋಕನಾಯ ತು ॥೧೩॥

ಅಂಡಜಾನಾಮಪಿ ಗತಿರ್ನಿಷಿದ್ಧಾ ಶಶಿಮೌಲಿನಾ ।
ಸೂರ್ಯಚಂದ್ರಾನಲಾನಾಂ ತು ಪ್ರಭಾವಿದ್ಯೋತನಂ ನ ಹಿ ॥೧೪॥

ತಸ್ಯೈವ ಶಿಖರೋದ್ದಾಮಪ್ರಭಾಭಿರ್ಭಾಸಿತಾ ದಿಶಃ ।
ಕೈಲಾಸಮೌಲಿಸಂಸ್ಥಸ್ಯ ಯತ್ಸುಖಂ ಕ್ಷಣಮಾತ್ರತಃ ॥೧೫॥

ನ ಹಿ ತದ್ವೈಷ್ಣವೇ ಬ್ರಾಹ್ಮೇ ಕಲ್ಪಾವಧಿ ಸುಖೋತ್ತರಂ ।
ನ ಚೈಂದ್ರೇ ಮೇರುಮೌಲೌ ವಾ ನಂದನೇ ಸ್ವರ್ಗಮಂಡಲೇ ॥೧೬॥

ದಿಕ್ಪಾಲಾನಾಂ ಪುರೌಘೇ ವಾ ಸೌರೇ ಚಾಂದ್ರಮಸೇಽಪಿ ವಾ ।
ನ ಚತುರ್ದಶ ಲೋಕೇಷು ತತ್ಸುಖಾಂಶಾಂಶಕೋಟಿಕಂ ॥೧೭॥

ಅವರೆಲ್ಲರೂ, ಎಂದಿಗೆ ನಾವು ಕೈಲಾಸ ಶಿಖರದಿಂದ ಬೀಸುವ ವಾಯುವಿನಿಂದ ಪವಿತ್ರರಾಗುತ್ತೇವೆ ಎಂದು ಹಂಬಲಿಸುತ್ತಿರುವರು. ಕೈಲಾಸಪರ್ವತವನ್ನು ನೋಡಲು ನಾವು ಯಾವ ತಪಸ್ಸನ್ನೂ ಮಾಡಲಿಲ್ಲವೆಂದು ದುಃಖಿಸುತ್ತಿರುವರು. ॥೧೩॥

ಶಂಕರನು ತನ್ನ ಕೈಲಾಸಕ್ಕೆ ಪಕ್ಷಿಗಳೂ ಸಹ ಹಾರಿಬರದಂತೆ ತಡೆದಿರುವನು. ಸೂರ್ಯ, ಚಂದ್ರಾಗ್ನಿಗಳ ತೇಜಸ್ಸೂ ಸಹ ಅಲ್ಲಿ ಪ್ರಸರಿಸುವಂತಿಲ್ಲ. ॥೧೪॥

ಕೈಲಾಸಪರ್ವತದ ಶಿಖರಗಳ ಕಾಂತಿಯಿಂದಲೇ ಸಕಲ ದಿಕ್ಕುಗಳೂ ಹೊಳೆಯುತ್ತಿವೆ. ಕ್ಷಣಕಾಲ ಕೈಲಾಸ ಶಿಖರದಲ್ಲಿ ವಾಸಿಸುವುದರಿಂದ ಯಾವ ಆನಂದವನ್ನು ಒದಗುವುದೋ, ಅಂತಹ ಸುಖವು, ವಿಷ್ಣುಲೋಕ, ಬ್ರಹ್ಮಲೋಕಗಳಲ್ಲಿ ಕಲ್ಪಪರ್ಯಂತವಾಗಿ ವಾಸಮಾಡಿದರೂ ಕಾಣಲಾರದು. ಹೀಗಿರುವಾಗ ಇಂದ್ರಲೋಕ, ಮೇರುಪರ್ವತ, ಇಂದ್ರನ ನಂದನವನ, ಸ್ವರ್ಗಲೋಕ ಇವುಗಳಲ್ಲಿ ಆ ಆನಂದವು ಸಿಕ್ಕುವುದು ಹೇಗೆ? ॥೧೫-೧೬॥

ಸೂರ್ಯ ಚಂದ್ರರ ಪಟ್ಟಣಗಳಲ್ಲಿಯೂ ದಿಕ್ಪಾಲಕರ ನಗರಗಳಲ್ಲಿಯೂ, ಹದಿನಾಲ್ಕು ಲೋಕಗಳಲ್ಲಿಯೂ ಸಹ ಕೈಲಾಸವಾಸದ ಕೋಟಿಭಾಗದಲ್ಲೊಂದು ಭಾಗದ ಸುಖವೂ ದೊರೆಯಲಾರದು. ॥೧೭॥

ಪ್ರಸಾದೇನ ವಿನಾ ಶಂಭೋರ್ಗಮನಂ ತತ್ರ ದುರ್ಲಭಂ ।
ನ ಕರ್ಮಣಾ ನ ತಪಸಾ ಧರ್ಮೈಶ್ಚ ವಿವಿಧೈರಪಿ ॥೧೮॥

ಕೈಲಾಸಾಚಲವಾರ್ತಾಪಿ ನ ಶಕ್ಯಾ ಗಮನಂ ಕಥಂ ।
ಸುರಾ ವಿಷ್ಣ್ವಾದಯಸ್ಸರ್ವೇ ಬ್ರಹ್ಮಾಪಿ ಭಗವದ್ಗಣಾಃ ॥೧೯॥

ಮುನಯಸ್ತಪಂತೇಽದ್ಯಾಪಿ ಕೈಲಾಸನಗವೀಕ್ಷಣೇ ।
ಕೈಲಾಸಗಮನೇ ಲಿಪ್ಸಾನ್ ಧೃತ್ವಾ ತೇ ಸುರಸತ್ತಮಾಃ ॥೨೦॥

ಶಿವಪ್ರಸಾದಸಿದ್ಧ್ಯರ್ಥಂ ತಪ್ಯಂತೇ ಪರಮಂ ತಪಃ ।
ಕೇಚಿತ್ಪಂಚಾಗ್ನಿನಿರತಾಸ್ಸಮೀರಣಸುಪಾರಣಾಃ ॥೨೧॥

ವೃಂತಶ್ಲಥಛದಾಶಾಶ್ಚ ಕೇಚಿದ್ವಾರಿಷು ಸಂಸ್ಥಿತಾಃ ।
ಕಟಿಧೂಮಶಿಖಾಪಾನಾಃ ಕೇಚಿಚ್ಚೈವೋರ್ಧ್ವಬಾಹವಃ ॥೨೨॥

ಕೈಲಾಸಪರ್ವತಕ್ಕೆ ಶಂಕರನ ಅನುಗ್ರಹವಿಲ್ಲದೆ ಹೋಗಲು ಸಾಧ್ಯವಿಲ್ಲ. ಯಾವ ಕರ್ಮಗಳನ್ನೂ ಮಾಡಿದರೂ, ಎಂತಹ ತಪಸ್ಸನ್ನಾಚರಿಸಿದರೂ, ನಾನಾ ಧರ್ಮಕಾರ್ಯಗಳನ್ನು ನೆರವೇರಿಸಿದರೂ, ಅಲ್ಲಿಗೆ ಹೋಗಲು ಸಾಧ್ಯವಿಲ್ಲ. ಕೈಲಾಸಪರ್ವತದ ವಿಷಯವೇ ಮೊದಲು ತಿಳಿಯುವುದು ಕಷ್ಟವಾಗಿರುವಾಗ ಅಲ್ಲಿಗೆ ಹೋಗುವ ಮಾತು ಹೇಗೆ ನಡೆದೀತು? ಅಲ್ಲಿಗೆ ಹೋಗಬೇಕೆಂದೇ ವಿಷ್ಣ್ವಾದಿ ದೇವತೆಗಳೂ, ಭಗವಂತನ ಸಕಲ ಗಣಗಳೂ ಅದ್ಯಾಪಿ ತಪಸ್ಸನ್ನಾಚರಿಸುತ್ತಿರುವರು. ॥೧೮-೧೯॥

ಅನೇಕ ಮಹರ್ಷಿಗಳು ಕೈಲಾಸ ಪರ್ವತದ ದರ್ಶನಾಕಾಂಕ್ಷಿಗಳಾಗಿ ಇನ್ನೂ ತಪಸ್ಸನ್ನಾಚರಿಸುತ್ತಲೇ ಇರುವರು. ಅಂತಹ ಋಷಿಜನರನ್ನು ಅನುಸರಿಸಿ ಅನೇಕ ಸುರರೂ ತಪಸ್ವಿಗಳಾಗಿರುವರು. ಇವರ ತಪಸ್ಸಿಗೆ ಶಿವಪ್ರಸಾದಲಾಭವೇ ಪರಮೋದ್ದೇಶವಾಗಿರುವುದು. ಅಲ್ಲಿ ಕೆಲವರು ಪಂಚಾಗ್ನಿ ಮಧ್ಯದಲ್ಲಿ ನಿಂತು ತಪಸ್ಸುಮಾಡುತ್ತಿರುವರು. ಹಲವರು ಕೇವಲ ವಾಯುಸೇವನೆಯಿಂದ ಜೀವಿಸುತ್ತಾ ಧ್ಯಾನಮಗ್ನರಾಗಿರುವರು. ॥೨೦-೨೧॥

ಮರದಿಂದ ಉದುರಿದ ಎಲೆಗಳನ್ನು ಕೆಲವರು ತಿನ್ನುತ್ತಾ, ಕೆಲವರು ಕೇವಲ ನೀರನ್ನೇ ಕುಡಿಯುತ್ತಾ, ಅನೇಕರು ಕಡಾಯಿಯಿಂದ ಹೊರಡುವ ಧೂಮವನ್ನೇ ಸೇವಿಸುತ್ತಾ, ಊರ್ಧ್ವಬಾಹುಗಳಾಗಿ ತಪಸ್ಸನ್ನಾಚರಿಸುತ್ತಿರುವರು. ॥೨೨॥

ಭಸ್ಮಚ್ಛನ್ನಾ ಭಸ್ಮಸಂಸ್ಥಾಃ ಕೇಚಿಚ್ಛ್ರೀರುದ್ರಜಾಪಕಾಃ ।
ಭಸ್ಮಾಂಕಾ ಬಿಲ್ವಮೂಲೇಷು ಕೇಚಿತ್ಪಂಚಾಕ್ಷರಾದರಾಃ ॥೨೩॥

ರುದ್ರಾಕ್ಷವರಕೋಟೀರಾಶ್ಶಿವನಾಮಪರಾಯಣಾಃ ।
ಕೇಚಿಲ್ಲಿಂಗಾರ್ಚನಪರಾಸ್ತ್ರಿಕಾಲಂ ಬಿಲ್ವಪಲ್ಲವೈಃ ॥೨೪॥

ಏವಂ ತಪೋಭಿರತ್ಯುಗ್ರೈಸ್ತಪ್ಯಂತಿ ಮುನಯಸ್ಸುರಾಃ ।
ಸದಾಶಿವಪ್ರಸಾದೋ ಹಿ ತೇಷಾಂ ಭಾವಿ ಮುನೀಶ್ವರಾಃ ॥೨೫॥

ಸರ್ವಲೋಕೇಷು ಗಂತಾರಸ್ಸರ್ವಧರ್ಮಪರಾಯಣಾಃ ।
ಪುನರಾವೃತ್ತಿನಸ್ಸರ್ವೇ ನ ಕೈಲಾಸಗತಾ ಮುನೇ ॥೨೬॥

ಯತಯೋಽಪಿ ನಿವರ್ತಂತೇ ಜ್ಞಾನನಿರ್ಧೂತಕಲ್ಮಷಾಃ ।
ಶಿವಪ್ರಸಾದಲಭ್ಯೋಽಯಂ ಕೈಲಾಸೋಽತ್ಯತಿದುರ್ಲಭಃ ॥೨೭॥

ಭಸ್ಮಲಿಪ್ತರಾಗಿ ಭಸ್ಮರಾಶಿಯಲ್ಲಿ ಕುಳಿತು ಶ್ರೀರುದ್ರಮಂತ್ರವನ್ನೇ ಜಪಿಸುತ್ತಾ ಕೆಲವರು ತಪಸ್ಸುಮಾಡುತ್ತಿರುವರು. ಇನ್ನೂ ಕೆಲವರು ಬಿಲ್ವವೃಕ್ಷದ ಬುಡದಲ್ಲಿ ಭಸ್ಮಲಿಪ್ತಾಂಗರಾಗಿ ಶಿವಪಂಚಾಕ್ಷರೀ ಮಂತ್ರವನ್ನು ಪುರಶ್ಚರಣೆ ಮಾಡುತ್ತಿರುವರು. ॥೨೩॥

ಅನೇಕರು ರುದ್ರಾಕ್ಷಿಯ ಕಿರೀಟವನ್ನು ಧರಿಸಿ ಶಿವನಾಮಗಳನ್ನೇ ಜಪಿಸುತ್ತಿರುವರು. ಹಲವರು ತ್ರಿಕಾಲದಲ್ಲಿಯೂ ಶಿವಲಿಂಗವನ್ನು ಬಿಲ್ವಪತ್ರೆಗಳಿಂದ ಅರ್ಚಿಸುತ್ತಿರುವರು. ॥೨೪॥

ಹೀಗೆ ಅನೇಕ ಋಷಿಗಳೂ, ಅನೇಕ ದೇವತೆಗಳೂ ಸದಾ ಶಿವಪ್ರಸಾದಪ್ರಾಪ್ತಿಯನ್ನೇ ಮುಖ್ಯಫಲವನ್ನಾಗಿಟ್ಟುಕೊಂಡು ಉಗ್ರವಾದ ತಪಸ್ಸನ್ನಾಚರಿಸುತ್ತಿರುವರು. ॥೨೫॥

ಪುಣ್ಯಕರ್ಮಗಳನ್ನಾಚರಿಸಿ, ಸಂಪಾದಿಸಿದ ಬ್ರಹ್ಮಾದಿಲೋಕಗಳ ಸುಖಗಳೆಲ್ಲಾ ಕ್ಷಣಿಕವಾದವುಗಳು. ಪುಣ್ಯಕ್ಷೀಣವಾದಮೇಲೆ ಪುನಃ ಅಲ್ಲಿಂದ ಭೂಲೋಕಕ್ಕೆ ಬಂದು ಜನ್ಮ ತಾಳಬೇಕು. ಕೈಲಾಸಗತರಾದವರಿಗೆ ಮಾತ್ರ ಪುನರ್ಜನ್ಮವಿರುವುದಿಲ್ಲ. ॥೨೬॥

ಜ್ಞಾನಿಗಳಾದ ಯತಿಗಳೂ ಸಹ ಸ್ವರ್ಗಾದಿಲೋಕಗಳಿಂದ ಹಿಂತಿರುಗಿ ಪುನಃ ಜನ್ಮವನ್ನು ತಾಳುವರು. ಈ ಕೈಲಾಸವಾಸವಾದರೋ ಕೇವಲ ಶಿವಪ್ರಸಾದಲಭ್ಯವೇ ಹೊರತು ಮತ್ತೆ ಯಾವುದರಿಂದಲೂ ದೊರೆಯತಕ್ಕುದಲ್ಲ. ॥೨೭॥

ಮೇರುಶೃಂಗಗಕೈಲಾಸಶಿಖರೇ ವರಶಾಂಭವಾಃ ।
ಪೂಜಯಾ ಶ್ರದ್ಧಯಾ ಶಂಭೋರೀಶಾನಸ್ಯ ಪದಂ ಗತಾಃ ॥೨೮॥

ಸುಖಿನಸ್ಸಂಪ್ರಮೋದಂತೇ ಸ್ವರ್ಗಕೋಟಿಗುಣಾಧಿಕೇ ।
ಮಹಾಕೈಲಾಸಗಮನಮಸ್ಮಾಕಂ ಕಿಂ ಪುನರ್ನೃಣಾಂ ॥೨೯॥

ಶಿವಪ್ರಸಾದಹೀನಾನಾಂ ತತ್ಕಥಾಶ್ರವಣಂ ನ ಹಿ ।
ಅನೇಕಕೋಟಿಕಲ್ಪೋತ್ಥತಪಸಾ ಪ್ರಾಪ್ಯ ಏವ ಸಃ ॥೩೦॥

ಮೇರುಮಂದರಸಂಕಾಶರತ್ನಸ್ವರ್ಣಾದಿದಾನತಃ ।
ಸತ್ರಾತಿರಾತ್ರಕಲನ್ಯೈರ್ವೇದಾಧ್ಯಯನಕೋಟಿಭಿಃ ॥೩೧॥

ಹಿಂದೆ ಶಂಭುಭಕ್ತರಾದ ಅನೇಕರು ಶ್ರದ್ಧೆಯಿಂದ ಶಂಕರನನ್ನು ಬಹುವಾಗಿ ಪೂಜಿಸಿ, ತತ್ಫಲವಾಗಿ ಕೈಲಾಸಪರ್ವತದ ಶಿಖರದಲ್ಲಿರುವ ಪರಮೇಶ್ವರನ ಸ್ಥಾನವನ್ನು ಪಡೆದಿರುವರು. ||೨೮||

ಆದರಿಂದಲೇ ಅವರು ಸ್ವರ್ಗಸುಖಕ್ಕಿಂತ ಕೋಟಿಪಾಲು ಹೆಚ್ಚಿನ ಸುಖವನ್ನು ಅನುಭವಿಸುತ್ತಲಿರುವರು. ಎಲೈ ಮಹರ್ಷಿಗಳೇ, ನಮ್ಮಂತಹ ಮನುಷ್ಯರು ಆ ಕೈಲಾಸಕ್ಕೆ ಹೋಗುವುದು ಹೇಗೆ? ನಮಗೆ ಅದು ಲಭ್ಯವಾಗುವುದೆಂತು? ಎಂದು ಸೂತರು ವಾಜಶ್ರವಸಾದಿಗಳಿಗೆ ಹೇಳುತ್ತಿರುವರು. ||೨೯||

ಶಿವಪ್ರಸಾದ ಹೀನರಾದವರಿಗೆ ಶಿವಕಥಾಶ್ರವಣವೂ ಸಹ ದೊರಕಲಾರದು. ಶಂಕರನ ಅನುಗ್ರಹವೊದಗಬೇಕಾದರೆ, ಅನೇಕ ಕೋಟಿ ಕಲ್ಪಪರ್ಯಂತವಾಗಿ ಅತಿಶಯುವಾದ ತಪಸ್ಸನ್ನಾಚರಿಸಬೇಕು. ||೩೦||

ಮೇರುಪರ್ವತದಂತೆ, ಮಂದರಾಚಲದಂತೆ ಅತಿಶಯವಾಗಿ ಬೆಲೆಬಾಳುವ ಸುವರ್ಣ, ರತ್ನ ಇವುಗಳನ್ನು ದಾನಮಾಡಿರಬೇಕು. ದೀರ್ಘಸತ್ರ, ಅತಿರಾತ್ರಯಾಗ ಮುಂತಾದುವುಗಳನ್ನು ನಡೆಸಿ, ವೇದಾಧ್ಯಯನ ಮಾಡಿ ಪರಿಶುದ್ಧರೆನಿಸಿದವರಾಗಿರಬೇಕು. ಇಂತಹವರು ಶಿವಾನುಗ್ರಹಕ್ಕೆ ಪಾತ್ರರಾಗುವರು. ||೩೧||

ಗವಾಂ ಕೋಟಿಪ್ರದಾನೈರ್ವಾ ವಿದ್ಯಯಾ ತಪಸಾಪಿ ವಾ ।
ಇಷ್ಟಾಪೂರ್ತಾದಿಧರ್ಮೈರ್ವಾ ಕೈಲಾಸಪ್ರಾಪ್ತಿರೇವ ನ ॥೩೨॥

ಶಿವಪ್ರಸಾದಾಲ್ಲಭ್ಯೋಽಯಂ ಪ್ರಸಾದೋ ದುರ್ಲಭೋ ನೃಣಾಂ ।
ದೇವ್ಯಾ ಮಯಾ ಗಣೇಶೇನ ನಂದ್ಯಾದ್ಯೈರ್ಗಣಪೈರಪಿ ॥೩೩॥

ಕೈಲಾಸಬಾಹ್ಯಪ್ರಾಕಾರೇ ತಪಸಾ ಯಾಚಿತಾ ಸ್ಥಿತಿಃ ।
ಅನೇಕಯುಗಸಂತಪ್ತತಪಸಾ ತೋಷಿತಶ್ಶಿವಃ ॥೩೪॥

ಶಿವಪ್ರಸಾದೇನ ವಯಂ ತದ್ಬಾಹ್ಯಶಿಖರಾಶ್ರಯಾಃ ।
ಗಣ್ಯಂತೇ ಸಿಕತಾ ಭೂಮೌ ಗಣ್ಯಂತೇ ದಿವಿ ತಾರಕಾಃ ॥೩೫॥

ಕೈಲಾಸಾಪಾರಶೃಂಗಸ್ಥಲಿಂಗಾನಾಂ ಗಣನಾ ನ ಹಿ ।
ತತ್ರಾಪಿ ಕೋಟಿಲಿಂಗಾನಾಮುತ್ತಮಾನಾಂ ಶ್ರುತಾ ಮಯಾ ॥೩೬॥

ಶಿವಾನುಗ್ರಹವಿಲ್ಲದೆ, ಕೋಟಿಗೋದಾನ ಮಾಡಿದರೂ, ಬ್ರಹ್ಮವಿದ್ಯಾಭ್ಯಾಸ ಮಾಡಿ ತಪಸ್ಸನ್ನಾಚರಿಸಿದರೂ, ಇಷ್ಟಾಪೂರ್ತಿಯಾದ ಧರ್ಮಗಳನ್ನಾಚರಿಸಿದರೂ ಕೈಲಾಸಪ್ರಾಪ್ತಿಯೊದಗಲಾರದು. ॥೩೨॥

ಅಂತೂ ಒಟ್ಟಿನಲ್ಲಿ ಮನುಷ್ಯರಿಗೆ ಶಿವಾನುಗ್ರಹವಾಗುವುದು ಬಹು ಕಷ್ಟ. ನಾನೂ ಸಹ ದೇವಿಯೊಡನೆಯೂ, ಗಣಪತಿಯೊಡನೆಯೂ, ನಂದಿಯೇ ಮೊದಲಾದವರ ಜೊತೆಯಲ್ಲಿ ಅನೇಕ ಯುಗಪರ್ಯಂತವಾಗಿ ಕೈಲಾಸದ ಹೊರವಳಯದಲ್ಲಿ ತಪಸ್ಸನ್ನಾಚರಿಸಿ, ಅದರಿಂದ ಶಿವನನ್ನು ಮೆಚ್ಚಿಸಿ ಈಗ ಶಿವಾನುಗ್ರಹಕ್ಕೆ ಪಾತ್ರನಾಗಿರುವೆನು. ॥೩೩-೩೪॥

ಅದರಿಂದಲೇ ಈಗ ನಾವು ಕೈಲಾಸದ ಹೊರಭಾಗದ ಶಿಖರದಲ್ಲಿ ವಾಸಿಸುತ್ತಿರುವೆವು. ಭೂಮಿಯಲ್ಲಿರುವ ಮರಳಿನ ಕಣಗಳನ್ನಾದರೂ ಎಣಿಸಬಹುದು. ಅಂತರಿಕ್ಷದಲ್ಲಿ ನಕ್ಷತ್ರಗಳ ಸಂಖ್ಯೆಯನ್ನಾದರೂ ಹೇಳಬಹುದು. ಕೈಲಾಸಪರ್ವತದಲ್ಲಿರುವ ಶಿವಲಿಂಗಗಳ ಸಂಖ್ಯೆಯನ್ನು ವಿವರಿಸುವುದು ಸಾಧ್ಯವಲ್ಲ. ಅದರಲ್ಲಿಯೂ ಉತ್ತಮವಾದ ಕೋಟಿಲಿಂಗಗಳ ಮಹಿಮೆಯು ನನಗೆ ಶ್ರುತವಾಗಿದೆ. ॥೩೫-೩೬॥

ತತೋಽಪಿ ಲಕ್ಷಲಿಂಗಾನಾಂ ತತೋಽಯುತಸಹಸ್ರಕಂ ।
ಉತ್ತಮಾನಾಂ ಚ ದೇವ್ಯೈ ತದ್ಗದತಾ ಶ್ರೀಶಿವೇನ ಹಿ ॥೩೭॥

ಗಣನಾ ಗಣ್ಯತೇ ಕೇನ ಕಲ್ಪಕೋಟಿಶತೈರಪಿ ।
ಅನಿರ್ವಚನಮಾಯಸ್ಯ ಮಾಯಿನಶ್ಶ್ರೀತ್ರಿಶೂಲಿನಃ ॥೩೮॥

ಕೋ ವೇದ ಮಹಿಮಾನಂ ತು ತತ್ರ ತಸ್ಮೌಲಿಲಿಂಗಗಂ ।
ಸ ವೇದ ವೇದನಿಶ್ವಾಸಸ್ಸರ್ವಜ್ಞಶ್ಶಶಿಶೇಖರಃ ॥೩೯॥

ಶಿವಸನ್ನಿಧಿರೇವ ಸನ್ನಿಧಿಸ್ಸ್ಯಾತ್ ।
ವಿಬುಧಾಧೀಶಪದಾಬ್ಜರತ್ನವಾರಿಧಿಃ ।
ಜನಿನಾಶಪ್ರಭವಾಪರಾಧಸಂಧಿಃ ।
ಪ್ಲುತಿಜಾಪಾರವಿಶೇಷತೋಷಗಾಧೀಃ ॥೪೦॥

ನಿಧಿರೇವಾಖಿಲಸಂಪದಾಂ ಯುಗಾಧಿ ।
ಭರ್ವಭಕ್ತಾಮಲಚೇತ (ದು) ದಾರಿತಾಖಿಲಾಧಿಃ ॥೪೧॥

ನನಗೂ ತಿಳಿಯದ ಲಕ್ಷಾಂತರ ಲಿಂಗಗಳ ಮಹಿಮೆಯನ್ನು ಸಾಕ್ಷಾತ್ಪರಮೇಶ್ವರನೇ ದೇವಿಗೆ ಹೇಳಿರುವನು. ಪಾರ್ವತಿಗೂ ತಿಳಿಯದಿರುವ ಲಿಂಗಗಳು ಇನ್ನೂ ಅಸಂಖ್ಯಾತವಾಗಿರುವುವು. ॥೩೭॥

ಹೀಗಿರುವಲ್ಲಿ ಈಶ್ವರ ಲಿಂಗಗಳ ಸಂಖ್ಯೆಯನ್ನು ಕಲ್ಪಕೋಟಿಪರ್ಯಂತವಾಗಿ ಎಣಿಸಿದರೂ ಸಾಧ್ಯವಾಗಲಾರದು. ಏಕೆಂದರೆ ಪರಮೇಶ್ವರನು ತನ್ನ ಮಾಯಾಬಲದಿಂದ ಅಷ್ಟು ಅದ್ಭುತವನ್ನು ತೋರಿಸಲು ಶಕ್ತನಾಗಿರುವನು. ॥೩೮॥

ಆ ಕೈಲಾಸಶಿಖರದಲ್ಲಿರುವ ಲಿಂಗಗಳ ಮಹಿಮೆಯನ್ನು ಸಂಪೂರ್ಣವಾಗಿ ಅರಿಯುವವನು ಯಾರಿರುವನು ? ಯಾವನ ನಿಶ್ವಾಸಗಳೇ ವೇದಗಳಾಗಿವೆಯೋ, ಯಾವನು ಸರ್ವಜ್ಞನೆನಿಸಿಕೊಂಡಿರುವನೋ ಅಂತಹ ಚಂದ್ರಶೇಖರನೊಬ್ಬನೇ ಅದರ ಮಹಿಮೆಯನ್ನು ಹೇಳತಕ್ಕವನು. ॥೩೯॥

ಪರಶಿವನ ಸನ್ನಿಧಿಯೆಂಬುದೇ, ಪರಮಾತ್ಮ ಸನ್ನಿಧಿ. ಅಲ್ಲಿ ಸರ್ವದಾ ದೇವದೇವನಾದ ಪರಶಿವನ ಪಾದಕಮಲದ ಕಾಂತಿಯು ರತ್ನಮಯವಾದ ಸಮುದ್ರದಂತೆ ಪ್ರಕಾಶಿಸುತ್ತಿರುವುದು. ಆ ಸನ್ನಿಧಿಯನ್ನು ಹೊಂದಿದವರಿಗೆ ಜನ್ಮ, ಮರಣಾದಿಗಳ

ಏವಂ ಕೈಲಾಸಶೈಲಾಮಲಶಿಖರವರೈರ್ಮೌಲಿಕುಂಭೈಕೆಜಾಲೈ ।
ಸ್ತತ್ರಾಪಾರಶಿವಾಲಯಸ್ಥಿತಮಹಾಲಿಂಗೌಘಲಿಂಗಾಶ್ರಯೈಃ ।
ಈಶಾಸಾರಮನೋವಿಲಾಸಜನಿತೈರ್ದೃಷ್ಟ್ವಾ ಮಹೇಶಸ್ಸ್ವಯಂ ।
ಬಾಲಾರ್ಧಾರ್ಕಕೃತಿರಿಂದುಮೌಲಿರನಲಾಲಂಕಾರಫಾಲಾಕ್ಷಕಃ ॥೪೨॥

ಕಾಲಾರಿಃ ಕಲಧೌತಶೈಲಶಿಖರಂ ।
ಲಿಂಗಾಲಿಪೂರ್ಣಂ ಕರೋತ್ (?) ॥೪೩॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸವಾಸಮಹಿಮಾ ನಾಮ
ಸಪ್ತತ್ರಿಂಶೋಽಧ್ಯಾಯಃ

ತೊಡಕುಗಳಿಲ್ಲ. ಅತಿಶಯವಾದ ಸುಖಸಾಮ್ರಾಜ್ಯವನ್ನು ಒದಗಿಸುವ ಶುದ್ಧ ತೇಜಸ್ಸಿನಂತೆ ಆ ಶಿವಸನ್ನಿಧಿಯು ಬೆಳಗುತ್ತಿರುವುದು. ಸಕಲ ಸಂಪತ್ತುಗಳಿಗೂ ಅದೇ ಸ್ಥಿತಿಯಂತಿರತಕ್ಕದ್ದು. ಸಮಸ್ತ ಯುಗಗಳಿಗೂ ಮೂಲಭೂತವಾಗಿದ್ದು ಶಂಕರನ ಭಕ್ತರ ಸಕಲ ದುರಿತಗಳನ್ನೂ ನಾಶಮಾಡುವ ಸಾಮರ್ಥ್ಯವುಳ್ಳದ್ದು ಆ ಶಿವಸನ್ನಿಧಿ. ॥೪೦-೪೧॥

ಹೀಗೆ ಕೈಲಾಸಶಿಖರವು ಅನೇಕ ಕಲಶಗಳಿಂದಲೂ, ಅಸಂಖ್ಯಾತವಾದ ಶಿವಲಿಂಗಗಳಿಂದಲೂ, ಶಿವಾಲಯಗಳಿಂದಲೂ ತುಂಬಿ ತುಳುಕಾಡುತ್ತಿರುವುದನ್ನೂ, ತನ್ನ ಇಷ್ಟಕ್ಕೆ ಅನುಸಾರವಾಗಿ ಸಂತೋಷಪ್ರದಗಳಾಗಿರುವ ಅನೇಕ ಸುಮನೋಹರವಾದ ವಸ್ತುಗಳ ಸಮೂಹವನ್ನೂ ನೋಡಿ, ಚಂದ್ರಶೇಖರನೂ, ಅಗ್ನಿನೇತ್ರಧಾರಿಯೂ, ಆದ ಮಹೇಶ್ವರನು ಸಂತೋಷಪಡುತ್ತಾ ಅಲ್ಲಿಯೇ ವಾಸಿಸುತ್ತಿರುವನು. ॥೪೨॥

ಮತ್ತು ಯಮನಿಗೂ ಭಯಂಕರನಾಗಿ ಕಂಡುಬರುವ ಮಹೇಶ್ವರನು, ರಜತ ರಾಶಿಯಿಂದ ಪ್ರಕಾಶಿಸುತ್ತಿರುವ ಶಿಖರಗಳುಳ್ಳ ಕೈಲಾಸಪರ್ವತವನ್ನು ಶಿವಲಿಂಗಗಳ ಸಮೂಹದಿಂದ ಕೂಡಿರುವುದನ್ನಾಗಿ ಮಾಡಿರುವನು ಎಂದು ಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೪೩॥

ಇಲ್ಲಿಗೆ ಶಿವರಹಸ್ಯದ ಪ್ರಥಮಾಂಶದಲ್ಲಿ ಕೈಲಾಸವಾಸಮಹಿಮೆಯನ್ನು
ವಿವರಿಸುವ ಮೂವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಅಷ್ಟತ್ರಿಂಶೋಽಧ್ಯಾಯಃ

### ಕೈಲಾಸಲಿಂಗವರ್ಣನಂ

|| ಜೈಗೀಷವ್ಯ ಉವಾಚ ||

**ಭಗವನ್ ತಾರಕಾರಾತೇ ಶಿವಭಕ್ತವರಾಮಲ ।**
**ನಮಾಮಿ ತ್ವತ್ಪದಾಂಭೋಜಂ ಕಿಂ ತದ್ದೇವ್ಯೈ ಶಿವೋದಿತಂ ||೧||**

**ರಹಸ್ಯಂ ವಾ ಪ್ರಕಾಶಂ ವಾ ತನ್ಮೇ ವ್ಯಾಖ್ಯಾತುಮರ್ಹಸಿ ।**
**ತದುಕ್ತಂ ಸಂಪ್ರಧಾರ್ಯೈವ ಸ್ಕಂದೋ ಮಂದಸ್ಮಿತಾಧರಃ ||೨||**

**ಭವಭಕ್ತಂ ಮಹಾಪ್ರಾಜ್ಞಂ ಸುರಾಣಾಂ ಶೃಣ್ವತಾಂ ತದಾ ||೩||**

### ಶ್ರೀಶಿವರಹಸ್ಯದಲ್ಲಿ ಮೂವತ್ತೆಂಟನೆಯ ಅಧ್ಯಾಯ

ಜೈಗೀಷವ್ಯಮಹಾಮುನಿಯು, ಕುಮಾರಸ್ವಾಮಿಯನ್ನು ಮತ್ತೆ ಪ್ರಾರ್ಥಿಸುತ್ತಾ, "ತಾರಕಾಸುರನಾಶಕನೂ ಶಿವಭಕ್ತಾಗ್ರೇಸರನೂ ಆದ ಮಹಾತ್ಮನೇ, ಪಾರ್ವತಿಗೆ ಪರಮೇಶ್ವರನು ಹೇಳಿದ ಶಿವರಹಸ್ಯವನ್ನು ನಮಗೆ ಉಪದೇಶಿಸು. ||೧||

ಅದು ಎಷ್ಟೇ ರಹಸ್ಯವಾಗಿರಲಿ, ಅಥವಾ ಪ್ರಕಟವಾಗಿ ಹೇಳುವುದಾಗಲಿ, ಅದನ್ನು ನನಗೆ ವಿವರಿಸಿ ಹೇಳಬೇಕು.'' ಎಂದು ಕೇಳಿಕೊಳ್ಳಲು, ಆಗ ಮುಗುಳ್ನಗೆಯಿಂದ ಕೂಡಿದ ಕುಮಾರಸ್ವಾಮಿಯು, ಈಶ್ವರಭಕ್ತನೂ, ಮಹಾ ಪ್ರಾಜ್ಞನೂ ಆದ ಜೈಗೀಷವ್ಯನಿಗೂ ಶುಶ್ರೂಷುಗಳಾದ ದೇವತೆಗಳಿಗೂ ಮುಂದಿನ ವಿಷಯಗಳನ್ನು ವಿವರಿಸಲಾರಂಭಿಸಿದನು. ||೨-೩||

|| ಸ್ಕಂದ ಉವಾಚ ||

ಮುನೀನಾಂ ಚ ಸುರಾಣಾಂ ಚ ಗಣೇಶಾನಾಂ ಚ ಸನ್ನಿಧೌ ।
ಪ್ರೋಕ್ತವಾನ್ ಶ್ರೀಮಹಾದೇವಂ ಧ್ಯಾತ್ವಾ ಹೃತ್ಪಂಕಜೇಽಮಲೇ ॥೪॥

|| ಸ್ಕಂದ ಉವಾಚ ||

ದೇವ್ಯಾ ಕೈಲಾಸಜೋತ್ತುಂಗಶಿಖರೇ ವರಗೋಪುರೇ ।
ಏಕಾಕಿನಾ ಸಂಚರತಾ ವಿಸ್ಮಿತಾಕ್ಷ್ಣೇಣ ಪಶ್ಯತಾ ॥೫॥

ಶಿವೇನ ನಂದಿತಾ ದೇವೀ ಪ್ರಾಹ ಪ್ರಾಂಜಲಿರೀಶ್ವರಂ ॥೬॥

|| ದೇವ್ಯುವಾಚ ||

ದೇವದೇವ ಮಹಾದೇವ ಕರುಣಾವರುಣಾಲಯ ।
ಏಣಾಂಕಮೌಲೇ ಸರ್ವಜ್ಞ ಗಂಗಾಜಲಜಟಾಧರ ॥೭॥

ಭವ ಭರ್ಗಾಮರೇಂದ್ರೇಂದ್ರ ಫಣಾಮಣಿವಿಭೂಷಿತ ।
ವೃಷಧ್ವಜೇಶ ಕಾಮಾರೇ ಪುರಾಂತಕ ಯಮಾಂತಕ ॥೮॥

- ಮೊದಲು ಕುಮಾರಸ್ವಾಮಿಯೂ, ಮಹಾದೇವನನ್ನು ನಮಸ್ಕಾರಪೂರ್ವಕವಾಗಿ ಧ್ಯಾನಿಸಿ, ಅಲ್ಲಿ ನೆರೆದಿದ್ದ ದೇವರ್ಷಿಗಳೆಲ್ಲರಿಗೂ ತಿಳಿಯುವಂತೆ ಉಪದೇಶಿಸಲಾರಂಭಿಸಿದನು. ||೪||

" ಹಿಂದೆ ಒಂದುದಿನ ಕೈಲಾಸಪರ್ವತದ ಉನ್ನತವಾದ ಶಿಖರದಲ್ಲಿರುವ ಗೋಪುರಪ್ರಾಂತದಲ್ಲಿ, ಪರಮೇಶ್ವರನು ಒಬ್ಬನೇ ಸಂತೋಷದಿಂದ ಸಂಚಾರಮಾಡುತ್ತಿದ್ದನು. ಆಗ ದೇವಿಯು ಅಂಜಲಿಬದ್ಧಳಾಗಿ ನಿಂತು ಪರಮೇಶ್ವರನನ್ನು ಕುರಿತು ಹೀಗೆ ಕೇಳಿಕೊಂಡಳು. ||೫-೬||

" ಎಲೈ ದೇವದೇವನೇ, ಮಹಾದೇವನೇ, ನೀನು ಕರುಣಾಸಮುದ್ರನಾಗಿರುವೆ. ಚಂದ್ರನನ್ನು ಶಿರಸ್ಸಿನಲ್ಲಿಯೂ, ಗಂಗಾಜಲವನ್ನು ಜಟೆಯಲ್ಲಿಯೂ ಧರಿಸಿ ಸರ್ವಜ್ಞನೆನಿಸಿಕೊಂಡಿರುವೆ. ||೭||

ಸಂಸಾರದುಃಖನಾಶಕನೂ, ಲೋಕರಕ್ಷಕನೂ, ದೇವೇಂದ್ರನಿಗೂ ಇಂದ್ರನೆನಿಸಿರುವನೂ ನೀನೇ. ನೀನು ನಾಗರತ್ನಗಳಿಂದ ಕೂಡಿದ ಆಭರಣವುಳ್ಳವನಾಗಿಯೂ,

ಖಟ್ವಾಂಗಡಮರೂದ್ದಾಮಘೋಷಘೋಷಿತವಿಷ್ಟಪ ।
ತ್ರಿಶೂಲಪಾಣೇ ಭೂತೇಶ ವ್ಯೋಮಕೇಶ ದಿಗಂಬರ ॥೯॥

ತ್ರಿಜಗಜ್ಜಾಲನಿರ್ಮಾಣಸ್ಥಿತಿನಾಶಕರ ಪ್ರಭೋ
ವಿಸ್ಮಯಸ್ತವ ನಾಸ್ತ್ಯೇವ ಲೀಲೇಯಂ ತವ ಶಂಕರ ॥೧೦॥

ಲೋಕಾ ಲೋಕಾ ಬ್ರಹ್ಮವಿಷ್ಣುಹರಾಮರವರಾಸ್ಸುರಾಃ ।
ತೇಷಾಮುತ್ಥಾನಸಂಸ್ಥಾನವಿನಾಶನಮಪೀಶ್ವರ ॥೧೧॥

ತ್ವದಪಾಂಗೈಕಸಂಗೇನ ಸರ್ವೇಷಾಂ ಪ್ರಲಯೋದಯೌ ।
ತವ ಕೋ ವಿಸ್ಮಯೋ ಹೇತುಸ್ತದ್ಬ್ರೂಹಿ ಪರಮೇಶ್ವರ ॥೧೨॥

ವೃಷಭಧ್ವಜನಾಗಿಯೂ, ಕಾಮ, ಯಮ, ತ್ರಿಪುರಾಸುರ, ಇವರುಗಳನ್ನು ಧ್ವಂಸ ಮಾಡಿದವನಾಗಿಯೂ ಇರುವೆ. ||೮||

ಖಟ್ವಾಂಗ, ಡಮರುಗ ಮೊದಲಾದ ವಾದ್ಯಧ್ವನಿಗಳಿಂದ ಲೋಕವನ್ನೇ ಧ್ವನಿಗೈಯ್ಯಿಸುತ್ತಿರುವೆ. ತ್ರಿಶೂಲಧಾರಿಯಾಗಿ ಪಂಚಭೂತಗಳಿಗೂ ಅಧಿಪತಿಯೆನಿಸಿ ಆಕಾಶವನ್ನೇ ಕೇಶವನ್ನಾಗಿ ಮಾಡಿಕೊಂಡಿರುವೆ. ||೯||

ಶಂಕರನೇ, ಲೋಕತ್ರಯಗಳ ಸೃಷ್ಟಿ, ಸ್ಥಿತಿ, ಲಯಗಳು ನಿನ್ನ ಇಷ್ಟವಂತೆಯೇ ನಡೆಯುತ್ತಿವೆ. ಇವೆಲ್ಲವೂ ನಿನ್ನ ಲೀಲೆಯೇ ಹೊರತು ಮತ್ತೆ ಬೇರೆಯಲ್ಲ. ಈ ವಿಷಯದಲ್ಲಿ ನಿನಗೆ ಯಾವ ಆಶ್ಚರ್ಯವೂ ಕಂಡುಬರುತ್ತಿಲ್ಲ. ||೧೦||

ಸಕಲ ಲೋಕಗಳನ್ನೂ, ಸಮಸ್ತಜನರನ್ನೂ, ಬ್ರಹ್ಮ, ವಿಷ್ಣು, ಈಶ್ವರ, ಸಕಲ ದೇವತೆಗಳು, ಇವರೆಲ್ಲರನ್ನೂ ಉದ್ಧರಿಸುವುದು, ರಕ್ಷಿಸುವುದೂ, ಕೊನೆಗೆ ನಾಶಮಾಡುವುದೂ, ಇವೆಲ್ಲವೂ ನಿನ್ನ ಕಾರ್ಯಜಾಲಗಳೇ ಅಲ್ಲವೇ ? ||೧೧||

ಲೋಕದ ಸೃಷ್ಟಿ, ಮತ್ತು ಲಯಗಳು ನಿನ್ನ ಕಟಾಕ್ಷಪಾತದಿಂದಲೇ ನಡೆದು ಹೋಗುತ್ತವೆ. ಇದರಿಂದ ನಿನಗೆ ಆಶ್ಚರ್ಯವಾಗುವುದೆಲ್ಲಿಬಂತು ? '' ||೧೨||

|| ಈಶ್ವರ ಉವಾಚ ||

ಶೃಣು ದೇವಿ ಪ್ರವಕ್ಷ್ಯಾಮಿ ಗಿರೀಂದ್ರಪ್ರವರನಂದಿನಿ ।
ತ್ವಯಿ ಗೋಪ್ಯಂ ನ ಮೇ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥೧೩॥

ನ ಪ್ರಕಾಶ್ಯಂ ತ್ವಯಾ ದೇವಿ ರಹಸ್ಯಂ ಮಮ ಹೃದ್ಗತಂ ।
ತಥಾಪಿ ತ್ವಯಿ ವಕ್ಷ್ಯಾಮಿ ಲಿಂಗಾಧ್ಯಾಯಮಿಮಂ ಶಿವೇ ॥೧೪॥

ಕೈಲಾಸಾಚಲಮೌಲಿಸ್ಥಂ ಲಿಂಗಮಂಡಲಮಂಬಿಕೇ ।
ತಜ್ಜ್ಞಾತುಂ ನೈವ ಶಕ್ಯಂ ಹಿ ಮಯ್ಯೈವ ಮನಸಾ ತತಂ ॥೧೫॥

ಕೋಟಿಲಿಂಗಾಕೃತಿರಹಂ ತತ್ಪೂಜಾಕಲ್ಪಕೋಽಪ್ಯಹಂ ।
ನ ತಾನಿ ದೇವಮುನಿಭಿರ್ಗಂಧರ್ವೈಃ ಪೂಜಿತಾನ್ಯಮೇ ॥೧೬॥

ಎಂದು ಪ್ರಾರ್ಥಿಸಿದ ಪಾರ್ವತಿಯನ್ನು ಕುರಿತು ಪರಮೇಶ್ವರನು ಕೆಲವು ರಹಸ್ಯಗಳನ್ನು ಉಪದೇಶಿಸತೊಡಗಿದನು. "ಎಲೌ ದೇವಿಯೇ, ಕೇಳು. ನಿನಗೆ ಉಪದೇಶಿಸಬಾರದಂತಹ ರಹಸ್ಯವು ಯಾವುದಿರುವುದು ? ||೧೩||

ನನ್ನ ಮನಸ್ಸಿನಲ್ಲಿ ಅಡಗಿರುವ ರಹಸ್ಯವನ್ನು ಮಾತ್ರ ನೀನು ಯಾರಿಗೂ ಉಪದೇಶಿಸಬಾರದು. ನಿನ್ನ ಮೇಲಿನ ವಿಶ್ವಾಸದಿಂದ ಈಗ ಲಿಂಗಾಧ್ಯಾಯವೆಂಬ ವಿಷಯಪೂರಿತವಾದ ರಹಸ್ಯವೊಂದನ್ನು ಹೇಳುವೆನು. ||೧೪||

ಕೈಲಾಸಪರ್ವತದ ಶಿಖರದಲ್ಲಿರುವ ಲಿಂಗಗಳ ಸಮೂಹವನ್ನೂ, ಅವರ ಮಹಿಮೆಯನ್ನೂ ಅರಿಯಲು ನನಗೇ ಅಸಾಧ್ಯವಾಗಿದೆ. ಈ ಲಿಂಗರಾಶಿಯೆಲ್ಲವೂ ನನ್ನ ಮಾನಸಪರಿಕಲ್ಪಿತವೇ ಆಗಿದೆ. ||೧೫||

ಶಿವಲಿಂಗಾರ್ಚನೆಯಲ್ಲಿ ನಾನು ಆಸಕ್ತನಾಗಿದ್ದರೂ ಕೋಟಿಲಿಂಗಾಕೃತಿಯುಳ್ಳವನು ನಾನೇ. ಅಲ್ಲಿರುವ ಲಿಂಗಸಮೂಹವನ್ನು ಪೂರ್ತಿಯಾಗಿ ಇಲ್ಲಿನವರೆಗೆ ಯಾವ ದೇವತೆಗಳಾಗಲಿ, ಋಷಿಗಳಾಗಲಿ ಪೂಜಿಸಿಲ್ಲ. ||೧೬||

ನಾಮರೇಂದ್ರವರ್ಯೈರ್ದೇವಿ ಶ್ರುತಾನಿ ಕಿಮು ದರ್ಶನಂ ।
ಪೂಜನೇ ಕಾ ಕಥಾ ದೇವಿ ಚಾಗಮ್ಯೋ ಮಮ ಭೂಧರಃ ॥೧೭॥

ತತ್ಪಶ್ಯಾಮಿ ಪ್ರಸನ್ನೇನ ಮನಸಾ ವಿಸ್ಮಯೇನ ಚ ।
ಮದೀಕ್ಷಣೇನ ಸರ್ವೇಷಾಂ ಲಿಂಗಾನಾಂ ಪೂಜನಂ ಭವೇತ್ ॥೧೮॥

ಶಿವೇ ಪಶ್ಯ ಮಹಾದೇವಿ ಯಾವತ್ತೇ ದೃಷ್ಟಿಸಂತತಿಃ ॥೧೯॥

ಲಿಂಗಮಂಡಲಮಿದಂ ನಗಾತ್ಮಜೇ
ಚಂದ್ರಖಂಡಲಲಿತೋತ್ತಮಾಂಗಕಂ ।
ಕುಂಡಲೀಶಸುಫಣಾವಿಭೂಷಿತಂ
ಪಾಪಜಾಲಸುಗಿರೀಂದ್ರಖಂಡನಂ ॥೨೦॥

ಪುಂಡ್ರಶೋಭಿತಕಪಾಲಮಾಲಕಂ
ಬಿಲ್ವಚಂದನಸುಪಂಕಜಾರ್ಚಿತಂ ।

ದೇವೇಂದ್ರನೇ ಮೊದಲಾದ ಶ್ರೇಷ್ಠದೇವತೆಗಳೂ ಈ ಲಿಂಗಗಳ ಸ್ವರೂಪವನ್ನೇ ಕೇಳಿಲ್ಲ. ಇನ್ನು ನೋಡಿರುವುದು ಹೇಗೆ? ನನ್ನ ಈ ಕೈಲಾಸಪರ್ವತಕ್ಕೆ ಬರುವುದೇ ಅವರಿಗೆ ಕಷ್ಟವಾಗಿರುವಾಗ ಇನ್ನು ಪೂಜಿಸುವುದು ತಾನೆ ಹೇಗಾದೀತು? ॥೧೭॥

ಅಂತಹ ದಿವ್ಯಲಿಂಗಗಳ ನಾಲನ್ನು ನಾನು ನನ್ನ ಪ್ರಸನ್ನಕರವಾದ ದಿವ್ಯ ನೋಟಗಳಿಂದಲೇ ಪೂಜಿಸಿಬಿಡುವೆನು. ದೇವಿಯೇ, ನಿನ್ನ ದರ್ಶನಶಕ್ತಿಯು ಎಷ್ಟಿರುವುದೋ ಅಷ್ಟನ್ನೂ ಉಪಯೋಗಿಸಿ ಈ ಲಿಂಗಗಳ ಸಮೂಹವನ್ನು ನೋಡು. ॥೧೮-೧೯॥

ಪಾರ್ವತಿಯೇ, ಈ ಲಿಂಗಸಮೂಹಗಳೆಲ್ಲವೂ ಅರ್ಧಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿಕೊಂಡಿರುವುವು. ಆದಿಶೇಷನ ಫಣಾಮಣಿಗಳಿಂದ ಅಲಂಕೃತವಾಗಿರುವುವು. ಪಾಪರಾಶಿಯೆಂಬ ಪರ್ವತವನ್ನು ಕತ್ತರಿಸುವ ವಜ್ರಾಯುಧದಂತಿರುವುವು. ॥೨೦॥

ಎಲ್ಲ ಲಿಂಗಗಳೂ ತ್ರಿಪುಂಡ್ರಾಂಕಿತಗಳಾಗಿವೆ. ಕಪಾಲಮಾಲೆಗಳಿಂದಲೂ, ಬಿಲ್ವಪತ್ರೆ, ಚಂದನ, ದಿವ್ಯಕಮಲ ಇವುಗಳಿಂದಲೂ ಅಲಂಕೃತವಾಗಿವೆ. ಇವುಗಳನ್ನು

ಪಶ್ಯ ಪಶ್ಯ ಗಿರಿಜೇ ನಗಮೌಲೌ
ತೋಷದಾಯಕಮತೀವ ಮನೋಜ್ಞಂ ॥೨೦॥

ಕೈಲಾಸೋಽಯಮತೀವ ಸುಂದರಮಹಾಲಿಂಗಾಲಯಾನಾಂ ಶಿವೇ
ಕೋಟೀಭಿಃ ಪರಿತೋ ವೃತೋ ಮಣಿಗೃಹೈಸ್ತಾದೃಕ್ಷಲಿಂಗೈರಪಿ ।
ಮಾಲೂರೋತ್ತಮಶಾಖಿಶೇಖರಶಿಖಸ್ತಸ್ಯಾಚ್ಛಪುಷ್ಪೈಃ ಫಲೈ
ರಾನಮ್ರಚ್ಛದಭಾರಪಲ್ಲವಯುತೈಸ್ತದ್ಗಂಧಬಂಧಾನಿಲಃ ॥೨೨॥

ಶಿಖಿಶಿಖಿಕುಲಾಗ್ರಪಿಂಛಭಾರೈ
ರ್ಮಮ ಲಿಂಗಾಲಯಮಾರ್ಜನಂ ಸದೈವ ।
ವನರೇಣುಧ್ಭವದಾವಮಧ್ಯಲಗ್ನೈ
ಸ್ತಗರಾಮೋದಸುಧೂಪಿತಂ ಸದೈವ ॥೨೩॥

ಮಣಿಗರ್ಭಗೃಹೋತ್ಥರತ್ನದೀಪೈ
ಸ್ಸತತಂ ದೀಪಿತಮೇವ ಲಿಂಗಸಂಘಂ ।

ಈ ಕೈಲಾಸಪರ್ವತ ಶಿಖರದಲ್ಲಿ ನೋಡುವುದು ನನಗೆ ಅತ್ಯಂತ ಹರ್ಷದಾಯಕ ವಾದದ್ದು. ॥೨೧॥

ಸುಂದರವಾದ ಶಿವಲಿಂಗಾಲಯಗಳಿಂದಲೂ, ರತ್ನಗೃಹಗಳಿಂದಲೂ, ಶಿವಲಿಂಗ ಗಳಿಂದಲೂ ಕೂಡಿ ಹೊಳೆಯುತ್ತಿರುವ ಶಿಖರಗಳೂ, ಪುಷ್ಪ, ಫಲ, ತಳಿರುಗಳಿಂದ ಕೂಡಿ ರಂಜಿಸುವ ಉತ್ತಮವಾದ ಬಿಲ್ವವೃಕ್ಷಗಳೂ, ಅವರ ಮೇಲೆ ಬೀಸುವ ಸುಗಂಧ ಮಯವಾದ ಮಂದಮಾರುತವೂ ಈ ಕೈಲಾಸಪರ್ವತವನ್ನು ಬಹುವಾಗಿ ಅಲಂಕರಿ ಸುತ್ತಿರುವುವು. ॥೨೨॥

ನವಿಲುಗಳು ತಮ್ಮ ಗರಿಗಳ ಭಾರದಿಂದ ಕುಣಿದಾಡುತ್ತಾ ಶಿವಲಿಂಗಾಲಯ ಗಳ ಕಸವನ್ನು ಗುಡಿಸುತ್ತಿರುವುವು. ಕಾಡುಕಿಚ್ಚಿನ ಮಧ್ಯೆ ಸಿಕ್ಕಿ ಉರಿಯುತ್ತಿರುವ ತಗರವೃಕ್ಷದ ವಾಸನೆಯೇ ಸರ್ವದಾ ಧೂಪದಂತಾಗಿರುವುದು. ॥೨೩॥

ಈ ಲಿಂಗಸಂಘಗಳಿಗೆ ಪ್ರತ್ಯೇಕ ದೀಪಗಳೇ ಬೇಕಿಲ್ಲ. ಏಕೆಂದರೆ, ಗರ್ಭಗೃಹ ದಲ್ಲಿರುವ ಪ್ರಕಾಶಮಾನವಾದ ರತ್ನಗಳು ದೀಪಗಳಂತೆಯೇ ಸರ್ವದಾ ಹೊಳೆಯು

ವನಬಿಲ್ವಚ್ಛದಪುಷ್ಪಗಂಧವಾಹೈ
ರಭಿನೀತೈಶ್ಚ ಸುಪೂಜಿತಾನಿ ಪಶ್ಯ ॥೨೪॥

ಪಾಟಲಪಟಲೈಶ್ಚ ಕರ್ಣಿಕಾರೈ
ಸ್ಸರಸೋತ್ಫುಲ್ಲಸಮುಲ್ಲಸತ್ಪರಾಗೈಃ ।
ಅರವಿಂದೈಃ ಕುರುವಿಂದಬೃಂದವರ್ಣೈ
ರ್ನವನೀಲೋತ್ಪಲಹಲ್ಲಕೈಸ್ಸುಫುಲ್ಲೈಃ ॥೨೫॥

ಸಿತರಕ್ತಾಮಲವರ್ಣಶೀರ್ಯವೃತ್ತೈ
ರತಿಗಂಧೈರ್ಮಕರಂದಬೃಂದಲೀಲೈಃ ॥೨೬॥

ಮಂದಾರೈರತಿಸುಂದರೈರ್ಮಮ ಶಿವೇ ಲಿಂಗಾಲಿಮೌಲಿಸ್ಸದಾ
ಮಲ್ಲೀಫುಲ್ಲಸುಪುಂಡರೀಕಕುಮುದೈಸ್ಸತ್ಕರ್ಣಿಕಾರೈಶ್ಶಿವೇ ।

ತ್ತಿರುವುವು. ಅಲ್ಲದೆ ವನಬಿಲ್ವ ಮತ್ತು ವನಪುಷ್ಪಗಳ ಸುವಾಸನೆಯನ್ನು ಹೊತ್ತು ತರುವಂತಹ ವಾಯುವು ಸರ್ವದಾ ಲಿಂಗವನ್ನು ಸುಗಂಧದಿಂದ ಸೇವಿಸುತ್ತಲೇ ಇರುವುದು. ॥೨೪॥

ಅಲ್ಲದೆ ಸುಗಂಧಮಯವಾದ ಪಾದರೀಹೂವುಗಳೂ, ಕರ್ಣಿಕಾರಪುಷ್ಪಗಳೂ, ರಸವತ್ತಾದ ಮತ್ತು ಅರಳಿದ ಕಮಲಗಳೂ, ಕುರುವಿಂದ ಪುಷ್ಪಸಮೂಹಗಳೂ, ಸರ್ವದಾ ಶಿವಲಿಂಗಗಳ ಮೇಲೆ ವಿರಾಜಿಸುತ್ತಲೇ ಇರುವುವು. ಮತ್ತು ಹೊಸದಾದ ನೀಲೋತ್ಪಲಗಳೂ, ಕಲ್ಹಾರಪುಷ್ಪಗಳೂ, ಕೆಂಪು ಮತ್ತು ಬಿಳಿಯ ಬಣ್ಣಗಳಿಂದ ಕೂಡಿ ವರ್ತುಲಾಕಾರವಾಗಿ, ಸುಗಂಧವಾದ ಮಕರಂದವನ್ನು ಎರಚುವ ವಿಧವಿಧವಾದ ಪುಷ್ಪಗಳೂ ಶಿವಲಿಂಗಗಳನ್ನು ಸರ್ವದಾ ಅಲಂಕರಿಸಿರುತ್ತವೆ. ॥೨೫-೨೬॥

ಮೇಲೆ ಹೇಳಿದಂತೆ ಅತ್ಯಂತ ರಮಣೀಯವಾಗಿ ಕಂಡುಬರುವ ಮಂದಾರ ಪುಷ್ಪಗಳೂ, ಮಲ್ಲಿಗೆ, ಅರಳಿದ ಬಿಳಿಯಕಮಲ, ಕೈರವಕುಸುಮ, ಕರ್ಣಿಕಾರ ಇವೇ ಮೊದಲಾದ ಹೂವುಗಳು ಅಲ್ಲದೆ, ಅಮೃತದ ಸಾರವನ್ನು ಹೊರಸೂಸುವಂತಹ ದಿವ್ಯ ಫಲಗಳು ನೈವೇದ್ಯಕ್ಕಾಗಿ ಇಲ್ಲಿ ಸಿದ್ಧವಾಗಿವೆ. ॥೨೭॥

ದೇವಿಯೇ, ಕೈಲಾಸಶಿಖರದ ಮೇಲಿರುವ ಲಿಂಗಸಮೂಹಗಳಿಗೆ, ಆನೆಗಳು ತಾವು ಸೊಂಡಲಿನಿಂದ ತುಂಬಿ ತಂದಿರುವ ಶೀತಲೋದಕವನ್ನು ಅಭಿಷೇಕ ಮಾಡು

ಸಂಛನ್ನಾನಿತರಾಂ ಸದಾಘನಫಲೈಃ ಪ್ರೋದ್ಯತ್ಸುಧಾಸಾರಕೈ
ರ್ನೈವೇದ್ಯೈಃ ಶಿವೇ ಸದಾ ವಿರಚಿತಂ ಲಿಂಗಾಲಯೇಷೂದ್ಯತಂ॥೨೭॥

ಕರಿಕರಪುಷ್ಕರಶೀಕರೋತ್ಥಸಾರೈ
ರಭಿಷಿಕ್ತಾನಿ ಸ್ವಮೌಲಿಚಂದ್ರಸಾರೈಃ।
ಕಸ್ತೂರಿಕಾಮೃಗಮದಾಂಗಜಘರ್ಷಣೇನ
ಗಂಧಾಯಿತಾನಿ ನಗಮೌಲಿಷು ಪಶ್ಯ ದೇವಿ ॥೨೮॥

ಉತ್ಫುಲ್ಲಚಾಮರಕುಲೈರಭಿವೀಜ್ಯಮಾನಂ
ನೃತ್ತಂ ಶಿಖಂಡಿವಿಹಿತಂ ಪಿಕಹಂಸರಾಗಂ।
ಸಂಪೂಜ್ಯ ಪೂಜಿತಮಿದಂ ಮಮ ಲಿಂಗಸಂಘಂ
ಪಾಪಾಪಹಾರಿ ಸುಗತಿಪ್ರದಮುತ್ತಮಂ ಚ ॥೨೯॥

ಇತ್ಥಂ ಕೈಲಾಸಶೈಲೇನವರತಕಥಯಾ ಸ್ವರ್ಧುನೀತುಲ್ಯಯಾಽಸೌ
ದೇವೀಂ ಪಶ್ಯನ್ನಗೌಘಂ ದಲಿತಶಿವವರೋದ್ಧಾಮಲಿಂಗಾನಿ ಪಶ್ಯನ್।

---

ತ್ತಿವೆ. ಅಲ್ಲದೆ ಲಿಂಗಗಳ ಶಿರೋಭಾಗದಲ್ಲಿರುವ ಬಾಲಚಂದ್ರನ ಕಿರಣಗಳು ಶಿವಲಿಂಗ ಗಳನ್ನು ಶೀತಲಕಿರಣಗಳಿಂದ ಅಭಿಷೇಚನ ಮಾಡುವಂತಿವೆ. ಕಸ್ತೂರೀ ಮೃಗಗಳು ತಮ್ಮ ಸುಗಂಧಮಯವಾದ ದೇಹವನ್ನು ಲಿಂಗಗಳಿಗೆ ಉಜ್ಜುವುದರಿಂದ ಲಿಂಗವೆಲ್ಲಾ ಸುಗಂಧವಿಶಿಷ್ಟವಾಗಿರುವುದು. ||೨೮||

ಚಮರೀ ಮೃಗಗಳು ತಮ್ಮ ಬಾಲದಿಂದ ಚಾಮರವನ್ನು ಬೀಸುವುವು. ನವಿಲುಗಳು ನರ್ತನಮಾಡುವುವು. ಕೋಗಿಲೆಗಳು ಹಂಸಧ್ವನಿ ರಾಗದಿಂದ ಕೂಗುವುವು. ಹೀಗೆ ಸಕಲ ಪೂಜಾಸಮಾರಂಭಗಳಿಂದ ತಾವೇತಾವಾಗಿ ಪ್ರಕಾಶಿಸುವ ಈ ದಿವ್ಯ ಲಿಂಗಗಳ ಸಮೂಹವನ್ನು ಯಾರು ಭಕ್ತಿಯಿಂದ ಪೂಜಿಸುವರೋ, ಅವರು ಉತ್ತಮವಾದ ಸದ್ಗತಿಯನ್ನು ಪಡೆಯುವರೆಂಬುದರಲ್ಲಿ ಸಂದೇಹವೇ ಇಲ್ಲ. ||೨೯||

ಹೀಗೆ ಗಂಗಾನದಿಯಂತೆ ಅವಿಚ್ಛಿನ್ನವಾಗಿ ಹೇಳಬಹುದಾದಂತಹ ಕೈಲಾಸ ಪರ್ವತದ ಕಥೆಯನ್ನು ವರ್ಣಿಸುತ್ತಾ, ಪಾರ್ವತಿಯನ್ನೂ, ಮತ್ತು ಅಲ್ಲಿ ಅತ್ಯಂತ ಸುಂದರವಾಗಿ ಪ್ರಕಾಶಿಸುವ ಶಿವಲಿಂಗಗಳ ಸಮೂಹವನ್ನೂ ನೋಡುತ್ತಾ ಚಂದ್ರ

ಕಾಲಾರಿರ್ನಿಯತೀಂದುಶೇಖರವರೋತ್ತಂಸೋದ್ಯಮಾಂಗೋ ಮಹಾ
ಮೌಲಿಂ ಸ್ವಂ ಧುನಯನ್ನತೀವ ಕರುಣಾದೃಷ್ಟ್ಯಾ ಪ್ರಪಶ್ಯನ್ನಗಂ ॥೩೦॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸಲಿಂಗವರ್ಣನಂ ನಾಮ
ಅಷ್ಟತ್ರಿಂಶೋಽಧ್ಯಾಯಃ

ಶೇಖರನೂ, ಕರುಣಾಮಯನೂ, ದೇವದೇವನೂ ಆದ ಪರಮೇಶ್ವರನು ತನ್ನ ತಲೆಯನ್ನು ಆಶ್ಚರ್ಯದಿಂದ ತೂಗುವನು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸಿದನು.

ಇಲ್ಲಿಗೆ ಶ್ರೀಶಿವರಹಸ್ಯದ ಮೊದಲನೆಯ ಅಂಶದಲ್ಲಿ ಕೈಲಾಸಲಿಂಗವರ್ಣನೆ ಎಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ

# ಅಥ ಶ್ರೀಶಿವರಹಸ್ಯೇ

## ಏಕೋನಚತ್ವಾರಿಂಶೋಽಧ್ಯಾಯಃ

### ಕೈಲಾಸಲಿಂಗಮಹಿಮಾವರ್ಣನಂ

|| ಈಶ್ವರ ಉವಾಚ ||

ಪಶ್ಯ ಲಿಂಗಾನಿ ಮೇ ದೇವಿ ಮಣಿಧಾಮಗತಾನ್ಯಮೇ ।
ಧಾಮಮೌಲಿಮಹಾಕುಂಭಧಾರಾವ್ಯಾಪ್ತಾನಿ ಶಂಕರಿ ||೧||

ಚಂದ್ರಚಂದನಲಿಪ್ತಾನಿ ತ್ರಿಪುಂಡ್ರೋಜ್ಜ್ವಲಿತಾನಿ ಚ ।
ಮಣಿಸುಂದರಮಂದಾರಪುಷ್ಪಮೌಲೀನಿ ಶಂಕರಿ ||೨||

ಬಿಲ್ವೋತ್ತಮಾಂಗಸೌಂದರ್ಯಸಾರಗರ್ಭಾಣಿ ಪಾರ್ವತಿ ।
ವದ ಕಾಕೋದರಾನದ್ಧಫಣಾಭೂಷಣಕಾನ್ಯಪಿ ||೩||

---

### ಶ್ರೀಶಿವರಹಸ್ಯದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ

ಎಲೌ ದೇವಿಯೇ, ಈ ರತ್ನಮಯವಾದ ಗರ್ಭಾಂಕಣಗಳಲ್ಲಿ ಕಾಂತಿಯುಕ್ತ ವಾದ ಧಾರಾಪಾತ್ರೆಯಿಂದ ಅಭಿಷಿಕ್ತವಾಗುತ್ತಿರುವ ಈ ಶಿವಲಿಂಗಗಳ ಸಮೂಹ ವನ್ನು ನೋಡು. ||೧||

ಈ ಶಿವಲಿಂಗಗಳು, ಚಂದ್ರನ ಕಾಂತಿಯಿಂದಲೂ, ಚಂದನದ ಲೇಪನದಿಂ ದಲೂ ಸುಂದರವಾಗಿ ಕಾಣುತ್ತಿವೆ. ತ್ರಿಪುಂಡ್ರಗಳಿಂದಲೂ ರತ್ನದಂತೆ ಹೊಳೆಯುವ ಮಂದಾರಪುಷ್ಪಮಾಲೆಗಳಿಂದಲೂ ಅಲಂಕೃತವಾಗಿವೆ. ||೨||

ಉತ್ತಮವಾದ ಬಿಲ್ವಪತ್ರೆಗಳು ಶಿವಲಿಂಗದ ಶಿರೋಭಾಗದಲ್ಲಿ ಹೊಳೆಯು ತ್ತಿವೆ. ಪ್ರತಿಶಿವಲಿಂಗವೂ ಸರ್ವದಾ ಅಲಂಕೃತವಾಗಿಯೇ ಇರುವುದು. ||೩||

ನಂದನಾನಂದಮಾಲಾಭಿಶ್ಚಂದನಾಲಂಕೃತಾನ್ಯಪಿ ।
ದಾವದಗ್ಧಾಗರುರಸೈರ್ಧೂಪಿತಾನಿ ಸದಾಂಬಿಕೇ ॥೪॥

ದೀಪಿತಾನಿ ಮಣಿಜ್ವಾಲಾಜಾಲಕಾಂತೀನಿ ಪಶ್ಯ ಮೇ ।
ಯಥಾ ಮೇ ದೇವದೇವೇಶಿ ಮನೋ ಲಿಂಗಪ್ರಪೂಜನೇ ॥೫॥

ನ ತಥಾ ಜಗತೋ ಜಾಲನಿರ್ಮಾಣೇ ಮೇ ಮನೋಽಂಬಿಕೇ ।
ತತ್ಪಾಲನೇ ತದ್ಧನನೇ ನಾನ್ಯಧರ್ಮೇಷು ಮೇ ಮನಃ ॥೬॥

ನಗೋಽಯಂ ಮಮ ಕೈಲಾಸಸ್ಸರ್ವಾನಂದಪಯೋನಿಧಿಃ ।
ಏತಸ್ಯ ತಪಸಾ ತುಷ್ಟಃ ಪ್ರಾಯಚ್ಛಂ ವರಮುತ್ತಮಂ ॥೭॥

ತವ ಮೌಲೌ ನಿವತ್ಸ್ಯಾಮಿ ನಾನಾಲಿಂಗಸಮಾಶ್ರಯಃ ।
ಪ್ರಲಯೇಽಪ್ಯೈವ ನಾಶೋಽಸ್ತಿ ಮತ್ಸಾನ್ನಿಧ್ಯಬಲಾತ್ತವ ॥೮॥

ನಂದನವನದ ಪುಷ್ಪಮಾಲೆಗಳಿಂದಲೂ, ಚಂದನಗಳಿಂದಲೂ, ಕಾಡುಕಿಚ್ಚಿನಿಂದ ಹೊಗೆಯಾಡುವ ಅಗುರುವೃಕ್ಷದ ಧೂಪದಿಂದಲೂ, ಲಿಂಗಾಲಯಗಳೆಲ್ಲವೂ ಸುಗಂಧಮಯವಾಗಿರುವುವು. ॥೪॥

ಪಾರ್ವತಿಯೇ, ಈ ಶಿವಾಲಯವು ರತ್ನದೀಪಗಳ ಕಾಂತಿಯಿಂದ ಎಷ್ಟು ಪ್ರಕಾಶಮಾನವಾಗಿರುವುದು ನೋಡು. ಈ ಶಿವಲಿಂಗಗಳ ಅರ್ಚನೆಯಲ್ಲಿ ನನ್ನ ಮನಸ್ಸು ಎಷ್ಟು ಪ್ರಸನ್ನವಾಗಿರುವುದೋ, ಅಷ್ಟು ಪ್ರಸನ್ನತೆಯು, ಜಗತ್ತಿನ ಸೃಷ್ಟಿ, ಸ್ಥಿತಿ, ಲಯಕಾರ್ಯಗಳಲ್ಲಿರುವುದಿಲ್ಲ. ಹೆಚ್ಚೇನು. ಎಲ್ಲಾ ಕಾರ್ಯಗಳಿಗಿಂತಲೂ, ಈ ಶಿವಲಿಂಗಾರ್ಚನೆಯು ಪವಿತ್ರವಾದದ್ದೆಂದು ತಿಳಿದು ನಾನು ಇದನ್ನು ಅತ್ಯಾಸಕ್ತಿಯಿಂದ ನಡೆಸುತ್ತಿರುವೆನು. ॥೫-೬॥

ಈ ಕೈಲಾಸ ಪರ್ವತವಾದರೋ ಸಕಲ ಆನಂದಗಳಿಗೂ ನಿಧಿಯಂತಿರುವುದು. ಇದು ಹಿಂದೆ ಮಾಡಿದ ತಪಸ್ಸಿಗೆ ಮೆಚ್ಚಿ ನಾನು ದಿವ್ಯವಾದ ವರವನ್ನು ಹೀಗೆ ಅನುಗ್ರಹಿಸಿರುವೆನು. ॥೭॥

"ಎಲೈ ಕೈಲಾಸಪರ್ವತವೇ, ನಿನಗೆ ನಾನು ಪ್ರೀತನಾಗಿ, ಯಾವಾಗಲೂ ನಿನ್ನ ಶಿಖರಭಾಗದಲ್ಲಿ ನಾನು ನೆಲಸಿರುವೆನು. ನೀನು ನಾನಾವಿಧವಾದ ಶಿವಲಿಂಗಗಳಿಗೆ

ಇತ್ಯುಕ್ತೋ ಗಿರಿರಾಜೋಽಯಂ ಮಮಾನಂದಪ್ರದಸ್ಸದಾ ।
ಪ್ರಲಯೇ ಸಾಗರಾಸ್ಸರ್ವೇ ಕೈಲಾಸಸ್ಯ ಶತೋತ್ತರೇ ॥೯॥

ಪಾದಮೂಲೇ ಸ್ಥಿತಿಂ ದೇವಿ ಯಾಸ್ಯಂತಿ ಚ ನಗಾ ಅಪಿ ।
ಮಹಲ್ಲೋಕಾವಧಿಮಹಾವೀಚೀಕಲ್ಲೋಲಸಂಕುಲೈಃ ॥೧೦॥

ಸಪ್ತಭಿರ್ಪವನೈರ್ವಾಪಿ ಚಾಲಿತಾಸ್ತೇ ತದಾದ್ರಿಜೇ ।
ಹಿಮಾಚಲೇ ಮಂದರೇಽಪಿ ಕೇದಾರೇಶ್ವರಸಂಜ್ಞಕೇ ॥೧೧॥

ನಿವತ್ಸ್ಯಾಮಿ ಶುಭಾಪಾಂಗಿ ಸದಾ ಲಿಂಗಾತ್ರಯೋ ಹಿ ಸಃ ।
ಮೇರಾವಯಿ ಮಹಾದೇವಿ ಶಿಖರಂ ಮಮ ಸುಂದರಂ ॥೧೨॥

ಆಶ್ರಿತನಾಗುವೆ. ನನ್ನ ಸಾನ್ನಿಧ್ಯವಿರುವುದರಿಂದ ಪ್ರಲಯಕಾಲದಲ್ಲಿಯೂ ನಿನಗೆ ಅಳಿವಿರುವುದಿಲ್ಲ" ಎಂದು ವರಕೊಟ್ಟಿರುವೆನು. ||೮||

ಹೀಗೆ ನನ್ನಿಂದ ಅನುಗ್ರಹೀತವಾದ ಕೈಲಾಸಪರ್ವತವು ನನಗೆ ಯಾವಾಗಲೂ ಸಂತೋಷವನ್ನುಂಟುಮಾಡುತ್ತಲಿರುವುದು. ಪ್ರಲಯಕಾಲದಲ್ಲಿ ಸಕಲ ಸಾಗರಗಳೂ ಕೈಲಾಸಪರ್ವತದ ಉತ್ತರಭಾಗದಲ್ಲಿ ಬಂದು ನೆಲಸುವುವು. ||೯||

ಈ ಪರ್ವತದ ತಪ್ಪಲುಪ್ರದೇಶದಲ್ಲಿ ಎಲ್ಲಾ ಪರ್ವತಗಳು ಬಂದು ನಿಲ್ಲುವುವು. ಪ್ರಲಯಕಾಲದಲ್ಲಿ ಆವಹ, ಪ್ರವಹ ಮೊದಲಾದ ಸಪ್ತ ವಾಯುಗಳೂ ಈ ಬೆಟ್ಟಗಳನ್ನೂ ತಂದು ಇಲ್ಲಿಗೆ ಎಸೆಯುವುವು. ಆದರೆ ಇದೇರೀತಿ ಹಿಮಾಚಲದಲ್ಲಿಯೂ, ಮಂದರಪರ್ವತದಲ್ಲಿಯೂ, ಕೇದಾರೇಶ್ವರ ಸಂಜ್ಞಕವಾದ ಲಿಂಗವೂ ಪ್ರಳಯಕಾಲದಲ್ಲಿ . ಸ್ಥಿರವಾಗಿರುವುದು. ಆ ಹೆಸರಿನಿಂದಲೇ ಅಲ್ಲಿ ನಾನು ವಾಸಮಾಡುವೆನು. ||೧೦-೧೧||

ಮಹಾದೇವಿಯೇ, ಈ ಕೈಲಾಸ ಶಿಖರವು ಹೀಗೆ ಸರ್ವದಾ ಲಿಂಗಗಳಿಗೆ ಆಧಾರವಾಗಿಯೇ ಇರುವುದು. ನಾನು ಸುಂದರವಾದ ಮೇರುಶಿಖರದಲ್ಲಿಯೂ ನೆಲಸಿರುವೆನು. ಅಲ್ಲಿಯೂ ಸಹ ನನ್ನನ್ನು ಅನೇಕ ಶಿವಲಿಂಗಗಳಲ್ಲಿ ಅಡಗಿರುವವನನ್ನಾಗಿಯೇ ತಿಳಿ. ||೧೨||

**ತದುತ್ತರೇಪಿ ಕೈಲಾಸೇ ನಾನಾಲಿಂಗೈಕಭಾಸುರಂ ।**
**ಶಿಖರಂ ತತ್ರ ದೇವೈಶ್ಚ ಪೂಜಿತೋ ನಿವಸಾಮ್ಯಹಂ ॥೧೩॥**

**ಏಕ ಏವಾಹಮದ್ವೈತೋ ನೀರೂಪೋಽಹಮಿಹಾದ್ರಿಜೇ ।**
**ತ್ವಯಾ ಕೈಲಾಸಶಿಖರೇ ತುಷ್ಟೋ ವಾಸಮರೋಚಯಂ ॥೧೪॥**

**ಸರ್ವಾವಾಸೋಽಪ್ಯಹಂ ದೇವಿ ಕೈಲಾಸೇ ನಿವಸಾಮ್ಯಹಂ ।**
**ಅನಂತಾರ್ಬುದಲಿಂಗಾನಿ ಮಮ ಕೈಲಾಸಪರ್ವತೇ ॥೧೫॥**

**ತತ್ಪ್ರಾಸಾದಮಣೀರಾಗಶಿಖರಾದ್ಯೋತಿತಪ್ರಭಾಃ ।**
**ತಿರಸ್ಕೃತಾರ್ಕಚಂದ್ರೇಂದ್ರಾ ನ ತಚ್ಛಕ್ಯಂ ಹಿ ವರ್ಣಿತುಂ ॥೧೬॥**

ಮೇರುವಿನ ಉತ್ತರಭಾಗದಲ್ಲಿರುವ, ಅನೇಕ ಲಿಂಗಗಳ ಸಮೂಹಗಳಿಂದ ಕೂಡಿರುವ ಈ ಕೈಲಾಸಪರ್ವತದಲ್ಲಿ, ನಾನು ದೇವತೆಗಳಿಂದ ಪೂಜಿತನಾಗಿ ವಾಸ ಮಾಡುವೆನು. ॥೧೩॥

ಪಾರ್ವತಿಯೇ, ಲೋಕದಲ್ಲಿ ಸ್ಥಿರವಾಗಿ ನಿಲ್ಲುವ ನಾನು ಒಬ್ಬನೇ. ನನಗಿಂತ ಭಿನ್ನವಾದ ವಸ್ತುವು ಮತ್ತೊಂದಿಲ್ಲ. ನನಗೆ ರೂಪರೇಖಾದಿಗಳು ನಿಜವಾಗಿಯೂ ಯಾವುವೂ ಇಲ್ಲ. ಆದರೆ ಕೈಲಾಸಶಿಖರದಲ್ಲಿ ಮಾತ್ರ ನಿನ್ನೊಡಗೂಡಿ ಸುಖದಿಂದ ವಾಸಮಾಡುತ್ತಿರುವೆನು. ॥೧೪॥

ದೇವಿಯೇ, ನಾನು ಸರ್ವವ್ಯಾಪಿಯು, ಸರ್ವಾಧಾರನು. ಆದರೂ ಕೈಲಾಸ ವಾಸವು ನನಗೆ ಬಹು ಇಷ್ಟವಾದದ್ದು. ಇಲ್ಲಿ ನನ್ನ ಅಂಶದಿಂದ ವಿರಾಜಿಸುವ ಶಿವಲಿಂಗ ಗಳು ಅರ್ಬುದಸಂಖ್ಯೆಯಲ್ಲಿವೆ. ॥೧೫॥

ಈ ಕೈಲಾಸದಲ್ಲಿ ಶಿವಾಲಯಗಳ ಶಿಖರದಲ್ಲಿರುವ ರತ್ನಗಳ ಹೊಳಪು, ಸೂರ್ಯ, ಚಂದ್ರ, ಇಂದ್ರ ಇವರೇ ಮೊದಲಾದವರ ತೇಜಸ್ಸನ್ನು ಮಂಕುಮಾಡಿದೆ. ಅದನ್ನು ವರ್ಣಿಸಲು ಸಾಧ್ಯವೇಇಲ್ಲ. ॥೧೬॥

ತತ್ರಾಪಿ ಕೋಟಿಲಿಂಗಾನಾಂ ಗಣನಾ ಕಿಲ ಸುಂದರಿ ।
ಉತ್ತಮೇಷು ಮಹಾದೇವಿ ತತ್ರಾಪಾರೇಷು ಪಾರ್ವತಿ ॥೧೭॥

ತತ್ರಾಪಿ ಲಿಂಗಸಾಹಸ್ರಂ ಮಮೈವ ಪ್ರೀತಿದಾಯಕಂ ।
ದರ್ಶನಾತ್ಸಂಸ್ಪರ್ಶನಾಚ್ಚ ಪೂಜನಾನ್ಮೋಕ್ಷದಾಯಕಂ ॥೧೮॥

ವಿನಾ ಜ್ಞಾನೇನ ತಪಸಾ ಕರ್ಮಣಾ ಶ್ರದ್ಧಯಾ ಶಿವೇ ।
ನ ಯಜ್ಞೈರ್ನವ್ರತಾಚಾರೈರ್ಯೋಗೈಸ್ಸಾಂಖ್ಯೈರ್ಮಹೇಶ್ವರಿ ॥೧೯॥

ಸಾ ಗತಿರ್ನೈವ ಲಭ್ಯೇತ ಯಥಾ ತಲ್ಲಿಂಗಪೂಜಯಾ ।
ಕೈಲಾಸಾಚಲಮೌಲಿಸ್ಥಲಿಂಗಾನಾಂ ದರ್ಶನಂ ಶಿವೇ ॥೨೦॥

ದುರ್ಲಭಂ ಸರ್ವದೇವಾನಾಂ ನೃಣಾಂ ಕಿಮುತ ಶಂಕರಿ ।
ಕೈಲಾಸೇಶ್ವರಮುಖ್ಯಾನಿ ಲಿಂಗಾನ್ಯತ್ಯದ್ಭುತಾನಿ ಚ ॥೨೧॥

ಎಲೌ ಸುಂದರಿಯೇ, ಅರ್ಬುದ ಸಂಖ್ಯೆಯಲ್ಲಿರುವ ಉತ್ತಮ ಲಿಂಗಗಳ ಮಧ್ಯದಲ್ಲಿ ಒಂದು ಕೋಟಿ ಲಿಂಗಗಳು ಅತ್ಯುತ್ತಮವಾದವುಗಳೆನಿಸಿವೆ. ॥೧೭॥

ಅದರಲ್ಲಿಯೂ ಸಹಸ್ರಲಿಂಗಗಳು ನನಗೆ ಬಹು ಪ್ರೀತಿದಾಯಕನಾದವುಗಳು. ಅವುಗಳ ದರ್ಶನ, ಸ್ಪರ್ಶನ, ಪೂಜನ ಇವುಗಳಿಂದ ಸಾಕ್ಷಾನ್ಮುಕ್ತಿಯೇ ದೊರಕುವುದು. ॥೧೮॥

ಆ ಲಿಂಗಗಳ ಆರಾಧನೆಯ ಫಲವಾಗಿ ದೊರಕುವ ಮುಕ್ತಿಯು, ಜ್ಞಾನದಿಂದಾಗಲಿ, ತಪಸ್ಸಿನಿಂದಾಗಲಿ, ಶ್ರದ್ಧಾಯುಕ್ತವಾದ ಯಜ್ಞ, ವ್ರತ ಮೊದಲಾದುವುಗಳಿಂದಾಗಲಿ, ಯೋಗ, ಸಾಂಖ್ಯ, ಮುಂತಾದ ಶಾಸ್ತ್ರಮಾರ್ಗದಿಂದಾಗಲಿ ಲಭಿಸಲಾರದು. ಅಂತೂ ಒಟ್ಟಿನಲ್ಲಿ ದೇವಿಯೇ, ಕೈಲಾಸ ಶಿಖರದಲ್ಲಿರುವ ಸಕಲ ಲಿಂಗಗಳ ದರ್ಶನವು ದೇವತೆಗಳಿಗೂ ಲಭಿಸತಕ್ಕದ್ದಲ್ಲ. ॥೧೯-೨೦॥

ಹಾಗಿರುವಾಗ ಮನುಷ್ಯರಿಗೆ ದೊರಕುವುದೆಂತು ? ಅದರಲ್ಲಿಯೂ ಕೈಲಾಸೇಶ್ವರನೇ ಮೊದಲಾದ ಶಿವಲಿಂಗಗಳಂತೂ ಅತ್ಯದ್ಭುತವಾದವುಗಳು. ॥೨೧॥

ಮಣಿಗರ್ಭಗೃಹಾಧಾರಸಂಸ್ಥಿತಾನ್ಯಗಜೇ ಸದಾ ।
ಪ್ರೋದ್ಯತ್ಕುಂಭಪತಾಕಾನಿ ಮಯಾ ಸಂಪೂಜಿತಾನ್ಯಪಿ ॥೨೨॥

ಪ್ರಾತಸ್ಸಂಗವಸಾಯಾಹ್ನಪ್ರದೋಷೇಷು ಮಹೇಶ್ವರಿ ।
ತೇಷು ಲಿಂಗಾವಲಿಂ ಭದ್ರೇ ಶೃಣು ವಕ್ಷ್ಯಾಮಿ ಸಾದರಂ ॥೨೩॥

ಕೀರ್ತನಶ್ರವಣೇನಾಪಿ ಪಾಪಭೇದೀನಿ ಶಂಕರಿ ।
ಸ್ವರ್ಗಾಪವರ್ಗದಾನ್ಯಾಶು ನೃಭಿಸ್ಸಂಕೀರ್ತನಾನ್ಯಪಿ ॥೨೪॥

ಪೂರ್ವತೋ ಮಮ ಕೈಲಾಸೇ ನಾನಾಲಿಂಗಕುಲೇಷ್ವಪಿ ।
ತದ್ಗಿರೇರ್ದಕ್ಷಿಣೇ ಚಾಪಿ ಪಶ್ಚಾದಪಿ ಶುಭಾನನೇ ॥೨೫॥

ತದುತ್ತರೇಪಿ ದೇವೇಶಿ ನಾನಾಜ್ಯೋತಿರ್ಮಯಾನಿ ಚ ।
ನ ಶಕ್ಯಂ ವರ್ಣಿತುಂ ದೇವಿ ದೇವೈಶ್ಶೇಷೇಣ ಭಾಮಿನಿ ॥೨೬॥

ಅವೆಲ್ಲವೂ ರತ್ನಮಯವಾದ ಗರ್ಭಗೃಹಗಳಲ್ಲಿ ನೆಲಸಿದವುಗಳಾಗಿವೆ. ಆ ಗೃಹಗಳಿಗೆಲ್ಲಾ ಪ್ರಕಾಶಮಾನವಾದ ಕಲಶ, ಪತಾಕೆ ಮುಂತಾದುವುಗಳು ಅಲಂಕಾರ ವಸ್ತುಗಳಾಗಿವೆ. ಅಂತಹ ಲಿಂಗಗಳು ನನ್ನಿಂದ ಪೂಜಿಸಲ್ಪಡುತ್ತಿವೆ. ||೨೨||

ಪ್ರಾತಃಕಾಲ, ಸಂಗವಕಾಲ, ಸಾಯಂಕಾಲ (ರಾತ್ರಿ) ಮತ್ತು ಪ್ರದೋಷ ಕಾಲಗಳಲ್ಲಿ ಈ ಲಿಂಗಪೂಜೆಯು ಬಹು ಶ್ರೇಷ್ಠವಾದುದು. ಆ ಕಾಲಗಳಲ್ಲಿ ಪೂಜಿಸುವವರಿಗೆ ಬರುವ ಫಲಗಳನ್ನು ಹೇಳುವೆನು. ಕೇಳು. ||೨೩||

ಆ ಕಾಲಗಳಲ್ಲಿ ಈ ಲಿಂಗಗಳನ್ನು ಸ್ತುತಿಸುವುದರಿಂದ, ಅಥವಾ ಈ ಲಿಂಗ ನಾಮಗಳನ್ನು ಕೇಳುವುದರಿಂದ ಮನುಷ್ಯರ ಪಾಪರಾಶಿಯೆಲ್ಲವೂ ನಿರ್ಮೂಲವಾಗುವುದು. ಅಷ್ಟೇ ಅಲ್ಲ. ಸ್ವರ್ಗ, ಮೋಕ್ಷ ಇವುಗಳ ಪ್ರಾಪ್ತಿಗೂ ಕಾರಣವಾಗುವುದು. ||೨೪||

ಕೈಲಾಸಪರ್ವತದ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಈ ನಾಲ್ಕು ದಿಕ್ಕುಗಳಲ್ಲಿಯೂ ನಾನಾವಿಧವಾದ ಲಿಂಗಗಳಿರುವುವು. ಎಲ್ಲವೂ ಜ್ಯೋತಿರ್ಮಯವಾದವುಗಳೇ. ಅವೆಲ್ಲವನ್ನೂ ಸಂಪೂರ್ಣವಾಗಿ ವರ್ಣಿಸಲು ಯಾವ ದೇವತೆಗಳಿಗೂ ಸಾಧ್ಯವಿಲ್ಲ. ||೨೬||

ಕಲ್ಪಾಯುತ್ಯೈರಪಿ ಶಿವೇ ತಲ್ಲಿಂಗಮಹಿಮಾ ನು ಕಿಂ।
ನ ಶಕ್ಯಂ ವಿಸ್ತರಾದ್ವಕ್ತುಂ ತನ್ನಾಮಾನಿ ಶೃಣು ಪ್ರಿಯೇ ॥೨೭॥

ಪಂಚಾಶದುತ್ತರಂ ದೇವಿ ಶತದ್ವಯಮಿದಂ ದಿಶಿ।
ಪ್ರಥಿತಾನಿ ಮಹಾದೇವಿ ಹ್ಯಪಾರೇಷ್ವಪಿ ಸಾದರಂ ॥೨೮॥

ಕೈಲಾಸಾಪಾರಶಿಖರಗರ್ಭಧಾಮೋರುಮೌಲಿಗಂ।
ಕುಂಭಮಂಡಲಮಾನಾಕಂ ಲಿಹನ್ನಿವ ಚ ಸಂಸ್ಥಿತಂ ॥೨೯॥

ಶುದ್ಧಾಚ್ಛಫಲಕಾರತ್ನಕಲ್ಪಿತಂ ಯೋಜನೋನ್ನತಂ।
ಶರಚ್ಚಂದ್ರಾಚ್ಛಧವಲಪ್ರಭಾಮಂಡಲಮಂಡಿತಂ ॥೩೦॥

ರತ್ನಗರ್ಭಗೃಹಾಂತಸ್ಥಂ ಸುರಮ್ಯಮಣಿವೇದಿಕಂ।
ಮಣಿಪ್ರಭಾತತಂ ದಿವ್ಯಂ ನೀಲಪೀತಾರುಣಪ್ರಭಂ ॥೩೧॥

ಹತ್ತು ಸಹಸ್ರ ಕಲ್ಪಪರ್ಯಂತವಾಗಿ, ಆ ಶಿವಲಿಂಗಗಳ ಮಹಿಮೆಯನ್ನು ವರ್ಣಿಸಿದರೂ ಅದು ಮುಗಿಯುವಂತಿಲ್ಲ. ಆದರೂ ಆ ಲಿಂಗಗಳಲ್ಲಿ ಕೆಲವು ಲಿಂಗಗಳ ಹೆಸರುಗಳನ್ನು ಮಾತ್ರ ಈಗ ವಿವರಿಸುವೆನು. ||೨೭||

ಈ ದಿಕ್ಕಿನಲ್ಲಿ ಇನ್ನೂರೈವತ್ತು ಲಿಂಗಗಳು ಪ್ರಸಿದ್ಧವಾದ ಲಿಂಗಗಳಿನಿಸಿವೆ. ಇವಲ್ಲದೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಲಿಂಗಗಳಿವೆ. ||೨೮||

ಈ ಲಿಂಗಗಳಿರುವ ಗರ್ಭಗೃಹಗಳು ಕೈಲಾಸಪರ್ವತದ ಶಿಖರದಲ್ಲಿರುವುವು. ಆ ಗರ್ಭಗೃಹಗಳ ಶಿಖರಪ್ರದೇಶವು ಸ್ವರ್ಗವನ್ನು ಮುಟ್ಟುತ್ತಿವೆಯೋ ಎನ್ನುವಷ್ಟು ಎತ್ತರವಾಗಿರುವುವು. ||೨೯||

ಆ ಶಿಖರಪ್ರದೇಶದಲ್ಲೆಲ್ಲಾ ನಿರ್ಮಲವಾದ ರತ್ನಗಳನ್ನು ನೆಟ್ಟಿರುವರು. ಯೋಜನಪ್ರಮಾಣದಷ್ಟು ಅವು ಎತ್ತರವಾಗಿರುವುವು. ಶರತ್ಕಾಲದ ಚಂದ್ರನಂತೆ ಕಾಂತಿಸಮೂಹದಿಂದ ಶೋಭಿಸುತ್ತಿರುವುವು. ||೩೦||

ರತ್ನಮಯವಾದ ಗರ್ಭಗೃಹದಲ್ಲಿ ದಿವ್ಯಮಣಿಗಳಿಂದ ರಚಿತವಾದ ವೇದಿಕೆಗಳಲ್ಲಿ, ಶಿವಲಿಂಗಗಳು, ರತ್ನಕಾಂತಿಯಿಂದಲೂ, ಸ್ವತೇಜಸ್ಸಿನಿಂದಲೂ ಕೂಡಿ, ನೀಲ ಮತ್ತು ಪೀತವರ್ಣವುಳ್ಳದ್ದಾಗಿರುವುವು. ||೩೧||

ಪ್ರವಾಳಪುಷ್ಪರಾಗಾದಿಗೋಮೇದಕವಿಡೂರಕೈಃ ।
ಪೀಠೋಜ್ಜ್ವಲಪ್ರಭಾಕಾಂತಂ ಶುದ್ಧಸ್ಫಟಿಕಮುಪ್ಯಮೇ ॥೩೨॥

ಚರ್ಚಿತಂ ಚಂದನಾದ್ಯೈಸ್ತು ಹ್ಯರ್ಚಿತಂ ಬಿಲ್ವಪಲ್ಲವೈಃ ।
ಮಂದಾರಕುಂದಮಾಲಾಭಿರಿಂದುಖಂಡೈಕಭೂಷಣಂ ॥೩೩॥

ಭುಜಂಗಮಣಿಸಂಛನ್ನಂ ಮಣಿದೀಪಪ್ರಭೋಜ್ಜ್ವಲಂ ।
ದಿವ್ಯಾಗರುಮಹಾಧೂಪೈರ್ಧೂಪಿತಂ ಗಂಧಮೋದಿತಂ ॥೩೪॥

ಹೀರಸಾರತ್ರಿಪುಂಡ್ರಾಂಗಂ ಕಸ್ತೂರೀತಿಲಕಾಂಚಿತಂ ।
ಮಹಾಕೈಲಾಸಶೃಂಗಾಗ್ರಸೌಧಶೇಖರಶೋಭಿತಂ ॥೩೫॥

ಮಣಿಕುಂಭೋದ್ಯತಾಪಾರಲಸತ್ಕಾಂತಿಚಿತಾಂಬರಂ ।
ಪಶ್ಯ ಲಿಂಗಕುಲಂ ಭದ್ರೇ ಭದ್ರದಂ ದರ್ಶನೇನ ಚ ॥೩೬॥

---

ಶಿವಲಿಂಗಗಳ ಸಮೂಹವೆಲ್ಲಾ ಪ್ರವಾಳ, ಪುಷ್ಪರಾಗ, ಗೋಮೇದಕ, ವೈಡೂರ್ಯ ಮುಂತಾದ ವಜ್ರವಿಶೇಷಗಳಿಂದಲೂ, ಕಾಂತಿಯುಕ್ತವಾದ ಪೀಠಗಳಿಂದಲೂ ಕೂಡಿ ಸ್ಫಟಿಕಮಯವಾಗಿ ಕಾಣುತ್ತಿರುವುವು. ||೩೨||

ಎಲ್ಲವೂ ಚಂದನ ಗಂಧದಿಂದ ಲಿಪ್ತವಾಗಿರುವುವು. ಬಿಲ್ವಪತ್ರೆಗಳಿಂದ ಪೂಜಿತವಾಗಿರುವುವು. ಮಂದಾರಪುಷ್ಪಗಳ ಮತ್ತು ಕುಂದಪುಷ್ಪಗಳ ಮಾಲೆಯಿಂದಲೂ, ಅರ್ಧಚಂದ್ರನಿಂದಲೂ ಕೂಡಿದವುಗಳಾಗಿರುವುವು. ||೩೩||

ನಾಗರತ್ನಗಳು ಸುತ್ತಲೂ ಕಾಣುತ್ತಿರುವುವು. ರತ್ನದೀಪಗಳು ಜ್ವಲಿಸುತ್ತಿರುವುವು. ಅಗುರು ಮರದ ಧೂಪದಿಂದ ಆ ಪ್ರದೇಶವೆಲ್ಲಾ ಸುಗಂಧಮಯವಾಗಿರುವುದು. ||೩೪||

ಶಿವಲಿಂಗಗಳಿಗೆ ತ್ರಿಪುಂಡ್ರವು ದಿವ್ಯವಾದ ಹೀರರತ್ನಗಳಿಂದಲೇ ನಿರ್ಮಿತವಾಗಿರುವುದು. ಕಸ್ತೂರಿಯಿಂದ ತಿಲಕವು ಕಲ್ಪಿತವಾಗಿರುವುದು. ಕೈಲಾಸಪರ್ವತದ ಶಿಖರದಲ್ಲಿರುವ ದಿವ್ಯಸೌಧದ ಕಾಂತಿಯಿಂದ ಶಿವಲಿಂಗಗಳೆಲ್ಲಾ ಪ್ರಕಾಶವಾಗಿರುವುವು. ||೩೫||

ಮಂಗಳಾಂಗಿಯೇ, ರತ್ನಕಲಶಗಳ ಕಾಂತಿಯಿಂದ ಅಂತರಿಕ್ಷವೇ ಬೆಳಗುತ್ತಿರುವುದು. ಈ ಲಿಂಗಸಮೂಹವು ದರ್ಶನದಿಂದಲೇ ಸಕಲರಿಗೂ ಮಂಗಳವನ್ನು ಕೊಡತಕ್ಕದ್ದಾಗುವುದು. ||೩೬||

ತತ್ಸೌಧಕುಂಭಧಾರಾಗ್ರದರ್ಶನೇನಾಪಿ ಮುಕ್ತ್ಯಯಃ ।
ಪ್ರಾಪ್ನುವಂತಿ ಸುರಾ ದೇಪಿ ನರಾಶ್ಶ್ರವಣಸಾ[1]ದರಾಃ ॥೩೭॥

ಪ್ರಣಾಮಂ ಕುರು ದೇವೇಶಿ ಶೃಣುಷ್ವಾವಹಿತಾ ಭವ ।
ಲಿಂಗಾನಾಂ ನಾಮಧೇಯಾನಿ ವೇದಾಂತೋಕ್ತಾನಿ ಶೈಲಜೇ ॥೩೮॥

ಭಾತಿ ಲಿಂಗಕುಲಂ ಭದ್ರೇ ಮುಕ್ತ್ಯಂಕುರಮಿವೋದ್ಯತಂ ।
ಪುಣ್ಯಪ್ರದಂ ಶ್ರವಣತೋ ದರ್ಶನಾನ್ಮುಕ್ತ ಏವ ನಃ ॥೩೯॥

ಭೂಲೋಕೇ ಚೈವ ಪಾತಾಲೇ ಸ್ವರ್ಗೇ ವೈ ಸತ್ಯಲೋಕಕೇ ।
ನೈತಾದೃಶಾನಿ ಲಿಂಗಾನಿ ಕಿಂ ಪುನರ್ಭಾರತೇ ಭುವಿ ॥೪೦॥

ಭೂಲೋಕಲಿಂಗಾದುತ್ಕೃಷ್ಟಂ ಲಿಂಗಂ ಪಾತಾಳಲೋಕಗಂ ।
ಪಾತಾಳಾತ್ಸ್ವರ್ಗಲೋಕಸ್ಥಂ ತತೋ ವಿಷ್ಣುವಿಧೀಂದ್ರಗಂ ॥೪೧॥

ಶಿವಾಲಯಗಳ ಮೇಲಿರುವ ಕಲಶಗಳ ದರ್ಶನ ಅಥವಾ ಅವುಗಳ ಶ್ರವಣ ಇವು ದೇವತೆಗಳಿಗೂ ಮತ್ತು ಮನುಷ್ಯರಿಗೂ ಮುಕ್ತಿಪ್ರದಗಳಾಗುತ್ತವೆ. ||೩೭||

ಎಲೌ ಗಿರಿಜೆಯೇ, ಈ ಶಿವಲಿಂಗಸಮೂಹಗಳನ್ನು ವಂದಿಸು. ಈ ಶಿವಲಿಂಗಗಳ ಹೆಸರೆಲ್ಲವೂ ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ಉಕ್ತವಾಗಿವೆ. ||೩೮||

ಎಲೌ ಮಂಗಳೆಯೇ, ಈ ಲಿಂಗಸಮೂಹವು ಮನುಷ್ಯರಿಗೆ ಮುಕ್ತಿಯನ್ನು ಒದಗಿಸತಕ್ಕಂತಹ ಒಂದು ಮೊಳಕೆಯು. ಇವುಗಳ ದರ್ಶನದಿಂದಲೂ, ಶ್ರವಣದಿಂದಲೂ ಮನುಷ್ಯನು ನಿಜವಾಗಿಯೂ ಮುಕ್ತನಾಗುವನು. ||೩೯||

ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಾಗಲಿ, ಬ್ರಹ್ಮನ ಸತ್ಯಲೋಕದಲ್ಲಾಗಲಿ ಇಂತಹ ದಿವ್ಯಲಿಂಗಗಳಿಲ್ಲ. ಹಾಗಿರುವಾಗ ಭರತಖಂಡದಲ್ಲಿ ಇವು ಇರುವುದು ಹೇಗೆ ? ||೪೦||

ಭೂಲೋಕದಲ್ಲಿರುವ ಲಿಂಗಗಳಿಗಿಂತ ಪಾತಾಳಲೋಕದ ಲಿಂಗಗಳು ಶ್ರೇಷ್ಠವಾದವುಗಳು. ಅಲ್ಲಿಗಿಂತ ಸ್ವರ್ಗದ ಲಿಂಗಗಳು ಮತ್ತೂ ಮಹಿಮೆಯುಳ್ಳವುಗಳು. ಈ ಎಲ್ಲಕ್ಕಿಂತಲೂ, ವಿಷ್ಣು, ಬ್ರಹ್ಮ, ಮತ್ತು ಇಂದ್ರ ಇವರ ಲೋಕಾಂತರ್ವರ್ತಿಯಾದ ಲಿಂಗಗಳು ಹೆಚ್ಚು ಪವಿತ್ರವಾದವುಗಳು. ||೪೧||

1 ಮಾತ್ರತಃ ಎಂಬ ಪಾಠಾಂತರವಿದೆ

ಆದ್ಯಂ ಮಂಗಲದಂ ದೇವಿ ಕೈಲಾಸೇಶ್ವರಸಂಜ್ಞಿತಂ ।
ಯನ್ನ ವೇದ್ಯೈರಪಿ ಜ್ಞಾತಂ ವೇದಾಂತ್ಯೈರಖಿಲೈರಪಿ ॥೪೨॥

ಅಸ್ಮಿನ್ನೇವ ಲಯಂ ಯಾಂತಿ ಬ್ರಹ್ಮವಿಷ್ಣುಮಹೇಶ್ವರಾಃ
ಲಯನಾತ್ಸರ್ವಜಗತಾಂ ಲಿಂಗಮಿತ್ಯುಚ್ಯತೇ ಬುಧೈಃ ॥೪೩॥

ಮಮೈವ ನಿರ್ಗುಣಂ ಸಾಕ್ಷಾದ್ರೂಪಮೇತನ್ಮಹೇಶ್ವರಿ ।
ಅಸ್ಯೈವ ಭಾಸಾ ಸರ್ವೇಽಪಿ ಭಾಂತಿ ಲೋಕಾಶ್ಚತುರ್ದಶ ॥೪೪॥

ಅಸ್ಯೈವ ಚೇತನಾತ್ಸರ್ವಜಗಚ್ಚೇತಯತಿ ಪ್ರಿಯೇ ।
ಅಸ್ಯೈವಾನಂದಲೇಶೇನ ಸರ್ವಾನಂದಮಯಂ ಪ್ರಿಯೇ ॥೪೫॥

ಲಿಂಗಮೇತದ್ಬಹುಧಾಮ ಸೋಮಧಾಮಪ್ರಭಾಧಿಕಂ ।
ಏತದ್ಬ್ರಹ್ಮೈವ ದೇವೇಶಿ ಮಮೈವ ಪರಮಂ ಪ್ರಿಯಂ ॥೪೬॥

ಮೇಲೆ ಹೇಳಿದ, ಸಕಲ ಲಿಂಗಗಳಿಗೂ ಮೊದಲನೆಯದು ಕೈಲಾಸೇಶ್ವರ ಲಿಂಗ. ಅದನ್ನು ಯಾವ ವೇದಗಳೂ, ಯಾವ ಉಪನಿಷತ್ತುಗಳೂ ಸರಿಯಾಗಿ ತಿಳಿದು ಹೇಳಲಾರವು. ॥೪೨॥

ಬ್ರಹ್ಮಾದಿ ತ್ರಿಮೂರ್ತಿಗಳೂ ಇಲ್ಲಿ ಕೊನೆಯಲ್ಲಿ ಐಕ್ಯವನ್ನು ಹೊಂದುವರು. ಸಕಲ ಜಗತ್ತುಗಳನ್ನೂ ಲಯಗೊಳಿಸುವುದರಿಂದಲೇ, ಇದಕ್ಕೆ ಲಿಂಗವೆಂಬ ಹೆಸರು ಬಂದಿರುವುದು. ॥೪೩॥

ನಿರ್ಗುಣಾತ್ಮಕವಾದ ನನ್ನ ಸ್ವರೂಪವೇ ಈ ಲಿಂಗ. ಎಲೌ ದೇವಿಯೇ ಇದರ ಕಾಂತಿಯಿಂದಲೇ ಹದಿನಾಲ್ಕು ಲೋಕಗಳೂ ಪ್ರಕಾಶಿಸುತ್ತಿರುವುವು. ॥೪೪॥

ಸಕಲ ಜಗತ್ತಿಗೂ ಚೈತನ್ಯವನ್ನು ಕೊಡುವುದು ಈ ಶಿವಲಿಂಗವೇ. ಇದರಲ್ಲಿರುವ ಆನಂದಲೇಶವೇ ಸರ್ವಾನಂದಮಯವಾಗಿ ನಿಂತಿರುವುದು. ॥೪೫॥

ಈ ಕೈಲಾಸಲಿಂಗವು ಅತಿಶಯವಾದ ಕಾಂತಿಯುಳ್ಳದ್ದಾಗಿ, ಚಂದ್ರನ ಕಾಂತಿಯನ್ನು ಸಹ ತಿರಸ್ಕರಿಸುವಂತಿರುವುದು. ಪಾರ್ವತಿಯೇ, ಇದು ಪರಬ್ರಹ್ಮಸ್ವರೂಪವು. ಆದ್ದರಿಂದಲೇ ಇದನ್ನು ನೋಡಿದರೆ ನನಗೆ ಬಹಳ ಸಂತೋಷವಾಗುವುದು. ॥೪೬॥

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಸ್ವಚ್ಛಸ್ಫಟಿಕಸಂಶುದ್ಧಮಾಕಾಶಾತ್ಮಕಮುತ್ತಮಂ ॥೪೭॥

ಯತೋ ಬ್ರಹ್ಮೇಶವಿಷ್ಣ್ವಿಂದ್ರಾಸ್ಸಂಪ್ರಜಾತಾ ನಗಾತ್ಮಜೇ ।
ಯತ್ಸತ್ಯಂ ಜ್ಞಾನಮಾನಂದಂ ಬ್ರಹ್ಮೈವೇದಂ ಸನಾತನಂ ॥೪೮॥

ಸೂಕ್ಷ್ಮಾತ್ಸೂಕ್ಷ್ಮತರಂ ಸಾಕ್ಷಾನ್ನೈವ ಸ್ಥೂಲಂ ನ ಚಾಣುಕಂ ।
ಸರ್ವೇಂದ್ರಿಯವಿನಿರ್ಮುಕ್ತಂ ಸರ್ವಧರ್ಮವಿವರ್ಜಿತಂ ॥೪೯॥

ಅಗಂಧಮರಸಸ್ಪರ್ಶಂ ತನ್ನ ಗಂಧರಸಾಶ್ರಯಂ ।
ತದಿದಂ ಚಕ್ಷುಷಾಂ ಚಕ್ಷುಸ್ಸರ್ವಪ್ರಾಣಮಯಂ ಸದಾ ॥೫೦॥

ಸರ್ವೇಂದ್ರಿಯಗುಣಾತೀತಂ ಭೂತೇಷು ಚ ತತಂ ಸದಾ ।
ಸದಾಽಪ್ಯಶೀರ್ಣಂ ಶೀರ್ಣೇಷು ನೇಹ ನಾನಾಸ್ತಿ ಕಿಂಚನ ॥೫೧॥

ಈ ಲಿಂಗವನ್ನು ಸ್ತುತಿಸಲು ಮಾತುಗಳಿಂದಾಗಲಿ, ಮನಸ್ಸಿನಿಂದಾಗಲಿ ಸಾಧ್ಯವಿಲ್ಲ. ಅಲ್ಲದೆ ಈ ಶಿವಲಿಂಗವು ಸ್ವಚ್ಛವಾದ ಸ್ಫಟಿಕಶಿಲೆಯಂತೆ ಶುಭ್ರವಾದ ದ್ದಾಗಿಯೂ, ಆಕಾಶದಂತೆ ಸರ್ವವ್ಯಾಪಕವಾಗಿಯೂ ಇರುವುದು. ॥೪೭॥

ಇದರಿಂದಲೇ ಬ್ರಹ್ಮ, ವಿಷ್ಣು, ಇಂದ್ರ ಮುಂತಾದ ದೇವಶ್ರೇಷ್ಠರು ಹುಟ್ಟಿ ರುವರು. ಸತ್ಯ, ಜ್ಞಾನ, ಆನಂದ ಈ ರೂಪಗಳಿಂದ ತೋರಿಬರುತ್ತಿರುವ ಪರಬ್ರಹ್ಮ ವಸ್ತುವೇ ಈ ಕೈಲಾಸೇಶಲಿಂಗವು. ॥೪೮॥

ಇದರ ಸ್ವರೂಪವು ಅತ್ಯಂತ ಸೂಕ್ಷ್ಮವಾದದ್ದು. ಆದರೆ ಅಣುವಲ್ಲ. ಸ್ಥೂಲವೂ ಅಲ್ಲ. ಯಾವ ಇಂದ್ರಿಯಗಳ ಸಂಬಂಧವೂ ಇದಕ್ಕಿಲ್ಲ. ಯಾವ ಧರ್ಮ ಸಂಸರ್ಗವೂ ಇದರಲ್ಲಿ ಕಂಡುಬರುವುದಿಲ್ಲ. ॥೪೯॥

ಗಂಧ, ರಸ, ಸ್ಪರ್ಶ, ಮುಂತಾದ ಗುಣಗಳೂ ಇದರಲ್ಲಿಲ್ಲ. ಗಂಧಾದಿಗಳಿಗೆ ಆಶ್ರಯವಾದ ಪೃಥಿವ್ಯಾದಿ ಪಂಚಭೂತಗಳೂ ಇದಲ್ಲ. ಇದನ್ನು ಜ್ಞಾನಿಗಳ(ಕಣ್ಣುಗಳ) ಕಣ್ಣು ಎನ್ನಬಹುದು. ಸರ್ವಲೋಕಕ್ಕೂ ಪ್ರಾಣರೂಪದಿಂದಿರುವುದೇ ಇದು. ॥೫೦॥

ಯಾವ ಇಂದ್ರಿಯಗಳಿಗೆ ಸಂಬಂಧಿಸಿದ ಗುಣಗಳೂ ಇದರಲ್ಲಿ ಕಾಣಲಾರವು. ಆದರೆ ಪಂಚಭೂತಗಳಲ್ಲಿಯೂ ಅದು ಅಡಗಿರುವುದು. ನಶ್ವರವಾಗುವ ವಸ್ತುಗಳಲ್ಲಿ

ಯಸ್ಮಿನ್ ಸಂಪೂಜಿತೇ ಜ್ಞಾತೇ ಧ್ಯಾತೇ ಸ್ವಾತ್ಮನಿ ಶೈಲಜೇ ।
ಲಿಂಗೀ ಲಿಂಗಾತಿಗೋ ಭಾತಿ ತದಿದಂ ಲಿಂಗಮುತ್ತಮಂ ॥೫೨॥

ಯತೋ ಭೂತಾನಿ ಜಾತಾನಿ ಯತ್ರ ಸಂಸ್ಥಾನಿ ಸರ್ವದಾ ।
ಯತ್ರೈವಾಂತೇ ಲಯಂ ಯಾಂತಿ ತಲ್ಲಿಂಗಮಿದಮದ್ರಿಜೇ ॥೫೩॥

ನಾಮರೂಪಾತಿಗಂ ಭಾತಿ ಕೈಲಾಸೇಶ್ವರಸಂಜ್ಞಿತಂ ।
ತನ್ನಾಮಾನಿ ಶೃಣುಷ್ವಾರ್ಯೇ ಸಾದರಂ ಕಮಲಾನನೇ ॥೫೪॥

ಬಿಲ್ವೋರುಸುಂದರವನಚ್ಛದಿತಾಚ್ಛಶಾಖಾ
ಸಂಛನ್ನಭೂತಲಮಮೋ ಮಮ ಶೈಲಪಾಲಿಃ ।

ಸೇರಿದಂತೆ ಕಂಡರೂ ಇದು ಮಾತ್ರ ನಷ್ಟವಾಗಲಾರದು. ಇದರಂತಿರುವ ಮತ್ತೊಂದು ವಸ್ತುವು ಜಗತ್ತಿನಲ್ಲಿ ಯಾವುದೂ ತೋರಿಬರುವುದಿಲ್ಲ. ॥೫೧॥

ಯಾರೇ ಆಗಲಿ, ಈ ಲಿಂಗವನ್ನು ಪೂಜಿಸಿದರೂ, ಧ್ಯಾನಮಾಡಿದರೂ, ಇದರ ಸ್ವರೂಪವನ್ನು ಚೆನ್ನಾಗಿ ಅರಿತರೂ, ಅವರು ಪಾಂಚಭೌತಿಕವಾದ ಸ್ಥೂಲಶರೀರವನ್ನು ಬಿಟ್ಟು ಮುಕ್ತರಾಗುವರು. ಚಿಹ್ನಾದಿಗಳಿಗೆ ಆಶ್ರಯವಿತ್ತಿರುವ ಈ ಲಿಂಗದೇಹತ್ಯಾಗ ವಾಗುವ ಪರ್ಯಂತ ಮನುಷ್ಯನಿಗೆ ಮುಕ್ತಿ ದೊರಕಲಾರದು. ಅಂತಹ ಮುಕ್ತಿಯನ್ನು ಒದಗಿಸುವುದೇ ಈ ದಿವ್ಯಲಿಂಗದ ಮಹಿಮೆ. ॥೫೨॥

ದೇವಿಯೇ, ಈ ಕೈಲಾಸೇಶ್ವರಲಿಂಗದಿಂದಲೇ ಸಮಸ್ತ ಜೀವರಾಶಿಗಳೂ ಉತ್ಪತ್ತಿಯಾಗುವುವು. ಇದರ ಪ್ರಭಾವದಿಂದಲೇ ಜಗತ್ತಿನಲ್ಲಿ ಕೆಲವುಕಾಲ ನಿಂತು ಕೊನೆಗೆ ಈ ಲಿಂಗದಲ್ಲಿಯೇ ಅಡಗಿಹೋಗುವುವು. ॥೫೩॥

ಈ ಕೈಲಾಸೇಶ್ವರ ಸಂಜ್ಞಕವಾದ ಶಿವಲಿಂಗವು, ಅನೇಕ ನಾಮಗಳಿಂದ, ಅನೇಕ ರೂಪಗಳಿಂದ ಪ್ರಕಾಶಿಸುತ್ತಿರುವುದು. ಪಾರ್ವತಿಯೇ, ಈ ಶಿವಲಿಂಗಗಳಿಗಿರುವ ಹೆಸರುಗಳನ್ನು ಈಗ ಹೇಳುವೆನು. ಕೇಳು. ॥೫೪॥

ದೇವಿಯೇ, ಈ ನನ್ನ ವಾಸಸ್ಥಾನವಾದ ಕೈಲಾಸ ಶಿಖರವು ಬಿಲ್ವವೃಕ್ಷಗಳ ಸಮೂಹದಿಂದ ತುಂಬಿ, ನೋಡುವವರಿಗೆ ಶಿಖರಪ್ರದೇಶವೆಲ್ಲಾ ಬಿಲ್ವಮಯವಾಗಿರು ವಂತೆ ತೋರಿಬರುತ್ತಿರುವುದು. ಅಲ್ಲದೆ ಅರಳಿದ ಪುಷ್ಪರಾಶಿಗಳ ಮೇಲೆ ಬೀಸುವ ಸುಗಂಧಮಯವಾದ ಮಂದಮಾರುತನಂತೂ ಹೃದಯಂಗಮವಾಗಿ ಬೀಸುತ್ತಿರು

ಸಂಫುಲ್ಲಪುಷ್ಪಜಪಚೇಲಿಮಗಂಧಬಂಧ
ಸಂಮೋಹಗಂಧವಹಜಾತಫಲೋ ಮಮೇಷ್ಟಃ ॥೫೫॥

ಉತ್ಫುಲ್ಲಪಂಕಜಪರಾಗಜಧೂಲಿಪಾಲಿ
ರುದ್ದಾಮಕೇಲಿರಭಿಯಾಸಿತಶೀತವಾತಃ ।
ಪುಷ್ಣಾತಿ ಗಾತ್ರವರಮಂಬಿಕಯಾ ಸಮೇತಂ
ಕೈಲಾಸಶೈಲಸರಸೀರುಹಪಾಲಿಲಗ್ನಃ ॥೫೬॥

ರತ್ನಸಾಲಕುಲಮೂಲಗಸೌಧ
ಪೂಗಜಾಲಪರಿಸರ್ಪಿಸುಧಾಬ್ಧೌ ।
ಅಂಡಜಾವಿವ ಶಿವೌ ರಮಣೀಯೌ
ಕ್ರೀಡತುರ್ದಿವಸನಾಥಜತಾಪೈಃ ॥೫೭॥

ತ್ವಮೇಕಾಕಿನೀ ಸೌಧಜಾಲೇಽಸ್ಮದೀಯೇ
ವಿಶಿಷ್ಟಾಸಿ ಕಾಂತ್ಯಾ ತವಾದ್ಯಾನನೇಂದುಃ ।

ವುದು. ಇಂತಹ ವಾಸಸ್ಥಾನವು ನನಗೆ ಬಹು ರಮಣೀಯವಾಗಿ ತೋರಿಬರುತ್ತಿರುವುದು. ॥೫೫॥

ಈ ಕೈಲಾಸ ಪರ್ವತಾಗ್ರದಲ್ಲಿ ಶೀತಲವಾಗಿ ಬೀಸುತ್ತಿರುವ ಮಾರುತವು, ಅರಳಿದ ಕಮಲಗಳ ಧೂಳಿನ ರಾಶಿಯನ್ನು ಹೊತ್ತು, ತರುತ್ತಿರುವುದು. ಅಲ್ಲದೆ ಗಂಭೀರವಾಗಿ ಆಟವಾಡುತ್ತಿದೆಯೋ ಎಂಬಂತೆ ಈ ಮಾರುತವು, ನಿಧಾನವಾಗಿ ಚಲಿಸುವುದರ ಮೂಲಕ, ಪಾರ್ವತೀ ಸಮೇತನಾಗಿರುವ ನನಗೆ ಹೆಚ್ಚಿನ ಆನಂದವನ್ನುಂಟುಮಾಡುತ್ತಿರುವುದು. ॥೫೬॥

ರತ್ನಮಯವಾದ ಸಾಲವೃಕ್ಷಗಳಿಂದ ಸುತ್ತುವರಿಯಲ್ಪಟ್ಟ ದಿವ್ಯ ಸೌಧಗಳಲ್ಲಿಯೂ, ಅಡಕೆಯ ಮರಗಳ ಪಂಕ್ತಿಯಿಂದ ರಂಜಿಸುತ್ತಿರುವ ತುಪ್ಪ ಮತ್ತು ಅಮೃತ ಸಮುದ್ರಗಳಲ್ಲಿಯೂ, ಪಾರ್ವತೀಪರಮೇಶ್ವರರು, ಸ್ವೇಚ್ಛಾಚಾರಿಗಳಾದ ಪಕ್ಷಿದ್ವಂದ್ವಗಳಂತೆ, ಸೂರ್ಯನಿಂದ ಹೊರಡುವ ಬಿಸಿಲಿನ ಝಳಕ್ಕೆ ಮೈಗೊಟ್ಟು ರಮಣೀಯವಾಗಿ ವಿಹರಿಸುತ್ತಾ ಕೊನೆಯಲ್ಲಿ ಶಂಕರನು ಹೀಗೆಂದನು. ॥೫೭॥

ಪಾರ್ವತಿಯೇ, ನೀನು ಏಕಾಕಿನಿಯಾಗಿ ಈ ಉಪ್ಪರಿಗೆಯ ಮೇಲೆ ನಿಂತದ್ದೇ ಆದರೆ, ನಿನ್ನ ಮುಖಚಂದ್ರವು ಬಹುವಾದ ಕಾಂತಿಯಿಂದ ಪ್ರಕಾಶಿಸ ತೊಡಗು

ನ ಚೈವೋಪಮಿತೇ ಮನಾಕ್ಷ್ಕೈಲಕನ್ಯೇ
ಸ ದೋಷಾಕರೋ ನ್ಯೈವ ತೇ ಸೋಮಧಾಮ ॥೫೮॥

ಕೈಲಾಸಾಚಲಮೌಲಿಪಾಲಿವಿಲಸಲ್ಲಿಂಗಾನಿ ತುಂಗಾನಿ ಮೇ
ವ್ಯಾಲೀಮೌಲಿಜಪಾಲಿಕಾಲಿವಿಲಸತ್ಪುಷ್ಪೋತ್ಥಧೂಲೀಭರೈಃ ।
ಕೇಲೀಭಿರ್ನಗಕುಂಜರೋತ್ಥಮದಜೈರ್ಧಾರಾಲಿಧಾರಾಭರೈ
ಶ್ಚಾಮ್ಯದ್ಗಂಧಫಲೀಕದಂಬಜರಜಃ ಪುಂಜಾಲಿಕೀಲಾನಿ ಚ ॥೫೯॥

ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸಶೈಲಲಿಂಗಮಹಿಮಾ ನಾಮ
ಏಕೋನಚತ್ವಾರಿಂಶೋಽಧ್ಯಾಯಃ

ವುದು. ಅಂತಹ ನಿನ್ನ ಸುಂದರವಾದ ಮುಖಕ್ಕೆ ಚಂದ್ರನನ್ನಾಗಲಿ, ಅಮೃತಧಾರೆಯನ್ನಾಗಲಿ ಉಪಮಾನ ಕೊಡಲು ಸಾಧ್ಯವಾಗುವುದಿಲ್ಲ. ॥೫೮॥

ಎಲೌ ದೇವಿಯೇ, ಈ ನನ್ನ ಕೈಲಾಸಪರ್ವತಾಗ್ರದಲ್ಲಿರುವ ಶಿವಲಿಂಗಗಳ ಸಮೂಹದಮೇಲೆ ನಾಗರ ಹೆಡೆಗಳು ತಮ್ಮ ರತ್ನಗಳ ಕಾಂತಿಯನ್ನು ಬೀರುತ್ತಿವೆ. ಮತ್ತು ಸುಗಂಧಮಯವಾದ ಪುಷ್ಪಗಳ ಪರಾಗವು ಲಿಂಗವನ್ನು ಮುಚ್ಚಿರುವುದು. ಅಲ್ಲದೆ ಕಾಡಾನೆಗಳು ವಿಹಾರಾರ್ಥವಾಗಿ ಇಲ್ಲಿ ಸಂಚರಿಸುತ್ತಿರುವಾಗ, ಅವುಗಳ ಮದೋದಕದ ವಾಸನೆಗೆ ಮುತ್ತುವ ಭ್ರಮರಪಂಕ್ತಿಗಳು ಧಾರಾಕಾರವಾಗಿ ಈ ಶಿವಲಿಂಗಗಳ ಮೇಲೆ ಹಾರಾಡುತ್ತಿರುವುವು. ಇವುಗಳಿಗೆ ಆಹಾರವಾಗಿ ಸಂಪಿಗೆಮೊಗ್ಗಿನ ಪರಾಗವೂ, ಕದಂಬಕುಸುಮಗಳ ದೂಳೂ ಶಿವಲಿಂಗಗಳ ಮೇಲೆ ಅತಿಶಯವಾಗಿ ಕಂಡುಬರುತ್ತಿವೆ. ಇಂತಹ ಸುಗಂಧಮಯವಾದ ಶಿವಲಿಂಗಗಳ ಸಮೂಹವು ಈ ಕೈಲಾಸಪರ್ವತದ ಶಿಖರದಲ್ಲಿ ವಿಶೇಷವಾಗಿ ಕಂಗೊಳಿಸುತ್ತಿವೆ. ॥೫೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಪ್ರಥಮಾಂಶಾಂತರ್ಗತವಾದ ಕೈಲಾಸಶೈಲಲಿಂಗ ಮಹಿಮಾ ವರ್ಣನೆಯೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಶ್ರೀಶಿವರಹಸ್ಯೇ

## ಚತ್ವಾರಿಂಶೋಽಧ್ಯಾಯಃ

### ಕೈಲಾಸಪ್ರಾಗ್ಭಾಗಸ್ಥಲಿಂಗಾಭಿಧಾನಂ

|| ಈಶ್ವರ ಉವಾಚ ||

ಶ್ರೀಕೈಲಾಸೇಶ್ವರೋ ದೇವಿ ಭೂತೇಶಶ್ಚಾಂಬಿಕೇಶ್ವರಃ ।
ಸೂತೇಶ್ವರೋ ಗಣೇಶೇಶಸ್ಸ್ಕಂದೇಶಸ್ತಾರಕೇಶ್ವರಃ ||೧||

ಗಂಗೇಶ್ವರೋ ನಂದಿಕೇಶೋ ಭೃಂಗೀಶೋ ಬಾಣಕೇಶ್ವರಃ ।
ಚಂಡೀಶ್ವರೋ ಮುಂಡಿಕೇಶೋ ರತ್ನೇಶೋ ಗಂಧಕೇಶ್ವರಃ ||೨||

ಗರ್ಭೇಶ್ವರೋಽಥ ವೀರೇಶೋ ಜ್ಯೇಷ್ಠೇಶಃ ಕುಸುಮೇಶ್ವರಃ
ವೀರಭದ್ರೇಶ್ವರೋ ದೇವಿ ಕಂದುಕೇಶಃ ಫಣೀಶ್ವರಃ ||೩||

### ಶ್ರೀಶಿವರಹಸ್ಯದಲ್ಲಿ ನಲವತ್ತನೆಯ ಅಧ್ಯಾಯ

ಪರಮೇಶ್ವರನು ಕೈಲಾಸ ಪರ್ವತದ ಪೂರ್ವಭಾಗದಲ್ಲಿರುವ ಶಿವಲಿಂಗಗಳ ಹೆಸರುಗಳನ್ನು ಕ್ರಮವಾಗಿ ಪಾರ್ವತಿಗೆ ವಿವರಿಸಲಾರಂಭಿಸಿದನು. " ದೇವಿಯೇ, ಶಿವಲಿಂಗಗಳ ಸಾಲಿನಲ್ಲಿ ಮೊದಲನೆಯದು ಕೈಲಾಸೇಶ್ವರಲಿಂಗ. ಅಲ್ಲಿಂದ ಮುಂದಕ್ಕೆ ಭೂತೇಶ್ವರ, ಅಂಬಿಕೇಶ್ವರ, ಸೂತೇಶ್ವರ, ಗಣೇಶೇಶ್ವರ, ಸ್ಕಂದೇಶ್ವರ, ತಾರಕೇಶ್ವರ, ಗಂಗೇಶ್ವರ, ನಂದಿಕೇಶ್ವರ, ಭೃಂಗೀಶ್ವರ, ಬಾಣಕೇಶ್ವರ, ಚಂಡೀಶ್ವರ, ಮುಂಡಿಕೇಶ್ವರ, ರತ್ನೇಶ್ವರ, ಗಂಧಕೇಶ್ವರ, ||೧-೨||

ಗರ್ಭೇಶ್ವರ, ವೀರೇಶ್ವರ, ಜ್ಯೇಷ್ಠೇಶ್ವರ, ಕುಸುಮೇಶ್ವರ, ವೀರಭದ್ರೇಶ್ವರ, ಕಂದುಕೇಶ್ವರ, ಫಣೀಶ್ವರ, ಸುಧೇಶ್ವರ, ಗಭಸ್ತೀಶ್ವರ, ರುದ್ರೇಶ್ವರ, ಭೈರವೇಶ್ವರ,

ಸುಧೇಶ್ವರೋ ಗಭಸ್ತೀಶೋ ರುದ್ರೇಶೋ ಭೈರವೇಶ್ವರಃ ।
ಕರವೀರೇಶ್ವರಶ್ಚೈವ ನಿಷಧೇಶೋ ವಟೇಶ್ವರಃ ॥೪॥

ಕಚ್ಛಪೇಶಃ ಕಾಶ್ಯಪೇಶಶ್ಚಾವಟೇಶೋ ಘೃಣೀಶ್ವರಃ ।
ಕಲಶೇಶೋ ದೇವಿಕೇಶಃ ಪದ್ಮೇಶೋ ಮಗಧೇಶ್ವರಃ ॥೫॥

ತುಂಡೇಶಶ್ಚೈವ ಹುಂಡೇಶಸ್ಸೌರೇಶೋ ವರುಣೇಶ್ವರಃ ।
ನೈಋೃತೇಶೋ ವೈದ್ಯುತೇಶೋ ಮೋಕ್ಷೇಶೋ ದಂಡಕೇಶ್ವರಃ ॥೬॥

ಮಂಡಲೀಶಃ ಕುಂಡಲೀಶಃ ಖಂಡೇಶೋ ಭಾಂಡಲೀಶ್ವರಃ :
ಗಂಡೇಶೋ ಗರುಡೇಶಶ್ಚ ಚಂದ್ರೇಶೋ ಮಾರುತೇಶ್ವರಃ ॥೭॥

ವಿಧೀಶ್ವರಸ್ಸುಧೀಶಶ್ಚ ತುಂಡಕೇಶೋ ಮುನೀಶ್ವರಃ ।
ಉಮೇಶ್ವರಃ ಕಪರ್ದೀಶೋ ಭದ್ರಕರ್ಣೇಶ್ವರಸ್ತಥಾ ॥೮॥

ವೇಗೇಶ್ವರೋಽಥ ವಿಷ್ವಕ್ಸೇಶೋ ವೈರಾಜೇಶೋಽಮರೇಶ್ವರಃ ।
ಅಹಿರ್ಬುಧ್ನ್ಯೇಶ್ವರಶ್ಚೈವ ಜಮದಗ್ನೀಶ್ವರಸ್ತಥಾ ॥೯॥

ವಿಶ್ವಾಮಿತ್ರೇಶ್ವರಶ್ಚೈವ ರಾವಣೇಶೋ ಬಲೀಶ್ವರಃ ।
ಮನೋನ್ಮನೀಶ್ವರಶ್ಚೈವ ಸುಧಾಧಾಮೇಶ್ವರೋಽದ್ರಿಜೇ ॥೧೦॥

ಕರವೀರೇಶ್ವರ, ಘೃಣೀಶ್ವರ, ಕಲಶೇಶ್ವರ, ದೇವಿಕೇಶ್ವರ, ಪದ್ಮೇಶ್ವರ, ಮಗಧೇಶ್ವರ, ||೩-೪-೫||

ತುಂಡೇಶ್ವರ, ಹುಂಡೇಶ್ವರ, ಸೌರೇಶ್ವರ, ವರುಣೇಶ್ವರ, ನೈರ್ಋತೇಶ್ವರ, ವೈದ್ಯುತೇಶ್ವರ, ಮೋಕ್ಷೇಶ್ವರ, ದಂಡಕೇಶ್ವರ, ಮಂಡಲೀಶ್ವರ, ಕುಂಡಲೀಶ್ವರ, ಖಂಡೇಶ್ವರ, ಭಾಂಡಲೀಶ್ವರ, ಗಂಡೇಶ್ವರ, ಗರುಡೇಶ್ವರ, ಚಂದ್ರೇಶ್ವರ, ಮಾರುತೇಶ್ವರ, ವಿಧೀಶ್ವರ, ಸುಧೀಶ್ವರ, ತುಂಡಕೇಶ್ವರ, ಮುನೀಶ್ವರ, ಉಮೇಶ್ವರ, ಕಪರ್ದೀಶ್ವರ, ಭದ್ರಕರ್ಣೇಶ್ವರ, ||೬-೭-೮||

ವೇಗೇಶ್ವರ, ವಿಷ್ವಕ್ಸೇಶ್ವರ, ವೈರಾಜೇಶ್ವರ, ಅಮರೇಶ್ವರ, ಅಹಿರ್ಬುಧ್ನ್ಯೇಶ್ವರ, ಜಮದಗ್ನೀಶ್ವರ, ವಿಶ್ವಾಮಿತ್ರೇಶ್ವರ, ರಾವಣೇಶ್ವರ, ಬಲೀಶ್ವರ, ಮನೋನ್ಮನೀ

ಮಾರ್ತಾಂಡೇಶೋ ಲಲಂತೀಶಸ್ಸ್ಫುರ್ಲಿನೇಶೋ ಧ್ರುವೇಶ್ವರಃ ।
ಗಂಧರ್ವೇಶೋಽತಿವಿಶ್ವೇಶಃ ಪಾರಿಭದ್ರೇಶ್ವರಸ್ತಥಾ ॥೧೧॥

ಗರ್ಭೇಶೋ ಮರುಧನ್ವೀಶಸ್ತೋರಣೇಶೋ ಧೃತೀಶ್ವರಃ ।
ಉತ್ಪಲೇಶೋ ಮಹೇಂದ್ರೇಶಸ್ಸ್ಥಾಣ್ವೀಶೋ ಭರಿತೇಶ್ವರಃ ॥೧೨॥

ಅನಂತೇಶಃ ಕರ್ದಮೇಶೋ ಮೃಡೇಶೋ ಬಭ್ರುಕೇಶ್ವರಃ ।
ವಾಗುರೀಶೋ ಮರ್ಮಕೇಶಃ ಪಲಭದ್ರೇಶ್ವರಸ್ತಥಾ ॥೧೩॥

ಶ್ರಾಮರೇಶೋ ಮೃಗೇಂದ್ರೇಶೋ ಹಿರಣ್ಯೇಶಃ ಪವೀಶ್ವರಃ ।
ಆಗ್ನೀಧ್ರೇಶಸ್ಸನ್ನತೀಶೋ ಬೃಹತೀಶೋ ರಣೇಶ್ವರಃ ॥೧೪॥

ಕಿರಾತೇಶೋ ಗರ್ಜಕೇಶೋ ವೇಣುದಾರೇಶ್ವರಸ್ತಥಾ ।
ಜಯಂತೇಶೋ ಮಧ್ಯಮೇಶಸ್ಸಂಗಮೇಶೋಽಗತೀಶ್ವರಃ ॥೧೫॥

ವಿದ್ಯುದ್ಗರ್ಭೇಶ್ವರೋ ದೇವಿ ತ್ರಿಪುರೇಶೋ ಹರೀಶ್ವರಃ ।
ಬಲಪ್ರಮಥನೇಶಶ್ಚ ಸರ್ವಭೂತದಮೇಶ್ವರಃ ॥೧೬॥

ಉಶೀನರೇಶ್ವರಶ್ಚೈವ ಗರ್ಗೇಶೋ ಮಂತ್ರಕೇಶ್ವರಃ ।
ತಂತ್ರೇಶ್ವರಸ್ಸಾಮಕೇಶೋ ವ್ಯೋಮಕೇಶೋ ದಿಗೀಶ್ವರಃ ॥೧೭॥

---

ಶ್ವರ, ಸುಧಾಧಾಮೇಶ್ವರ, ಮಾರ್ತಾಂಡೇಶ್ವರ, ಲಲಂತೀಶ್ವರ, ಸ್ಫುರ್ಲಿನೇಶ್ವರ, ಧ್ರುವೇಶ್ವರ, ಗಂಧರ್ವೇಶ್ವರ, ಅತಿವಿಶ್ವೇಶ್ವರ, ಪಾರಿಭದ್ರೇಶ್ವರ, ॥೯-೧೦-೧೧॥

ಗರ್ಭೇಶ್ವರ, ಮರುಧನ್ವೀಶ್ವರ, ತೋರಣೇಶ್ವರ, ಧೃತೀಶ್ವರ, ಉತ್ಪಲೇಶ್ವರ, ಮಹೇಂದ್ರೇಶ್ವರ, ಸ್ಥಾಣ್ವೀಶ್ವರ, ಭರಿತೇಶ್ವರ, ಅನಂತೇಶ್ವರ, ಕರ್ದಮೇಶ್ವರ, ಮೃಡೇಶ್ವರ, ಬಭ್ರುಕೇಶ್ವರ, ವಾಗುರೀಶ್ವರ, ಮರ್ಮಕೇಶ್ವರ, ಪಲಭದ್ರೇಶ್ವರ, ಶ್ರಾಮರೇಶ್ವರ, ಮೃಗೇಂದ್ರೇಶ್ವರ, ಹಿರಣ್ಯೇಶ್ವರ, ಪವೀಶ್ವರ, ಆಗ್ನೀಧ್ರೇಶ್ವರ, ಸನ್ನತೀಶ್ವರ, ಬೃಹತೀಶ್ವರ, ರಣೇಶ್ವರ, ॥೧೨-೧೩-೧೪॥

ಕಿರಾತೇಶ್ವರ, ಗರ್ಜಕೇಶ್ವರ, ವೇಣುದಾರೇಶ್ವರ, ಜಯಂತೇಶ್ವರ, ಮಧ್ಯಮೇಶ್ವರ, ಸಂಗಮೇಶ್ವರ, ಅಗತೀಶ್ವರ, ವಿದ್ಯುದ್ಗರ್ಭೇಶ್ವರ, ತ್ರಿಪುರೇಶ್ವರ, ಹರೀಶ್ವರ, ಬಲಪ್ರಮಥನೇಶ್ವರ, ಸರ್ವಭೂತದಮೇಶ್ವರ, ಉಶೀನರೇಶ್ವರ, ಗರ್ಗೇಶ್ವರ, ಮಂತ್ರಕೇಶ್ವರ, ತಂತ್ರೇಶ್ವರ, ಸಾಮಕೇಶ್ವರ, ದಿಗೀಶ್ವರ, ॥೧೫-೧೬-೧೭॥

ಕಪಾಲಮೋಚನೇಶಾನೋ ಮಣಿಗರ್ಭೇಶ್ವರಸ್ತಥಾ ।
ಜಾತುಕರ್ಣೇಶ್ವರಶ್ಚೈವ ನೃಗೇಶಃ ಪಾಟಲೇಶ್ವರಃ ॥೧೮॥

ಕರ್ಣಿಕೇಶಶ್ಛತ್ರಕೇಶಃ ಪಿಂಗಲೇಶಶ್ಶಿಲೇಶ್ವರಃ ।
ಮಧ್ವೀಶ್ವರೋ ವಾಮಕೇಶೋ ಯೌವನೇಶಸ್ಸ್ಥಿರೇಶ್ವರಃ ॥೧೯॥

ಭ್ರಾಂತೀಶ್ವರೋ ಜಹ್ನುಕೇಶೋ ಗೋಮೋದೇಶೋಽಖಿಲೇಶ್ವರಃ ।
ವಿಶಾಲೇಶಸ್ಸಿಹ್ಮಕೇಶೋ ಘಂಟಾಕರ್ಣೇಶ್ವರೋಽದ್ರಿಜೇ ॥೨೦॥

ವ್ಯಾಘ್ರೇಶೋ ಜಂಬುಕೇಶಶ್ಚ ಲಲಿತೇಶೋ ಧೃತೀಶ್ವರಃ ।
ವೇದೇಶ್ವರೋ ದಿಂಡಿಕೇಶಃ ಕಹೋಲೇಶೋ ಧ್ವನೀಶ್ವರಃ ॥೨೧॥

ಬಿಂದುಕೇಶೋ ಗಂಡಕೀಶೋ ನರ್ಮದೇಶೋಽನಿಲೇಶ್ವರಃ ।
ಪಿಚಂಡಿಲೇಶ್ವರೋಽತ್ರೀಶಃ ಕನಕೇಶೋಽಧ್ವರೇಶ್ವರಃ ॥೨೨॥

ಸದ್ಯೋಜಾತೇಶ್ವರಶ್ಚೈವ ಕುಲಿಶೇಶಃ ಪ್ಲವೇಶ್ವರಃ ।
ಸೋಮೇಶ್ವರೋ ವಾರುಣೇಶಶ್ಯರಭೇಶೋ ಜಟೇಶ್ವರಃ ॥೨೩॥

ಕಪಾಲಮೋಚನೇಶ್ವರ, ಮಣಿಗರ್ಭೇಶ್ವರ, ಜಾತುಕರ್ಣೇಶ್ವರ, ನೃಗೇಶ್ವರ, ಪಾಟಲೇಶ್ವರ, ಕರ್ಣಿಕೇಶ್ವರ, ಛತ್ರೇಶ್ವರ, ಪಿಂಗಲೇಶ್ವರ, ಶಿಲೇಶ್ವರ, ಮಧ್ವೀಶ್ವರ, ವಾಮಕೇಶ್ವರ, ಯೌವನೇಶ್ವರ, ಸ್ಥಿರೇಶ್ವರ, ಭ್ರಾಂತೀಶ್ವರ, ಜಹ್ನುಕೇಶ್ವರ, ಗೋಮೋದೇಶೇಶ್ವರ, ಅಖಿಲೇಶ್ವರ, ವಿಶಾಲೇಶ್ವರ, ಸಿಂಹಕೇಶ್ವರ, ಘಂಟಾಕರ್ಣೇಶ್ವರ, ॥೧೮-೧೯-೨೦॥

ವ್ಯಾಘ್ರೇಶ್ವರ, ಜಂಬುಕೇಶ್ವರ, ಲಲಿತೇಶ್ವರ, ಧೃತೀಶ್ವರ, ವೇದೇಶ್ವರ, ದಿಂಡಿಕೇಶ್ವರ, ಕಹೋಲೇಶ್ವರ, ಧ್ವನೀಶ್ವರ, ಬಿಂದುಕೇಶ್ವರ, ಗಂಡಕೀಶ್ವರ, ನರ್ಮದೇಶ್ವರ, ಅನಿಲೇಶ್ವರ, ಪಿಚಂಡಿಲೇಶ್ವರ, ಅತ್ರೀಶ್ವರ, ಕನಕೇಶ್ವರ, ಅಧ್ವರೇಶ್ವರ, ಸದ್ಯೋಜಾತೇಶ್ವರ, ಕುಲಿಕೇಶ್ವರ, ಪ್ಲವೇಶ್ವರ, ವಾರುಣೇಶ್ವರ, ಜಟೇಶ್ವರ, ॥೨೧-೨೨-೨

ಭಾಗಕಾರೇಶ್ವರೋ ಮುಗ್ಧಕೇಶೋ ರೋಗೇಶ್ವರಸ್ತಥಾ ।
ಭಲ್ಲೂಕೇಶೋ ವಿರಾಗೇಶಃ ಕ್ರಥನೇಶೋ ಧನೇಶ್ವರಃ ॥೨೪॥

ಉರಗೇಶಃ ಕಠೋರೇಶೋ ದರ್ದುರೇಶೋರ್ವರೀಶ್ವರೌ ।
ಕ್ಷಿಪ್ರೇಶ್ವರಶ್ಚ ದಾಲ್ಭ್ಯೇಶೋ ವಿನತೇಶಶ್ಶಶೀಶ್ವರಃ ॥೨೫॥

ಕಕುದೇಶೋ ಮುಕುಂದೇಶೋ ಭವಾನೀಶಶ್ಶನೀಶ್ವರಃ ।
ವೃಷಭೇಶೋ ಧೇನುಕೇಶಸ್ಸಂವರ್ತೇಶಃ ಕಣೇಶ್ವರಃ ॥೨೬॥

ಋಕ್ಷೇಶ್ವರಶ್ಚ ಚಂದ್ರೇಶೋ ಮತ್ಸ್ಯೇಶೋ ಭಾವನೇಶ್ವರಃ ।
ತುರಂಗೇಶೋ ಮತಂಗೇಶಃ ಕಣಾದೇಶೋ ಭಗೀಶ್ವರಃ ॥೨೭॥

ಜಲಂಧರೇಶ್ವರಶ್ಚೈವ ಶ್ವೇತಾಶ್ವೇಶಃ ಪಿಕೇಶ್ವರಃ ।
ರೈಭ್ಯೇಶೋ ಮುಚುಕುಂದೇಶಃ ಕಂಕಣೇಶಃ ಪ್ರಥೇಶ್ವರಃ ॥೨೮॥

ವಿದ್ಯಾಧರೇಶೋ ನೀಲೇಶಃ ಕಕ್ಷೀಬೇಶಃ ಪ್ರಭೇಶ್ವರಃ ।
ಮರುತೇಶಃಕೃತೀಶಶ್ಚಸ್ವರ್ಗೇಶೋ ಮಲಯೇಶ್ವರಃ ॥೨೯॥

ಮಂಕಣೇಶೋ ಜಾಗತೀಶೋ ವಿಬುಧೇಶೋ ಗಿರೀಶ್ವರಃ ।
ಚರ್ವಣೇಶೋ ನಿರ್ಘೃಣೇಶೋ ಗೋರಕ್ಷೋ ವಾ ಗಜೇಶ್ವರಃ ॥೩೦॥

---

ಭಾಗಕಾರೇಶ್ವರ, ಮುಗ್ಧಕೇಶ್ವರ, ರೋಗೇಶ್ವರ, ಭಲ್ಲೂಕೇಶ್ವರ, ವಿರಾಗೇಶ್ವರ, ಕ್ರಥನೇಶ್ವರ, ಧನೇಶ್ವರ, ಉರಗೇಶ್ವರ, ಕಠೋರೇಶ್ವರ, ದರ್ದುರೇಶ್ವರ, ಉರ್ವರೀಶ್ವರ, ಕ್ಷಿಪ್ರೇಶ್ವರ, ದಾಲ್ಭ್ಯೇಶ್ವರ, ವಿನತೇಶ್ವರ, ಶಶೀಶ್ವರ, ಕಕುದೇಶ್ವರ, ಮುಕುಂದೇಶ್ವರ, ಭವಾನೀಶ್ವರ, ಶನೀಶ್ವರ, ವೃಷಭೇಶ್ವರ, ಧೇನುಕೇಶ್ವರ, ಸಂವರ್ತೇಶ್ವರ, ಕಣೇಶ್ವರ, ॥೨೪-೨೫-೨೬॥

ಋಕ್ಷೇಶ್ವರ, ಚಂದ್ರೇಶ್ವರ, ಮತ್ಸ್ಯೇಶ್ವರ, ಭಾವನೇಶ್ವರ, ತುರಂಗೇಶ್ವರ, ಮತಂಗೇಶ್ವರ, ಕಣಾದೇಶ್ವರ, ಭಗೀಶ್ವರ, ಜಲಂಧರೇಶ್ವರ, ಶ್ವೇತಾಶ್ವೇಶ್ವರ, ಪಿಕೇಶ್ವರ, ರೈಭ್ಯೇಶ್ವರ, ಮುಚುಕುಂದೇಶ್ವರ, ಕಂಕಣೇಶ್ವರ, ಪ್ರಥೇಶ್ವರ, ವಿದ್ಯಾಧರೇಶ್ವರ, ನೀಲೇಶ್ವರ, ಕಕ್ಷೀಬೇಶ್ವರ, ಪ್ರಭೇಶ್ವರ, ಮರುತೇಶ್ವರ, ಕೃತೀಶ್ವರ, ಸ್ವರ್ಗೇಶ್ವರ, ಮಲಯೇಶ್ವರ, ಮಂಕಣೇಶ್ವರ, ಜಾಗತೀಶ್ವರ, ವಿಬುಧೇಶ್ವರ, ಗಿರೀಶ್ವರ, ಚರ್ವಣೇಶ್ವರ, ನಿರ್ಘಾಣೇಶ್ವರ, ಗೋರಕ್ಷೇಶ್ವರ, ಗಜೇಶ್ವರ, ॥೨೭-೨೮-೨೯-೩೦॥

ಕಂದರ್ಪೇಶಸ್ಸೂರ್ಯಕೇಶಃ ಪುಷ್ಟೇಶಸ್ತುಷ್ಯಕೇಶ್ವರಃ ।
ವಿನಾಯಕೇಶ್ವರಶ್ಚೈವ ಮಣಿಕಂಠೇಶ್ವರಸ್ತಥಾ ॥೩೧॥

ರಂಧ್ರೇಶಃ ಪಾರ್ವತೀಶಶ್ಚ ವಿದ್ರುಮೇಶೋ ಲತೇಶ್ವರಃ ।
ವಿರಿಂಚೀಶೋ ಭದ್ರಕೇಶಃ ಪ್ರಸನ್ನೇಶೋ ವಿಶ್ವೇಶ್ವರಃ ॥೩೨॥

ಭಾರಭೂತೇಶ್ವರಶ್ಚೈವ ಲೋಕೇಶಃ ಪ್ರಾಣಿಕೇಶ್ವರಃ ।
ಅಂಧಕೇಶೋ ಮುಕ್ತಿಕೇಶೋ ಹರಿಕೇಶೋ ಋಷೀಶ್ವರಃ ॥೩೩॥

ಗಾರುಡೇಶಃ ಪತಂಗೇಶಃ ಕನ್ಯೇಶೋ ಧವಳೇಶ್ವರಃ ।
ಜಾತುಕರ್ಣೇಶ್ವರಶ್ಚೈವ ಗಂಧಭದ್ರೇಶ್ವರಸ್ತಥಾ ॥೩೪॥

ಚಕ್ರೇಶ್ವರೋಽರುಣೇಶಶ್ಚಾಪ್ಯದಾಲ್ಭ್ಯೇಶಃ ಖಣೇಶ್ವರಃ ।
ತ್ರಿಯಂಬಕೇಶ್ವರಶ್ಚೈವ ಗೌತಮೇಶಃ ಖಲೇಶ್ವರಃ ॥೩೫॥

ವಿತಂಡೇಶಶ್ಚ ಕಂಠೇಶೋ ವರಾಹೇಶಃ ಕುಲೇಶ್ವರಃ ।
ಕೇದಾರೇಶಃ ಫಲೇಶಶ್ಚ ಕಿನ್ನರೇಶೋಽಮೃತೇಶ್ವರಃ ॥೩೬॥

ಕೈಲಾಸಶೈಲಾನುಲಮೌಲಿವರ್ಯೇ
ಪ್ರಾಗ್ದ್ವಾರಲಿಂಗಾಲಯಕಲ್ಪನಂ ಶಿವೇ ।

ಕಂದರ್ಪೇಶ್ವರ, ಸೂರ್ಯಕೇಶ್ವರ, ಪುಷ್ಟೇಶ್ವರ, ತುಷ್ಯಕೇಶ್ವರ, ವಿನಾಯಕೇಶ್ವರ, ಮಣಿಕಂಠೇಶ್ವರ, ರಂಧ್ರೇಶ್ವರ, ಪಾರ್ವತೀಶ್ವರ, ವಿದ್ರುಮೇಶ್ವರ, ಲತೇಶ್ವರ, ವಿರಂಚೀಶ್ವರ, ಭದ್ರಕೇಶ್ವರ, ಪ್ರಸನ್ನೇಶ್ವರ, ವಿಶ್ವೇಶ್ವರ, ಭಾರಭೂತೇಶ್ವರ, ಲೋಕೇಶ್ವರ, ಪ್ರಾಣಿಕೇಶ್ವರ, ಅಂಧಕೇಶ್ವರ, ಮುಕ್ತಿಕೇಶ್ವರ, ಹರಿಕೇಶ್ವರ, ಋಷೀಶ್ವರ, ಗಾರುಡೇಶ್ವರ, ಪತಂಗೇಶ್ವರ, ಕನ್ಯೇಶ್ವರ, ಧವಲೇಶ್ವರ, ಜಾತುಕರ್ಣೇಶ್ವರ, ಗಂಧಭದ್ರೇಶ್ವರ, ಚಕ್ರೇಶ್ವರ, ಅರುಣೇಶ್ವರ, ಅದಾಲ್ಭ್ಯೇಶ್ವರ, ಖಗೇಶ್ವರ, ತ್ರಿಯಂಬಕೇಶ್ವರ, ಗೌತಮೇಶ್ವರ, ಖಲೇಶ್ವರ, ವಿತಂಡೇಶ್ವರ, ಕಂಠೇಶ್ವರ, ವರಾಹೇಶ್ವರ, ಕುಲೇಶ್ವರ, ಕೇದಾರೇಶ್ವರ, ಫಲೇಶ್ವರ, ಕಿನ್ನರೇಶ್ವರ, ಅಮೃತೇಶ್ವರ, ಈ ಹೆಸರಿನ ಶಿವಲಿಂಗಗಳು ಕ್ರಮವಾಗಿ ಇಲ್ಲಿ ನೆಲಸಿವೆ. ಎಂದು ಪರಮೇಶ್ವರನು ಪಾರ್ವತಿಗೆ ವಿವರಿಸಿದನು. ॥೩೧-೩೨-೩೩-೩೪-೩೫-೩೬॥

ಎಲೈ ಮಹರ್ಷಿಗಳೇ, ಹೀಗೆ ಕೈಲಾಸ ಪರ್ವತದ ಪ್ರಾಗ್ಭಾಗದಲ್ಲಿ ಈಶಾನ್ಯ

ಈಶಾನಕೋಣಾನಲಕೋಣಸಂಸ್ಥಿತಂ
ಕೈಲಾಸಈಶಾದ್ಯಮೃತೇಶ್ವರಾಂತಂ ॥೩೭॥

ಪ್ರೋದ್ಯತ್ಪತಾಕಾವಲಿಮೌಲಿಕುಂಭಂ
ಫಣೀಂದ್ರಧಾಮಸ್ಥಸುಲಿಂಗಮಂಡಲಂ।
ಬಿಲ್ವೋತ್ತಮಾಂಗಂ ಫಣಿಭೂಷಣಾಂಚಿತಂ
ತ್ರಿಪುಂಡ್ರಸಂಶೋಭಿತಫಾಲದೇಶಂ ॥೩೮॥

ಪಶ್ಯಾದ್ರಿಜೇ ಲಿಂಗಕುಲಂ ಮನೋದಂ
ಸಂದರ್ಶನಾತ್ಪಾಪಹರಂ ಸದೈವ ॥೩೯॥

ಇತಿ ಶ್ರೀ ಶಿವರಹಸ್ಯೇ ಪ್ರಥಮಾಂಶೇ ಕೈಲಾಸಪ್ರಾಗ್ದ್ವಾರಸ್ಥ
ಲಿಂಗಾಭಿಧಾನಂ ನಾಮ ಚತ್ವಾರಿಂಶೋಽಧ್ಯಾಯಃ

ದಿಕ್ಕಿನಿಂದ ಹಿಡಿದು ಆಗ್ನೇಯ ದಿಕ್ಕಿನವರೆಗೆ, ಕೈಲಾಸೇಶ್ವರ ಲಿಂಗವೇ ಆದಿಯಾಗಿ ಅಮೃತೇಶ್ವರ ಲಿಂಗಪರ್ಯಂತವಾಗಿ ಸಕಲ ಲಿಂಗಗಳೂ ಅಲ್ಲಿ ಕಂಡುಬರುತ್ತಿರುವುವು. ॥೩೭॥

ಈ ಲಿಂಗಾಲಯಗಳ ಮೇಲೆಲ್ಲಾ ಶ್ರೇಷ್ಠವಾದ ಧ್ವಜಪಟಗಳಿಂದಲೂ, ಕಲಶಗಳಿಂದಲೂ ಪ್ರಕಾಶಿಸುವ ಗೋಪುರಗಳಿವೆ. ನಾಗೇಂದ್ರನ ಹೆಡೆಗಳಿಂದ ಅಲಂಕೃತವಾದ ಲಿಂಗಸಮೂಹಗಳು, ದಿವ್ಯವಾದ ಬಿಲ್ವಪತ್ರೆಯಿಂದಲೂ, ರತ್ನಖಚಿತವಾದ ಆಭರಣಗಳಿಂದಲೂ, ಅಲಂಕೃತವಾಗಿವೆ. ಹಣೆಯ ಭಾಗದಲ್ಲಿ ತ್ರಿಪುಂಡ್ರಗಳ ಗುರುತುಗಳು ವಿಶೇಷವಾಗಿ ಕಾಣುತ್ತಿರುವುವು. ಪಾರ್ವತಿಯೇ, ಇಂತಹ ಶಿವಲಿಂಗಗಳ ಸಮೂಹವನ್ನು ದರ್ಶನ ಮಾಡುವುದರಿಂದ ಸಮಸ್ತ ಪಾಪಗಳೂ ನಿವಾರಣೆಯಾಗುತ್ತವೆ" ಎಂದು ಮಹೇಶ್ವರನೇ, ದೇವಿಗೆ ಹೇಳಿದನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿಸ್ತರಿಸಿ ಹೇಳಿದನು. ॥೩೮-೩೯॥

ಇಲ್ಲಿಗೆ ಶ್ರೀಶಿವರಹಸ್ಯದ ಪ್ರಥಮಾಂಶದ ಕೈಲಾಸಪರ್ವತದ ಪೂರ್ವಭಾಗದಲ್ಲಿರುವ
ಶಿವಲಿಂಗಗಳ ಹೆಸರುಗಳನ್ನು ತಿಳಿಸುವ ನಲವತ್ತನೆಯ ಅಧ್ಯಾಯವು
ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಏಕಚತ್ವಾರಿಂಶೋಽಧ್ಯಾಯಃ

### ಕೈಲಾಸದಕ್ಷಿಣದ್ವಾರಸ್ಥಲಿಂಗಕಥನಂ

|| ಈಶ್ವರ ಉವಾಚ ||

**ಏವಂ ಲಿಂಗಕುಲಂ ಭದ್ರೇ ಪ್ರಾಕ್ಕೈಲಾಸಶಿಖಾಶ್ರಯಂ ।**
**ತಥೈವ ದಕ್ಷಿಣೇ ಚಾಪಿ ಪ್ರವಕ್ಷ್ಯೇ ಶೃಣು ಶೈಲಜೇ ॥೧॥**

**ಅಘೋರೇಶಃ ಕಪಾಲೀಶಃ ಕುಕ್ಕುಟೇಶೋಽನಲೇಶ್ವರಃ ।**
**ಇಂದ್ರೇಶ್ವರೋ ಯಮೇಶಶ್ಚ ನೈಋತೀಶೋ ನಭೇಶ್ವರಃ ॥೨॥**

**ಉದಾವರ್ತೇಶ್ವರಶ್ಚೈವ ದಕ್ಷಿಣಾವರ್ತಕೇಶ್ವರಃ ।**
**ವಿಕುಂಠೇಶಃ ಕುಠಾರೇಶೋ ಮಾನವೇಶಃ ಕುಲೇಶ್ವರಃ ॥೩॥**

## ಶ್ರೀಶಿವರಹಸ್ಯದಲ್ಲಿ ನಲವತ್ತೊಂದನೆಯ ಅಧ್ಯಾಯ

ಮತ್ತೆ ಈಶ್ವರನು ಪಾರ್ವತಿಯನ್ನು ಕುರಿತು ಹೀಗೆಂದನು. "ದೇವಿಯೇ ನಾನು, ಹಿಂದೆ ಕೈಲಾಸಪರ್ವತದ ಪೂರ್ವಭಾಗದಲ್ಲಿ ಹೇಳಿರುವಂತೆ, ದಕ್ಷಿಣಭಾಗದಲ್ಲಿಯೂ ಶಿವಲಿಂಗಗಳು ಇರುವುವು. ಅವುಗಳ ಹೆಸರುಗಳನ್ನು ಈಗ ವಿವರಿಸುವೆನು ಕೇಳು. ||೧||

ಅಘೋರೇಶ್ವರ, ಕಪಾಲೀಶ್ವರ, ಕುಕ್ಕುರೇಶ್ವರ, ಅನಲೇಶ್ವರ, ಇಂದ್ರೇಶ್ವರ, ಯಮೇಶೇಶ್ವರ, ನೈರೃತೀಶ್ವರ, ನಭೇಶ್ವರ, ಉದಾವರ್ತೇಶ್ವರ, ದಕ್ಷಿಣಾವರ್ತೇಶ್ವರ, ವಿಕುಂಠೇಶ್ವರ, ಕುಠಾರೇಶ್ವರ, ಮಾನವೇಶ್ವರ, ಕುಲೇಶ್ವರ, ||೨-೩||

ಜಾಪಕೇಶೋ ಮೌಲಿಕೇಶಶ್ಚಾರ್ಜುನೇಶಃ ಕಸೀಶ್ವರಃ ।
ಭಗದಂತೇಶ್ವರಶ್ಚೈವ ನಹುಷೇಶೋಽಮೃತೇಶ್ವರಃ ॥೪॥

ತಂಗಣೇಶಶ್ಚ ಸಂಧೀಶೋ ಮಧ್ಯಮೇಶೋ ಗಲೇಶ್ವರಃ ।
ವಿದ್ಯೇಶ್ವರಃ ಪನ್ನಗೇಶಃ ಕ್ರಥನೇಶೋ ನಿಶೇಶ್ವರಃ ॥೫॥

ದಿವೋದಾಸೇಶ್ವರೋ ರಾಥೀರಥೇಶಶ್ಶೌನಕೇಶ್ವರಃ ।
ಗಣಭದ್ರೇಶ್ವರಶ್ಚೈವ ಶೇಷೇಶೋ ವಾಸುಕೀಶ್ವರಃ ॥೬॥

ಶಂಖಪಾಲೇಶ್ವರಶ್ಚೈವ ಚಿತ್ರಗುಪ್ತೇಶ್ವರಸ್ತಥಾ ।
ದಂಡಪಾಣೀಶ್ವರಶ್ಚೈವ ದುರ್ಗೇಶಸ್ಸಾರಸೇಶ್ವರಃ ॥೭॥

ಹಂಸೇಶ್ವರೋ ಮಯೂರೇಶಶ್ಚಕ್ರವಾಕೇಶ್ವರಸ್ತಥಾ ।
ಮಂಥಾನೇಶೋ ಮನ್ಮಥೇಶೋ ರತೀಶೋ ಗಂಧಕೇಶ್ವರಃ ॥೮॥

ಭಾಂಡೀರೇಶೋ ವನೇಶಶ್ಚ ಪುರಂಧ್ರೀಶಃ ಫಲೇಶ್ವರಃ ।
ಕಾರಣೇಶಸ್ತಾರಣೇಶಃ ಕೃತ್ತಿವಾಸೇಶ್ವರಸ್ತಥಾ ॥೯॥

ಜನಾರ್ದನೇಶೋ ವಿಶ್ವೇಶೋ ಮಹಾಕಾಲೇಶ್ವರಸ್ತಥಾ ।
ಸರಸ್ವತೀಶೋ ಲಕ್ಷ್ಮೀಶಶ್ಶಚೀಶಶ್ಶಕ್ರಕೇಶ್ವರಃ ॥೧೦॥

ಪ್ರಲಹೇಶಃ ಪುಲಸ್ತ್ಯೇಶೋ ವೃದ್ಧಕಾಲೇಶ್ವರಸ್ತಥಾ ।
ಭಾರದ್ವಾಜೇಶ್ವರಶ್ಚೈವ ಸಾಗರೇಶೋ ದಮೇಶ್ವರಃ ॥೧೧॥

---

ಜಾಪಕೇಶ್ವರ, ಮೌಲಿಕೇಶ್ವರ, ಅರ್ಜುನೇಶ್ವರ, ಕಸೀಶ್ವರ, ಭಗದಂತೇಶ್ವರ, ನಹುಷೇಶ್ವರ, ಅಮೃತೇಶ್ವರ, ತಂಗಣೇಶ್ವರ, ಸಂಧೀಶ್ವರ, ಮಧ್ಯಮೇಶ್ವರ, ಗಲೇಶ್ವರ, ವಿದ್ಯೇಶ್ವರ, ಪನ್ನಗೇಶ್ವರ, ಕ್ರಥನೇಶ್ವರ, ನಿಶೇಶ್ವರ, ॥೪-೫॥

ದಿವೋದಾಸೇಶ್ವರ, ರಥೀರಥೇಶ್ವರ, ಶೌನಕೇಶ್ವರ, ಗಣಭದ್ರೇಶ್ವರ, ಶೇಷೇಶ್ವರ, ವಾಸುಕೀಶ್ವರ, ಶಂಖಪಾಲೇಶ್ವರ, ಚಿತ್ರಗುಪ್ತೇಶ್ವರ, ದಂಡಪಾಣೀಶ್ವರ, ದುರ್ಗೇಶ್ವರ, ಸಾರಸೇಶ್ವರ, ಹಂಸೇಶ್ವರ, ಮಯೂರೇಶ್ವರ, ಚಕ್ರವಾಕೇಶ್ವರ, ಮಂಥಾನೇಶ್ವರ, ಮನ್ಮಥೇಶ್ವರ, ರತೀಶ್ವರ, ಗಂಧಕೇಶ್ವರ, ॥೬-೭-೮॥

ಭಾಂಡೀರೇಶ್ವರ, ವನೇಶ್ವರ, ಪುರಂಧ್ರೀಶ್ವರ, ಫಲೇಶ್ವರ, ಕಾರಣೇಶ್ವರ, ತಾರಣೇಶ್ವರ, ಕೃತಿವಾಸೇಶ್ವರ, ಜನಾರ್ದನೇಶ್ವರ, ವಿಶ್ವೇಶ್ವರ, ಮಹಾಕಾಲೇಶ್ವರ,

ವಿಲೇಖನೇಶ್ವರಶ್ಚೈವ ಚಿತ್ರೇಶಃ ಪಾದಕೇಶ್ವರಃ ।
ಪಿಂಡಾರೇಶೋ ವಸೀಶಶ್ಚ ತಿಲಕೇಶೋ ಧ್ರುವೇಶ್ವರಃ ॥೧೨॥

ಭವೇಶ್ವರೋಽರ್ಣವೇಶಶ್ಚ ಕ್ಷೀಭ್ರಣೇಶೋ ಪಲೇಶ್ವರಃ ।
ಕರಂಧಮೇಶಃ ಕೃಷ್ಣೇಶೋ ರಮೇಶಃ ಕರ್ಣಿಕೇಶ್ವರಃ ॥೧೩॥

ಗಂಗಾಧರೇಶೋ ಮೌನೇಶಃ ಕುರುಭದ್ರೇಶ್ವರಸ್ತಥಾ ।
ಕಂದಲೇಶಶ್ಚ ಸಾಲೇಶಸ್ತಾಲೇಶೋ ಬಿಲ್ವಕೇಶ್ವರಃ ॥೧೪॥

ಅಪ್ಸರೇಶೋ ಮೋಕ್ಷರೇಶೋ ಭೂದಾರೇಶಃ ಪಥೇಶ್ವರಃ ।
ವಿರಾಧೇಶಃ ಕೊಂಕಣೇಶೋ ರಭಸೇಶಶ್ಚಲೇಶ್ವರಃ ॥೧೫॥

ಹರಿದ್ರೇಶಃ ಕುಂಕುಮೇಶೋ ನರಕೋತ್ತಾರಣೇಶ್ವರಃ ।
ಸುಖೇಶ್ವರೋ ಜ್ಞಾನಕೇಶೋ ಭಕ್ತೀಶೋ ಮುಕ್ತಿಕೇಶ್ವರಃ ॥೧೬॥

ಋಣಮೋಚೇಶ್ವರಶ್ಚೈವ ಕಾಂತೀಶಃ ಪಾವನೇಶ್ವರಃ ।
ಪವನೇಶಃ ಪುರಂಜೇಶೋ ಗೋಕರ್ಣೇಶೋ ವಟೇಶ್ವರಃ ॥೧೭॥

---

ಸರಸ್ವತೀಶ್ವರ, ಲಕ್ಷ್ಮೀಶ್ವರ, ಶಚೀಶ್ವರ, ಶಕ್ರೇಶ್ವರ, ಪುಲಹೇಶ್ವರ, ಪುಲಸ್ತ್ಯೇಶ್ವರ, ವೃದ್ಧಕಾಲೇಶ್ವರ, ಭಾರದ್ವಾಜೇಶ್ವರ, ಸಾಗರೇಶ್ವರ, ರಮೇಶ್ವರ, ||೯-೧೦-೧೧||

ವಿಲೇಖನೇಶ್ವರ, ಚಿತ್ರೇಶ್ವರ, ಪಾದಕೇಶ್ವರ, ಪಿಂಡಾರೇಶ್ವರ, ವಸೀಶ್ವರ, ತಿಲಕೇಶ್ವರ, ಧ್ರುವೇಶ್ವರ, ಭವೇಶ್ವರ, ಅರ್ಣವೇಶ್ವರ, ಕ್ಷೀಭ್ರಣೇಶ್ವರ, ಪಲೇಶ್ವರ, ಕರಂಧಮೇಶ್ವರ, ಕೃಷ್ಣೇಶ್ವರ, ರಮೇಶ್ವರ, ಕರ್ಣಿಕೇಶ್ವರ, ಗಂಗಾಧರೇಶ್ವರ, ಮೌನೇಶ್ವರ, ಕುರುಭದ್ರೇಶ್ವರ, ಕಂದಲೇಶ್ವರ, ಸಾಲೇಶ್ವರ, ಕಾಲೇಶ್ವರ, ಬಿಲ್ವಕೇಶ್ವರ, ಅಪ್ಸರೇಶ್ವರ, ಮೋಕ್ಷಕೇಶ್ವರ, ಭೂದಾರೇಶ್ವರ, ಪಥೇಶ್ವರ, ವಿರಾಧೇಶ್ವರ, ಕೊಂಕಣೇಶ್ವರ ರಭಸೇಶ್ವರ, ಚಲೇಶ್ವರ, ||೧೨-೧೩-೧೪-೧೫||

ಹರಿದ್ರೇಶ್ವರ, ಕುಂಕುಮೇಶ್ವರ, ನರಕೋತ್ತಾರಣೇಶ್ವರ, ಸುಖೇಶ್ವರ, ಜ್ಞಾನಕೇಶ್ವರ, ಭಕ್ತೀಶ್ವರ, ಮುಕ್ತಿಕೇಶ್ವರ, ಋಣಮೋಚೇಶ್ವರ, ಕಾಂತೀಶ್ವರ, ಪಾವನೇಶ್ವರ, ಪವನೇಶ್ವರ, ಪುರಂಜೇಶ್ವರ, ಗೋಕರ್ಣೇಶ್ವರ, ವಟೇಶ್ವರ, ಶಾಲಿಕೇಶ್ವರ,

ಶಾಲಿಕೇಶೋ ವಿಶಾಲೇಶೋ ವೀತಿಹೋತ್ರೇಶ್ವರಸ್ತಥಾ ।
ವಿಶ್ವೇಶ್ವರಶ್ಚ ಭೀಮೇಶಶ್ಶಂಕರೇಶೋಽಮಿತೇಶ್ವರಃ ॥೧೮॥

ಪಾರಿಜಾತೇಶ್ವರಶ್ಚೈವ ಮಂದಾರೇಶೋ ಜಟೇಶ್ವರಃ ।
ತ್ರಿಜಟೇಶಶ್ಶಿಖಂಡೀಶೋ ಬರ್ಹೀಶಃ ಪನಸೇಶ್ವರಃ ॥೧೯॥

ಫಣಾಮಣೀಶ್ವರೋ ದೇವಿ ರಾಮೇಶೋ ಲಕ್ಷ್ಮಣೇಶ್ವರಃ ।
ಅರುಂಧತೀಶೋ ವಾಗೀಶಃ ಪದ್ಮಗರ್ಭೇಶ್ವರಸ್ತಥಾ ॥೨೦॥

ಹರಿನ್ಮಣೀಶೋ ಭಕ್ಷ್ಯೇಶಃ ಕುಶಲೀಶಸ್ತರೀಶ್ವರಃ ।
ಉದ್ದಾಲಕೇಶ್ವರೋ ನಕ್ತಂಚರೇಶೋಽಪರ್ಣಕೇಶ್ವರಃ ॥೨೧॥

ಶಾಂಡಿಲ್ಯೇಶಶ್ಛಾಗಲೇಶೋ ನಿರಿಚ್ಛೇಶಃ ಕುಶೇಶ್ವರಃ ।
ದೂರ್ವೇಶ್ವರೋಽನಮಿತ್ರೇಶಃ ಕರ್ಕಂಧೇಶೋಽಗುಣೇಶ್ವರಃ ॥೨೨॥

ಕುರುವಿಂದೇಶ್ವರಶ್ಚೈವ ಪಟ್ಟೇಶಃ ಕುಟಜೇಶ್ವರಃ ।
ಶ್ರೀಶೈಲೇಶೋ ಗಣೇಶಶ್ಚ ಹರಿದ್ವಾರೇಶ್ವರಸ್ತಥಾ ॥೨೩॥

ವಿಶಾಲೇಶ್ವರ, ವೀತಿಹೋತ್ರೇಶ್ವರ, ವಿಶ್ವೇಶ್ವರ, ಭೀಮೇಶ್ವರ, ಶಂಕರೇಶ್ವರ, ಅಮಿತೇಶ್ವರ, ಪಾರಿಜಾತೇಶ್ವರ, ಮಂದಾರೇಶ್ವರ, ಜಟೇಶ್ವರ, ತ್ರಿಜಟೇಶ್ವರ, ಶಿಖಂಡೀಶ್ವರ, ಬರ್ಹೀಶ್ವರ, ಪನಸೇಶ್ವರ, ಫಣಾಮಣೀಶ್ವರ, ರಾಮೇಶ್ವರ, ಲಕ್ಷ್ಮಣೇಶ್ವರ, ಅರುಂಧತೀಶ್ವರ, ವಾಗೀಶ್ವರ, ಪದ್ಮಗರ್ಭೇಶ್ವರ, ॥೧೬-೧೭-೧೮-೧೯-೨೦॥

ಹರಿನ್ಮಣೀಶ್ವರ, ಭಕ್ಷ್ಯೇಶ್ವರ, ಕುಶಲೀಶ್ವರ, ತರೀಶ್ವರ, ಉದ್ದಾಲಕೇಶ್ವರ, ನಕ್ತಂಚರೇಶ್ವರ, ಅಪರ್ಣಕೇಶ್ವರ, ಶಾಂಡಿಲ್ಯೇಶ್ವರ, ಛಾಗಲೇಶ್ವರ, ನಿರಿಚ್ಛೇಶ್ವರ, ಕುಶೇಶ್ವರ, ದೂರ್ವೇಶ್ವರ, ಅನಮಿತ್ರೇಶ್ವರ, ಕರ್ಕಂಧೇಶ್ವರ, ಅಗುಣೇಶ್ವರ, ಕುರುವಿಂದೇಶ್ವರ, ಪಟ್ಟೇಶ್ವರ, ಕುಟಜೇಶ್ವರ, ಶ್ರೀಶೈಲೇಶ್ವರ, ಗಣೇಶೇಶ್ವರ, ಹರಿದ್ವಾರೇಶ್ವರ, ॥೨೧-೨೨-೨೩॥

ಗಂಗಾದ್ವಾರೇಶ್ವರಶ್ಚೈವ ಕುರುಕ್ಷೇತ್ರೇಶ್ವರಸ್ತಥಾ ।
ಸುರಾಭಾಂಡೇಶ್ವರಶ್ಚೈವ ಯಯಾತೀಶಃ ಕುಥೇಶ್ವರಃ ॥೨೪॥

ವಾರಾಣಸೀಶ್ವರಶ್ಚೈವಾಪ್ಯವಿಮುಕ್ತೇಶ್ವರಸ್ತಥಾ ।
ಕಾಲಹಸ್ತೀಶ್ವರಶ್ಚೈವ ವಿಷ್ಣುಚಕ್ರಪ್ರದೇಶ್ವರಃ ॥೨೫॥

ರೋಮಂಥೇಶೋಽಪ್ಯಗಸ್ತ್ಯೇಶೋ ಮಾಲವೇಶೋ ಭಗೇಶ್ವರಃ ।
ಅಂಕೋಲೇಶಃ ಪ್ರಧಾನೇಶೋ ಮಾರುತೇಶೋ ಭವೇಶ್ವರಃ ॥೨೬॥

ನಕ್ಷತ್ರೇಶಸ್ತಾಲಕೇಶೋ ಭಲ್ಲಿಕೇಶಃ ಕುಹೇಶ್ವರಃ ।
ರೋಗಹಾರೀಶ್ವರಶ್ಚೈವ ತ್ರಿಜಟೇಶೋ ಘನೇಶ್ವರಃ ॥೨೭॥

ಸುಪರ್ಣೇಶಸ್ತಾಂಡವೇಶೋ ಮಂಡಲೇಶೋ ಮತೀಶ್ವರಃ ।
ತಕ್ಷಕೇಶಃ ಪ್ರವಾಲೇಶೋ ಹರಿಭದ್ರೇಶ್ವರಸ್ತಥಾ ॥೨೮॥

ವಿರೋಧೇಶಸ್ತುಂಬುರೇಶೋ ನಾರದೇಶೋ ಗರೇಶ್ವರಃ ।
ರಮ್ಯೇಶ್ವರೋ ವಿದ್ರುಮೇಶಃ ಕರ್ದಮೇಶಸ್ತೃಣೇಶ್ವರಃ ॥೨೯॥

ಶೂಲಟಂಕೇಶ್ವರಶ್ಚೈವ ಛದ್ಮಕೇಶೋ ಬಲೀಶ್ವರಃ ।
ಮರುಧಾಮೇಶ್ವರಶ್ಚೈವ ಸಿಂಧೂರೇಶೋ ಘೃಣೀಶ್ವರಃ ॥೩೦॥

ವ್ರಾತೇಶ್ವರಃ ಪ್ರಯಾಗೇಶಃ ಪ್ರತಿಷ್ಠಾನಪುರೇಶ್ವರಃ ।
ಗೋದಾವರೀಶ್ವರಶ್ಚೈವ ತಾಮ್ರಪರ್ಣೇಶ್ವರಸ್ತಥಾ ॥೩೧॥

ಗಂಗಾದ್ವಾರೇಶ್ವರ, ಕುರುಕ್ಷೇತ್ರೇಶ್ವರ, ಸುರಾಭಾಂಡೇಶ್ವರ, ಯಯಾತೀಶ್ವರ, ಕುಥೇಶ್ವರ, ವಾರಾಣಸೀಶ್ವರ, ಅವಿಮುಕ್ತೇಶ್ವರ, ಕಾಲಹಸ್ತೀಶ್ವರ, ವಿಷ್ಣುಚಕ್ರಪ್ರದೇಶ್ವರ, ರೋಮಂಥೇಶ್ವರ, ಅಗಸ್ತ್ಯೇಶ್ವರ, ಮಾಲವೇಶ್ವರ, ಭಗೇಶ್ವರ, ಅಂಕೋಲೇಶ್ವರ, ಪ್ರಧಾನೇಶ್ವರ, ಮಾರುತೇಶ್ವರ, ಭವೇಶ್ವರ, ನಕ್ಷತ್ರೇಶ್ವರ, ತಾಲಕೇಶ್ವರ, ಭಲ್ಲಿಕೇಶ್ವರ, ಕುಹೇಶ್ವರ, ರೋಗಹಾರೀಶ್ವರ, ತ್ರಿಜಟೇಶ್ವರ, ಘನೇಶ್ವರ, ಸುಪರ್ಣೇಶ್ವರ, ತಾಂಡವೇಶ್ವರ, ಮಂಡಲೇಶ್ವರ, ಮತೀಶ್ವರ, ತಕ್ಷಕೇಶ್ವರ, ಪ್ರವಾಲೇಶ್ವರ, ಹರಿಭದ್ರೇಶ್ವರ, ॥೨೪-೨೫-೨೬-೨೭-೨೮॥

ವಿರೋಧೇಶ್ವರ, ತುಂಬುರೇಶ್ವರ, ನಾರದೇಶ್ವರ, ಗರೇಶ್ವರ, ರಮ್ಯೇಶ್ವರ,

ಮರುದ್ವೃಧೇಶ್ವರಶ್ಚೈವ ಪಂಪೇಶಃ ಪಂಕಿಲೇಶ್ವರಃ ।
ಫೇನೇಶೋ ಬುದ್ಬುದೇಶಶ್ಚಾಪ್ಯಾವರ್ತೇಶಸ್ಸುಮೇಶ್ವರಃ ॥೩೨॥

ಕುಲೇಶ್ವರೋ ವಿರಾಟೇಶಃ ಪಲಾಶೇಶಸ್ಸ್ಥಿತೀಶ್ವರಃ ।
ಪ್ರಲಯೇಶೋ ಜಾಗ್ರದೀಶಸ್ತ್ರಿಲೋಕೇಶಃ ಕ್ಷಿತೀಶ್ವರಃ ॥೩೩॥

ಪಂಚಕೇಶೋ ಪ್ರತೀಶಶ್ಚ ಯಜ್ಞೇಶೋಽದುಂಬರೇಶ್ವರಃ ।
ವಾಲೀಶಶ್ಚೈವ ಪಾಲೀಶಃ ಪಲೀಶೋ ಬಭ್ರವೇಶ್ವರಃ ॥೩೪॥

ಗಂಧದ್ವಾರೇಶ್ವರಶ್ಚೈವ ಘಂಟೇಶೋ ವರುಣೇಶ್ವರಃ ।
ಪ್ರಭಾಸೇಶಃ ಪುಷ್ಕರೇಶೋ ರುದ್ರಕೋಟೀಶ್ವರಸ್ತಥಾ ॥೩೫॥

ವಲ್ಮೀಕೇಶಸ್ಸುಂದರೇಶಸ್ತೃಣಜ್ಯೋತೀಶ್ವರಸ್ತಥಾ ।
ಗಾಯತ್ರೀಶಸ್ಸವಿತ್ರೀಶಃ ಕಾಲದ್ವಾರೇಶ್ವರಸ್ತಥಾ ॥೩೬॥

ತುಂಗೇಶೋ ಭೀಮಚಂಡೇಶೋ ರತ್ನಗರ್ಭೇಶ್ವರಸ್ತಥಾ ।
ದೇವೇಶ್ವರೋ ಹೀರಕೇಶೋ ರಂತಿದೇವೇಶ್ವರಸ್ತಥಾ ॥೩೭॥

ವಿದ್ರುಮೇಶ್ವರ, ಕರ್ದಮೇಶ್ವರ, ತೃಣೇಶ್ವರ, ಶೂಲಟಂಕೇಶ್ವರ, ಛದ್ಮಕೇಶ್ವರ, ಬಲೀಶ್ವರ, ಮರುಧಾಮೇಶ್ವರ, ಸಿಂಧೂರೇಶ್ವರ, ಘೃಣೀಶ್ವರ, ವಾತೇಶ್ವರ, ಪ್ರಯಾಗೇಶ್ವರ, ಪ್ರತಿಷ್ಠಾನಪುರೇಶ್ವರ, ಗೋದಾವರೀಶ್ವರ, ತಾಮ್ರಪರ್ಣೀಶ್ವರ, ||೨೯-೩೦-೩೧||

ಮರುದ್ವೃಧೇಶ್ವರ, ಪಂಪೇಶ್ವರ, ಪಂಕಿಲೇಶ್ವರ, ಫೇನೇಶ್ವರ, ಬುದ್ಬುದೇಶ್ವರ, ಆವರ್ತೇಶ್ವರ, ಸುಮೇಶ್ವರ, ಕುಲೇಶ್ವರ, ವಿರಾಟೇಶ್ವರ, ಪಲಾಶೇಶ್ವರ, ಸ್ಥಿತೀಶ್ವರ, ಪ್ರಲಯೇಶ್ವರ, ಜಾಗ್ರದೀಶ್ವರ, ತ್ರಿಲೋಕೇಶ್ವರ, ಕ್ಷಿತೀಶ್ವರ, ಪಂಚಕೇಶ್ವರ, ಪ್ರತೀಶ್ವರ, ಯಜ್ಞೇಶ್ವರ, ಉದುಂಬರೇಶ್ವರ, ಪಲೀಶ್ವರ, ಪಾಲೀಶ್ವರ, ಬಭ್ರವೇಶ್ವರ, ||೩೨-೩೩-೩೪||

ಗಂಧದ್ವಾರೇಶ್ವರ, ಘಂಟೇಶ್ವರ, ವರುಣೇಶ್ವರ, ಪ್ರಭಾಸೇಶ್ವರ, ಪುಷ್ಕರೇಶ್ವರ, ರುದ್ರಕೋಟೀಶ್ವರ, ವಲ್ಮೀಕೇಶ್ವರ, ಸುಂದರೇಶ್ವರ, ತೃಣಜ್ಯೋತೀಶ್ವರ, ಗಾಯತ್ರೀಶ್ವರ, ಸಾವಿತ್ರೀಶ್ವರ, ಕಾಲದ್ವಾರೇಶ್ವರ, ತುಂಗೇಶ್ವರ, ಭೀಮಚಂಡೇಶ್ವರ, ರತ್ನಗರ್ಭೇಶ್ವರ, ದೇವೇಶ್ವರ, ಹೀರಕೇಶ್ವರ, ರಂತಿದೇವೇಶ್ವರ, ||೩೫-೩೬-೩೭||

ಕಾಲಂಜರೇಶ್ವರೋಽಬ್ಧೀಶಃ ಪೈಪ್ಪಲಾದೇಶ್ವರಸ್ತಥಾ ।
ಗಂಧರ್ವೇಶಸ್ತ್ರಿಶೂಲೇಶೋ ರಜನೀಶೋ ದಿನೇಶ್ವರಃ ॥೩೮॥

ಚಿತ್ರಘಂಟೇಶ್ವರಶ್ಚೈವ ದ್ವಾರಪೀಠೇಶ್ವರಸ್ತಥಾ ।
ತ್ರಿಕೂಟೇಶೋ ಮಂಗಲೇಶಸ್ತಥೈವಾಮಲಕೇಶ್ವರಃ ॥೩೯॥

ಮುದ್ರೇಶಸ್ತಾಟಕೇಶಶ್ಚ ತ್ರಿದಂಡೀಶೋಽಗಜೇಶ್ವರಃ ।
ಕಾತ್ಯಾಯನೀಶ್ವರಶ್ಚೈವ ಯಾಜ್ಞ್ಯವಲ್ಕ್ಯೇಶ್ವರಸ್ತಥಾ ॥೪೦॥

ತ್ವಷ್ಟ್ರೇಶೋ ವಿಶ್ವಕರ್ಮೇಶೋ ಯಮೇಶೋ ರಥಕೇಶ್ವರಃ ।
ವಸುಂಧರೇಶ್ವರಶ್ಚೈವ ಕ್ಷ್ಮಾಮೇಶೋ ನಾಲಕೇಶ್ವರಃ ॥೪೧॥

ಮಿತ್ರೇಶ್ವರಶ್ಚ ಕತ್ರೀಶಃ ಕಾವ್ಯೇಶೋ ವಿಬುಧೇಶ್ವರಃ ।
ಭೌಮೇಶ್ವರೋ ಭರ್ತೃಕೇಶಃ ಕರಹಟ್ಟೇಶ್ವರಸ್ತಥಾ ॥೪೨॥

ಗೃಧ್ರೇಶಃ ಕಂಕತೀಶಶ್ಚ ಕಾವ್ಯೇಶಸ್ಸ್ವರ್ಣದೇಶ್ವರಃ ॥೪೩॥

ಏತಾನಿ ದಿವ್ಯಮಣಿಧಾಮಗತಾನಿ ದೇವಿ
ಲಿಂಗಾನಿ ಯಾಮ್ಯಸುಭಗೋದ್ಯತಸೋಮಮೌಲಿ ।

ಕಾಲಂಜರೇಶ್ವರ, ಅಬ್ಧೀಶ್ವರ, ಪೈಪ್ಪಲಾದೇಶ್ವರ, ಗಂಧರ್ವೇಶ್ವರ, ತ್ರಿಶೂಲೇಶ್ವರ, ರಜನೀಶ್ವರ, ದಿನೇಶ್ವರ, ಚಿತ್ರಘಂಟೇಶ್ವರ, ದ್ವಾರಪೀಠೇಶ್ವರ, ತ್ರಿಕೂಟೇಶ್ವರ, ಮಂಗಲೇಶ್ವರ, ಆಮಲಕೇಶ್ವರ, ಮುದ್ರೇಶ್ವರ, ತಾಟಕೇಶ್ವರ, ತ್ರಿದಂಡೀಶ್ವರ, ಅಗಜೇಶ್ವರ, ಕಾತ್ಯಾಯನೀಶ್ವರ, ಯಾಜ್ಞವಲ್ಕ್ಯೇಶ್ವರ, ತ್ವಷ್ಟ್ರೇಶ್ವರ, ವಿಶ್ವಕರ್ಮೇಶ್ವರ, ಯಮೇಶ್ವರ, ರಥಿಕೇಶ್ವರ, ವಸುಂಧರೇಶ್ವರ, ಕ್ಷ್ಮಾಮೇಶ್ವರ, ನಾಲಕೇಶ್ವರ, ಮಿತ್ರೇಶ್ವರ, ಕತ್ರೀಶ್ವರ, ಕಾವ್ಯೇಶ್ವರ, ವಿಬುಧೇಶ್ವರ, ಭೌಮೇಶ್ವರ, ಭರ್ತೃಕೇಶ್ವರ, ಕರಹಟ್ಟೇಶ್ವರ, ಗೃಧ್ರೇಶ್ವರ, ಕಂಕರೀಶೇಶ್ವರ, ಕಾವ್ಯೇಶ್ವರ, ಸ್ವರ್ಣದೇಶ್ವರ, ॥೩೮-೩೯-೪೦-೪೧-೪೨-೪೩॥

ಎಂಬುದಾಗಿ, ಪಾರ್ವತಿಯೇ, ಈ ಶಿವಲಿಂಗಗಳು, ಚಂದ್ರಕಾಂತಶಿಲಾ ನಿರ್ಮಿತಗಳಾಗಿ, ಆಗ್ನೇಯ ಮೂಲೆಯಿಂದ ಪ್ರಾರಂಭವಾಗಿ ನೈಋತ್ಯ ಮೂಲೆಯ ವರೆಗೆ ಹರಡಿರುವುವು. ಇವುಗಳಿಗೆಲ್ಲಾ ನವರತ್ನಮಯವಾದ ಆಲಯಗಳೂ, ಗೋಪು

ಚಂದ್ರೋಪಲಾಕಲಿತಲಿಂಗತತೀನಿ ಪಶ್ಯ
ಚಾಗ್ನೇಯಸೈಖ್ಯೃತತತಾನಿ ಶಿವೇಽಘಹಂತೃ ॥೪೪॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸದಕ್ಷಿಣದ್ವಾರಲಿಂಗಕಥನಂ
ನಾಮ ಚತ್ವಾರಿಂಶೋಽಧ್ಯಾಯಃ

ರಗಳೂ ಕಲ್ಪಿತವಾಗಿವೆ. ಇವುಗಳ ದರ್ಶನದಿಂದ ಭಕ್ತರ ಸಕಲ ದುರಿತಗಳೂ ಪರಿಹಾರವಾಗಿ, ಅವರು ಮುಕ್ತರಾಗುವರು. ॥೪೪॥

ಇತಿ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಕೈಲಾಸಪರ್ವತದ
ದಕ್ಷಿಣದ್ವಾರದಲ್ಲಿರುವ ಲಿಂಗಗಳ ವರ್ಣನೆಯೆಂಬ ನಲವತ್ತೊಂದನೆಯ ಅಧ್ಯಾಯವು
ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿಚತ್ವಾರಿಂಶೋಽಧ್ಯಾಯಃ

### ಕೈಲಾಸಪಶ್ಚಿಮದ್ವಾರಲಿಂಗಕಥನಂ

|| ಈಶ್ವರ ಉವಾಚ ||

ಕೈಲಾಸದಕ್ಷಿಣಾಪಾರಶೃಂಗೌಘೇ ತೇ ಶಿವಾಲಯಾಃ ।
ಅನಂತಾನ್ಯಪಿ ಲಿಂಗಾನಿ ತೇಷೂತ್ಕೃಷ್ಟಾ ಮಯೋದಿತಾಃ ॥೧॥

ಪಾಶ್ಚಾತ್ಯಾಪಾರಶೃಂಗೇಷು ಶೃಣು ಲಿಂಗಾಕುಲಂ ಶಿವೇ ।
ಪ್ರಸಿದ್ಧಾನ್ಯಪಿ ಲಿಂಗಾನಿ ಮಮೇಷ್ಟಾನಿ ಶೃಣು ಪ್ರಿಯೇ ॥೨॥

ತತ್ಪೂರುಷೇಶಸ್ಸ್ಥಾಣ್ವೀಶಃ ಪೈಂಗೇಶೋ ರುಡಜೇಶ್ವರಃ ।
ಸಾಲ್ವೇಶ್ವರಸ್ಸ್ಥಾನಕೇಶೋ ವೈನತೇಶಸ್ಸಲೇಶ್ವರಃ ॥೩॥

ಮುಸಲೇಶೋ ಹಾಟಕೇಶೋ ರುದ್ರಧನ್ವೀಶ್ವರಸ್ತಥಾ ।
ಜ್ವರಾಪಹಾರಕೇಶಶ್ಚ ತಥಾ ಕ್ಷಯಹರೇಶ್ವರಃ ॥೪॥

## ಶ್ರೀಶಿವರಹಸ್ಯದಲ್ಲಿ ನಲವತ್ತೆರಡನೆಯ ಅಧ್ಯಾಯ

ಪರಮೇಶ್ವರನು ಮತ್ತೆ ಪಾರ್ವತಿಯೊಡನೆ "ದೇವಿಯೇ, ಇಲ್ಲಿನವರೆಗೂ ಕೈಲಾಸಪರ್ವತದ ದಕ್ಷಿಣ ದಿಗ್ಭಾಗದಲ್ಲಿರುವ ಅನಂತ ಲಿಂಗಗಳ ಮಧ್ಯೆ ಉತ್ಕೃಷ್ಟಗಳಾದ ಲಿಂಗಗಳ ಹೆಸರುಗಳನ್ನು ಮಾತ್ರ ವಿವರಿಸಿದೆನು. ಈಗ ಪಶ್ಚಿಮ ದಿಕ್ಕಿನಲ್ಲಿರುವ ಶಿವಲಿಂಗಗಳಲ್ಲಿ ನನಗೆ ಇಷ್ಟವೂ ಮತ್ತು ಪ್ರಸಿದ್ಧವೂ ಆಗಿರುವ ಕೆಲವು ಲಿಂಗಗಳ ಹೆಸರುಗಳನ್ನು ಮಾತ್ರ ಹೇಳುವೆನು ಕೇಳು" ಎಂದು ಪಶ್ಚಿಮಭಾಗದ ಲಿಂಗಗಳ ನಾಮಗಳನ್ನು ವಿವರಿಸಲಾರಂಭಿಸಿದನು. ||೧-೨||

ತತ್ಪೂರುಷೇಶ್ವರ, ಸ್ಥಾಣ್ವೀಶ್ವರ, ಪೈಂಗೇಶ್ವರ, ರುಡಜೇಶ್ವರ, ಸಾಲ್ವೇಶ್ವರ,

ಪ್ರಾಣೇಶಶ್ಚ ವಿದರ್ಭೇಶೋ ದೇವೇಶಸ್ತ್ವಚಲೇಶ್ವರಃ
ಅನಂಗೇಶಶ್ಶಂಬರೇಶ ಉಗ್ರೇಶೋ ಧಾನ್ಯಕೇಶ್ವರಃ ॥೫॥

ಬಲಾಕಶೀಶ್ವರಶ್ಚೈವ ಘನಘೋಷೇಶ್ವರಸ್ತಥಾ ।
ವೇದಗರ್ಭೇಶ್ವರಶ್ಚೈವ ಓಂಕಾರೇಶಶ್ಶಿಖೀಶ್ವರಃ ॥೬॥

ಗದಾಧರೇಶ್ವರಶ್ಚೈವ ಬಿಲ್ವಮೂಲೇಶ್ವರಸ್ತಥಾ ।
ಸೂತ್ರೇಶ್ವರೋ ಭಾರತೀಶಸ್ತುಂಗಭದ್ರೇಶ್ವರಸ್ತಥಾ ॥೭॥

ಸನಾತನೇಶೋ ವೈದ್ಯೇಶಃ ಕುಲಿಂಗೇಶಃ ಪ್ರಜೇಶ್ವರಃ
ಮಾಂಡವ್ಯೇಶಸ್ತಾಂಬಕೇಶೋ ಬೋಧೇಶೋ ವಿಘಸೇಶ್ವರಃ ॥೮॥

ಪ್ರಘಸೇಶೋಽಥ ಋಭ್ವೀಶೋ ಗಣಗೀತೇಶ್ವರಸ್ತಥಾ ।
ಶುಕ್ಲೇಶ್ವರಃ ಪ್ರಸಿದ್ಧೇಶಸ್ಸಿದ್ಧೇಶಶ್ಚ ಶನೀಶ್ವರಃ ॥೯॥

ಪಕ್ಷೀಶಃ ಪತ್ರಿಕೇಶಶ್ಚ ಕುಲೀಶೋಽಥ ವನೀಶ್ವರಃ ।
ಪರ್ವೇಶ್ವರಃ ಪರ್ವತೇಶಸ್ಸರ್ವೇಶಃ ಕಾಂತಿಕೇಶ್ವರಃ ॥೧೦॥

ಬರ್ಹಿಧ್ವಜೇಶ್ವರಶ್ಚೈವ ಕಪೋತೇಶಃ ಖಣೇಶ್ವರಃ ।
ಶತೇಶ್ವರೋ ರೋಮಕೇಶಃ ಕಾವ್ಯೇಶೋ ವರ್ಷಕೇಶ್ವರಃ ॥೧೧॥

ಸ್ಥಾನಕೇಶ್ವರ, ವೈನತೇಶ್ವರ, ಸಲೇಶ್ವರ, ಮುಸಲೇಶ್ವರ, ಹಾಟಕೇಶ್ವರ, ರುದ್ರಧನ್ವೀಶ್ವರ, ಜ್ವರಾಪಹಾರಕೇಶ್ವರ, ಕ್ಷಯಹರೇಶ್ವರ, ॥೩-೪॥

ಪ್ರಾಣೇಶ್ವರ, ವಿದರ್ಭೇಶ್ವರ, ದೇವೇಶ್ವರ, ಅಚಲೇಶ್ವರ, ಅನಂಗೇಶ್ವರ, ಶಂಬರೇಶ್ವರ, ಉಗ್ರೇಶ್ವರ, ಧಾನ್ಯಕೇಶ್ವರ, ಬಲಾಕಶೀಶ್ವರ, ಘನಘೋಷೇಶ್ವರ, ವೇದಗರ್ಭೇಶ್ವರ, ಓಂಕಾರೇಶ್ವರ, ಶಿಖೀಶ್ವರ, ಗದಾಧರೇಶ್ವರ, ಬಿಲ್ವಮೂಲೇಶ್ವರ, ಸೂತ್ರೇಶ್ವರ, ಭಾರತೀಶ್ವರ, ತುಂಗಭದ್ರೇಶ್ವರ, ಸನಾತನೇಶ್ವರ, ವೈದ್ಯೇಶ್ವರ, ಕುಲಿಂಗೇಶ್ವರ, ಪ್ರಜೇಶ್ವರ, ಮಾಂಡವ್ಯೇಶ್ವರ, ತಾಂಬಕೇಶ್ವರ, ಬೋಧೇಶ್ವರ, ವಿಘಸೇಶ್ವರ, ॥೫-೬-೭-೮॥

ಪ್ರಘಸೇಶ್ವರ, ಋಭ್ವೀಶ್ವರ, ಗಣಗೀತೇಶ್ವರ, ಶುಕ್ಲೇಶ್ವರ, ಪ್ರಸಿದ್ಧೇಶ್ವರ, ಸಿದ್ಧೇಶ್ವರ, ಶನೀಶ್ವರ, ಪಕ್ಷೀಶ್ವರ, ಪತ್ರಿಕೇಶ್ವರ, ಕುಲೀಶ್ವರ, ವನೀಶ್ವರ, ಸರ್ವೇಶ್ವರ,

**ಸೋಮನಂದೀಶ್ವರಶ್ಚೈವ ತ್ರಿಫಲೀಶಃ ಖರೇಶ್ವರಃ ।**
**ಹನೇಹತೀಶ್ವರಶ್ಚೈವ ಶತರ್ಚೇಶೋ ಭವೇಶ್ವರಃ ॥೧೨॥**

**ವಿಡೂರಥೇಶ್ವರಶ್ಚೈವ ಕರಂಭೀಶಸ್ಸ್ರುವೇಶ್ವರಃ ।**
**ಗಣೇಶ್ವರೋ ವರ್ಧಿಕೇಶಸ್ಸಧ್ರೀಶಃ ಕ್ರಿಕಕೇಶ್ವರಃ ॥೧೩॥**

**ಚಿತ್ರವ್ಯಾಧೇಶ್ವರಶ್ಚೈವ ರೌಪ್ಯೇಶೋ ಬಂಧಕೇಶ್ವರಃ ।**
**ತಥಾ ಪಶುಪತೀಶಶ್ಚ ಭಯಹಾರೀಶ್ವರಸ್ತಥಾ ॥೧೪॥**

**ಜನ್ಮಹಾರೀಶ್ವರಶ್ಚೈವ ದುಃಖಹಾರೀಶ್ವರಸ್ತಥಾ ।**
**ಬ್ರಹ್ಮಯೋನೀಶ್ವರಶ್ಚೈವ ವಿಷ್ಣುಗರ್ಭೇಶ್ವರಸ್ತಥಾ ॥೧೫॥**

**ರುದ್ರಲೋಮೇಶ್ವರಶ್ಚೈವ ಚೇಂದ್ರಧಾಮೇಶ್ವರಸ್ತಥಾ ।**
**ಚಂದ್ರಚೂಡೇಶ್ವರಶ್ಚೈವ ಅಗ್ನಿಗರ್ಭೇಶ್ವರಸ್ತಥಾ ॥೧೬॥**

**ವಾಯವೀಶೋ ಜಲೇಶಶ್ಚ ಮೇಘೇಶೋ ವೈದ್ಯುತೇಶ್ವರಃ ।**
**ಅವೋದೇಶಸ್ತಿತ್ತಿರೇಶೋ ದ್ಯಾವಾಭೂಮೀಶ್ವರಸ್ತಥಾ ॥೧೭॥**

ಕಾಂತಿಕೇಶ್ವರ, ಬರ್ಹಿಧ್ವಜೇಶ್ವರ, ಕಪೋತೇಶ್ವರ, ಖಣೇಶ್ವರ, ಶತೇಶ್ವರ, ರೋಮಕೇಶ್ವರ, ಕಾವ್ಯೇಶ್ವರ, ವರ್ಷಕೇಶ್ವರ, ||೯-೧೦-೧೧||

ಸೋಮನಂದೀಶ್ವರ, ತ್ರಿಫಲೀಶ್ವರ, ಖರೇಶ್ವರ, ಹನೇಹತೀಶ್ವರ, ಶತರ್ಚೇಶ್ವರ, ಭವೇಶ್ವರ, ವಿಡೂರಥೇಶ್ವರ, ಕರಂಭೀಶೇಶ್ವರ, ಸ್ರುವೇಶ್ವರ, ಗಣೇಶ್ವರ, ವರ್ಧಿಕೇಶ್ವರ, ಸಧ್ರೀಶ್ವರ, ಕ್ರಿಕಕೇಶ್ವರ, ಚಿತ್ರವ್ಯಾಧೇಶ್ವರ, ರೌಪ್ಯೇಶ್ವರ, ಬಂಧಕೇಶ್ವರ, ಪಶುಪತೀಶ್ವರ, ಭಯಹಾರೀಶ್ವರ ||೧೨-೧೩-೧೪||

ಜನ್ಮಹಾರೀಶ್ವರ, ದುಃಖಹಾರೀಶ್ವರ, ಬ್ರಹ್ಮಯೋನೀಶ್ವರ, ವಿಷ್ಣುಗರ್ಭೇಶ್ವರ, ರುದ್ರಲೋಮೇಶ್ವರ, ಇಂದ್ರಧಾಮೇಶ್ವರ, ಚಂದ್ರಚೂಡೇಶ್ವರ, ಅಗ್ನಿಗರ್ಭೇಶ್ವರ, ವಾಯವೀಶೇಶ್ವರ, ಜಲೇಶ್ವರ, ಮೇಘೇಶ್ವರ, ವೈದ್ಯುತೇಶ್ವರ, ಅವೋದೇಶ್ವರ, ತಿತ್ತಿರೀಶ್ವರ, ದ್ಯಾವಾಭೂಮೀಶ್ವರ, ಗಜಾಜಿನಧರೇಶ್ವರ, ನರಸಿಂಹೇಶ್ವರ, ಔಪಾಸನೇಶ್ವರ, ಹವ್ಯೇಶ್ವರ, ಗಣಕೇಶ್ವರ, ||೧೫-೧೬-೧೭||

ಗಜಾಜಿನಧರೇಶಶ್ಚ ನರಸಿಂಹೇಶ್ವರಸ್ತಥಾ ।
ಔಪಾಸನೇಶ್ವರಶ್ಚೈವ ಹವ್ಯೇಶೋ ಗಣಕೇಶ್ವರಃ ॥೧೮॥

ಕರ್ಣಿಕೇಶೋ ದಧೀಚೇಶೋ ಝುಂಕೇಶಃ ಕರ್ಕಟೇಶ್ವರಃ ।
ಜಾಬಾಲೇಶಸ್ಸುಬಾಲೇಶಃ ಪುರಹಾರೇಶ್ವರಸ್ತಥಾ ॥೧೯॥

ಋಗ್ವೇದೇಶೋಽಥರ್ವಕೇಶಃ ಪುರಾಣೇಶೋರ್ವಶೀಶ್ವರೌ ।
ಇತಿಹಾಸೇಶ್ವರಶ್ಚೈವ ಧರ್ಮಸಾರೇಶ್ವರಸ್ತಥಾ ॥೨೦॥

ಸಾಂಖ್ಯೇಶ್ವರಶ್ಚ ಯೋಗೇಶೋ ಮೌಲೀಶಃ ಪಾಲಿಕೇಶ್ವರಃ ।
ಕುಜಂಭೇಶಶ್ಚ ಜಂಭೇಶೋ ರಾಜರಾಜೇಶ್ವರಸ್ತಥಾ ॥೨೧॥

ಕೌಥುಮೀಶೋ ವಿಶಾಖೇಶಸ್ಸ್ಕನ್ನೇಶಃ ಫಲಿಕೇಶ್ವರಃ ।
ಕದಲೀಶಃ ಪೃಷ್ಟಕೀಶಃ ಪೃಥ್ವೀಶಃ ಕಾರ್ಮುಕೇಶ್ವರಃ ॥೨೨॥

ಅಂತರಿಕ್ಷೇಶ್ವರಶ್ಚೈವ ಮೈತ್ರೇಶಃ ಕುಮುದೇಶ್ವರಃ ।
ಉದಾವಸೇಶ್ವರಶ್ಚೈವ ಮಲ್ಲೇಶೋ ಬ್ರಹ್ಮಕೇಶ್ವರಃ ॥೨೩॥

ತರಂಗೇಶಃ ಕುರಂಗೇಶೋ ಮಕರಂದೇಶ್ವರಸ್ತಥಾ ।
ಸುಧಾಧರೇಶ್ವರಶ್ಚೈವ ಧೃತಕೇಶೇಶ್ವರಸ್ತಥಾ ॥೨೪॥

ವ್ಯಾಲೇಶ್ವರೋ ವಿತರ್ಕೇಶೋ ಕಾನನೇಶೋ ಮುನೀಶ್ವರಃ ।
ಭದ್ರಮಾಲೇಶ್ವರಶ್ಚೈವ ಕೇತುಮಾಲೇಶ್ವರಸ್ತಥಾ ॥೨೫॥

ಕರ್ಣಿಕೇಶ್ವರ, ದಧೀಚೇಶ್ವರ, ಝುಂಕೇಶ್ವರ, ಕರ್ಕಟೇಶ್ವರ, ಜಾಬಾಲೇಶ್ವರ, ಸುಬಾಲೇಶ್ವರ, ಪುರಹಾರೇಶ್ವರ, ಋಗ್ವೇದೇಶ್ವರ, ಅಥರ್ವಕೇಶ್ವರ, ಪುರಾಣೇಶ್ವರ, ವಶೀಶ್ವರ, ಇತಿಹಾಸೇಶ್ವರ, ಧರ್ಮಸಾರೇಶ್ವರ, ಸಾಂಖ್ಯೇಶ್ವರ, ಯೋಗೇಶ್ವರ, ಮೌಲೀಶ್ವರ, ಪಾಲಿಕೇಶ್ವರ, ಕುಜಂಭೇಶ್ವರ, ಜಂಭೇಶ್ವರ, ರಾಜರಾಜೇಶ್ವರ, ಕೌಥುಮೀಶ್ವರ, ವಿಶಾಖೇಶ್ವರ, ಸ್ಕನ್ನೇಶ್ವರ, ಫಲಿಕೇಶ್ವರ, ಕದಲೀಶ್ವರ, ಪೃಷ್ಟಕೀಶ್ವರ, ಪೃಥ್ವೀಶ್ವರ, ಕಾರ್ಮುಕೇಶ್ವರ, ॥೧೮-೧೯-೨೦-೨೧-೨೨॥

* ಅಂತರಿಕ್ಷೇಶ್ವರ, ಮೈತ್ರೇಶ್ವರ, ಕುಮುದೇಶ್ವರ, ಉದಾವಸೇಶ್ವರ, ಮಲ್ಲೇಶ್ವರ, ಬ್ರಹ್ಮಕೇಶ್ವರ, ತರಂಗೇಶ್ವರ, ಕುರಂಗೇಶ್ವರ, ಮಕರಂದೇಶ್ವರ, ಸುಧಾಧ

ಮಂದರೇಶೋ ವಿಂಧ್ಯಕೇಶೋ ಹಿಮೇಶೋ ನೀಲಕೇಶ್ವರಃ ।
ಮಹೇಂದ್ರೇಶಃ ಕರ್ಮಕೇಶೋ ಖತ್ವೀಶೋ ಧೂನನೇಶ್ವರಃ ॥೨೬॥

ವೀತಹವ್ಯೇಶ್ವರಶ್ಚೈವಾಪ್ಯಶ್ವತ್ಥಾಮೇಶ್ವರಸ್ತಥಾ ।
ಶಿಶಿರೇಶಸ್ತೀರ್ಥಕೇಶೋ ಹಿಮೇಶೋ ನೀಲಕೇಶ್ವರಃ ॥೨೭॥

ಮಹೇಂದ್ರೇಶಃ ಕರ್ಮಕೇಶಸ್ತ್ರಿನವೇಶೋಽಬ್ಜಕೇಶ್ವರಃ ।
ಅಪಸ್ಮಾರಹರೇಶಶ್ಚ ಸೋಮಚಂಡೀಶ್ವರಸ್ತಥಾ ॥೨೮॥

ತಥಾ ಮಾರ್ಗಸಹಾಯೇಶೋ ದೇವೀಶೋಽರುಣಜೇಶ್ವರಃ ।
ಜ್ವಲನೇಶಃ ಪಾವಕೇಶಸ್ತಥೈವಾಂಗಿರಸೇಶ್ವರಃ ॥೨೯॥

ದಕ್ಷೇಶ್ವರೋ ವಿದಕ್ಷೇಶೋ ಮೈನಾಕೇಶಸ್ಸತೀಶ್ವರಃ ।
ಪ್ರಮಥೇಶಃ ಪ್ರಮಾಥೀಶೋ ಭೋಜೇಶೋ ವಿಕ್ರಮೇಶ್ವರಃ ॥೩೦॥

ಈಡ್ಯೇಶ್ವರಶ್ಚ ಯಾಜ್ಯೇಶಃ ಕರ್ಣವೇಧೇಶ್ವರಸ್ತಥಾ ।
ತರ್ಣಕೇಶಃ ಪಾಂಡರೇಶೋ ಮೇಘವಾಹೇಶ್ವರಸ್ತಥಾ ॥೩೧॥

ರೇಶ್ವರ, ಧೃತಕೇಶ್ವರ, ವಾಲೇಶ್ವರ, ವಿತರ್ಕೇಶ್ವರ, ಕಾನನೇಶ್ವರ, ಮುನೀಶ್ವರ, ಭದ್ರಮಾಲೇಶ್ವರ, ಕೇತುಮಾಲೇಶ್ವರ, ಮಂದರೇಶ್ವರ, ವಿಂಧ್ಯಕೇಶ್ವರ, ಹಿಮೇಶ್ವರ, ನೀಲಕೇಶ್ವರ, ಮಹೇಂದ್ರೇಶ್ವರ, ಕರ್ಮಕೇಶ್ವರ, ಖತ್ವೀಶ್ವರ, ಧೂನನೇಶ್ವರ, ||೨೩-೨೪-೨೫-೨೬||

ವೀತಹವ್ಯೇಶ್ವರ, ಅಶ್ವತ್ಥಾಮೇಶ್ವರ, ಶಿಶಿರೇಶ್ವರ, ತೀರ್ಥಕೇಶ್ವರ, ಹಿಮೇಶ್ವರ, ನೀಲಕೇಶ್ವರ, ಮಹೇಂದ್ರೇಶ್ವರ, ಕರ್ಮಕೇಶ್ವರ, ತ್ರಿನವೇಶ್ವರ, ಅಬ್ಜಕೇಶ್ವರ, ಅಪಸ್ಮಾರಹರೇಶ್ವರ, ಸೋಮಚಂಡೀಶ್ವರ, ಮಾರ್ಗಸಹಾಯೇಶ್ವರ, ದೇವೀಶ್ವರ, ಅರುಣಜೇಶ್ವರ, ಜ್ವಲನೇಶ್ವರ, ಪಾವಕೇಶ್ವರ, ಆಂಗಿರಸೇಶ್ವರ, ದಕ್ಷೇಶ್ವರ, ವಿದಕ್ಷೇಶ್ವರ, ಮೈನಾಕೇಶ್ವರ, ಸತೀಶ್ವರ, ಪ್ರಮಥೇಶ್ವರ, ಪ್ರಮಾಥೀಶ್ವರ, ಭೋಜೇಶ್ವರ, ವಿಕ್ರಮೇಶ್ವರ, ||೨೭-೨೮-೨೯-೩೦||

ಈಡ್ಯೇಶ್ವರ, ಯಾಜ್ಯೇಶ್ವರ, ಕರ್ಣವೇಧೇಶ್ವರ, ತರ್ಣಕೇಶ್ವರ, ಪಾಂಡರೇಶ್ವರ, ಮೇಘವಾಹೇಶ್ವರ, ಕನಿಷ್ಠೇಶ್ವರ, ಜ್ಯೇಷ್ಠೇಶ್ವರ, ತಾಮ್ರೇಶ್ವರ, ಶೌನಕೇಶ್ವರ, ಅನಾಹ

ಕನಿಷ್ಠೇಶಶ್ಚ ಜ್ಯೇಷ್ಠೇಶಸ್ತ್ವಾನ್ಯ್ರೇಶಶ್ಚ್ಯಾನಕೇಶ್ವರಃ ।
ಅನಾಹತೇಶ್ವರಶ್ಚೈವ ಪೀತೇಶೋ ಧೂಮ್ರಕೇಶ್ವರಃ ॥೩೨॥

ಬಂಧಮೋಚನಕೇಶಶ್ಚ ತಥಾ ದೇವಿ ಶತೇಶ್ವರಃ ।
ಭ್ರಮರೇಶಃ ಕಾಂತಕೇಶೋ ದ್ರುಮಚಂಡೀಶ್ವರಸ್ತಥಾ ॥೩೩॥

ವಿಶಾಲಾಕ್ಷೀಶ್ವರಶ್ಚೈವ ವಸಂತೇಶಃ ಖಗೇಶ್ವರಃ ।
ಗಜಾಸುರಹರೇಶಶ್ಚ ನೀಲಕಂಠೇಶ್ವರಸ್ತಥಾ ॥೩೪॥

ಸುಮಿತ್ರಾವರುಣೇಶಶ್ಚ ಕಲಹಂಸೇಶ್ವರಸ್ತಥಾ ।
ಸಾವಿತ್ರೀಶೋ ಗೋಮತೀಶೋ ಗೋನರ್ದೇಶೋ ವೃಷೇಶ್ವರಃ॥೩೫॥

ಗತಿಪ್ರದೇಶ್ವರಶ್ಚೈವ ವ್ಯಾಸೇಶೋ ಗೋಲಕೇಶ್ವರಃ ।
ಮಹಾಭೂತೇಶ್ವರಶ್ಚೈವ ರಸೇಶೋ ಗಂಧಕೇಶ್ವರಃ ॥೩೬॥

ಬಾಡಬೇಶೋ ಭಟೀಶಶ್ಚ ಸರ್ವಪ್ರಾಣಾತಿಗೇಶ್ವರಃ ।
ತಟಾತಗೇಶ್ವರಶ್ಚೈವ ಗರ್ಭಕೋಶೇಶ್ವರಸ್ತಥಾ ॥೩೭॥

ತೋರಣೇಶೋ ರಥೀಶಶ್ಚಾಪ್ಯಾತಪೇಶಶ್ಶಶೀಶ್ವರಃ ।
ದುಂದುಭೀಶಸ್ಸಿಂಧುರೇಶೋ ಜವನೇಶಃ ಕೃಪೇಶ್ವರಃ ॥೩೮॥

ತೇಶ್ವರ, ಪೀತೇಶ್ವರ, ಧೂಮ್ರಕೇಶ್ವರ, ಬಂಧಮೋಚನಕೇಶ್ವರ, ಶತೇಶ್ವರ, ಭ್ರಮರೇಶ್ವರ, ಕಾಂತಕೇಶ್ವರ, ದ್ರುಮಚಂಡೀಶ್ವರ, ವಿಶಾಲಾಕ್ಷೀಶ್ವರ, ವಸಂತೇಶ್ವರ, ಖಗೇಶ್ವರ, ಗಜಾಸುರಹರೇಶ್ವರ, ನೀಲಕಂಠೇಶ್ವರ, ॥೩೧-೩೨-೩೩-೩೪॥

ಸುಮಿತ್ರಾವರುಣೇಶ್ವರ, ಕಲಹಂಸೇಶ್ವರ, ಸಾವಿತ್ರೀಶ್ವರ, ಗೋಮತೀಶ್ವರ, ಗೋನರ್ದೇಶ್ವರ, ವೃಷೇಶ್ವರ, ಗತಿಪ್ರದೇಶ್ವರ, ವ್ಯಾಸೇಶ್ವರ, ಗೋಲಕೇಶ್ವರ, ಮಹಾಭೂತೇಶ್ವರ, ರಸೇಶ್ವರ, ಗಂಧಕೇಶ್ವರ, ಬಾಡಬೇಶ್ವರ, ಭಟೀಶ್ವರ, ಸರ್ವಪ್ರಾಣಾತಿಗೇಶ್ವರ, ತಟಾತಗೇಶ್ವರ, ಗರ್ಭಕೋಶೇಶ್ವರ, ತೋರಣೇಶ್ವರ, ರಥೀಶ್ವರ, ಆತಪೇಶ್ವರ, ಶಶೀಶ್ವರ, ದುಂದುಭೀಶ್ವರ, ಸಿಂಧುರೇಶ್ವರ, ಜವನೇಶ್ವರ, ಕೃಪೇಶ್ವರ, ॥೩೫-೩೬-೩೭-೩೮॥

ವರಭದ್ರೇಶ್ವರಶ್ಚೈವ ಕರ್ಣದಾರೇಶ್ವರಸ್ತಥಾ ।
ತಾಮ್ರಧ್ವಜೇಶ್ವರಶ್ಚೈವ ಕೋವಿದಾರೇಶ್ವರಸ್ತಥಾ ॥೩೯॥

ಶತದ್ರುತೀಶ್ವರಶ್ಚೈವ ಮಹಾರೋಗಹರೇಶ್ವರಃ ।
ಕಾಮದಾನೇಶ್ವರಶ್ಚೈವ ಬಿಲ್ವಾದೇಶೋ ನಿಮಿಷಾಶ್ವರಃ ॥೪೦॥

ರುದ್ರೇಶೋ ನಾಗಕೇಶಶ್ಚ ತಾರಣೇಶೋಽಂಬಿಕೇಶ್ವರಃ ॥೪೧॥

ಶರಚ್ಛಶಿಗಲತ್ಸುಧಾರಸಸಮಾನಲಿಂಗಾವಲಿ
ರ್ಹರಿನ್ಮಣಿನಿಭಚ್ಛವಿಪ್ರಥಿತಬಿಲ್ವಮೌಲೀಂದುಕಂ ।
ಫಣೀಂದ್ರಮಣಿಮಂಡಲಾಕಲಿತಫಾಲಪುಂಡ್ರಾಂಕಿತಂ
ಮಣೀಂದ್ರವರಧಾಮಗಂ ವಸಿತಗಂಧಬಂಧಾಂಬರಂ
ಪಶ್ಚಾದ್ಭಾಗನಗೇ ಮಯೈವ ವಿಹಿತಾಂ ಲಿಂಗಾವಲೀಂದುಪ್ರಭಾಂ ॥೪೨॥

ಪ್ರಪಶ್ಯ ಗಿರಿಕನ್ಯಕೇ ನಯನಯುಗ್ಮಧನ್ಯೋತ್ತರಾಂ
ಮಹಾಘಕುಲದಾರಿಣೀಂ ಸಕಲಶೋಕಸಂಹಾರಿಣೀಂ ।

ವರಭದ್ರೇಶ್ವರ, ಕರ್ಣಧಾರೇಶ್ವರ, ತಾಮ್ರಧ್ವಜೇಶ್ವರ, ಕೋವಿದಾರೇಶ್ವರ, ಶತದ್ರುತೀಶ್ವರ, ಮಹಾರೋಗಹರೇಶ್ವರ, ಕಾಮದಾನೇಶ್ವರ, ಬಿಲ್ವಾದೇಶ್ವರ, ನಿಮಿಷಾಶ್ವರ, ರುದ್ರೇಶ್ವರ, ನಾಗಕೇಶೇಶ್ವರ, ತಾರಣೇಶ್ವರ, ಅಂಬಿಕೇಶ್ವರ, ॥೩೯-೪೦-೪೧॥

ಈ ರೀತಿಯಾಗಿ, ದೇವಿಯೇ, ಕೈಲಾಸಪರ್ವತದ ಪಶ್ಚಿಮಭಾಗದಲ್ಲಿ ಸುಂದರತರವಾದ ಶಿವಲಿಂಗಗಳಿರುವುವು. ಅವುಗಳೆಲ್ಲವೂ ಶರತ್ಕಾಲದ ಚಂದ್ರನ ಅಮೃತಕಿರಣಗಳಂತೆ ಶುಭ್ರವಾಗಿ ಕಾಣುತ್ತಿರುವುವು. ಹರಿನ್ಮಣಿಯಂತೆ ಹೊಳೆಯುವ ಬಿಲ್ವಪತ್ರೆಯಿಂದಲೂ, ಕಾಂತಿಮತ್ತಾದ ಬಾಲಚಂದ್ರನಿಂದಲೂ ಕೂಡಿದ ಶಿರೋಭಾಗಗಳುಳ್ಳದ್ದಾಗಿರುವುವು. ಮುಂಭಾಗದಲ್ಲಿ ನಾಗರಾಜನ ಫಣಾಮಣಿಗಳೂ, ಹಣೆಯಲ್ಲಿ ವಿಭೂತಿಯ ಪಟ್ಟೆಗಳೂ ಸೊಗಸಾಗಿ ಕಾಣುತ್ತಿರುವುವು. ಇಂತಹ ಶಿವಲಿಂಗಗಳು ರತ್ನಮಯವಾದ ಭವನಮಧ್ಯವರ್ತಿಗಳಾಗಿ, ಸುವಾಸನಾವಿಶಿಷ್ಟವಾದ ವಸ್ತ್ರಭೂಷಿತಗಳಾಗಿ ಕಂಗೊಳಿಸುತ್ತಿರುವುವು. ॥೪೨॥

ಗಿರಿರಾಜಪುತ್ರಿಯೇ, ನೋಡುವವರ ಕಣ್ಣುಗಳಿಗೆ ಸಾರ್ಥಕ್ಯವನ್ನು ಕಲ್ಪಿಸುವ ಮತ್ತು ಸಮಸ್ತ ಪಾಪನಿವಾರಕವೂ, ಶೋಕಧ್ವಂಸಕವೂ ಆದ ಈ ಶಿವಲಿಂಗಗಳ

**ರವೀಂದುಕರಪೇಷಿಣೀಂ ಮಮ ಗಣೇಂದ್ರಸಂತೋಷಿಣೀಂ**
**ಫಣೀಂದ್ರವರಭೂಷಣೀಂ ಮದನದೇಹಸಂಪ್ಲೋಷಣೀಂ ॥೪೩॥**

**ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸಪಶ್ಚಿಮದ್ವಾರಲಿಂಗಕಥನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ**

ಸಮೂಹವನ್ನು ನೋಡು. ಅಲ್ಲದೆ ಈ ಲಿಂಗಗಳು ಸೂರ್ಯಚಂದ್ರರ ಕಾಂತಿಯನ್ನು ಮಂಕುಮಾಡುತ್ತಾ, ಪ್ರಮಥಗಣಗಳಿಗೆ ಆನಂದವನ್ನೀಯುತ್ತಾ ಆದಿಶೇಷನ ಫಣಾ ಮಣಿಗಳಿಂದಲಂಕೃತವಾಗಿ, ಕಾಮದೇಹವನ್ನು ಸುಡುವ ಶಕ್ತಿಯುಳ್ಳದ್ದಾಗಿ ಶೋಭಿ ಸುತ್ತಿರುವುದು. ಇಂತಹ ಲಿಂಗಾವಳಿಗಳ ತೇಜಸ್ಸನ್ನು ನೋಡು ಎಂದು ಶಂಕರನು ದೇವಿಗೆ ಹೇಳಿದನು. ॥೪೩॥

ಇಲ್ಲಿಗೆ ಶ್ರೀಶಿವರಹಸ್ಯದ ಮೊದಲನೆಯ ಅಂಶದಲ್ಲಿ ಕೈಲಾಸಪಶ್ಚಿಮದ್ವಾರಸ್ಥಲಿಂಗ ಕಥನವೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು.

ಶ್ರೀ

# ಅಥ ಶ್ರೀಶಿವರಹಸ್ಯೇ

## ತ್ರಿಚತ್ವಾರಿಂಶೋಽಧ್ಯಾಯಃ



### ಉತ್ತರದ್ವಾರಲಿಂಗಸೌಧಕಕಥನಂ

|| ಈಶ್ವರ ಉವಾಚ ||

ಏವಂ ಪಶ್ಚಿಮಭಾಗಸ್ಥಲಿಂಗಸಂಖ್ಯಾ ಮಯೋದಿತಾ ।
ತದುತ್ತರಾಪಾರಶೃಂಗೇ ಶೃಣು ತತ್ಕಥಯಾಮ್ಯಹಂ ||೧||

ತದಪಿ ಶೃಣು ಭಕ್ತ್ಯಾ ತ್ವಂ ಸುಮನಸ್ಕಾ ಸದಾಂಬಿಕೇ ।
ಲಿಂಗಸಂಘಂ ಸುಪುಣ್ಯಾನಾಂ ಮುಕುಟಂ ಪಶ್ಯ ಪಾರ್ವತಿ ||೨||

ವಾಮದೇವೇಶ್ವರೋ ದೇವಿ ಗಿರಿಕೇಶಸ್ಸುಕೇಶ್ವರಃ ।
ಬೃಹಸ್ಪತೀಶ್ವರಶ್ಚೈವ ವರ್ಧನೇಶಃ ಪಿಕೇಶ್ವರಃ ||೩||

## ಶ್ರೀಶಿವರಹಸ್ಯದಲ್ಲಿ ನಲವತ್ತುಮೂರನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಯನ್ನು ಕುರಿತು "ದೇವಿಯೇ, ಇಲ್ಲಿನ ವರೆಗೂ ಪಶ್ಚಿಮ ದ್ವಾರದಲ್ಲಿದ್ದ ಲಿಂಗಗಳ ಹೆಸರುಗಳನ್ನು ತಿಳಿಸಿರುವೆನು. ಇನ್ನು ಉತ್ತರ ದಿಗ್ಭಾಗದಲ್ಲಿರುವ ಶಿವಲಿಂಗಗಳಲ್ಲಿ ಶ್ರೇಷ್ಠವಾದ ಶಿವಲಿಂಗಗಳ ಹೆಸರುಗಳನ್ನು ಮಾತ್ರ ವಿವರಿಸುವೆನು. ಭಕ್ತಿಪುರಸ್ಸರವಾದ ದೃಢಚಿತ್ತತೆಯಿಂದ ಕೇಳುವವಳಾಗು. ಈ ಶಿವಲಿಂಗಗಳ ಸಂಘವು ಪುಣ್ಯಶಾಲಿಗಳ ಕಿರೀಟದಂತಿರುವುದು ಎಂಬುದನ್ನು ಅರಿತುಕೊ" ಎಂದು ಹೇಳುತ್ತಾ ಮುಂದೆ ಶಿವಲಿಂಗಗಳ ಹೆಸರುಗಳನ್ನು ವಿವರಿಸಲಾರಂಭಿಸಿದನು. ||೧-೨||

ವಾಮದೇವೇಶ್ವರ, ಗಿರಿಕೇಶ್ವರ, ಸುಕೇಶ್ವರ, ಬೃಹಸ್ಪತೀಶ್ವರ, ವರ್ಧನೇಶ್ವರ, ಪಿಕೇಶ್ವರ, ಕೋಕಿಲೇಶ್ವರ, ಪಿಚಂಡೇಶ್ವರ, ವಾಮಕರ್ಣೇಶ್ವರ, ಆನಂದೇಶ್ವರ,

ಕೋಕಿಲೇಶಃ ಪಿಚಂಡೇಶೋ ನಾಮುಕರ್ಣೇಶ್ವರಸ್ತಥಾ ।
ಆನಂದೇಶಃ ಕರ್ಮುರೇಶಶ್ಚಾಮುರೇಶಃ ಪತೀಶ್ವರಃ ॥೪॥

ವೈರಾಗ್ಯೇಶಃ ಕಲ್ಪಕೇಶೋ ಹರಿಬ್ರಹ್ಮೇಶ್ವರಸ್ತಥಾ ।
ಗಣೇಶಸ್ತ್ರಿಗುಣೇಶಶ್ಚ ಬ್ರಹ್ಮಾಂಡೇಶಶ್ಶತೇಶ್ವರಃ ॥೫॥

ವಿಲಾಸೇಶಸ್ಸುಕೇಶೇಶಶ್ಚಾಮುಕೇಶಃ ಪ್ಲವೇಶ್ವರಃ ।
ಅನ್ನಕೋಶೇಶ್ವರಶ್ಚೈವ ಪ್ರಾಣಕೋಶೇಶ್ವರಸ್ತಥಾ ॥೬॥

ವಿಜ್ಞಾನೇಶೋಽಘನಾಶೇಶಶ್ಚಾತ್ಮೇಶೋ ರಕ್ಷಕೇಶ್ವರಃ ।
ನಿಹನನ್ಯೇಶ್ವರಶ್ಚೈವ ಮುಗ್ಧೇಶಃ ಕೋಟಿಕೇಶ್ವರಃ ॥೭॥

ನಿಸರ್ಪಿಶೋ ನಾಮುನೀಶಶ್ಚಾಮ್ರೇಶಃ ಕಮತೇಶ್ವರಃ ।
ಶನಾಶನೇಶ್ವರಶ್ಚೈವ ಚೋರುಗಾಯೇಶ್ವರಸ್ತಥಾ ॥೮॥

ಕಪಿಂಜಲೇಶ್ವರಶ್ಚೈವ ಕರ್ಕೇಶಷ್ಷಂಡಕೇಶ್ವರಃ ।
ಅಸಂಗೇಶಶ್ಚ ಸಂಗೇಶೋ ಜ್ಯೋತೀಶಃ ಕಾರಣೇಶ್ವರಃ ॥೯॥

ಹರಿರುದ್ರೇಶ್ವರಶ್ಚೈವ ಕೃಪಾಣೇಶೋ ನಿಮೀಶ್ವರಃ ।
ಕನಕಾವರ್ತಕೇಶಶ್ಚ ಹರೀಶೋ ಭಾರುಣೇಶ್ವರಃ ॥೧೦॥

ಕರ್ಮುರೇಶ್ವರ, ಚಾಮರೇಶ್ವರ, ಪತೀಶ್ವರ, ವೈರಾಗ್ಯೇಶ್ವರ, ಕಲ್ಪಕೇಶ್ವರ, ಹರಿಬ್ರಹ್ಮೇಶ್ವರ, ಗಣೇಶ್ವರ, ತ್ರಿಗುಣೇಶ್ವರ, ಬ್ರಹ್ಮಾಂಡೇಶ್ವರ, ಶತೇಶ್ವರ, ||೩-೪-೫||

ವಿಲಾಸೇಶ್ವರ, ಸುಕೇಶೇಶ್ವರ, ಚಾಮುಕೇಶ್ವರ, ಪ್ರವಕೇಶ್ವರ, ಅನ್ನಕೋಶೇಶ್ವರ, ಪ್ರಾಣಕೋಶೇಶ್ವರ, ವಿಜ್ಞಾನೇಶ್ವರ, ಅಘನಾಶೇಶ್ವರ, ಆತ್ಮೇಶ್ವರ, ರಕ್ಷಕೇಶ್ವರ, ಆಹನನ್ಯೇಶ್ವರ, ಮುಗ್ಧೇಶ್ವರ, ಕೋಟಿಕೇಶ್ವರ, ನಿಸರ್ಪೀಶ್ವರ, ನಾಮುನೀಶ್ವರ, ಆಮ್ರೇಶ್ವರ, ಕಮತೇಶ್ವರ, ಶನಾಶನೇಶ್ವರ, ಉರುಗಾಯೇಶ್ವರ, ||೬-೭-೮||

ಕಪಿಂಜಲೇಶ್ವರ, ಕರ್ಕೇಶ್ವರ, ಷಂಡಕೇಶ್ವರ, ಅಸಂಗೇಶ್ವರ, ಸಂಗೇಶ್ವರ, ಜ್ಯೋತೀಶ್ವರ, ಕಾರಣೇಶ್ವರ, ಹರಿರುದ್ರೇಶ್ವರ, ಕೃಪಾಣೇಶ್ವರ, ನಿಮಿಾಶ್ವರ, ಕನಕಾವರ್ತಕೇಶ್ವರ, ಹರೀಶ್ವರ, ಭಾರುಣೇಶ್ವರ, ಆಮ್ರೇಶ್ವರ, ದಭ್ರಕೇಶ್ವರ, ದಂದಶೂಕೇ

ಮತೀಶ್ವರೋ ವನಸ್ಥೀಶೋ ಗ್ರಹಸ್ಥೀಶೋಽರಿಜೇಶ್ವರಃ ।
ಸಹಸ್ರೇಶಶ್ಶತೇಶಶ್ಚ ಲಕ್ಷೇಶಃ ಕೋಟಿಕೇಶ್ವರಃ ॥೧೦॥

ಆವ್ರೇ(ಭೇ)ಶ್ವರೋ ದಭ್ರಕೇಶೋ ದಂದಶೂಕೇಶ್ವರಸ್ತಥಾ ।
ಉದಾರೇಶೇಂದುಮೌಲೀಶೌ ಮಹೇಶಶ್ಚ ಸಭೇಶ್ವರಃ ॥೧೧॥

ಹರಿಕೇಶಃ ಕಿಶೋರೇಶಃ ಕುದ್ದಾಲೇಶೋಽರ್ಭಕೇಶ್ವರಃ ।
ಯುವೇಶ್ವರಶ್ಚ ವೃದ್ಧೇಶೋ ದರ್ದುರೇಶೋ ಬ್ರಸೀಶ್ವರಃ ॥೧೨॥

ಮತೀಶ್ವರೋ ವನಸ್ಥೀಶೋ ಗ್ರಹಸ್ಥೀಶೋಽರಿಜೇಶ್ವರಃ ।
ಸಹಸ್ರೇಶಶ್ಶತೇಶಶ್ಚ ಲಕ್ಷೇಶಃ ಕೋಟಿಕೇಶ್ವರಃ ॥೧೩॥

ಚಾಷೇಶ್ವರೋ ಭಾನುಕೇಶೋ ದಂದಿರಾವರ್ತಿಕೇಶ್ವರಃ ।
ಕಸ್ತೂರೀಶೋ ಮದಂತೀಶೋ ಮನಸ್ವೀಶೋಽರ್ಬುದೇಶ್ವರಃ ॥೧೪॥

ಐರಾವತೇಶ್ವರಶ್ಚೈವ ತಂಜೇಶೋ ಲಿಂದುಕೇಶ್ವರಃ ।
ಅಹಂಕಾರೇಶ್ವರಶ್ಚೈವ ಫಾಲನೇತ್ರೇಶ್ವರಸ್ತಥಾ ॥೧೫॥

ತಥೈವೈಲಬಿಲೇಶಶ್ಚ ಕೃಕೇಶಶ್ಚರಕೇಶ್ವರಃ (ಕ್ರಕೇಶೋಽಚರಕೇಶ್ವರಃ)
ಪದ್ಮಾಸನೇಶ್ವರಶ್ಚೈವ ವಾರೇಶಸ್ತರಕೇಶ್ವರಃ ॥೧೬॥

---

ಶ್ವರ, ಉದಾರೇಶೇಶ್ವರ, ಇಂದುಮೌಲೀಶ್ವರ, ಮಹೇಶೇಶ್ವರ, ಸಭೇಶ್ವರ, ಹರಿಕೇಶೇಶ್ವರ, ಕಿಶೋರೇಶ್ವರ, ಕುದ್ದಾಲೇಶ್ವರ, ಅರ್ಭಕೇಶ್ವರ, ಯುವೇಶ್ವರ, ವೃದ್ಧೇಶ್ವರ, ದರ್ದುರೇಶ್ವರ, ಬ್ರಸೀಶ್ವರ, ॥೯-೧೦-೧೧-೧೨॥

ಮತೀಶ್ವರ, ವನಸ್ಥೇಶ್ವರ, ಗ್ರಹಸ್ಥೇಶ್ವರ, ಅರಿಜೇಶ್ವರ, ಸಹಸ್ರೇಶ್ವರ, ಶತೇಶ್ವರ, ಲಕ್ಷೇಶ್ವರ, ಕೋಟಿಕೇಶ್ವರ, ಚಾಷೇಶ್ವರ, ಭಾನುಕೇಶ್ವರ, ದಂದಿರಾವರ್ತಿಕೇಶ್ವರ, ಕಸ್ತೂರೀಶ್ವರ, ಮದಂತೀಶ್ವರ, ಮನಸ್ವೀಶ್ವರ, ಅರ್ಬುದೇಶ್ವರ, ಐರಾವತೇಶ್ವರ, ತಂಜೇಶ್ವರ, ಲಿಂದುಕೇಶ್ವರ, ಅಹಂಕಾರೇಶ್ವರ, ಫಾಲನೇತ್ರೇಶ್ವರ, ॥೧೩-೧೪-೧೫॥

ಇಲಬಿಲೇಶ್ವರ, ಕೃಕೇಶ್ವರ, ಚರಕೇಶ್ವರ, ಪದ್ಮಾಸನೇಶ್ವರ, ವಾರೇಶ್ವರ, ತರಗೇಶ್ವರ, ವಟಮೂಲೇಶ್ವರ, ತ್ರಸನ್ನೇಶ್ವರ, ಲುತೀಶ್ವರ, ನಕುಲೇಶ್ವರ, ವಂಶೇ

ವಟಮೂಲೇಶ್ವರಶ್ಚೈವ ತ್ರಸನ್ನೇಶೋ ಉತೀಶ್ವರಃ ।
ನಕುಲೇಶೋಥ ವಂಶೇಶಃ ಪದ್ಮನೇತ್ರೇಶ್ವರಸ್ತಥಾ ॥೧೭॥

ಉಪಶಾಂತೇಶ್ವರಶ್ಚೈವ ದಮೇಶೋ ವ್ರತಕೇಶ್ವರಃ ।
ಉಲೂಕೇಶೋಽಥ ರುಂಡೇಶಃ ಕಾಲೇಶಃ ಕಮಲೇಶ್ವರಃ ॥೧೮॥

ಭಗಂಧರೇಶ್ವರಶ್ಚೈವ ಭದ್ರೇಶೋ ಭರಣೀಶ್ವರಃ ।
ಅಶ್ವಿನೀಶೋ ರೋಹಿಣೀಶಃ ಪಂಕಜೇಶೋಽವಟೇಶ್ವರಃ ॥೧೯॥

ನಿಧನೇಶಸ್ತಥೋರ್ಧ್ವೇಶೋ ಭಸ್ಮೇಶಶ್ಚ ಸಮೇಶ್ವರಃ ।
ಭವೇಶಶ್ಚೈವ ಸರ್ವೇಶೋ ವೇದೇಶಶ್ಶಾಶ್ವತೇಶ್ವರಃ ॥೨೦॥

ಜ್ವಾಲೇಶ್ವರಸ್ಸಾಲಕೇಶಸ್ತಮಾಲೇಶಃ ಪುಣ್ಯಕೇಶ್ವರಃ ।
ಉಪಧ್ಯೇಶೋಣಿಮಾಂಡೇಶಸ್ಸರ್ವರಕ್ತೇಶ್ವರಸ್ತಥಾ ॥೨೧॥

ಶುನಃಪರ್ಣೇಶ್ವರಶ್ಚೈವ ಮಾದನೇಶಃ ಪ್ರಭೇಶ್ವರಃ ।
ಶಿಪಿವಿಷ್ಟೇಶ್ವರಶ್ಚೈವ ಅರಿಕೇಶೋಽಥ ಮೃಗೇಶ್ವರಃ ॥೨೨॥

ಗಜಾನನೇಶ್ವರಶ್ಚೈವ ಬಾಣೇಶೋ ವೀರಕೇಶ್ವರಃ ।
ಚಂಡೇಶ್ವರಶ್ಚ ಮುಂಡೇಶಶ್ಚಕ್ರೇಶಃ ಫಣಿಕೇಶ್ವರಃ ॥೨೩॥

ಶ್ವರ, ಪದ್ಮನೇತ್ರೇಶ್ವರ, ಉಪಶಾಂತೇಶ್ವರ, ದಮೇಶ್ವರ, ವ್ರತಕೇಶ್ವರ, ಉಲೂಕೇಶ್ವರ, ರುಂಡೇಶ್ವರ, ಕಾಲೇಶ್ವರ, ಕಮಲೇಶ್ವರ, ಭಗಂಧರೇಶ್ವರ, ಭದ್ರೇಶ್ವರ, ಭರಣೀಶ್ವರ, ಅಶ್ವಿನೀಶ್ವರ, ರೋಹಿಣೀಶ್ವರ, ಪಂಕಜೇಶ್ವರ, ಅವಟೇಶ್ವರ, ನಿಧನೇಶ್ವರ, ಊರ್ಧ್ವೇಶ್ವರ, ಭಸ್ಮೇಶ್ವರ, ಸಮೇಶ್ವರ, ಭವೇಶ್ವರ, ಸರ್ವೇಶ್ವರ, ವೇದೇಶ್ವರ, ಶಾಶ್ವತೇಶ್ವರ, ॥೧೬-೧೭-೧೮-೧೯-೨೦॥

ಜ್ವಾಲೇಶ್ವರ, ಸಾಲಕೇಶ್ವರ, ತಮಾಲೇಶ್ವರ, ಪುಣ್ಯಕೇಶ್ವರ, ಉಪಧ್ಯೇಶ್ವರ, ಅಣಿಮಾಂಡೇಶ್ವರ, ಸರ್ವರಕ್ತೇಶ್ವರ, ಶುನೇಶ್ವರ, ಪರ್ಣೇಶ್ವರ, ಮಾದನೇಶ್ವರ, ಪ್ರಭೇಶ್ವರ, ಶಿಪಿವಿಷ್ಟೇಶ್ವರ, ಅರಿಕೇಶ್ವರ, ಮೃಗೇಶ್ವರ, ಗಜಾನನೇಶ್ವರ, ಬಾಣೇಶ್ವರ, ವೀರಕೇಶ್ವರ, ಚಂಡೇಶ್ವರ, ಮುಂಡೇಶ್ವರ, ಚಕ್ರೇಶ್ವರ, ಫಣಿಕೇಶ್ವರ, ॥೨೧-೨೨-೨೩॥

ಅನಸೂಯೇಶ್ವರಶ್ಚೈವ ಗಂಧಮಾದೇಶ ಈಶ್ವರಃ ।
ಭಂಡೇಶ್ವರಃ ಪ್ರಜಂಘೇಶಃ ಕಾಲಕಂಠೇಶ್ವರಸ್ತಥಾ ॥೨೪॥

ಮೃತ್ಯುಂಜಯೇಶಶ್ಶೈಲೇಶಸ್ಸಾರಸೇಶೋಽಗತೀಶ್ವರಃ ।
ಸ್ವಪ್ನೇಶೋ ಜಾಗ್ರತೀಶಶ್ಚ ಸುಷುಪ್ತೀಶೋಽಹನೀಶ್ವರಃ ॥೨೫॥

ಶಿತಿಕಂಠೇಶ್ವರಶ್ಚೈವ ಸೂರ್ಯೇಶಃ ಕಾಂತಿಕೇಶ್ವರಃ ।
ಸ್ಫಟಿಕೇಶಶ್ಚ ರುದ್ರೇಶೋ ವರದೇಶೋಽನೃಣೇಶ್ವರಃ ॥೨೬॥

ಶಾರ್ದೂಲೇಶೋ ರಭಸ್ಯೇಶಃ ಪುಂಡ್ರೇಶೋ ನಟನೇಶ್ವರಃ ।
ರುದ್ರಾಕ್ಷೇಶಃ ಕವೇಂದ್ರೇಶಃ ಕವಚೇಶೋ ಮಣೀಶ್ವರಃ ॥೨೭॥

ಪಿಲಿಪ್ಪಿಲೇಶ್ವರಶ್ಚೈವ ಆಮರ್ದೇಶೋ ದ್ರುಣೇಶ್ವರಃ ।
ಪಿತಾಮಹೇಶ್ವರಶ್ಚೈವ ಕುಟಿಲೇಶೋ ಝುಷೇಶ್ವರಃ ॥೨೮॥

ಭರತೇಶಃ ಕೇಸರೀಶಶ್ಚಕ್ಷುಶ್ಶ್ರೋತ್ರೇಶ್ವರಸ್ತಥಾ ।
ದಂಡಕೇಶಶ್ಚ ಲಂಕೇಶೋ ಮಣಿಭದ್ರೇಶ್ವರಸ್ತಥಾ ॥೨೯॥

ಘಟೋತ್ಕಚೇಶ್ವರಶ್ಚೈವ ಪುರೇಶೋಽಥ ನಟೇಶ್ವರಃ ।
ಕರಮರ್ದೇಶ್ವರಶ್ಚೈವ ತಥೈವಾಮ್ರಾತಕೇಶ್ವರಃ ॥೩೦॥

ಅನಸೂಯೇಶ್ವರ, ಗಂಧಮಾದೇಶ್ವರ, ಭಂಡೇಶ್ವರ, ಪ್ರಜಂಘೇಶ್ವರ, ಕಾಲಕಂಠೇಶ್ವರ, ಮೃತ್ಯುಂಜಯೇಶ್ವರ, ಶೈಲೇಶ್ವರ, ಸಾರಸೇಶ್ವರ, ಅಗತೀಶ್ವರ, ಸ್ವಪ್ನೇಶ್ವರ, ಜಾಗ್ರತೀಶ್ವರ, ಸುಷುಪ್ತೀಶ್ವರ,ಅಹನೀಶ್ವರ, ಶಿತಿಕಂಠೇಶ್ವರ, ಸೂರ್ಯೇಶ್ವರ, ಕಾಂತಿಕೇಶ್ವರ, ಅನೃಣೇಶ್ವರ, ಶಾರ್ದೂಲೇಶ್ವರ, ರಭಸ್ಯೇಶ್ವರ, ಪುಂಡ್ರೇಶ್ವರ, ನಟನೇಶ್ವರ, ರುದ್ರಾಕ್ಷೇಶ್ವರ, ಕವೇಂದ್ರೇಶ್ವರ, ಕವಚೇಶ್ವರ, ಮಣೀಶ್ವರ, ॥೨೪-೨೫-೨೫-೨೬-೨೭॥

ಪಿಲಿಪ್ಪಿಲೇಶ್ವರ, ಆಮರ್ದೇಶ್ವರ, ದ್ರುಣೇಶ್ವರ, ಪಿತಾಮಹೇಶ್ವರ, ಕುಟಿಲೇಶ್ವರ, ಝುಷೇಶ್ವರ, ಭವತೇಶ್ವರ, ಕೇಸರೀಶ್ವರ, ಚಕ್ಷುಶ್ಶ್ರೋತ್ರೇಶ್ವರ, ದಂಡಕೇಶ್ವರ, ಲಂಕೇಶ್ವರ, ಮಣಿಭದ್ರೇಶ್ವರ, ಘಟೋತ್ಕಚೇಶ್ವರ, ಪುರೇಶ್ವರ, ನಟೇಶ್ವರ, ಕರಮರ್ದೇಶ್ವರ, ಆಮ್ರಾತಕೇಶ್ವರ, ॥೨೮-೨೯-೩೦॥

ಫಣಿಭೂಷೇಶ್ವರಶ್ಚೈವ ರತ್ನಭೂತೇಶ್ವರಸ್ತಥಾ ।
ಬಿಡಾಲಕೇಶ್ವರಶ್ಚೈವ ಅಣೀಶೋ ಮಹತೀಶ್ವರಃ ॥೩೧॥

ಪೂರುಷೇಶೋಪರಂಭೇಶೌ ಗಿರೀಶೋ ರಮಣೀಶ್ವರಃ ।
ಕವಂಗೇಶಃ ಕರೀಂದ್ರೇಶೋ ಮಾಘೇಶೋ ಬಾಷ್ಕಲೇಶ್ವರಃ ॥೩೨॥

ಮಹಾನಾದೇಶ್ವರಶ್ಚೈವ ಮಂಟಪೇಶೋ ಬಲೀಶ್ವರಃ ।
ಜರಿತೇಶಃ ಕೂರ್ಮಕೇಶಶ್ಚತುರ್ಭದ್ರೇಶ್ವರಸ್ತಥಾ ॥೩೩॥

ಪುಷ್ಪರಾಗೇಶ್ವರಶ್ಚೈವ ಗೋಮೇದೇಶೋ ಲವೀಶ್ವರಃ ।
ಕೃತೀಶ್ವರಃ ಕ್ಷಪೇಶಶ್ಚ ಪ್ರಸಾದೇಶಃ ಕುಲೇಶ್ವರಃ ॥೩೪॥

ವಜ್ರೇಶ್ವರಃ ಕ್ಷೇತ್ರಕೇಶಃ ಕರ್ಣಿಕಾರೇಶ್ವರಸ್ತಥಾ ।
ಕರವೀರೇಶ್ವರಶ್ಚೈವ ಪುಂಡರೀಕೇಶ್ವರಸ್ತಥಾ ॥೩೫॥

ವೀಣಾಪಾಣೀಶ್ವರಶ್ಚೈವ ತಂತ್ರೀಶೋ ನಾಗಕೇಶ್ವರಃ ।
ಹಾಹಾಹೂಹೀಶ್ವರಶ್ಚೈವ ಪಯೋದೇಶಃ ಕ್ರಥೇಶ್ವರಃ ॥೩೬॥

ಗುಡಸಾರೇಶ್ವರಶ್ಚೈವ ಶ್ವೇತದಾನಪ್ರದೇಶ್ವರಃ ।
ಪ್ರದಾನೇಶಶ್ಶಿಲಾದೇಶಃ ಕಂದೇಶಃ ಪದದೇಶ್ವರಃ ॥೩೭॥

ಫಣಿಭೂಷಣೇಶ್ವರ, ರತ್ನಭೂತೇಶ್ವರ, ಬಿಡಾಲಿಕೇಶ್ವರ, ಅಣೀಶ್ವರ, ಮಹತೀಶ್ವರ, ಪೂರುಷೇಶ್ವರ, ಉಪರಂಭೇಶ್ವರ, ಗಿರೀಶ್ವರ, ರಮಣೀಶ್ವರ, ಕವಂಗೇಶ್ವರ, ಕರೀಂದ್ರೇಶ್ವರ, ಮಾಘೇಶ್ವರ, ಬಾಷ್ಕಲೇಶ್ವರ, ಮಹಾನಾದೇಶ್ವರ, ಮಂಟಪೇಶ್ವರ, ಬಲೀಶ್ವರ, ಜರಿತೇಶ್ವರ, ಕೂರ್ಮಕೇಶ್ವರ, ಚತುರ್ಭದ್ರೇಶ್ವರ, ಪುಷ್ಪರಾಗೇಶ್ವರ, ಗೋಮೇದೇಶ್ವರ, ಲವೇಶ್ವರ, ಕೃತೀಶ್ವರ, ಕ್ಷಪೇಶ್ವರ, ಪ್ರಸಾದೇಶ್ವರ, ಕುಲೇಶ್ವರ, ||೩೧-೩೨-೩೩-೩೪||

ವಜ್ರೇಶ್ವರ, ಕ್ಷೇತ್ರಕೇಶ್ವರ, ಕರ್ಣಿಕಾರೇಶ್ವರ, ಕರವೀರೇಶ್ವರ, ಪುಂಡರೀಕೇಶ್ವರ, ವೀಣಾಪಾಣೀಶ್ವರ, ತಂತ್ರೀಶ್ವರ, ನಾಗಕೇಶ್ವರ, ಹಾಹಾಹೂಹ್ವೀಶ್ವರ, ಕ್ರಥೇಶ್ವರ, ಗುಡಸಾರೇಶ್ವರ, ಶ್ವೇತದಾನಪ್ರದೇಶ್ವರ, ಪ್ರದಾನೇಶ್ವರ, ಶಿಲಾದೇಶ್ವರ, ಕಂದೇಶ್ವರ, ಪದದೇಶ್ವರ, ||೩೫-೩೬-೩೭||

ತ್ರಿಲೋಚನೇಶೋ ಭಾಂಕ್ಷೇಶಸ್ಸ್ಥೂಲಕರ್ಣೇಶ್ವರಸ್ತಥಾ ।
ಪ್ರಕಟೇಶೋ ಧಾರಕೇಶಃ ಕೋಶಾತೀತೇಶ್ವರಸ್ತಥಾ ॥೩೮॥

ಯಂತ್ರೇಶ್ವರಶ್ಚ ಮಂತ್ರೇಶಸ್ತಥಾ ಕನಖಲೇಶ್ವರಃ ।
ಗರ್ಗರೇಶಃ ಪ್ರತಾಪೇಶ ಆತಾರ್ಯೇಶಃ ಕುಣೇಶ್ವರಃ ॥೩೯॥

ಭಗೀರಥೇಶ್ವರಶ್ಚೈವ ದಿಲೀಪೇಶಃ ಕೃತೀಶ್ವರಃ ।
ಅನಾದೀಶೋ ಮಂತ್ರವಿದೇಶ್ವರೋ ಗುಣಹರೇಶ್ವರಃ ॥೪೦॥

ಶಂಗೇಶ್ವರಃ ಪತಂಗೇಶಃ ಪಾರ್ಯೇಶಸ್ತಾರಣೇಶ್ವರಃ ।
ಕಕಾರೇಶೋ ಮಾತೃಕೇಶಃ ಪುಷ್ಪಹಾರೀಶ್ವರಸ್ತಥಾ ॥೪೧॥

ಹಾರೀಕೇಶಸ್ತಥಾಕ್ಷೇಶೋ ಬಕದಾಲ್ಭ್ಯೇಶ್ವರಸ್ತಥಾ ।
ಲೋಪಾಮುದ್ರೇಶ್ವರಶ್ಚೈವ ಸುರಾಭಾಂಡೇಶ್ವರಸ್ತಥಾ ॥೪೨॥

ಮಣಿಹಸ್ತೀಶ್ವರಶ್ಚೈವ ತಥಾ ಚಿತ್ರಧ್ವಜೇಶ್ವರಃ ।
ರತ್ನಧ್ವಜೇಶ್ವರಶ್ಚೈವ ಕಾಮೇಶೋ ರುದ್ರಾಣೀಶ್ವರಃ ॥೪೩॥

ಅವಂತೀಶಃ ಕರ್ಪಟೇಶೋ ಧ್ವಜೇಶಶ್ಛತ್ರಕೇಶ್ವರಃ ।
ದೇವಕನ್ಯೇಶ್ವರಶ್ಚೈವ ನಾಗಕನ್ಯೇಶ್ವರಸ್ತಥಾ ॥೪೪॥

ತ್ರಿಲೋಚನೇಶ್ವರ, ಭಾಂಕ್ಷೇಶ್ವರ, ಸ್ಥೂಲಕರ್ಣೇಶ್ವರ, ಪ್ರಕಟೇಶ್ವರ, ಧಾರಕೇಶ್ವರ, ಕೋಶಾತೀತೇಶ್ವರ, ಯಂತ್ರೇಶ್ವರ, ಮಂತ್ರೇಶ್ವರ, ಕನಖಲೇಶ್ವರ, ಗರ್ಗರೇಶ್ವರ, ಪ್ರತಾಪೇಶ್ವರ, ಆತಾರ್ಯೇಶ್ವರ, ಕುಣೇಶ್ವರ, ಭಗೀರಥೇಶ್ವರ, ದಿಲೀಪೇಶ್ವರ, ಕೃತೀಶ್ವರ, ಅನಾದೀಶ್ವರ, ಮಂತ್ರವಿದೇಶ್ವರ, ಗುಣಹರೇಶ್ವರ,॥೩೮-೩೯-೪೦॥

ಶೃಂಗೇಶ್ವರ, ಪಿಶಂಗೇಶ್ವರ, ಪಾರ್ಯೇಶ್ವರ, ತಾರಣೇಶ್ವರ, ಕಕಾರೇಶ್ವರ, ಮಾತೃಕೇಶ್ವರ, ಕುಷ್ಠಹಾರೀಶ್ವರ, ಹಾರೀತೇಶ್ವರ, ಅಕ್ಷೇಶ್ವರ, ಬಕದಾಲ್ಭ್ಯೇಶ್ವರ, ಲೋಪಾಮುದ್ರೇಶ್ವರ, ಸುರಾಭಾಂಡೇಶ್ವರ, ಮಣಿಹಸ್ತೀಶ್ವರ, ಚಿತ್ರಧ್ವಜೇಶ್ವರ, ರತ್ನಧ್ವಜೇಶ್ವರ, ಕಾಮೇಶ್ವರ, ರುದ್ರಾಣೀಶ್ವರ, ॥೪೧-೪೨-೪೩॥

ಅವಂತೀಶ್ವರ, ಕರ್ಪಟೇಶ್ವರ, ಛತ್ರಕೇಶ್ವರ, ದೇವಕನ್ಯೇಶ್ವರ, ನಾಗಕನ್ಯೇಶ್ವರ, ಸತ್ಯೇಶ್ವರ, ಸುನಾಥೇಶ್ವರ, ಕುಬೇರೇಶ್ವರ, ವನೇಶ್ವರ, ಪವಿತ್ರೇಶ್ವರ, ವಲಕ್ಷೇ

ಸತ್ಯೇಶ್ವರಸ್ಸುನಾಭೇಶಃ ಕುಬೇರೇಶೋ ವನೇಶ್ವರಃ ।
ಪವಿತ್ರೇಶೋ ವಲಕ್ಷೇಶೋ ಮಹೋಕ್ಷೇಶೋ ನಗೇಶ್ವರಃ ॥೪೫॥

ಸುಧೇಶೋ ವಿಬುಧೇಶಶ್ಚ ಫುಲ್ಲಶಾಲಾಲಿಕೇಶ್ವರಃ ।
ಶಯನೇಶೋ ಧಾವತೇಶಸ್ಸಮಾಸೀನೇಶ್ವರಸ್ತಥಾ ॥೪೬॥

ಸರ್ವಕಾಮಸಮೃದ್ಧೀಶಸ್ಸಚ್ಛಿದೇಶಸ್ಸುಖೇಶ್ವರಃ ।
ಪ್ರಣತಾರ್ತಿಹರೇಶಶ್ಚ ಪಂಚಗವ್ಯೇಶ್ವರಸ್ತಥಾ ॥೪೭॥

ಪದ್ಮನಾಭೇಶ್ವರಶ್ಚೈವ ಪಂಚವಕ್ತ್ರೇಶ್ವರಸ್ತಥಾ ।
ಪಂಚಾಕ್ಷರೇಶಶ್ಚಂದ್ರೇಶಸ್ಸುರೇಶಃ ಕೌಶಿಕೇಶ್ವರಃ ॥೪೮॥

ಆದರ್ಶೇಶಃ ಕಾಲಕೇಶಃ ಕಾಲಾವರ್ತೇಶ್ವರಸ್ತಥಾ ।
ತಾಮ್ರಧ್ವಜೇಶ್ವರಶ್ಚೈವ ತಥಾ ಹಂಸಧ್ವಜೇಶ್ವರಃ ॥೪೯॥

ವೃಷಧ್ವಜೇಶ್ವರಶ್ಚೈವ ತಥಾ ಸಿಂಹಧ್ವಜೇಶ್ವರಃ ।
ಪಿಚ್ಛೇಶ್ವರಃ ಕುಮಾರೇಶೋ ನಿಷಂಗೇಶಃ ಕುಲೀಶ್ವರಃ ॥೫೦॥

ಈಶಾನೇಶೋ ವಿಕರ್ತೇಶಸ್ಸುರಭೀಶೋಽಣುಕೇಶ್ವರಃ ।
ಸಾರಂಗೇಶಃ ಖಡ್ಗಕೇಶೋ ಬಂಧುರೇಶೋ ಗಮೇಶ್ವರಃ ।
ಶಚೀಶ್ವರೋ ಸಾಧುರೇಶಸ್ತಥಾ ರುದ್ರಗಣೇಶ್ವರಃ ॥೫೧॥

ಶ್ವರ, ಮಹೋಕ್ಷೇಶ್ವರ, ನಗೇಶ್ವರ, ಸುಧೇಶ್ವರ, ವಿಬುಧೇಶ್ವರ, ಫುಲ್ಲಶಾಲಾಲಿಕೇಶ್ವರ, ಶಯನೇಶ್ವರ, ಧಾವತೇಶ್ವರ, ಸಮಾಸೀನೇಶ್ವರ, ಸರ್ವಕಾಮಸಮೃದ್ಧೀಶ್ವರ, ಸಚ್ಛಿದೇಶ್ವರ, ಸುಖೇಶ್ವರ, ಪ್ರಣತಾರ್ತಿಹರೇಶ್ವರ, ಪಂಚಗವ್ಯೇಶ್ವರ, ಪದ್ಮನಾಭೇಶ್ವರ, ಪಂಚವಕ್ತ್ರೇಶ್ವರ, ಪಂಚಾಕ್ಷರೇಶ್ವರ, ಚಂದ್ರೇಶ್ವರ, ಸುರೇಶ್ವರ, ಕೌಶಿಕೇಶ್ವರ, ||೪೪-೪೫-೪೬-೪೭-೪೮||

ಆದರ್ಶೇಶ್ವರ, ಕಾಲಕೇಶ್ವರ, ಕಾಲಾವರ್ತೇಶ್ವರ, ತಾಮ್ರಧ್ವಜೇಶ್ವರ, ಹಂಸಧ್ವಜೇಶ್ವರ, ವೃಷಧ್ವಜೇಶ್ವರ, ಸಿಂಹಧ್ವಜೇಶ್ವರ, ಪಿಚ್ಛೇಶ್ವರ, ಕುಮಾರೇಶ್ವರ, ನಿಷಂಗೇಶ್ವರ, ಕುಲೀಶ್ವರ, ಈಶಾನೇಶ್ವರ, ವಿಕರ್ತೇಶ್ವರ, ಸುರಭೀಶ್ವರ, ಅಣುಕೇಶ್ವರ, ಸಾರಂಗೇಶ್ವರ, ಖಡ್ಗಕೇಶ್ವರ, ಬಂಧುಕೇಶ್ವರ, ಗಮೇಶ್ವರ, ಶಚೀಶ್ವರ,

॥ ಈಶ್ವರ ಉವಾಚ ॥

ಏತತ್ತೇ ದಿವ್ಯಲಿಂಗಾನಾಂ ನಾಮಾನಿ ಕಥಿತಾನ್ಯುಮೇ ।
ಯ ಇದಂ ಪ್ರಾತರುತ್ಥಾಯ ಪೂಜಯೇತ ಪಠೇತ ವೈ ॥೫೨॥

ಸ ಕೈಲಾಸಸ್ಥಲಿಂಗಾನಾಂ ಪೂಜಾಫಲಮವಾಪ್ನುಯಾತ್ ।
ಲಿಂಗಾಧ್ಯಾಯಮಿಮಂ ಪುಣ್ಯಂ ಪಠನ್ ರುದ್ರಗಣೋ ಭವೇತ್ ॥೫೩॥

ಸಹಸ್ರಂ ಕಥಿತಂ ತೇಷು ತೇಷೂತ್ಕೃಷ್ಟತಮಂ ಶಿವೇ ।
ಅನಂತಾನ್ಯಪಿ ಲಿಂಗಾನಿ ಕೋಟೀಶಃ ಕಮಲಾನನೇ ॥೫೪॥

ಸಾರಭೂತಾನಿ ಲಿಂಗಾನಿ ಕಥಿತಾನಿ ತವಾಂಬಿಕೇ ।
ಸಂತಿ ಕೈಲಾಸಶಿಖರೇ ಮಯಾ ತೂಕ್ತಾನಿ ಪಾರ್ವತಿ ॥೫೫॥

ಕಿಂ ಪುನರ್ಬಹುನೋಕ್ತೇನ ಸರ್ವಲಿಂಗಮಯೋ ನಗಃ ॥೫೬॥

ಸಾಧುರೇಶ್ವರ, ರುದ್ರಗಣೇಶ್ವರ, ಈ ಹೆಸರಿನ ಶಿವಲಿಂಗಗಳು ಉತ್ತರ ಭಾಗದಲ್ಲಿವೆ. ॥೪೯-೫೦-೫೧॥

ಪಾರ್ವತಿಯೇ, ಈ ರೀತಿ ದಿವ್ಯಲಿಂಗಗಳ ಹೆಸರುಗಳನ್ನು ತಿಳಿಸಿರುವೆನು. ಯಾರು ಪ್ರಾತಃಕಾಲದಲ್ಲಿ ಈ ದಿವ್ಯಲಿಂಗಗಳ ಪೂಜೆಯನ್ನಾಗಲಿ, ನಾಮ ಪಾರಾಯಣವನ್ನಾಗಲಿ ಮಾಡುವರೋ ಅವರು, ॥೫೨॥

ಕೈಲಾಸಪರ್ವತದಲ್ಲಿರುವ ಸಮಸ್ತ ಲಿಂಗಗಳ ಪೂಜಾಫಲವನ್ನು ಪಡೆಯುವರು. ಮೇಲೆ ಹೇಳಿದ ಶಿವಲಿಂಗನಾಮಪೂರಿತವಾದ ಅಧ್ಯಾಯಗಳನ್ನು ಪಠಿಸುವವರು ರುದ್ರಗಣಗಳಪದವಿಯನ್ನೂ ಹೊಂದುವರು. ॥೫೩॥

ದೇವಿಯೇ, ಕೈಲಾಸಪರ್ವತದಲ್ಲಿ ಕೋಟ್ಯಂತರ ಶಿವಲಿಂಗಗಳಿವೆ. ಅವುಗಳಲ್ಲಿ ಶ್ರೇಷ್ಠತಮಗಳಾದ ಸಹಸ್ರಲಿಂಗಗಳ ಹೆಸರುಗಳನ್ನು ಮಾತ್ರ ಈಗ ವಿವರಿಸಿರುವೆನು. ॥೫೪॥

ಅಂಬಿಕೆಯೇ, ಕೈಲಾಸಪರ್ವತಶಿಖರದಲ್ಲಿರುವ ಸಾರಭೂತವಾದ ಶಿವಲಿಂಗಗಳ ಹೆಸರುಗಳನ್ನು ಮಾತ್ರ ಈಗ ವಿವರಿಸಿರುವೆನು. ಒಟ್ಟಿನಲ್ಲಿ ಸರ್ವಲಿಂಗಮಯವಾದ ಪರ್ವತವೆಂದರೆ ಕೈಲಾಸಾಚಲವೇ ಹೊರತು ಮತ್ತೆ ಬೇರೆಯಲ್ಲ. ॥೫೫-೫೬॥

ತಾರಾರಾಜವಿರಾಜಮಾನಮುಕುಟಾಲಂಕಾರಲಿಂಗಾರ್ಚಕೈಃ ।
ಪ್ರಾಪ್ಯೇಯಂ ಕಲಧೌತಶೈಲವಸತಿರ್ಧೂರ್ತಾಘಸಂಘೈರಪಿ ॥
ನ ಪ್ರಾಪ್ಯೈವ ಯಮಾನಿಲಾಶನತಪೋಯೋಗಾದಿಯೋಗ್ಯೈರಪಿ ।
ಬ್ರಹ್ಮೇಂದ್ರಾದಿಮರುದ್ಗಣೈರಪಿ ಸದಾ ಪ್ರಾಪ್ಯಾಂಧಕಾರ್ಯೈರ್ಜನೈ ॥೬೩॥

ಭಕ್ತ್ಯಾಲಿಂಗಿತಮಾನಸೈಶ್ಚ ಸುಕರಂ ನಾನ್ಯಃ ಪಂಥಾಸ್ತ್ವಸ್ಯ ಹಿ ।
ಧನ್ಯಃ ಕೈಲಾಸಶೈಲೋ ನಗಕುಲತಿಲಕೋ ಲಿಂಗಸಂಘೈಕಮೌಲಿಃ ।
ಸಂತೋಷ್ಯಾಂಬುಜಮಿತ್ರಚಿತ್ರವಿಶಿಖಸ್ಸ್ವರ್ಭಾನುಭಕ್ತಾಕ್ಷಕೋ ।
ಮತ್ತೋಪಾರಯುಗೋತ್ಥಶುದ್ಧತಪಸಾ ಲೇಭೇ ವರಂ ಶಂಕರಾತ್ ॥೬೪॥

ಹೀಗೆ ಸಕಲರಿಗೂ ಆಶ್ಚರ್ಯವನ್ನುಂಟುಮಾಡುವಂತಿರುವ ಕಲಶಗಳ ಸಮೂಹದಿಂದ ಶೋಭಾಯಮಾನವಾಗಿರುವ ಈ ಕೈಲಾಸವು, ಅನೇಕ ಸೂರ್ಯಚಂದ್ರರ ಕಾಂತಿಯಿಂದಾವೃತವಾಗಿದೆಯೋ ಎಂಬಂತೆ ತೋರಿಬರುತ್ತಿರುವುದು. ॥೬೨॥

ಯಾರು ಸರ್ವದಾ ನನ್ನನ್ನೇ ಭಜಿಸುತ್ತಾ ಸಕಲ ಪಾಪಗಳನ್ನೂ ಕಳೆದುಕೊಂಡವರಾಗಿ, ಶಿವಗಣಗಳಲ್ಲಿ ಸೇರಿ, ಚಂದ್ರನನ್ನೂ ದಿವ್ಯವಾದ ಕಿರೀಟವನ್ನೂ ಶಿರಸ್ಸಿನಲ್ಲಿ ಧರಿಸಿಕೊಂಡು, ಶಿವಸಾಯುಜ್ಯಕ್ಕೆ ಅರ್ಹರಾಗುವರೋ, ಅಂತಹವರಿಗೆ ಈ ಕೈಲಾಸವು ಆಶ್ರಯವನ್ನು ಕೊಡುವುದು. ಇದಲ್ಲದೆ, ಕೇವಲ ಯಮನಿಯಮಾದಿಗಳನ್ನು ಅಭ್ಯಾಸಮಾಡಿ, ವಾತಾಶನಾದಿಗಳಿಂದ ಉಗ್ರವಾಗಿ ತಪಸ್ಸನ್ನಾಚರಿಸಿದವರಿಗೂ, ಬ್ರಹ್ಮೇಂದ್ರಾದಿ ಮರುದ್ಗಣಗಳಿಗೂ, ಅಜ್ಞಾನಿಗಳಿಗೂ ಈ ಪರ್ವತದಲ್ಲಿ ಸ್ಥಳವಿರುವುದಿಲ್ಲ. ಇದು ನಿಶ್ಚಯ.॥೬೩॥

ಯಾರು ತಮ್ಮ ಹೃದಯಾಂತರಾಳದಲ್ಲಿ ಸರ್ವದಾ ನನ್ನನ್ನೇ ಧ್ಯಾನಿಸುತ್ತಾ ಕಾಲಕಳೆಯುವರೋ, ಅಂತಹವರಿಗೆ ಈ ಕೈಲಾಸವು ಸುಗಮವಾಗುವುದು. ಪರ್ವತಗಳಲ್ಲೆಲ್ಲಾ ಶ್ರೇಷ್ಠವಾದುದಾಗಿ, ಶಿವಲಿಂಗಗಳಿಂದ ಭರಿತವಾಗಿರುವ ಈ ಕೈಲಾಸವು ಸೂರ್ಯಚಂದ್ರಾಗ್ನಿಗಳನ್ನೇ ಕಣ್ಣುಗಳನ್ನಾಗಿ ಮಾಡಿಕೊಂಡಿರುವ ನನ್ನನ್ನು ತೃಪ್ತಿಪಡಿಸಿರುವುದು. ಆದ್ದರಿಂದ ತಪಸ್ಸುಮಾಡಿ ನನ್ನನ್ನು ತೃಪ್ತಿಪಡಿಸಿದವರಿಗೆ ಈ ಕೈಲಾಸದಲ್ಲಿ ಸ್ಥಿರವಾದ ನೆಲೆಯು ದೊರಕುವುದು. ॥೬೪॥

ತಸ್ಮಿನ್ನೇವ ನಿವಾಸಕಈಶಿತುರಿತಿ ಪ್ರೇಮಾಸ್ಪದತ್ವಂ ಪುರಾ ।
ಸಂಯಾಚೇಽಖಿಲಮುಕ್ತಯೇ ಕಿಲ ಗಿರೀಂದ್ರೇಶಸ್ತ್ವಿವಪ್ರೀತಿಕೃತ್ ॥೬೫॥

ಇತಿ ಶಿವವಚನಂ ನಿಶಮ್ಯ ಗೌರೀ
ಪ್ರಣನಾಮೇಂದುಕಲಾಧರಸ್ಯ ಪಾದೌ ।
ಪರಿತೋಽಭಿಸಮೀಕ್ಷ್ಯ ಲಿಂಗಸಂಘಂ
ಘನಗಾತ್ರೋತ್ಪುಲಕೈರುವಾಚ ದೇವೀ ॥೬೬॥

॥ ಪಾರ್ವತ್ಯುವಾಚ ॥

ಶಂಭೋ ಭೀಮ ಭವಾಂಧಕಾಸುರಹರ ತ್ರ್ಯಕ್ಷಾಕ್ಷರೋಮಾಪತೇ ।
ಮನ್ಮಾಥ ಪ್ರಮಥಾಧಿನಾಥ ದಯಯಾ ಮೇ ಖಂಡಪರಶೋ ವದ ॥
ಕಿಂ ವಾನೇನ ತವ ಪ್ರಸಾದಜನಕಂ ತಪ್ತಂ ತಪಸ್ತೇನ ಹಿ ।
ಕೈಲಾಸೇನ ತವೈವ ವಾಸಕರಣಂ ಪುಣ್ಯೈರಗಣ್ಯೈರಪಿ ॥೬೭॥

---

ಅಲ್ಲದೆ, ಇದೇ ಕೈಲಾಸಾಚಲವು ಹಿಂದೆ ನನ್ನನ್ನು ಕುರಿತು ಬಹುಕಾಲ ತಪಸ್ಸುಮಾಡಿ, ನನ್ನನ್ನು ಮೆಚ್ಚಿಸಿ, ಭಕ್ತಮುಕ್ತ್ಯರ್ಥನಾಗಿ ಸರ್ವದಾ ನಾನು ಇಲ್ಲಿಯೇ ವಾಸಮಾಡಿರುವಂತೆ ವರವನ್ನು ಕೇಳಿಕೊಂಡಿರುವನು. ಪ್ರೀತಿಯಿಂದ ನಾನು ಹಾಗೆಯೇ ಒಪ್ಪಿಕೊಂಡು ಇಲ್ಲಿ ವಾಸಿಸುತ್ತಿರುವೆನು. " ॥೬೫॥

ಎಂದು ಹೇಳಿದ ಶಂಕರನ ಮಾತುಗಳನ್ನು ಕೇಳಿ ಪಾರ್ವತಿಯು, ಚಂದ್ರಶೇಖರನಾದ ಪತಿಯ ಪಾದಕ್ಕೆ ಎರಗಿ, ಶಂಕರನು ಹೇಳಿದಂತೆ ಸುತ್ತಲೂ ಇರುವ ಶಿವಲಿಂಗಗಳ ಸಾಲುಗಳನ್ನು ನೋಡುತ್ತಾ ಆಶ್ಚರ್ಯದಿಂದ ರೋಮಾಂಚಯುಕ್ತಳಾಗಿ ಪತಿಯೊಡನೆ ಹೀಗೆಂದಳು. ।॥೬೬॥

" ಶಂಕರನೇ, ಅಂಧಕಾಸುರಸೂದನನೇ, ತ್ರ್ಯಂಬಕನೇ, ಉಮಾಪತಿಯೇ, ಪ್ರಮಥಗಣಗಳಿಗೆ ಒಡೆಯನೆನಿಸಿ, ಖಂಡಪರಶುವನ್ನು ಧರಿಸಿರುವ ಪರಶಿವನೇ, ಈ ಕೈಲಾಸಪರ್ವತವು ನಿನಗೆ ತೃಪ್ತಿಯನ್ನುಂಟುಮಾಡುವಂತೆ ಮಾಡಿದ ತಪಸ್ಸಿನ ಕ್ರಮವನ್ನು ವಿವರಿಸುವವನಾಗು. ಪುಣ್ಯಕರಗಳಾದ ಇನ್ನೂ ಅನೇಕಪರ್ವತಗಳಿದ್ದರೂ ನೀನು ಇಲ್ಲಿ ವಾಸಮಾಡುತ್ತಿರುವುದಕ್ಕೆ ಕಾರಣವನ್ನೂ ದಯವಿಟ್ಟು ತಿಳಿಸಬೇಕೆಂದು ಬೇಡುವೆನು. ॥೬೭॥

ಕಿಂ ವಾನೇನ ತಪಃ ಪರಂ ಸುವಿಹಿತಂ ಚೀರ್ಣಂ ಚಿರಾದ್ಯತ್ಪ್ರಭೋ ।
ಲಿಂಗಾರಾಧನಮೇವ ಕೇವಲಮಹೋ ಪ್ರೇಮಾಸ್ಪದಂ ತೇ ಪ್ರಭೋ ।
ಕಿಂ ವಾಕಾರಿ ನಗೇಂದ್ರಧನ್ಯತಿಲಕೇನಾರಾಧಿತಸ್ತ್ವಂ ಕಥಂ ।
ಲಿಂಗಾಪಾರಶಿಖಾಲಯೋಽಯಮಧುನಾ ನಾನ್ಯಂ ನಗೇಂದ್ರಾತ್ಪರಂ ॥೬೮॥

ಧನ್ಯೋಽಯಂ ಗಿರಿರಾಜರಾಜತಿಲಕೋ ಲಿಂಗಾಲಿಮೌಲಿಸ್ಸದಾ ।
ಚೈಕಂ ವಾ ಕ್ಷಣಸಂಸ್ಥಿತಂ ತ್ವಘಕುಲಂ ಲಿಂಗಂ ಹರತ್ಯೇವ ತೇ ।
ಯತ್ರಾಪಾರಮಹೇಶಸೌಧವರಗಂ ಲಿಂಗೋತ್ತಮಾನಾಂ ಕುಲಂ ।
ಚೈತತ್ಸಂಗತನಾಗುಪೇತಗತಿತೋ ಲೋಕಾ ವಿಮುಕ್ತಾಖಿಲಾಃ ॥೬೯॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸೋತ್ತರದ್ವಾರಲಿಂಗಸೌಧ
ಕಥನಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ

ಹೇ ಸ್ವಾಮಿಯೇ, ಗಿರಿಶ್ರೇಷ್ಠನಾದ ಈ ಕೈಲಾಸಪರ್ವತರಾಜನು ಯಾವರೀತಿ ತಪಸ್ಸುಮಾಡಿ ನಿನ್ನನ್ನು ಮೆಚ್ಚಿಸಿದನು? ಶಿವಲಿಂಗಾರಾಧನೆಯೇ ಮುಖ್ಯವಾಗಿ ನಿನಗೆ ಪ್ರೀತಿಕರವಾದದ್ದೆಂದು ತಿಳಿದಿರುವೆನು. ಅದನ್ನು ಬಿಟ್ಟು ನಿನ್ನ ತೃಪ್ತಿಗೆ ಮತ್ತಾವುದಾದರೂ ಮಾರ್ಗವಿದೆಯೇ? ಕೈಲಾಸಪರ್ವತವು ಯಾವ ದಿವ್ಯಕ್ರಮವನ್ನನುಸರಿಸಿ ನಿನ್ನನ್ನು ತೃಪ್ತಿಗೊಳಿಸಿರುವುದು? ಪ್ರಪಂಚದಲ್ಲಿ ಇಷ್ಟು ಶಿವಲಿಂಗಗಳಿಗೆ ಆಶ್ರಯವಾಗಿ ಅತ್ಯಂತ ಧನ್ಯನೆನಿಸಿರುವ ಬೇರೊಂದು ಪರ್ವತವನ್ನೇ ಕಾಣೆನಲ್ಲಾ! ||೬೮||

ಗಿರಿಶ್ರೇಷ್ಠವೆನಿಸಿದ ಈ ಪರ್ವತವೇ ಧನ್ಯವಾದದ್ದು. ಪವಿತ್ರವಾದ ಒಂದು ಲಿಂಗವನ್ನು ಶಿರಸ್ಸಿನಲ್ಲಿ ಧರಿಸಿದೊಡನೆಯೇ, ಧರಿಸಿದವನ ಸಕಲ ಪಾಪರಾಶಿಯೂ ನಿರ್ಮೂಲವಾಗಿ ನಾಶವಾಗುವುದು. ಹಾಗಿರುವಾಗ ಅಸಂಖ್ಯಾತವಾದ ಶಿವಲಿಂಗಗಳನ್ನೂ, ಶಿವಾಲಯಗಳನ್ನೂ, ಸರ್ವದಾ ಮೌಳಿಯಲ್ಲಿ ಧರಿಸಿರುವ ಈ ಪರ್ವತವು ಉತ್ತಮೋತ್ತಮವಾದುದಲ್ಲವೇ? ಈ ಪರ್ವತದ ನಾಮಸ್ಮರಣೆಯಿಂದಲೂ, ಈ ಪರ್ವತದ ಸೇವೆಯಿಂದಲೂ, ಸಮಸ್ತಲೋಕವೂ ಮುಕ್ತಿಯನ್ನು ಪಡೆಯುವುದರಲ್ಲಿ ಅನುಮಾನವೇನು?" ಎಂದು ತನ್ನ ಅಭಿಪ್ರಾಯವನ್ನು ದೇವಿಯು ಮಹೇಶ್ವರನಲ್ಲಿ

ವಿಜ್ಞಾಪಿಸಿಕೊಂಡಳೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಸಿದನು. ||೬೯||

ಇಲ್ಲಿಗೆ ಶ್ರೀಶಿವರಹಸ್ಯದ ಪ್ರಥಮಾಂಶದ ಕೈಲಾಸಪರ್ವತದ ಉತ್ತರಭಾಗದಲ್ಲಿರುವ ಶಿವಲಿಂಗಗಳ ಸೌಧಗಳನ್ನು ವಿವರಿಸುವ ನಲವತ್ತುಮೂರನೆಯ ಅಧ್ಯಾಯವು ಮುಗಿದುದು.

# ಅಥ ಶ್ರೀಶಿವರಹಸ್ಯೇ

## ಚತುಶ್ಚತ್ವಾರಿಂಶೋಽಧ್ಯಾಯಃ

### ಕೈಲಾಸತಪಶ್ಚರ್ಯಾ

|| ಈಶ್ವರ ಉವಾಚ ||

ಶೃಣ್ವಪರ್ಣೇ ತಪಶ್ಚರ್ಯಾಕಾರಣಂ ಭೂಧರಸ್ಯ ಚ ।
ಮಮ ಕೈಲಾಸವರ್ಯಸ್ಯ ಸರ್ವಲಿಂಗಾಲಯಸ್ಯ ಚ ॥೧॥

ನಗೇಂದ್ರತಿಲಕಶ್ಚಾಯಂ ನಾನಾನಿರ್ಝರಕಂದರಃ ।
ನಾನಾಶಾಖಿಶತೋಪೇತೋ ನಾನಾಪಕ್ಷಿವಿರಾಜಿತಃ ॥೨॥

ದೇವಿ ಪಕ್ಷಿಗಣಾರಾವೈಸ್ತೋಷ್ಯನ್ನಿವ ಸ ಮಾಂ ಸ್ಥಿತಃ ।
ನಾನಾಮೃಗಗಣಾಕೀರ್ಣೋ ನಾನಾದ್ರುಮಲತಾಯುತಃ ॥೩॥

---

## ಶ್ರೀಶಿವರಹಸ್ಯದಲ್ಲಿ ನಲವತ್ತುನಾಲ್ಕನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಯನ್ನು ಕುರಿತು "ದೇವಿಯೇ, ಸರ್ವವಿಧವಾದ ಶಿವಲಿಂಗಗಳಿಗೂ ಆಶ್ರಯವಾಗಿರುವ ಈ ಕೈಲಾಸಪರ್ವತವು ನನ್ನನ್ನು ಕುರಿತು ತಪಸ್ಸುಮಾಡಿದ ಕ್ರಮವನ್ನೂ ಅದಕ್ಕೆ ಕಾರಣವನ್ನೂ ಕೇಳುವವಳಾಗು" ಎಂದು ಕೈಲಾಸದ ತಪಶ್ಚರ್ಯೆಗೆ ಕಾರಣವನ್ನು ವಿವರಿಸಲಾರಂಭಿಸಿದನು. ||೧||

ಪರ್ವತಶ್ರೇಷ್ಠವಾದ ಈ ಕೈಲಾಸದಲ್ಲಿ ಅನೇಕ ಗಿರಿನದಿಗಳೂ, ಗುಹೆಗಳೂ, ವಿಧವಿಧವಾದ ವೃಕ್ಷಗಳೂ, ಪಕ್ಷಿಗಳೂ ತುಂಬಿ ತುಳುಕಾಡುತ್ತಿರುವುವು. ||೨||

ಪಕ್ಷಿಗಳ ಇಂಚರದ ನೆಪದಿಂದ ಕೈಲಾಸವು ನನ್ನನ್ನು ಸ್ತುತಿಸುತ್ತಿರುವುದೋ ಎಂಬಂತೆ ಕಾಣುತ್ತಿತ್ತು. ಅನೇಕ ಜಾತಿಯ ಮೃಗಗಳೂ, ಮರಬಳ್ಳಿಗಳೂ ವಿಶೇಷವಾಗಿ ಅಲ್ಲಿ ಕಂಡುಬರುತ್ತಿದ್ದವು. ||೩||

ನಾನಾಶಿಖರಿಗೋದ್ಭಾಸಿಶೃಂಗಮಾಲಿರಯಂ ಶಿವೇ ।
ಪುರಾ ಮಯ್ಯೈವ ಮನಸಾ ಕಲ್ಪಿತೋಽಯಂ ಮಹೀಧರಃ ॥೪॥

ಮತ್ಸೃಷ್ಟಿಮಾತ್ರಾದತ್ಯಂತಂ ಮನಸಃ ಪ್ರೀತಿಮಾನಭೂತ್ ।
ಮತ್ಪ್ರಸಾದಾಯ ಚ ಪುನಸ್ತಪಶ್ಚಕ್ರೇ ಯುಗದ್ವಯಂ ॥೫॥

ಧರಾಧರೇಂದ್ರೋ ದೇವೇಶಿ ತಚ್ಛೃಣುಷ್ವಾಖಿಲಂ ಮಮ ।
ಜ್ವಲದಂಗಾರಸಂತಾಪೈಸ್ಸಂತಪ್ತಾಖಿಲಗಾತ್ರಕಃ ॥೬॥

ಊರ್ಧ್ವಗಂ ರವಿಕರೈಸ್ತಪ್ತಶ್ಶತರುದ್ರಜಪಾದರಃ ।
ಸಹಸ್ರಹಾಯನಂ ಶೈಲಃ ಪರ್ಣಭುಗ್ವಾಯುಭುಕ್ತತಃ ॥೭॥

ಸಹಸ್ರಂ ಧೂಮಭಕ್ಷಶ್ಚ ಸಹಸ್ರಂ ಸಲಿಲಾಶನಃ ।
ನಿರಾಹಾರಸ್ಸಹಸ್ರಂ ಸ್ಯಾತ್ ಭಸ್ಮಚ್ಛನ್ನಸ್ಸದೈವ ಹಿ ॥೮॥

---

ಅನೇಕ ಪರ್ವತಗಳಿಂದ ಪರಿವೃತವಾಗಿರುವ ಈ ಗಿರಿಶಿಖರವನ್ನು ನಾನೇ ಮಾನಸದೃಷ್ಟಿಯಿಂದ ನಿರ್ಮಾಣಮಾಡಿರುವೆನು. ॥೪॥

ಈ ವಿಧವಾದ ನನ್ನ ಅಭಿಮಾನದಿಂದ ಅತ್ಯಂತ ತೃಪ್ತಿಗೊಂಡ ಕೈಲಾಸ ರಾಜನು, ಮತ್ತೆ ನನ್ನ ಅನುಗ್ರಹಸಂಪಾದನೆಗಾಗಿ ಎರಡು ಯುಗಗಳು ಪೂರ್ತಿಯಾಗಿ ತಪಸ್ಸನ್ನಾಚರಿಸಿದನು. ॥೫॥

ಎಲೌ ದೇವೇಶಿಯೇ, ಈ ಕೈಲಾಸಪರ್ವತರಾಜನು ಸುತ್ತಲೂ ಉರಿಯುವ ಜ್ವಾಲೆಯಿಂದ ಬರುವ ತಾಪವನ್ನು ಸಹಿಸಿಕೊಂಡು, ದೇಹವನ್ನೆಲ್ಲಾ ಸೊರಗಿಸಿಕೊಂಡು ಉಗ್ರವಾಗಿ ತಪಸ್ಸನ್ನಾಚರಿಸಲು ಆರಂಭಿಸಿದನು. ॥೬॥

ಮೇಲೆ ಸೂರ್ಯನ ಕಿರಣವು ಬೇರೆ ಉರಿಯುತ್ತಿತ್ತು. ಇಂತಹ ಪಂಚಾಗ್ನಿ ಮಧ್ಯದಲ್ಲಿ ಶೈಲರಾಜನು, ಶತರುದ್ರಮಂತ್ರವನ್ನೇ ಜಪಿಸುತ್ತಾ, ಪರ್ಣಾಶಿಯಾಗಿ, ವಾಯುಭೋಜಿಯಾಗಿ, ಸಹಸ್ರ ವರ್ಷಗಳು ತಪಸ್ಸುಮಾಡಿದನು. ॥೭॥

ಅನಂತರ ಕೇವಲ ಧೂಮಪಾಯಿಯಾಗಿ ಸಾವಿರ ವರ್ಷಗಳೂ, ಜಲಪಾನದಿಂದ ಮತ್ತೊಂದು ಸಾವಿರ ವರ್ಷ, ಉಪವಾಸದಿಂದ ಮಗದೊಂದು ಸಾವಿರ ವರ್ಷ, ಹೀಗೆ ಕಠಿನವ್ರತದಿಂದ ಸರ್ವದಾ ಭಸ್ಮಲಿಪ್ತಾಂಗನಾಗಿ ತಪಸ್ಸನ್ನಾಚರಿಸಿದನು. ॥೮॥

ಯುಗಮೇಕಮಥೋವಾಸ ಮಮ ಲಿಂಗಾರ್ಚನೇ ರತಃ ।
ಶೈಲೇಶ್ವರಾಭಿದಂ ತತ್ರ ತಲ್ಲಿಂಗಂ ಬಿಲ್ವಪಲ್ಲವೈಃ ॥೯॥

ತ್ರಿಕಾಲಮರ್ಚಯೇದ್ಭಕ್ತ್ಯಾ ಧ್ಯಾಯನ್ಮಾಂ ಸ್ವಹೃದಾ ನಗಃ ।
ತ್ರಿನೇತ್ರಂ ನೀಲಕಂಠಂ ಚ ರಾಜಚ್ಚಂದ್ರಕಲಾಧರಂ ॥೧೦॥

ಗಂಗಾತರಂಗವಿಲಸತ್ಪದ್ಮಮಾಲಾವಿರಾಜಿತಂ ।
ಭಸ್ಮೋದ್ಧೂಲಿತಸರ್ವಾಂಗಂ ಜಟಾಮುಕುಟಮಂಡಿತಂ ॥೧೧॥

ನಾಗಯಜ್ಞೋಪವೀತಂ ಚ ಫಣಿಭೂಷಾವಿರಾಜಿತಂ ।
ಭಸ್ಮೋದ್ಧೂಲಿತಸರ್ವಾಂಗಂ ತ್ರಿಪುಂಡ್ರಪರಿಶೋಭಿತಂ ॥೧೨॥

ಉಮಯಾ ಸಹಿತಂ ದೇವಮಂಗರಾಗೋಜ್ವಲಾಂಗಕಂ ।
ಮಂದಾರಕುಂದದಾಮೋದ್ಯತ್ಕಂಧರಾಲಂಕೃತೋರಸಂ ॥೧೩॥

ಒಂದು ಯುಗಕಾಲ ಹಾಗೆ ತಪಸ್ಸು ಮಾಡಿ, ಮತ್ತೊಂದು ಯುಗವನ್ನು ಪೂರ್ತಿಯಾಗಿ, ಶೈಲೇಶ್ವರಸಂಜ್ಞಕವಾದ ಲಿಂಗಾರ್ಚನೆಯಿಂದ ಕಳೆದನು. ॥೯॥

ತ್ರಿಕಾಲದಲ್ಲಿಯೂ ಬಿಲ್ವಪತ್ರೆಗಳಿಂದ ಶಿವಲಿಂಗವನ್ನು ಪೂಜಿಸಿದನು. ಮನಸ್ಸಿನಲ್ಲಿ ಯಾವಾಗಲೂ ತ್ರಿನೇತ್ರನೂ, ಶ್ರೀಕಂಠನೂ, ಚಂದ್ರಶೇಖರನೂ ಆದ ನನ್ನನ್ನೇ ॥೧೦॥

ಧ್ಯಾನಕಾಲದಲ್ಲಿ ಕೈಲಾಸಶೈಲರಾಜನು ಹೀಗೆ (ನನ್ನನ್ನು) ಪರಮೇಶ್ವರನನ್ನು ಅನುಸಂಧಾನಮಾಡಿದನು. " ಶಂಕರನು ತನ್ನ ಶಿರಸ್ಸಿನಲ್ಲಿರುವ ಗಂಗಾನದಿಯ ಅಲೆಗಳಲ್ಲಿ ಸುಂದರವಾಗಿ ಕಂಡುಬರುವ ಪದ್ಮಗಳ ಮಾಲೆಯನ್ನು ಧರಿಸಿರುವನು. ಭಸ್ಮದಿಂದ ತನ್ನ ದೇಹವನ್ನೆಲ್ಲಾ ಬಳಿದುಕೊಂಡಿರುವನು. ಜಟೆ ಮತ್ತು ಕಿರೀಟ ಇವುಗಳಿಂದ ಅಲಂಕೃತನು. ಸರ್ಪವನ್ನೇ ಯಜ್ಞೋಪವೀತವನ್ನಾಗಿಯೂ, ಆಭರಣವನ್ನಾಗಿಯೂ ಮಾಡಿಕೊಂಡಿರುವನು. ಭಸ್ಮಲಿಪ್ತಾಂಗನಾಗಿ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿರುವನು. ॥೧೧-೧೨॥

ಸರ್ವದಾ ಪಾರ್ವತೀಸಮೇತನಾಗಿರುವನು. ಅಂಗರಾಗದಿಂದ ಶರೀರದ ಸೊಬಗನ್ನು ಹೆಚ್ಚಿಸಿಕೊಂಡಿರುವನು. ಮಂದಾರಪುಷ್ಪ, ಕುಂದಪುಷ್ಪ, ಇವುಗಳ ಮಾಲೆಯು ಪರಮೇಶ್ವರನ ಕಂಠಪ್ರದೇಶವನ್ನೂ, ವಕ್ಷೋಭಾಗವನ್ನೂ ಅಲಂಕರಿಸು

ಕರಿಕೃತ್ತಿಪಟೀ ಭ್ರಾಸ್ವತ್ಕಟೀತಟವಿರಾಜಿತಂ ।
ಫಣಿಮೌಲಿಮಹಾರತ್ನಗಣಾಂಚಿತಸುಕುಂಡಲಂ ॥೧೪॥

ಹೀರತಾರಮಹಾಸಾರಪದ್ಮರಾಗಸುಕಂಕಣಂ ।
ಆರಕ್ತೋರುಮಹಾಪಟ್ಟರಾಜತ್ಪಾದಾಂಬುಜದ್ವಯಂ ॥೧೫॥

ಮಹಾರ್ಹವಸನಂ ದೇವಂ ಪ್ರಸನ್ನಾಸ್ಯಂ ಸದಾಶಿವಂ ।
ಅಷ್ಟಮೀಸೋಮಸಂಕಾಶನಖರಾಜಿವಿರಾಜಿತಂ ॥೧೬॥

ಉತ್ಫುಲ್ಲಪುಂಡರೀಕಾಕ್ಷವದನಂ ಸ್ಮರಸುಂದರಂ ।
ದಾಡಿಮೀಬೀಜಸಂಕಾಶರದನಾವಲಿಭೂಷಿತಂ ॥೧೭॥

ಪಕ್ವಬಿಂಬಫಲೋದಾರರದಪ್ರಚ್ಛದಶೋಭಿತಂ ।
ನೀಲೇಂದೀವರಸಂಕಾಶಮಾನೀಲಾರಕ್ತಲೋಚನಂ ॥೧೮॥

ತ್ತಿರುವುದು. ಗಜಚರ್ಮವನ್ನು ಸುಂದರವಾದ ಸೊಂಟದಲ್ಲಿ ಕಟ್ಟಿಕೊಂಡಿರುವನು. ನಾಗರತ್ನವೇ ಮೊದಲಾದ ದಿವ್ಯರತ್ನಗಳಿಂದ ಹೊಳೆಯುವ ಕುಂಡಲಗಳನ್ನು ಧರಿಸಿಕೊಂಡಿರುವನು. ||೧೩-೧೪||

ಅಮೂಲ್ಯವಾದ ಹೀರರತ್ನ, ಪದ್ಮರಾಗವೇ ಮೊದಲಾದ ಶ್ರೇಷ್ಠರತ್ನಗಳಿಂದ ನಿರ್ಮಿತವಾದ ಕಂಕಣವುಳ್ಳವನು. ಪೂರ್ಣರಕ್ತವರ್ಣದಿಂದ ರಂಜಿಸುವ ಪೀಠದಲ್ಲಿಟ್ಟ ಪಾದಕಮಲದ್ವಯವುಳ್ಳವನು. ಬೆಲೆಬಾಳುವ ವಸ್ತ್ರಗಳನ್ನು ಧರಿಸಿರುವನು. ಮತ್ತೂ ಸರಶಿವನ ಮುಖವು ಸರ್ವದಾ ಪ್ರಸನ್ನವಾಗಿರುವುದು. ಮಂಗಳಪ್ರದವಾಗಿರುವುದು. ಅಷ್ಟಮೀ ತಿಥಿಯ ಚಂದ್ರನ ಆಕಾರದಂತೆ ಪರಮೇಶ್ವರನ ಉಗುರುಗಳು ಸರ್ವದಾ ಪ್ರಕಾಶಮಾನವಾಗಿರುವುವು. ||೧೫-೧೬||

ಸ್ವಾಮಿಯ ಮುಖವು ಅರಳಿದ ಕಮಲದಂತಿದ್ದು, ಮನ್ಮಥನ ಸೌಂದರ್ಯವನ್ನು ಹೋಲುತ್ತಿರುವುದು. ದಾಳಿಂಬದ ಬೀಜಗಳಂತೆ ದಂತಪಂಕ್ತಿಯು ವಿರಾಜಿಸುತ್ತಿರುವುದು. ಬಿರಿದ ತೊಂಡೆಹಣ್ಣಿನಂತಿರುವ ಕೆಂಪಾದ ತುಟಿಯೂ, ನೀಲೋತ್ಪಲದಂತೆ ವಿಶಾಲವಾಗಿ ಸುತ್ತಲೂ ಕೆಂಪಾಗಿ ಪ್ರಕಾಶಿಸುವ ಕಣ್ಣುಗಳೂ, ಶಂಕರನನ್ನು ಅಲಂಕರಿಸಿರುವುವು. ||೧೭-೧೮||

ಪ್ರಸಾದಸುಮುಖಂ ಸಾಕ್ಷಾತ್ ಜಗತಾಂ ಸಾಕ್ಷಿಮೀಶ್ವರಂ ।
ಹರಿನ್ಮಣಿನಿಭಾಕಾರಾಂ ಮಮಾಂಕಸ್ಥಾಂ ಚ ತ್ವಾಮಪಿ ॥೧೯॥

ದಧ್ಯಾ ನಗೇಂದ್ರತಿಲಕಃ ಪುಷ್ಪಧಮ್ಮಿಲ್ಲಶೋಭಿತಂ ।
ಚಾಂಪೇಯಕಲಿಕೋದ್ಭಾಸಿದಿವ್ಯನಾಸಾ ವಿರಾಜಿತಂ ॥೨೦॥

ಉದ್ಯತ್ಶುಕ್ರನಿಭಾತ್ಯಚ್ಛಮುಕ್ತಾಫಲಸುನಾಸಿಕಾಂ ।
ಸೀಮಂತರೇಖಾಸಿಂದೂರರಾಜತ್ಫಾಲಸುಶೋಭಿತಾಂ ॥೨೧॥

ಮಣಿಧ್ವಜಮಹಾಚಾಪಸನ್ನಿಭಭ್ರೂಯುಗೋಜ್ಜ್ವಲಾಂ ।
ಕಸ್ತೂರೀತಿಲಕೋಲ್ಲಾಸಿಫಾಲಭಾಗಮನೋಹರಾಂ ॥೨೨॥

ಉದ್ಯದುತ್ಫುಲ್ಲನೀಲಾಚ್ಛದಲರಕ್ತದೃಶಾ ಯುತಾಂ ।
ಹೀರಸಾರಕಣಾತ್ಯಚ್ಛದಂತಪಂಕ್ತಿವಿರಾಜಿತಾಂ ॥೨೩॥

ಶಂಕರನು ಪ್ರಸನ್ನತೆಯಿಂದ ಸರ್ವರಿಗೂ ಸುಲಭನಾಗಿರುವನು. ಲೋಕದ ಸಕಲ ಕರ್ಮಗಳಿಗೂ ಸಾಕ್ಷಿಯಂತಿರುವನು. ಪರಶಿವನ ತೊಡೆಯಮೇಲೆ ನೀಲಮಣಿಯಂತೆ ಆಕಾರವುಳ್ಳ ಪಾರ್ವತಿಯು ಸರ್ವದಾ ಕುಳಿತಿರುವಳು. ದೇವಿಯ ಕೇಶಪಾಶವು ಪುಷ್ಪಮಾಲೆಯಿಂದ ವಿರಾಜಿಸುತ್ತಿರುವುದು. ನಾಸಿಕವು ಸಂಪಿಗೆಯ ಮೊಗ್ಗಿನಂತೆ ನೀಳವಾಗಿರುವುದು" ಎಂಬುದಾಗಿ ಈ ಶೈಲರಾಜನು ಸರ್ವದಾ ನನ್ನನ್ನೇ ಮನನಮಾಡುತ್ತಿದ್ದನು. ||೧೯-೨೦||

ಅಲ್ಲದೆ ಕೈಲಾಸರಾಜನು ದೇವಿಯಾದ ನಿನ್ನನ್ನು ಈ ರೀತಿಯಾಗಿ ಮನಸ್ಸಿನಲ್ಲಿ ಧ್ಯಾನಮಾಡಿದನು. "ದೇವಿಯು ತನ್ನ ಮೂಗಿನಲ್ಲಿ ಪ್ರಕಾಶಮಾನವಾದ ಶುಕ್ರಗ್ರಹದಂತೆ ಹೊಳೆಯುವ ಮುತ್ತಿನಿಂದ ಕೂಡಿದ ಮೂಗುಬೊಟ್ಟನ್ನು ಧರಿಸಿರುವಳು. ಬೈತಲೆಯ ಮೇಲೆ ನೇರವಾಗಿ ತೋರಿಬರುವ ಹಣೆಯಲ್ಲಿ ಸಿಂದೂರಚೂರ್ಣವು ದೇವಿಯ ಹಣೆಯನ್ನು ಪ್ರಕಾಶಗೊಳಿಸುತ್ತಿರುವುದು. ದೇವಿಯ ಹುಬ್ಬುಗಳಾದರೋ ದೊಡ್ಡ ಧನುಸ್ಸಿನಂತೆ ಸ್ವಲ್ಪ ಬಗ್ಗಿದ್ದಾಗಿ ವಕ್ರರೀತಿಯಲ್ಲಿ ಕಾಣುತ್ತಿರುವುದು. ಹಣೆಯಲ್ಲಿ ಮನೋಹರವಾದ ಕಸ್ತೂರಿಯ ತಿಲಕವಿರುವುದು. ||೨೧-೨೨||

ಅರಳಿದ ಕಮಲಗಳಂತೆಯೂ, ನೀಲೋತ್ಪಲದಂತೆಯೂ, ಕಾಂತಿಮತ್ತಾದ ಕಣ್ಣುಗಳಿಂದಲೂ, ಹೀರರತ್ನಗಳಂತೆ ಕಂಗೊಳಿಸುವ ದಂತಪಂಕ್ತಿಗಳಿಂದಲೂ,

ದಾಡಿಮೀಪುಷ್ಪಸಂಕಾಶಾಧರಧಾರಾರಸಾಂ ಶಿವಾಂ ।
ತಾಂಬೂಲಾಪೂರಿತಮುಖೀಂ ಪ್ರಸನ್ನಾಂ ಸಸ್ಮಿತಾನನಾಂ ॥೨೪॥

ತಪನೋಡುಪವಿಭ್ರಾಜತ್ಕರ್ಣತಾಟಂಕಮಂಡಿತಾಂ ।
ಕರ್ಣಪತ್ರಮಣಿವ್ರಾತಭಾಸ್ವನ್ಮಂಡಿತಗಂಡಕಾಂ ॥೨೫॥

ಕಪೋಲಪಾಲಿಕಾದರ್ಶಧಗದ್ಧಗಿತದಿಕ್ತಟಾಂ ।
ಚಂಪಕೋದ್ದಾಮಕಲ್ಹಾರವಕುಲಾಶೋಕನಾಗಕೈಃ ॥೨೬॥

ಮರುದ್ದಮನಕೋದ್ಭಾಸಿಮಲ್ಲೀಮಲ್ಲೀಸರಾವೃತಾಂ ।
ವೇಣುಮಂಡಲರತ್ನಾಂಕಚಂದ್ರಖಂಡಶಿಖಂಡಕಾಂ ॥೨೭॥

ಗ್ರೈವೇಯಲಗ್ನಮಣಿಜಸರಾವಲಿಲಸದ್ಗಲಾಂ ।
ಚಿಂತಾಕಲ್ಲೋಲಮುಕ್ತಾಚ್ಛರಾಜತ್ಪದಕಸಂತತಿಂ ॥೨೮॥

---

ದಾಳಿಂಬದ ಹೂವಿನಂತೆ ಕೆಂಪಾಗಿರುವ ತುಟಿಗಳಿಂದಲೂ, ತಾಂಬೂಲರಾಗದಿಂದಲೂ, ಮಂದಹಾಸದಿಂದಲೂ ಪ್ರಕಾಶಿತವಾದ ಮುಖದಿಂದಲೂ ದೇವಿಯು ಪ್ರಸನ್ನಳಾಗಿರುವಳು. ||೨೩-೨೪||

ಸೂರ್ಯಚಂದ್ರರಂತೆ ಹೊಳೆಯುತ್ತಿರುವ ಎರಡು ಓಲೆಗಳನ್ನೂ ಎರಡು ಕಿವಿಗಳಲ್ಲಿ ಧರಿಸಿರುವಳು. ಕಿವಿಯಲ್ಲಿ ವಿರಾಜಿಸುವ ಕರ್ಣಪತ್ರಗಳ ರತ್ನಕಾಂತಿಯಿಂದ ದೇವಿಯ ಗಂಡಸ್ಥಲವು ಹೊಳೆಯುತ್ತಿರುವುದು. ದೇವಿಯು ಮಂಡಿಸಿರುವ ಸ್ಥಳದಲ್ಲಿ ಕಂಡುಬರುವ ಕಪೋತಪಾಲಿಕೆಗಳಲ್ಲಿ ಸಂಪಿಗೆ, ಕಲ್ಹಾರ, ವಕುಲ, ಅಶೋಕ, ನಾಗಕೇಸರ ಮುಂತಾದ ಪುಷ್ಪಗಳಿರುವುದರಿಂದ ಅದರ ವಾಸನೆಯು ಸಮಸ್ತದಿಕ್ಕುಗಳನ್ನೂ ಗಮಗಮಾಯಮಾನವನ್ನಾಗಿ ಮಾಡಿರುವುದು. ||೨೫-೨೬||

ಮರುಗ, ದವನ, ಮಲ್ಲಿಗೆ ಮುಂತಾದ ಪುಷ್ಪ ವಿಶೇಷಗಳಿಂದ ಕೂಡಿದ ಸರವನ್ನು ದೇವಿಯು ಹಾಕಿಕೊಂಡಿರುವಳು. ತನ್ನ ಕಾಕಪಕ್ಷದಲ್ಲಿ, ಅಂದರೆ ಮುಂದಲೆಯಲ್ಲಿ ಕುಶದ್ವೀಪಾಂತರ್ಗತವಾದ ವೇಣುಮಂಡಲದಲ್ಲಿ ಸಿಕ್ಕುವ ರತ್ನಗಳಿಂದ ನಿರ್ಮಿತವಾದ ಅರ್ಧಚಂದ್ರಾಕಾರದ ಆಭರಣವಿರುವುದು. ದೇವಿಯು ಕತ್ತಿನಲ್ಲಿ ದಿವ್ಯವಾದ ರತ್ನಹಾರವನ್ನು ಹಾಕಿಕೊಂಡಿರುವಳು. ಚಿಂತಾಮಣಿಯಿಂದ ಸುಂದರವಾಗಿ ಕಾಣುವ ಮುತ್ತಿನ ಪದಕಗಳನ್ನು ತಾನು ಧರಿಸಿಕೊಂಡಿರುವಳು. ||೨೭-೨೮||

ನವರತ್ನಮಣಿಭ್ರಾಜದ್ಧೀರಹಾರೋರುವಕ್ಷಜಾಂ ।
ಸುರತ್ನಪುಷ್ಪಗುಚ್ಛಾಚ್ಛಧಾರಿತಾಯಿತವೇಣಿಕಾಂ ॥೨೯॥

ಪರಾಕೇತೋತ್ಥಿತಾಪಾರಪೀತೋದ್ಯತ್ಕೇತಕ್ಯೈರ್ಯುತಾಂ
ಕೇತಕೀಗಂಧಸುಭಗಶೀತವಾತಾಯಿತಾಂಗಕಾಂ ॥೩೦॥

ತ್ರಿಭಂಗೀಸುಭಗಾಕಾರತಲೋದರವಿರಾಜಿತಾಂ ।
ತಾರಾಸ್ವಚ್ಛಮಹಾವೃತ್ತಮುಕ್ತಾಹಾರವಿರಾಜಿತಾಂ ॥೩೧॥

ಸ್ಫುರತ್ಪದಕರತ್ನಾಚ್ಛಕಾಂತಿಕಾಂಚಿತದಿಕ್ತಟಾಂ ।
ರತ್ನಹಾರಮಣೀಭಾಸ್ವನ್ನವರತ್ನಾಲಿಶೋಭಿತಾಂ ॥೩೨॥

ಉನ್ಮೃತ್ತಕರಟೀಕುಂಭಸುವರ್ಣಾಭಕುಚೋಜ್ಜ್ವಲಾಂ ।
ಪಾಟೀರಸಾರಕಸ್ತೂರೀಚಂದ್ರಚಂದನಚರ್ಚಿತಾಂ ॥೩೩॥

ನವರತ್ನಗಳಿಂದ ಪ್ರಕಾಶಿಸುವ ಹಾರವು ದೇವಿಯ ವಕ್ಷೋಭಾಗವನ್ನು ಅಲಂಕರಿಸುತ್ತಿರುವುದು. ದೇವಿಯು ರತ್ನಮಯವಾದ ಪುಷ್ಪಗಳ ಗೊಂಚಲುಗಳನ್ನೇ ತನ್ನ ಜಡೆಗೆ ಸೇರಿಸಿ ಹೆಣೆದುಕೊಂಡಿರುವಳು. ಅತಿಶಯವಾದ ಪರಾಗದಿಂದ ತುಂಬಿ ಸುಗಂಧಮಯವಾಗಿರುವ ತಾಳೆಯ ಹೂವನ್ನು ತಾನು ಮುಡಿದಿರುವಳು. ಅಲ್ಲದೆ ಅದೇ ತಾಳೇಹೂವಿನ ಸುವಾಸನೆಯಿಂದ ಕೂಡಿದ್ದಾಗಿ ದೇವಿಯ ಶರೀರವೆಲ್ಲಾ ಶೀತಲಮಯವಾಗಿ ತೋರುತ್ತಿರುವುದು. ||೨೯-೩೦||

ತ್ರಿವಳಿಯಿಂದ ಕೂಡಿ ತೆಳುವಾಗಿರುವ ಸೊಂಟದಿಂದ ದೇವಿಯು ಕೃಶಾಂಗಿಯಾಗಿ ಕಾಣುತ್ತಿರುವಳು. ನಕ್ಷತ್ರಗಳಂತೆ ಹೊಳೆಯುತ್ತಾ ದುಂಡಾಗಿರುವ ದಿವ್ಯ ಮುತ್ತುಗಳಿಂದ ಶೋಭಿಸುವ ಹಾರವನ್ನು ಹಾಕಿಕೊಂಡಿರುವಳು. ದೇವಿಯ ಹಾರದಲ್ಲಿರುವ ದಿವ್ಯರತ್ನಗಳ ಕಾಂತಿಯು ಸಕಲ ದಿಕ್ಕುಗಳಿಗೂ ಹರಡಿ ದಿಕ್ಕುಗಳನ್ನೆಲ್ಲಾ ಬೆಳಗಿಸಿರುವುದು. ರತ್ನಹಾರಗಳಲ್ಲಿ ನವರತ್ನಗಳ ಸಮೂಹಗಳು ಅತಿಶಯವಾಗಿ ಶೋಭಿಸುತ್ತಿರುವುವು. ||೩೧-೩೨||

ಮದ್ದಾನೆಯ ಕುಂಭಸ್ಥಲದಂತೆ ಶುಭ್ರವರ್ಣದಿಂದ ಪ್ರಕಾಶಿಸುವ ಸ್ತನದ್ವಯಗಳಿಂದಲೂ, ಆ ಭಾಗದಲ್ಲಿ ವಿಶೇಷವಾಗಿ ಬಳಿದುಕೊಂಡಿರುವ ಶ್ರೀಗಂಧ, ಚಂದನ

ಪಟವಾಸಾಗರುಭವತೈಲಗಂಧೈಕಭಾಸುರಾಂ ।
ನಿಚೋಲರತ್ನಪರ್ಯಂತಮುಕ್ತಾಜಾಲಲಸತ್ಕುಚಾಂ ॥೩೪॥

ತ್ರಿವಲೀಲಲಿತೋದಾರಸುನಾಭ್ಯುದರಶೋಭಿತಾಂ ।
ಮೃಣಾಲನಾಲಸುಭಗರತ್ನಬಾಹುದ್ವಯಾಂಚಿತಾಂ ॥೩೫॥

ನಾನಾದಲಚಿತಾನೇಕಬಾಹುಭೂಷಣಭೂಷಿತಾಂ ।
ನಾಗಬಂಧಫಣಾರತ್ನಲೋಲಿತಾಪಾರಮೌಕ್ತಿಕಾಂ ॥೩೬॥

ವಂಕಿಕಾಫಲ್ಲಿಕಾಭ್ರಾಜದ್ರತ್ನಪಂಕಜಶೋಭಿತಾಂ ।
ಮಣಿಮಾಣಿಕ್ಯಖಚಿತಹಸ್ತಕಂಕಣಶೋಭಿತಾಂ ॥೩೭॥

ರತ್ನಾಂಗುಲೀಯವಿಲಸನ್ನಖಪಂಕ್ತಿವಿರಾಜಿತಾಂ ।
ಮಹಾಹೀರಾಚ್ಛಫಲಕಾಂಗುಷ್ಠವೇಷ್ಟನವೇಷ್ಟಿತಾಂ ॥೩೮॥

---

ಮುಂತಾದ ಸುವಾಸನಾದ್ರವ್ಯಗಳಿಂದಲೂ, ಅಗರುವೇ ಮೊದಲಾದ ಸುವಾಸನೆಯ ತೈಲಗಳಿಂದ ನೆನೆಸಲ್ಪಟ್ಟ ಅಂಗವಸ್ತ್ರದಿಂದಲೂ, ಸುತ್ತಲೂ ಮುತ್ತುಗಳನ್ನು ಜೋಡಿಸಿ ಹೊಲೆದಿರುವ ಕಂಚುಕದಿಂದ ವಿರಾಜಿಸುವ ಕುಚದ್ವಯಗಳಿಂದಲೂ, ದೇವಿಯು ವಿರಾಜಿಸುತ್ತಿರುವಳು. ॥೩೩-೩೪॥

ದೇವಿಯ ನಾಭೀಪ್ರದೇಶವು ತ್ರಿವಲಿಯಿಂದ ಕೂಡಿದ ಉದರಪ್ರದೇಶದಿಂದ ಮನೋಹರವಾಗಿ ಕಂಡುಬರುತ್ತಿರುವುದು. ತಾವರೆಯ ದಂಟಿನಂತೆ ಸುಂದರವಾಗಿ ಹೊಳೆಯುವ ಎರಡು ಬಾಹುಗಳುಳ್ಳವಳಾಗಿಯೂ, ಆ ಬಾಹುಗಳಲ್ಲಿ ದಳದಳವಾಗಿ ಕೆತ್ತಿ ಮಾಡಿರುವ ರತ್ನಾಭರಣಗಳನ್ನು ಧರಿಸಿದವಳಾಗಿಯೂ, ಮತ್ತು ತೋಳಿನಮೇಲೆ ನಾಗಮಣಿಗಳಿಂದ ನಿರ್ಮಿತವಾಗಿರುವ ಮುತ್ತಿನ ನಾಗಮುರಿಗೆಯನ್ನು ಧರಿಸಿರುವವಳಾಗಿಯೂ ದೇವಿಯು ಪ್ರಕಾಶಿಸುತ್ತಿರುವಳು. ॥೩೫-೩೬॥

ಅಗಲವಾದ ವಂಕಿಯೆಂಬ ಒಡವೆಯ ಮೇಲೆ ರತ್ನಮಯವಾದ ಕಮಲವು ಶೋಭಿಸುತ್ತಿರುವುದು. ಇಂತಹ ವಂಕಿಯಿಂದಲೂ, ಮುತ್ತು, ರತ್ನ, ಇವುಗಳಿಂದ ಚಿತ್ರಿತವಾದ ಕೈಬಳೆಗಳಿಂದಲೂ, ರತ್ನಮಯವಾದ ಉಂಗುರಗಳಿಂದಲೂ ದೇವಿಯ ಹಸ್ತಗಳು ಶೋಭಿಸುತ್ತಿರುವುವು. ಮತ್ತು ಇವುಗಳ ಕಾಂತಿಯಿಂದ ದೇವಿಯ ನಖ

ತದಂಗುಷ್ಠ ಶಿರೋತ್ತುಂಗಚಲನಾತ್ಕಾಂತದಿಕ್ತಟಾಂ ।
ಸುರತ್ನ ಕಾಂಚೀಖಚಿತನವರತ್ನ ಪ್ರಭೋತ್ಕಟಾಂ ॥೩೯॥

ತದಧಸ್ತಾಲ್ಲಲತ್ಕ್ಷುದ್ರಘಂಟಾರಣಿತಸುಂದರಾಂ ।
ದಾಡಿಮೀಫುಲ್ಲಕುಸುಮಕಾಂತಿರಂಜಿತಚೇಲಿಕಾಂ ॥೪೦॥

ರತ್ನ ಪರ್ಯಂತಸಾರಾಚ್ಛಧಾರಾಪ್ಲುಷ್ಟಕುಚೋತ್ತರಾಂ ।
ಮಣಿಮಂಜೀರಶಿಂಜಾನಲಗ್ನಪಾದಾಂಬುಜದ್ವಯಾಂ ॥೪೧॥

ಪದಪಾಥೋಜಕಾಂಗುಷ್ಠವೇಷ್ಟನಾಗ್ರೋತ್ಥಗುಚ್ಛಕಾಂ ।
ಪಾದಾಂಗುಲೀಯಭೂಷಾಭಿರಾಲಕ್ತಾಂಕಿತಪದ್ದ್ವಯಾಂ ॥೪೨॥

ಪಂಕ್ತಿಯು ಇನ್ನೂ ಅತಿಶಯವಾಗಿ ಶೋಭಿಸುತ್ತಿರುವುದು. ಇದೂ ಅಲ್ಲದೆ ಅಗಲವಾಗಿಯೂ, ದಪ್ಪವಾಗಿಯೂ ಇರುವ ಹೀರಮಣಿಯಿಂದ ಕೂಡಿರುವ ಮುದ್ರೆಯುಂಗುರವೊಂದನ್ನು ದೇವಿಯು ಧರಿಸಿಕೊಂಡಿರುವಳು. ||೩೭-೩೮||

ದೇವಿಯು ರತ್ನಾಭರಣವಿಶಿಷ್ಟವಾದ ತನ್ನ ಅಂಗುಷ್ಠವನ್ನು ಚಲಿಸುವುದರಿಂದ ದಿಕ್ಕುಗಳೆಲ್ಲವೂ ಕಾಂತಿಮಯವಾಗುತ್ತಿರುವುವು. ನವರತ್ನಭರಿತವಾದ ದೇವಿಯ ಒಡ್ಯಾಣವು ನವರತ್ನಗಳ ಕಾಂತಿಯನ್ನು ಸುತ್ತಲೂ ಎರಚುವಂತಿರುವುದು. ಒಡ್ಯಾಣದ ಕೆಳಭಾಗದಲ್ಲಿ ಧ್ವನಿಮಾಡುತ್ತಿರುವ ಕಿರುಗಂಟೆಗಳ ಧ್ವನಿಯಿಂದ ದಿಕ್ತಟವೆಲ್ಲವೂ ನಾದಮಯವಾಗಿರುವುದು. ದೇವಿಯು ದಾಳಿಂಬದ ಹೂವಿನಂತೆ ಕಾಂತಿಮಯವಾಗಿರುವ ಸೀರೆಯನ್ನು ಧರಿಸಿರುವಳು. ||೩೯-೪೦||

ದೇವಿಯ ಸ್ತನಪ್ರದೇಶದ ಸುತ್ತಲೂ ರತ್ನಗಳ ಮಾಲೆಯು ತನ್ನ ಕಾಂತಿಯನ್ನು ಧಾರಾಕಾರವಾಗಿ ಎರಚುತ್ತಿರುವುದು. ರತ್ನಗಳ ಕಿರುಗೆಜ್ಜೆಗಳಿಂದ ಧ್ವನಿಗೈಯ್ಯುತ್ತಿರುವ ಪಾದಾಭರಣಗಳು ದೇವಿಯ ಎರಡು ಕಾಲುಗಳನ್ನೂ ಅಲಂಕರಿಸುತ್ತಿರುವುವು. ಪಾದಕಮಲದ ಅಂಗುಷ್ಠಭಾಗದಲ್ಲಿ ರತ್ನಮಯವಾದ ಪಿಲ್ಲಿ (ಆಭರಣ ವಿಶೇಷ) ಗಳ ಕಾಂತಿಯಿಂದಲೂ ಅರಗಿನರಸದ ಕೆಂಪಿನಿಂದಲೂ, ದೇವಿಯ ಪಾದದ್ವಯವು ಬಹು ಸುಂದರವಾಗಿ ವಿರಾಜಿಸುತ್ತಿರುವುವು." ||೪೧-೪೨||

ಬ್ರಹ್ಮೇಂದ್ರವಿಷ್ಣುಜನನೀಂ ಮಮಾಂಕಘನವಿದ್ಯುತಂ ।
ಏತಾದೃಶೀಂ ತ್ವಾಂ ಧ್ಯಾಯಂತ್ಸ ನಗರಾಟ್ ಸ್ಥಿರಮಾನಸಃ ॥೪೩॥

ಉಮಾಸಹಾಯಂ ಮಾಮೇವಂ ಧ್ಯಾಯನ್ನಾಸ್ತೇ ಸದಾ ಮುದಾ ।
ಸ್ವಹೃದುತ್ಫುಲ್ಲಪಾಥೋಜವಿಕಾಸನರವಿಂ ಶಿವಂ ॥೪೪॥

ಬಹೂನ್ ವರ್ಷಗಣಾನ್ ದೇವಿ ಕೈಲಾಸಧರಣೀಧರಃ ।
ನಿದಾಘೇ ಪಂಚವಹ್ನಿಸ್ಥೋ ವರ್ಷಾಸು ಗಗನಾಶ್ರಯಃ ॥೪೫॥

ಹೇಮಂತೇ ಜಲಶಾಯೀ ಚ ಕಂದಮೂಲಫಲಾಶನಃ ।
ಪರ್ಣಾಶನೋ ಯುಗಂ ಸಾಗ್ರಂ ಯುಗಂ ಕಂದಾಶನೋಽಭವತ್ ॥೪೬॥

ಯುಗಂ ಚ ವಾಯುಭಕ್ಷಸ್ಸ್ಯಾದ್ವಾತಾಶನ ಇವ ಸ್ಥಿತಃ ।
ಮಮ ಲಿಂಗಾರ್ಚನಪರೋ ಮೌಲಿರುದ್ರಾಕ್ಷಭೂಷಣಃ ॥೪೭॥

ದೇವಿಯೇ, ಹೀಗೆ ಕೈಲಾಸಪರ್ವತರಾಜನು ನನ್ನ ತೊಡೆಯಮೇಲೆ ಕುಳಿತಿರುವ ಮತ್ತು ಬ್ರಹ್ಮೇಂದ್ರವಿಷ್ಣುಗಳಿಗೆ ತಾಯಿಯಾಗಿರುವ ನಿನ್ನನ್ನು ಸ್ಥಿರ ಮನಸ್ಸಿನಿಂದ ಧ್ಯಾನಮಾಡಿದನು. ॥೪೩॥

ಮತ್ತೂ, ಆ ಕೈಲಾಸರಾಜನ ಹೃದಯಕಮಲವನ್ನು ವಿಕಾಸಗೊಳಿಸುವ ಸೂರ್ಯನಂತಿರುವ ನನ್ನ ಆಕಾರವನ್ನು ಸರ್ವದಾ ಅನುಸಂಧಾನಮಾಡುತ್ತಾ, ಉಮಾಪತಿಯಾದ ನನ್ನನ್ನೇ ಮೇಲೆ ಹೇಳಿದಂತೆ ಧ್ಯಾನಮಾಡುವನು. ॥೪೪॥

ದೇವಿಯೇ, ಕೈಲಾಸಪರ್ವತವು ಹಾಗೆ ಬಹುವರ್ಷಗಳು ತಪಸ್ಸನ್ನಾಚರಿಸಿದನು. ಬೇಸಗೆಯಲ್ಲಿ ಪಂಚಾಗ್ನಿಮಧ್ಯದಲ್ಲಿಯೂ, ಮಳೆಗಾಲದಲ್ಲಿ ಬಯಲಿನಲ್ಲಿಯೂ,॥೪೫॥

ಹಿಮಂತಋತುವಿನಲ್ಲಿ ನೀರಿನ ಮಧ್ಯದಲ್ಲಿಯೂ ನಿಂತು, ಉಗ್ರ ತಪಸ್ಸು ಮಾಡುವನು. ಕಂದಮೂಲಫಲಗಳನ್ನೇ ಭಕ್ಷಿಸುವವನಾಗಿ, ಒಂದು ಯುಗ ಪರ್ಯಂತ ಪತ್ರಭಕ್ಷಕನಾಗಿಯೂ, ಒಂದು ಯುಗ ಗೆಡ್ಡೆಗೆಣಸುಗಳನ್ನು ತಿನ್ನುವವ ನಾಗಿಯೂ ತಪಸ್ಸನ್ನು ಮುಂದುವರಿಸಿದನು. ॥೪೬॥

ಒಂದು ಯುಗಪರ್ಯಂತ ವಾಯುಭಕ್ಷಕನಾಗಿಯೇ ಇದ್ದು ಸರ್ಪರಾಜನಂತೆ ಕಂಡುಬಂದನು. ತಪಸ್ಸುಮಾಡುವಾಗ, ಶಿರಸ್ಸಿನಲ್ಲಿ ರುದ್ರಾಕ್ಷಿಯ ಕಿರೀಟವನ್ನೂ ಧರಿಸಿ, ಲಿಂಗಾರ್ಚನೆಯಲ್ಲಿ ಆಸಕ್ತನಾಗಿರುವನು. ॥೪೭॥

ಪಂಚಾಕ್ಷರಜಪಾಸಕ್ತಃ ಪಂಚಾಸ್ಯಧ್ಯಾನಪೂರ್ವಕಂ ।
ರುದ್ರಾಧ್ಯಾಯಜಪಾಸಕ್ತೋ ರುದ್ರವಿನ್ಯಸ್ತಮಾನಸಃ ॥೪೮॥

ಏವಂ ಯುಗಾನಾಂ ದಶಕಂ ತಪ್ಯಮಾನೋ ನಗೇಶ್ವರಃ ।
ಉಗ್ರಾರ್ಚನರತೋಽಪ್ಯುಗ್ರಂ ತಪಶ್ಚಕ್ರೇ ನಿರರ್ಗಲಂ ॥೪೯॥

ಸ ತ್ವನುಗ್ರಮನಾ ದೇವಿ ದೇವಾನಾಂ ವಿಸ್ಮಯಾವಹಂ ।
ಮುನೀನಾಂ ಚ ಗಣೇಂದ್ರಾಣಾಂ ಮಾಮಯಂ ತೋಷಯನ್ ಗಿರಿಃ ॥೫೦॥

ಸ ಪಿಧಾಯೇಂದ್ರಿಯಗ್ರಾಮಂ ನಾಸಾಗ್ರನ್ಯಸ್ತಲೋಚನಃ ।
ಯಮಾದಿನಿಯಮೋಪೇತಃ ಪ್ರಾಣಾಯಾಮಹತಾಶುಭಃ ॥೫೧॥

ಪ್ರಣವಪ್ರವಣೋ ನಿತ್ಯಂ ಯೋಗಂ ಯುಂಜನ್ಮದಾಶ್ರಯಃ ।
ಅಷ್ಟಾಂಗಯೋಗನಿರತಶ್ಚಾಷ್ಟಮೂರ್ತೇಃ ಪದಾಶ್ರಯಃ ॥೫೨॥

ಉಟಜೈಕನಿಕೇತಶ್ಚ ಕೂಟಸ್ಥೋ ವಿಕಟೋಜ್ಜ್ವಲಃ
ಧೂರ್ಜಟಿಪ್ರೇಮಸದನಂ ಮಾನಸಂ ಕೃತವಾನ್ನಗಃ ॥೫೩॥

---

ಸರ್ವದಾ ಶಿವಪಂಚಾಕ್ಷರೀಮಂತ್ರವನ್ನೇ ಜಪಿಸುತ್ತಾ, ಪಂಚಮುಖಿಯಾದ ಶಂಕರನನ್ನು ಧ್ಯಾನಿಸುವನು. ರುದ್ರದೇವನನ್ನೇ ಮನಸ್ಸಿನಲ್ಲಿ ಅನುಸಂಧಾನ ಮಾಡುತ್ತಾ ರುದ್ರಾಧ್ಯಾಯವನ್ನೇ ಜಪಮಾಡುವನು. ಇದೇ ರೀತಿ ಹತ್ತು ಯುಗ ಪರ್ಯಂತವಾಗಿ ಅವಿಚ್ಛಿನ್ನವಾಗಿ ಉಗ್ರ ತಪಸ್ಸನ್ನಾಚರಿಸಿದನು. ||೪೮-೪೯||

ಅಷ್ಟಾದರೂ ಅವನ ಮನಸ್ಸು ಶಾಂತಮಯವಾಗಿದ್ದಿತು. ಇವನ ಚಿತ್ತಶುದ್ಧಿಗೆ ದೇವತೆಗಳೂ, ಮಹರ್ಷಿಗಳೂ, ಗಣನಾಯಕರೂ, ಆಶ್ಚರ್ಯಪಟ್ಟರು. ನನಗೆ ಬಹಳ ಸಂತೋಷವುಂಟಾಯಿತು. ||೫೦||

ಇಂದ್ರಿಯ ವ್ಯಾಪಾರಗಳನ್ನು ತಡೆದು ಮೂಗಿನ ತುದಿಯಲ್ಲಿ ದೃಷ್ಟಿಯನ್ನಿಟ್ಟು ಯಮನಿಯಮಾದಿಗಳಿಂದ ಪ್ರಾಣಾಯಾಮ ಮಾಡುತ್ತಾ, ||೫೧||

ಪ್ರಣವಮಂತ್ರಪುರಶ್ಚರಣೆಯಿಂದ, ಅಷ್ಟಮೂರ್ತಿಯಾದ ನನ್ನನ್ನೇ ಅಷ್ಟಾಂಗ ಯೋಗಗಳಿಂದ ಸೇವಿಸುವವನಾದನು. ||೫೨||

ತಪಸ್ಸು ಮಾಡುವಷ್ಟು ಕಾಲದಲ್ಲೆಲ್ಲಾ ಪರ್ಣಶಾಲೆಯಲ್ಲಿಯೇ ವಾಸಮಾಡಿ

ವಲ್ಮೀಕೇನಾವೃತತನುರ್ಗಿರಿರಪ್ಯತಿಕರ್ಶಿತಃ ।
ತಪಸ್ತೈಕರಾಶಿರ್ವಾರಾಶಿರಿವ ಮಾನಸಪಂಕಜಂ ॥೫೪॥

ಹೃದುತ್ಫುಲ್ಲಮಹಾಂಭೋಜಮಧ್ಯಗಂ ಮಾಮನುಸ್ಮರನ್ ।
ಧ್ಯಾನಧಾರಾನವಿಚ್ಛಿನ್ನಾಂ ಕದಾಚಿನ್ನಾಕರೋದಯಂ ॥೫೫॥

ಶಾಖಾಗ್ರಾತ್ಪತಿತೈಃ ಪ್ರವಾತಚಲನಾದಾಲೂನವೃಂತೈಃ ಫಲೈಃ
ಪತ್ರೈಃ ಕೇಸರಕರ್ಣಿಕಾದಿಭಿರುಮೋ ಕುರ್ವನ್ ಸ್ವವೃತ್ತಿಂ ನಗಃ ।
ವರ್ಷಾಣಾಮಯುತಂ ಚಚಾರ ನಿಯತಂ ಭೂಯಸ್ತಪೋಮೋದುರಂ ।
ಕುರ್ವನ್ ಪ್ರಾಣವಿದಾರಣಂ ವನಗವಾಂ ರೋಮಂಥಫೇನಾಶನಃ ॥೫೬॥

ದನು. ಗಿರಿಶಿಖರದಲ್ಲಿ ವಾಸಿಸುತ್ತಾ ಕಾಂತಿಯಿಂದ ಶೋಭಿಸುವವನಾಗಿ, ತನ್ನ ಮನೋದೃಢತೆಯಿಂದ ಪರಶಿವನ ಪ್ರೀತಿಯನ್ನು ಸಂಪಾದಿಸಿದನು. ॥೫೩॥

ತಪಸ್ಸಿನ ನಿಶ್ಚಲತೆಯಲ್ಲಿ ಆ ಗಿರಿರಾಜನ ಮೇಲೆ ಹುತ್ತವು ಬೆಳೆದುಕೊಂಡಿತು. ಕ್ಷೀಣಶರೀರಿಯಾದನು. ಆತನು ವಿಕಸಿತವಾದ ಮನಸ್ಸೆಂಬ ಕಮಲದಿಂದ ಕೂಡಿರುವ ತಪಸ್ಸೆಂಬ ಜಲರಾಶಿಯುಳ್ಳ ದೊಡ್ಡ ಸಮುದ್ರದಂತೆ ಕಂಡುಬರುತ್ತಿದ್ದನು. ॥೫೪॥

ಸರ್ವದಾ ತನ್ನ ಹೃದಯಕಮಲದಲ್ಲಿ ನನ್ನನ್ನೇ ಧರಿಸಿದ್ದನು. ನನ್ನ ವಿಷಯಕವಾದ ಧ್ಯಾನಕ್ಕೆ ಎಂದೂ ಆತನಿಗೆ ವಿಘ್ನವುಂಟಾಗಲಿಲ್ಲ. ॥೫೫॥

ಮರಗಳ ತುದಿಯಲ್ಲಿ ಬೆಳೆದು ಗಾಳಿಯಿಂದ ಕೆಳಗೆ ಉದುರಿರುವ ಹಣ್ಣುಗಳಿಂದ ತನ್ನ ಜೀವನವನ್ನು ಸಾಗಿಸಿದನು. ಅಲ್ಲದೆ ಉದುರಿದ ಎಲೆಗಳು, ಹೂವುಗಳು, ಅವುಗಳ ಕೇಸರಗಳು ಇವನ್ನು ತಿಂದು ಕೆಲವು ಕಾಲ ತಳ್ಳಿದನು. ಹಾಗೆಯೇ ಹತ್ತುಸಾವಿರ ವರ್ಷಪರ್ಯಂತ ತಪಸ್ಸನ್ನಾಚರಿಸಿ, ಕೊನೆಕೊನೆಗೆ ಹಸುಗಳು ಮೆಲುಕು ಹಾಕುವುದರಿಂದ ಹುಟ್ಟಿದ ನೊರೆಯನ್ನೇ ಆಹಾರವನ್ನಾಗಿ ಮಾಡಿಕೊಂಡು ನನ್ನನ್ನು ತೃಪ್ತಿಪಡಿಸಿದನು. ॥೫೬॥

ನನ್ನ ಭಕ್ತನಾದವನು ಸಮುದ್ರವನ್ನೇ ಆಪೋಶನೋದಕವನ್ನಾಗಿ ತಿಳಿದುಕೊಳ್ಳುವನು. ಸೂರ್ಯನನ್ನು ಒಂದು ಸಣ್ಣ ನಕ್ಷತ್ರದಂತೆ ಭಾವಿಸುವನು. ಮೇರು ಪರ್ವತವನ್ನು ಒಂದು ಮಣ್ಣುಹೆಂಟೆಯಂತೆಯೂ, ಕಲ್ಪವೃಕ್ಷವನ್ನು ಒಂದು

ಮದ್ಭಕ್ತಸ್ತು ಸರಿತ್ಪತಿಂ ಚುಲುಕವತ್ಖದ್ಯೋತವದ್ಭಾಸ್ಕರಂ ।
ಮೇರುಂ ಪಶ್ಯತಿ ಲೋಷ್ಟವಚ್ಛಿವರತಃ ಕಲ್ಪದ್ರುಮಂ ಕಾಷ್ಠವತ್ ।
ಚಿಂತಾರತ್ನಶಿಲಾಮಣಿಂ ಶಕಲವದ್ಭೂಮೇಃ ಪತಿಂ ಭೃತ್ಯವ ।
ತ್ಸಂಸಾರಂ ತೃಣರಾಶಿವತ್ಕಿಮಪರಂ ದೇಹಂ ನಿಜಂ ಭಾರವತ್ ॥೫೭॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸತಪಶ್ಚರ್ಯಾನಾಮ
ಚತುಶ್ಚತ್ವಾರಿಂಶೋಽಧ್ಯಾಯಃ

---

ಕಡ್ಡಿಯಂತೆಯೂ, ಚಿಂತಾಮಣಿಯನ್ನು ಕಲ್ಲಿನ ಚೂರಿನಂತೆಯೂ ಅರಿಯುವನು. ರಾಜನನ್ನು ಸೇವಕನಂತೆಯೂ, ಸಂಸಾರವನ್ನು ಹುಲ್ಲಿನ ರಾಶಿಯಂತೆಯೂ ಭಾವಿಸಿ, ಕೊನೆಗೆ ತನ್ನ ದೇಹವೇ ನಿಷ್ಫಲವಾದದ್ದೆಂದೂ, ತಿಳಿದು ದೇಹಾಭಿಮಾನವನ್ನು ತ್ಯಜಿಸಿ ನನ್ನನ್ನು ಮೊರೆಹೊಗುವನು. ನನ್ನ ಭಕ್ತನಲ್ಲಿ ಈ ವಿಧವಾದ ಶಕ್ತಿಯೂ, ಜಿತೇಂದ್ರಿಯತ್ವವೂ ಇರುವುದೆಂದು ಪರಮೇಶ್ವರನು ತನ್ನ ಪತ್ನಿಯಾದ ಗೌರೀದೇವಿಗೆ ಹೇಳಿದನು. ॥೫೭॥

ಶ್ರೀ ಶಿವರಹಸ್ಯದ ಪ್ರಥಮಾಂಶದಲ್ಲಿ ಕೈಲಾಸತಪಶ್ಚರ್ಯೆಯನ್ನು ತಿಳಿಸುವ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಶ್ರೀಶಿವರಹಸ್ಯೇ

## ಪಂಚಚತ್ವಾರಿಂಶೋಽಧ್ಯಾಯಃ

### ಕೈಲಾಸವರಪ್ರದಾನಂ

|| ಈಶ್ವರ ಉವಾಚ ||

**ತಸ್ಯ ತಂ ಭಾವಮಾಲೋಕ್ಯ ತ್ವಯಾಹಂ ಪ್ರೇರಿತಸ್ತದಾ ।**
**ಕಾಲೇನ ಬಹುನಾ ದೇವಿ ತಸ್ಯಾಹಂ ನಿಕಟಂ ಗತಃ ||೧||**

**ಶಾರದಾಭ್ರಘನಾಕಾರವೃಷಭೋಪರಿ ಕಲ್ಪಿತೇ ।**
**ರತ್ನಸಿಂಹಾಸನೇ ಭಾಸ್ವತ್ಪ್ರಭಾಮಂಡಲಮಂಡಿತೇ ||೨||**

**ರತ್ನಪಲ್ಯಾಣವಿಲಸನ್ಮುಕ್ತಾನಾಸಾವಿರಾಜಿತೇ ।**
**ಸುಶೃಂಗಮುಕುಟೋದ್ಭಾಸಿಕರ್ಣಾಲಂಬಿತಚಾಮರೇ ||೩||**

## ಶ್ರೀಶಿವರಹಸ್ಯದಲ್ಲಿ ನಲವತ್ತೈದನೆಯ ಅಧ್ಯಾಯ

ಪರಮೇಶ್ವರನು ಮತ್ತೆ ದೇವಿಯನ್ನು ಕುರಿತು ಹೀಗೆಂದನು. "ದೇವಿಯೇ ಅಷ್ಟು ಸ್ಥಿರಬುದ್ಧಿಯಿಂದ ತಪಸ್ಸನ್ನಾಚರಿಸಿದ ಗಿರಿರಾಜನಿಗೆ ಮೆಚ್ಚಿ, ನಿನ್ನಿಂದಲೇ ಪ್ರೇರಿತನಾಗಿ ನಾನು ಬಹುಕಾಲದ ಮೇಲೆ ಅವನು ತಪಸ್ಸುಮಾಡುತ್ತಿರುವ ಪ್ರದೇಶಕ್ಕೆ ಹೋದೆನು. ||೧||

ಶರತ್ಕಾಲದ ಮೇಘದಂತೆ ಶುಭ್ರವಾಗಿರುವ ಎತ್ತಿನಮೇಲೆ, ಸೂರ್ಯಮಂಡಲದ ಕಾಂತಿಯಿಂದ ಹೊಳೆಯುವ ರತ್ನಾಸ್ತರಣದಲ್ಲಿ ಕುಳಿತು ಹೋದೆನು. ಆ ವೃಷಭದಮೇಲಾದರೋ ರತ್ನಮಯವಾದ ಆಸನವನ್ನು ಹಾಕಿದ್ದಿತು. ಮುತ್ತಿನ ಸರವು ಮೂಗಿನಮೇಲೆ ನೇತಾಡುತ್ತಿದ್ದಿತು. ಕೊಂಬುಗಳಿಗೆ ದಿವ್ಯವಾದ ಕಿರೀಟಗಳನ್ನು ಧರಿಸಿದ್ದಿತು. ಎರಡು ಕಿವಿಗಳಮೇಲೂ ಎರಡು ಚಾಮರಗಳು ನೇತಾಡುತ್ತಿದ್ದುವು. ||೨-೩||

ಉದ್ಯದ್ದ್ಯುಮಣಿಸಂಕಾಶನೇತ್ರಕಾಂತಿನಿರಾಜಿತಂ ।
ಮಣಿಘಂಟಾಝಣತ್ಕಾರರಂಜಿತಗ್ರೀವಯಾ ಮುದೇ ॥೪॥

ಧವಲೇ ಶರ್ವರೀನಾಥಕಾಂತಿಘರ್ಷಿತಕೇತುಕೇ ।
ತ್ವಯಾಹಂ ವೃಷಭೇ ದೇವಿ ಸಂಸ್ಥಿತಃ ಕಾಮಗೇ ಶಿವೇ ॥೫॥

ತಸ್ಯೈವ ನಿಕಟಂ ಪ್ರಾಪ್ತೋ ಗಣಬೃಂದನಿಷೇವಿತಃ ।
ನಂದಿಪ್ರೋತ್ಸಾರಿತಸುರೋ ಮುನಿಬೃಂದಸುಸಂಸ್ತುತಃ ॥೬॥

ತುಹುಂಡಧೃತರತ್ನಾಚ್ಛಛತ್ರಾವೃತಮಹೋಜ್ಜ್ವಲಃ ।
ಸೋಮನಂದಿತುಹುಂಡಾಭ್ಯಾಂ ಮಣಿದಂಡೈಶ್ಚ ಚಾಮರೈಃ ॥೭॥

ವೀಜಿತೋ ವ್ಯಜನೋದ್ಯದ್ಭಾಭಾಂಡಕೇನಾಥ ಚಂಡಿನಾ ।
ಶೋಭಿತಸ್ಸೇವಿತೋ ವಾತೈಸ್ಸುಗಂಧತರಶೀತಕೈಃ ॥೮॥

---

ವೃಷಭವು ಉದಯಿಸುವ ಸೂರ್ಯನಂತೆ ಹೊಳೆಯುತ್ತಿರುವ ನೇತ್ರಕಾಂತಿಯುಳ್ಳದ್ದು. ಹಾಗೆಯೇ ಝಣಝಣತ್ಕಾರಮಾಡುವ ರತ್ನಗಂಟೆಗಳು ವೃಷಭದ ಕತ್ತಿನಲ್ಲಿ ಶೋಭಿಸುತ್ತಿದ್ದವು. ॥೪॥

ಹಾಗೆ ಚಂದ್ರನ ಚಂದ್ರಿಕೆಯಂತೆ ಶುಭ್ರವಾಗಿ ಹೊಳೆಯುತ್ತಿದ್ದ ಧ್ವಜದಿಂದ ಕೂಡಿದ ವೃಷಭದ ಮೇಲೆ, ದೇವಿಯೇ; ನಿನ್ನೊಡನೆ ನಾನು ಕುಳಿತಿದ್ದೆನು. ॥೫॥

ಹೀಗೆ ವೃಷಭಾರೂಢನಾಗಿ ಗಣಬೃಂದದೊಡನೆ ನಾನು ಕೈಲಾಸಗಿರಿಯ ಸಮೀಪವನ್ನು ಸೇರಿದೆನು. ಆಗ ನಂದಿಯು ದೇವತೆಗಳೊಡನೆ ನನ್ನನ್ನು ಹಿಂಬಾಲಿಸಿದನು. ಋಷಿಗಳ ತಂಡವು ನನ್ನನ್ನು ಬಗೆಬಗೆಯಾಗಿ ಹೊಗಳುತ್ತಿದ್ದಿತು. ॥೬॥

ತುಹುಂಡನು ರತ್ನಮಯವಾದ ಛತ್ರಿಯನ್ನು ಹಿಡಿದು ನಿಂತಿದ್ದನು. ಸೋಮನಂದಿ, ತುಹುಂಡ, ಇವರಿಬ್ಬರೂ ರತ್ನಮಯವಾದ ದಂಡಗಳುಳ್ಳ ಚಾಮರಗಳನ್ನು ಬೀಸುತ್ತಿದ್ದರು. ॥೭॥

ಚಂಡೀಶ್ವರನು ಬೀಸಣಿಗೆಯಿಂದ ವೇಗವಾಗಿ ಗಾಳಿಯನ್ನು ಬೀಸುತ್ತಿದ್ದನು. ಆಗ ಬರುತ್ತಿದ್ದ ಗಾಳಿಯು ಶೀತಲವಾಗಿಯೂ, ಸುಗಂಧಮಯವಾಗಿಯೂ, ನನ್ನನ್ನು ಸೇವಿಸುತ್ತಿದ್ದಿತು. ॥೮॥

ಪತಾಕಾಪ್ರೋಜ್ವಲಾಕಾರಬಾಹುಭಿರ್ಮೇ ಗಣೇಶ್ವರಃ ।
ಬಾಣಬಾಣಾಸನಧರೋ ಬಾಣೋ ಬಾಹುಸಹಸ್ರಕೈಃ ॥೯॥

ಶೋಭಿತಃ ಪರಿತೋ ದೇವಿ ಕಲಾಪಧರಮುಂಡಿನಾ ।
ಭೃಂಗಿತಾಂಡವಸನ್ನಾಹದರ್ಶನಾನಂದಿತಾಂತರಃ ॥೧೦॥

ತಂಡುಡಿಂಡಿಮನಾದೇನ ಡಂಬರಾಂಬರದಿಙ್ಮುಖಃ ।
ಸಾನಂದಶಂಖಧವಲರವಾಸ್ಫೋಟಿತದಿಕ್ತಟಃ ॥೧೧॥

ಚಂಡೀಶಮದ್ದಲೋದ್ದಾಮಧ್ವನಿಧ್ವನಿತವ್ಯೋಮಭೂಃ ।
ಹೇರಂಬಬೃಂಹಿತಾಪಾರಘನಘೋಷೋರುಸುಂದರಃ ॥೧೨॥

ಷಡ್ವಕ್ತ್ರಕಾಹಲಾಪಾರನಾದಾಪೂರಿತದಿಙ್ಮುಖಃ ।
ರತ್ನಪಾದುಕಮೌಲಿಸ್ಥಭೈರವೇಣಾನುಮೋದಿತಃ ॥೧೩॥

---

ಧನುರ್ಬಾಣಗಳನ್ನೂ, ಪ್ರಕಾಶಮಾನವಾದ ಧ್ವಜಗಳನ್ನೂ ಕೈಯ್ಯಲ್ಲಿ ಹಿಡಿದಿರುವ ಸಹಸ್ರಭುಜಗಳುಳ್ಳ ಬಾಣನು ಗಣಾಧಿಪತಿಯಾಗಿ ನನ್ನ ಜೊತೆಯಲ್ಲಿ ಬರುತ್ತಿದ್ದನು. ॥೯॥

ಅಲ್ಲದೆ ಭೃಂಗಿಯು ನವಿಲುಗರಿಯನ್ನು ಶಿರಸ್ಸಿನಲ್ಲಿ ಧರಿಸಿದವನಾಗಿ ನಾಟ್ಯವಾಡುತ್ತಾ, ಎಲ್ಲರ ಮನಸ್ಸಿಗೂ ಆನಂದವನ್ನುಂಟುಮಾಡುತ್ತಾ ಸುತ್ತಲೂ ಓಡಾಡುತ್ತಿದ್ದನು. ॥೧೦॥

ತಂಡುವು ಡಿಂಡಿಮನಾದದಿಂದ ಸಕಲ ದಿಕ್ಕುಗಳನ್ನೂ ಮೊಳಗಿಸಿದನು. ಅಲ್ಲದೆ ಸಂತೋಷದಿಂದ ಮಧ್ಯೆ ಮಧ್ಯೆ ಊದುವ ಶಂಖಧ್ವನಿಯು ಸಮಸ್ತ ದಿಗಂತದವರೆಗೂ ವ್ಯಾಪಿಸಿದ್ದಾಯಿತು. ॥೧೧॥

ಚಂಡೀಶ್ವರನು ಮದ್ದಲೆಯನ್ನು ಬಾರಿಸುತ್ತಾ ಆ ನಾದದಿಂದ ಸ್ವರ್ಗ ಮತ್ತು ಭೂಲೋಕಗಳನ್ನು ಧ್ವನಿಭರಿತವನ್ನಾಗಿ ಮಾಡಿದನು. ಗಜಾನನನು ತನ್ನ ಬೃಂಹಿತದಿಂದ, ಮೇಘಧ್ವನಿಯಂತೆ ಜನರನ್ನೆಲ್ಲಾ ಆನಂದಗೊಳಿಸಿದನು. ॥೧೨॥

ಷಣ್ಮುಖನು ತನ್ನ ಆರು ಮುಖಗಳಿಂದಲೂ, ತುತ್ತೂರಿಯನ್ನೂದುತ್ತಾ ಆ ಧ್ವನಿಯಿಂದ ಸಕಲ ದಿಕ್ಕುಗಳನ್ನು ತುಂಬಿಸಿದನು. ಭೈರವನು ನನ್ನ ರತ್ನಮಯವಾದ ಪಾದುಕೆಯನ್ನು ಶಿರದಲ್ಲಿ ಹೊತ್ತು ನನ್ನನ್ನೇ ಹಿಂಬಾಲಿಸಿ ಬಂದನು. ॥೧೩॥

ಉಕ್ಷಾಧಸ್ತಲಸಂಚಾರಿಭದ್ರಮೌಲಿಕಪಾದಭೂಃ ।
ನಾರದೋದಾರಮಧುರವೀಣಾಕ್ವಣನಸುಂದರಃ ॥೧೪॥

ದೇವವಂದಿರವಾಪಾರನಮಸಾಂ ಸ್ತುತಿಸುಂದರಃ ।
ಮಣಿಭದ್ರಮಹಾಹೇತಿಪಾಟಿತೈಃ ಪಟಹೈರ್ಯುತಃ ॥೧೫॥

ಲೇಖೋತ್ತಮಮುಖ್ಯೈಸ್ತತ್ರ ಸೇವಿತೋಽಹಂ ತ್ವಯಾಂಬಿಕೇ ।
ಝಲ್ಲರೀವರಕೋದ್ದಾಮರವಾನಂದೇನ ಕೇಶಿನಾ ॥೧೬॥

ಸುಕೇಶಮುಖವಾಯೂತ್ಥಶೃಂಗಧ್ವನಿಯುತಾ ದಿಶಃ ।
ಆನಕೋದ್ದಾಮಜಾರಾವಸುಭದ್ರೇಣ ಪ್ರಕಲ್ಪಿತಃ ॥೧೭॥

ವಿಷ್ಣುಬ್ರಹ್ಮಾಮರೇಂದ್ರೈಶ್ಚ ಸುಕೃತಿಸ್ತುತಿಸಂಸ್ತುತಃ ।
ತಮದ್ರಾಕ್ಷಮಹಂ ದೇವಿ ಧಮನೀಕೃಶವಿಗ್ರಹಂ ॥೧೮॥

ಎತ್ತಿನ ಅಧೋಭಾಗದಲ್ಲಿ ಸಂಚರಿಸುತ್ತಾ ಭದ್ರಮೌಲಿಯು ಕಾಲಿನಿಂದ ನಡೆಯುತ್ತಿರುವನು. ನಾರದಮಹರ್ಷಿಯು ಮಧುರವಾಗಿ ವೀಣೆಯನ್ನು ಬಾರಿಸುತ್ತಾ ನನ್ನನ್ನು ಹಿಂಬಾಲಿಸಿ ಬಂದನು. ॥೧೪॥

ಆ ಕಾಲದಲ್ಲಿ ದೇವತೆಗಳಾದ ಹೊಗಳುಭಟರು ಸುಂದರವಾದ ಸ್ತುತಿಗಳಿಂದ ನಮಶ್ಶಬ್ದಗಳನ್ನು ಘೋಷಿಸುತ್ತಿದ್ದರು. ಮಣಿಭದ್ರರು ತಮ್ಮ ಆಯುಧಗಳಿಂದ ತಮಟೆಗಳನ್ನು ಬಾರಿಸುತ್ತಾ ಧ್ವನಿಗೈಯ್ಯುತ್ತಿದ್ದರು. ॥೧೫॥

ಅಂಬಿಕೆಯೇ, ಶ್ರೇಷ್ಠರಾದ ದೇವತೆಗಳು ಹೀಗೆ ನನ್ನನ್ನು ಸೇವಿಸುತ್ತಾ ಹಿಂಬಾಲಿಸಿದರು. ಕೇಶಿಯೆಂಬ ಗಣಶ್ರೇಷ್ಠನು ಝಲ್ಲರೀವಾದ್ಯವನ್ನು ಬಾರಿಸುತ್ತಾ ಮುಂದುವರಿಯುತ್ತಿದ್ದನು. ॥೧೬॥

ಸುಕೇಶನು ತನ್ನ ಬಾಯಿಂದ ಕೊಂಬನ್ನೂದುತ್ತಾ, ಕೈಯಿಂದ ತಮಟೆಯನ್ನು ಬಾರಿಸುತ್ತಾ, ಅವುಗಳ ಧ್ವನಿಯಿಂದ ಸಕಲ ದಿಕ್ಕುಗಳನ್ನೂ ಮೊಳಗಿಸುತ್ತಿದ್ದನು. ॥೧೭॥

ವಿಷ್ಣು, ಬ್ರಹ್ಮ, ದೇವೇಂದ್ರ, ಇವರೇ ಮೊದಲಾದ ದೇವತೆಗಳಿಂದ ಸ್ತುತಿಸಲ್ಪಡುವವನಾಗಿ, ನಾನು, ತಪಸ್ಸಿನಿಂದ ಕೃಶನಾಗಿರುವ ಶರೀರವುಳ್ಳ ಆ ಕೈಲಾಸಗಿರಿರಾಜನನ್ನು ನೋಡಿದೆನು. ॥೧೮॥

[1]ಮಲ್ಲೋಕೋಽಯಂ ಗಿರಿವರಂ ಕೈಲಾಸಂ ಮುನಿವತ್ ಸ್ಥಿತಂ ।
ಸ್ವತೋಽಪಿ ಧವಲಂ ಚೋನೋ ಭಸ್ಮನಾ ಚಾಪಿ ಪಾಂಡರಂ ॥೧೯॥

ಛಾಯಾಚ್ಛನ್ನಮಹಂ ಮೌಲಿಮಪಿ ಸೂರ್ಯಾಂಶುತಾಪಿತಂ ।
ನೀರಜಾವಲಿಸಂಛನ್ನಸರಃಪೂರಿತಮಪ್ಯಮೋ ॥೨೦॥

ನೀರಸೈಃ ಪಾಂಡುಪತ್ರೈಶ್ಚ ಕೃತಾಹಾರಂ ನಗೋತ್ತಮಂ ।
ದೃಷ್ಟ್ವಾ ಮೇ ಕರುಣಾ ಜಾತಾ ವರೇಣ ಛಂದಿತೋಽಪಿ ಸಃ ॥೨೧॥

ಕಮಲಾಮಲಸಂಫುಲ್ಲಕರೇಣಾಸ್ಪರ್ಶಿ ಸೋ ಮಯಾ ।
ಮತ್ಕರಸ್ಪರ್ಶಮಾತ್ರೇಣ ತದೋತ್ತಸ್ಥೌ ನಗೇಂದ್ರರಾಟ್ ॥೨೨॥

ದೃಷ್ಟ್ವಾ ಮಾಂ ಪ್ರಣತಃ ಪ್ರಹ್ವಃ ಕೃತಾಂಜಲಿರಿದಂ ಜಗೌ ।
ನಯನಸ್ರಾವಿಸಲಿಲೈರ್ನೃತ್ತತಾಲಕರಾರವಃ ॥೨೩॥

---

ದೇವಿಯೇ, ನನಗೆ ಆಶ್ರಯಸ್ಥಾನವಾದ ಈ ಪರ್ವತರಾಜನು ಆಗ ಈರೀತಿಯಾಗಿ ಕಾಣುತ್ತಿದ್ದನು. ಸಾಕ್ಷಾನ್ಮುನೀಶ್ವರನಂತೆ ನಿಶ್ಚಲನಾಗಿ ತಪಸ್ಸು ಮಾಡುತ್ತಾ ಸ್ವಭಾವವಾಗಿಯೇ ಬಿಳುಪಾದ ದೇಹವುಳ್ಳವನಾದರೂ ಭಸ್ಮಲಿಪ್ತಗಾತ್ರನಾಗಿ, ಅದರಿಂದ ಅತಿಶಯವಾದ ಬಿಳುಪನ್ನು ಪಡೆದಿದ್ದನು. ಉಗ್ರತಪಶ್ಚರ್ಯೆಗಾಗಿ ಬಿಸಿಲಿನಲ್ಲಿಯೇ ಕುಳಿತು, ಸೂರ್ಯಕಿರಣದಿಂದ ಅವನ ಶಿರಸ್ಸೆಲ್ಲಾ ಒಣಗಿಹೋಗಿದ್ದಿತು. ಪಕ್ಕದಲ್ಲಿಯೇ ಕಮಲಗಳಿಂದ ಮುಚ್ಚಿದ ಸರೋವರವಿದ್ದರೂ ಅದರಿಂದ ಯಾವ ಪ್ರಯೋಜನವನ್ನೂ ಆತನು ಪಡೆದಿರಲಿಲ್ಲ. ನೀರಸವಾದ ಒಣ ಎಲೆಗಳನ್ನೇ ಆಹಾರವನ್ನಾಗಿ ಮಾಡಿಕೊಂಡಿದ್ದ ಅಂತಹ ಕೈಲಾಸಗಿರಿರಾಜನನ್ನು ನೋಡಿ, ನನಗೆ ಹೆಚ್ಚಿನ ಅಭಿಮಾನವುಂಟಾಯಿತು. ಮತ್ತು ಅವನಿಗೆ ಯಾವ ವರವನ್ನು ಬೇಕಾದರೂ ಕೊಡಲು ಸಿದ್ಧನಾಗಿ ನಿಂತೆನು. ||೧೯-೨೦-೨೧||

ಕಮಲದಂತೆ ಮೃದುವಾಗಿರುವ ನನ್ನ ಕೈಯಿಂದ ಅವನನ್ನು ಸ್ಪರ್ಶಮಾಡಿದೊಡನೆಯೇ ಗಿರಿರಾಜನು ಬಹಿರ್ಮುಖನಾಗಿ ಎದ್ದು ನಿಂತನು. ||೨೨||

ಎದುರಿನಲ್ಲಿ ನಿಂತಿದ್ದ ನನ್ನನ್ನು ನೋಡಿ ಭಕ್ತಿಪೂರ್ವಕವಾಗಿ ನಮಸ್ಕರಿಸಿ ಅಂಜಲಿಬದ್ಧನಾಗಿ ಹೀಗೆ ಸ್ತುತಿಸಿದನು. ಭಕ್ತಿಪರವಶನಾಗಿದ್ದ ಅವನ ಕಣ್ಣುಗಳಲ್ಲಿ

1 ಮಲ್ಲೋಕಂ ತ್ವಂ (ಪಾಠಾಂತರ)

ಸುಂದರಾಂಗೋತ್ಥಪುಲಕೈರ್ಗದ್ಗದಪ್ರವಣಂ ವದನ್ ॥೨೪॥

ಕೈಲಾಸ ಉವಾಚ

ಭವ ಶಿವ ಭಗವನ್ ಪಿನಾಕಪಾಣೇ
ಸುರವರಕಿನ್ನರಮೌಲಿಶೋಭಿತಾಂಘ್ರೇ ।
ನಿರವಧಿಕರುಣಾಪಯೋಧಿರಾಜ
ಚ್ಛಶಿಧಾಮನ್ ಪ್ರಣತೋಽಸ್ಮಿ ತೇ ಪದಾಬ್ಜಂ ॥೨೫॥

ಗುಣಗಣನಂದಿತನಾಮರೂಪಹೀನ
ತ್ರಿಗುಣಾತೀತ ಜರಾವಿಹೀನ ಶಂಭೋ ।
ಹರಿರುದ್ರಾಬ್ಜಜಸಾರ್ವಭೌಮ ಭೂಮನ್
ಸ್ತುತವೇದೋತ್ಥಿತದೇವಜಾಲಮೌಲೇ ॥೨೬॥

ಶಶಿಸೂರ್ಯಾನಲಶೋಭಿತಾಕ್ಷಿಫಾಲ
ಸ್ಫುರದುರುಸೋಮಕಲಾಧರ ಪ್ರಸೀದ ।

ಆನಂದಬಾಷ್ಪವು ಸುರಿಯುತ್ತಿತ್ತು. ತಾಲಗಳನ್ನು ಕೈಯ್ಯಿಂದ ಬಾರಿಸುತ್ತಾ ನರ್ತನ ಮಾಡಲಾರಂಭಿಸಿದನು. ದೇಹವೆಲ್ಲಾ ರೋಮಾಂಚಯುಕ್ತವಾಯಿತು. ಧ್ವನಿಯು ಗದ್ಗದಸ್ವರಯುಕ್ತವಾಯಿತು. ॥೨೩-೨೪॥

ಕೈಲಾಸನು ಭಕ್ತ್ಯತಿಶಯದಿಂದ ಈರೀತಿಯಾಗಿ ಸ್ತುತಿಸಿದನು. “ಸಂಸಾರ ದುಃಖವನ್ನು ನಾಶಮಾಡುವವನೇ, ಷಡ್ಗುಣೈಶ್ವರ್ಯಪರಿಪೂರ್ಣನೇ, ಪಿನಾಕಧಾರಿಯೇ, ನಿನ್ನ ಪಾದಪದ್ಮವನ್ನು ಸುರರೂ, ನರರೂ, ಕಿನ್ನರರೂ ತಮ್ಮ ತಲೆಗಳಿಂದ ಅಲಂಕರಿಸುತ್ತಿರುವರಲ್ಲವೇ ? ಅತಿಶಯವಾದ ದಯೆಗೆ ಸಮುದ್ರನೆನಿಸಿ, ಚಂದ್ರಶೇಖರನಾಗಿರುವ ಮಹಾದೇವನೇ, ನಿನ್ನ ಪಾದಪದ್ಮಗಳಿಗೆ ಎರಗುವೆನು. ॥೨೫॥

ಸಕಲ ಗುಣಗಳಿಂದ ಕೂಡಿದವನಾದರೂ, ನಿನಗೆ ನಾಮರೂಪಗಳಿಲ್ಲ. ಸತ್ವ ರಜಸ್ತಮೋಗುಣಗಳಿಂದ ದೂರನಾದವನು. ಮುಪ್ಪು, ಮರಣ, ಇವುಗಳಿಗೆ ಸಿಕ್ಕದವನು. ಬ್ರಹ್ಮ ವಿಷ್ಣು ರುದ್ರಾದಿಗಳಿಗೆ ಒಡೆಯನೆನಿಸಿರುವೆ. ಸಕಲವೇದ ಜಾಲಗಳೂ, ದೇವಸಮೂಹಗಳೂ ನಿನ್ನನ್ನು ಶಿರಸ್ಸೆಂದು ತಿಳಿದು ಪ್ರಖ್ಯಾತಿಗೊಂಡಿವೆ. ॥೨೬॥

ಪರಮೇಶ್ವರನೇ, ನೀನು ಸೂರ್ಯ, ಚಂದ್ರ ಅಗ್ನಿಗಳನ್ನೇ ಕಣ್ಣುಗಳನ್ನಾಗಿ ಮಾಡಿಕೊಂಡಿರುವೆ. ಅತಿಶಯವಾಗಿ ಹೊಳೆಯುವ ಚಂದ್ರಕಲೆಯನ್ನು ಶಿರಸ್ಸಿನಲ್ಲಿ

[1]ಸ್ಫುರದುರುಗಾಂಗಸತ್ಕಪರ್ದ ಶಂಭೋ
ಮಯಿ ದೃಷ್ಟಿಂ ವಿತರಾಶು ಸಪ್ರಸಾದಾಂ ॥೨೭॥

ಮುನಿಜನಕುವಲೋತ್ಥಚಂದ್ರಮೌಲೇ
ದುರಿತಾಪಹ ಪಾರತಾರ ಧೀರ।
ದೃಶಿ ಶಶಿವಿಹಿತೇನ ಚಕ್ಷುಷಾ ಮಾಂ
ಪರಿಪಾಹೀಶ ದಯಾಕಟಾಕ್ಷಸಾರೈಃ ॥೨೮॥

ಸುರಗಣನುತವೇದವೇದ್ಯ ಶಂಭೋ
ಉರಗೇಂದ್ರಾಮಲಹಾರ ನೀಲಕಂಠ।
ಅವ ಶಿವ ದಯಯಾ ಮಮೈವ ಮೌಲೌ
ವಸತಿಸ್ತೇ ತು ಗಣೇಂದ್ರತಾ ಮಮಾದ್ಯ ॥೨೯॥

ಧರಿಸಿರುವೆ. ಪರಮಪವಿತ್ರವಾದ ಗಂಗಾನದಿಯನ್ನು ಜಟಾಜೂಟದಲ್ಲಿ ಅಡಗಿಸಿಕೊಂಡಿರುವೆ. ಶಂಭುವೇ, ಮಹೇಶ್ವರನೇ ನನಗೆ ಪ್ರಸನ್ನನಾಗು. ನನ್ನಲ್ಲಿ ಅನುಗ್ರಹಪೂರ್ವಕವಾದ ದೃಷ್ಟಿಯನ್ನಿಡು. ॥೨೭॥

ಋಷಿಜನರೆಂಬ ವೃಕ್ಷವಿಶೇಷಕ್ಕೆ ಅಲಂಕಾರಪ್ರಾಯನಾದ ಚಂದ್ರಶೇಖರನೇ, ಸಕಲರ ದುರಿತಗಳನ್ನು ನಾಶಗೈದವನೇ, ಭವಸಾಗರದ ಕೊನೆಯನ್ನು ಕಂಡವನೇ, ಧೀರಮಹೇಶ್ವರನೇ, ಚಂದ್ರನಂತೆ ಶೀತಲವಾದ ನಿನ್ನ ದಯಾಕಟಾಕ್ಷದಿಂದ ನನ್ನನ್ನು ಉದ್ಧರಿಸು. ॥೨೮॥

ದೇವತಾಬೃಂದದಿಂದ ಸ್ತುತಿಸಲ್ಪಡುವ ಶಂಕರನೇ, ನಿನಗೆ ಆದಿಶೇಷನೇ ರತ್ನಹಾರವಾಗಿರುವನಲ್ಲವೆ! ನಿನ್ನ ಕಂಠಪ್ರದೇಶವು ನೀಲವರ್ಣವಿಶಿಷ್ಟವಾಗಿರುವುದು. ಮಹೇಶ್ವರನೇ, ನೀನು ನನ್ನನ್ನು ದಯೆಯಿಂದ ರಕ್ಷಿಸು. ನನ್ನ ಶಿರೋಭಾಗದಲ್ಲಿ ನೀನು ನೆಲಸು. ಇದರಿಂದ ನಾನೂ ನಿನ್ನ ಗಣಗಳಿಗೆ ಒಡೆಯನಾಗುವ ಭಾಗ್ಯವನ್ನು ಪಡೆಯುವೆನು." ॥೨೯॥

1 ಜಟಾಧಾರಿತಗಾಂಗ ಇತಿ ಪಾಠಾಂತರ

ಇತ್ಥಂ ಗಿರೀಂದ್ರವಚನಾತ್ಪ್ರಸನ್ನೋಽಸ್ಮಿ ಮಹೇಶ್ವರಿ ।
ತಸ್ಮೈ ದತ್ತಂ ಮಯಾ ದೇವಿ ಗಾಣಾಪತ್ಯಮನುತ್ತಮಂ ॥೩೦॥

ಗಿರೀಂದ್ರಸಾರ್ವಭೌಮತ್ವೇ ಗಿರೀಂದ್ರಸ್ತ್ವಭಿಷೇಚಿತಃ ।
ಹಿಮವಾನ್ನಿಷಧೋ ವಿಂಧ್ಯೋ ಮಂದರೋ ಮೇರುರೇವ ಚ ॥೩೧॥

ನೀಲೋ ಮಹೇಂದ್ರೋ ಋಷಭಸ್ತ್ರಿಕೂಟಶ್ಚಿತ್ರಕೂಟಕಃ ।
ಕಂಕತೋ ರೈವತೋ ದೇವಿ ಪಾರಿಯಾತ್ರೋಽಥ ಕೇಸರೀ ॥೩೨॥

ಐರಾವತೋಽಥ ಭದ್ರಶ್ಚ ಮೈನಾಕೋ ಗಂಧಮಾದನಃ ।
ಇರಾವಾನ್ ಹಸ್ತಿಶೈಲಶ್ಚ ಮಲಯೋ ದರ್ದುರಸ್ತಥಾ ॥೩೩॥

ಸಹ್ಯೋ ಗೋವರ್ಧನಶ್ಚೈವ ಉದಯಾಸ್ತಮಯಸ್ತಥಾ ।
ಏತೇ ಪ್ರಾಧಾನ್ಯತಸ್ತತ್ರ ಶೈಲೇಂದ್ರಾಸ್ಸ್ಮೃತಿಮಾತ್ರತಃ ॥೩೪॥

ಮಮಾಗ್ರತಸ್ತೇ ಸಂಪ್ರಾಪ್ತಾ ಮಾಂ ನತ್ವಾ ತುಷ್ಟುವುರ್ನಗಾಃ ॥೩೫॥

॥ ನಗಾ ಊಚುಃ ॥

ಭಗವನ್ ಭವ ಭೂತನಾಥ ಶಂಭೋ
ಉರಗೇಂದ್ರಾಮಲಹಾರಪಾರ್ವತೀಶ ।

---

ಹೀಗೆ ಪ್ರಾರ್ಥಿಸಿದ ಕೈಲಾಸಪರ್ವತಕ್ಕೆ ನಾನು ಪ್ರಸನ್ನನಾಗಿ ಎಲೌ ದೇವಿಯೇ, ಅವನಿಗೆ ಉತ್ತಮವಾದ ಗಾಣಾಪತ್ಯಪದವಿಯನ್ನಿತ್ತೆನು. ॥೩೦॥

ಅಲ್ಲದೆ ಗಿರೀಂದ್ರ ಸಾರ್ವಭೌಮನನ್ನಾಗಿ ಮಾಡಿ ಆಗಲೇ ಆ ಪದವಿಯಲ್ಲಿ ಪಟ್ಟಾಭಿಷೇಕ ಮಾಡಬೇಕೆಂದು ಯೋಚಿಸಿದೆನು. ಅದನ್ನು ತಿಳಿದು ಹಿಮವಂತ, ನಿಷಧ, ವಿಂಧ್ಯ, ಮಂದರ, ಮೇರು, ನೀಲ, ಮಹೇಂದ್ರ, ಋಷಭ, ತ್ರಿಕೂಟ, ಚಿತ್ರ ಕೂಟ, ಕಂಕತ, ರೈವತ, ಪಾರಿಯಾತ್ರ, ಕೇಸರಿ, ಐರಾವತ, ಭದ್ರಮೈನಾಕ, ಗಂಧ ಮಾದನ, ಇರಾವಂತ, ಹಸ್ತಿಶೈಲ, ಮಲಯ, ದರ್ದುರ, ಸಹ್ಯಾದ್ರಿ, ಗೋವರ್ಧನ, ಉದಯಾಚಲ, ಅಸ್ತಾದ್ರಿ, ಇವೇ ಮೊದಲಾದ ಸಕಲಪರ್ವತಗಳೂ, ಕೇವಲ ಸ್ಮರಣೆ ಯಿಂದಲೇ ಅಲ್ಲಿಗೆ ಬಂದು ನೆಲಸಿದುವು. ನನ್ನನ್ನು ನೋಡಿ, ನಮಸ್ಕರಿಸಿ ಈರೀತಿ ಯಾಗಿ ಪ್ರಾರ್ಥಿಸತೊಡಗಿದುವು. ॥೩೧-೩೨-೩೩-೩೪-೩೫॥

“ ಭಗವಂತನಾದ ಪರಶಿವನೇ, ಸಕಲ ಭೂತಗಳಿಗೂ ಅಧಿಪತಿಯಾದ ಶಂಕರನೇ,

ಪರಿಪಶ್ಯಾಮಲಚಕ್ಷುಷಾ ಪ್ರಸಾದ್ಯೈ ।
ಸ್ತವ ಪಾದಾಬ್ಜರಜೋತ್ಥಮೌಲಯೋ ನಃ ॥೩೬॥

ತವ ಸನ್ನಿಧಿರೇವ ಶೋಕಹಾರೀ ।
ಸ್ಮೃತಿಮಾತ್ರೇಣ ತವಾಗತಾ ವಯಂ ।
ವದ ಕಿಂ ಕರವಾಮ ದೇವದೇವ ।
ತವ ದೃಷ್ಟ್ಯಾ ವಿವಶೇಷು ದೇಹಿ ಚಾಜ್ಞಾಂ ॥೩೭॥

ಇತಿ ಶೈಲವಚಶ್ಶ್ರುತ್ವಾ ತಾನವೋಚಮಹಂ ಶಿವೇ ।
ಪ್ರಾಂಜಲೀನ್ ಪ್ರಣತಾನ್ ಪ್ರಹ್ವಾನಭಿನಂದ್ಯಾಹಮೇವ ಹಿ ॥೩೮॥

|| ಈಶ್ವರ ಉವಾಚ ||

ಕೈಲಾಸೋ ಮಮ ವಾಸಭೂಸ್ಸುವಿಹಿತೋ ದತ್ತಾ ಗಣಾಧೀಶತಾ ।
ಶೈಲೇಂದ್ರಸ್ತ್ವಮಪಿ ಪ್ರಸಾದವಿಹಿತಾ ದಿಷ್ಟ್ಯಾ ಮಯಾ ತೋಷಿತಃ ।

---

ನಾಗಾಭರಣನೇ, ಪಾರ್ವತೀಪತಿಯೇ ನಮ್ಮನ್ನು ನಿನ್ನ ಪವಿತ್ರವಾದ ದೃಷ್ಟಿಯಿಂದ ನೋಡು. ನಿನ್ನ ಪಾದಕಮಲದ ಪರಾಗದಿಂದ ನಮ್ಮ ಶಿರೋಭಾಗವೆಲ್ಲಾ ಪವಿತ್ರ ವುಳ್ಳದ್ದಾಗಿದೆ. ||೩೬||

ಮಹೇಶ್ವರನೇ, ನಿನ್ನ ಸಾನ್ನಿಧ್ಯದಿಂದಲೇ ನಮ್ಮ ಸಕಲ ಶೋಕವೂ ನಿವಾರಣೆಯಾಗುವುದು. ನೀನು ಸ್ಮರಿಸಿದೊಡನೆಯೇ ನಾವೆಲ್ಲರೂ ಇಲ್ಲಿಗೆ ಬಂದಿರುವೆವು. ದೇವದೇವನೇ, ನಾವು ಮುಂದೆಮಾಡುವ ಕೆಲಸವಾವುದು? ಆಜ್ಞಾಪಿಸು. ನಿನ್ನ ದೃಷ್ಟಿಗೆ ಅಧೀನರಾಗಿ, ಕಣ್ಣಿನಿಂದ ಅಪ್ಪಣೆ ಮಾಡಿದ್ದನ್ನು ನೆರವೇರಿಸಲು ಸಿದ್ಧರಾಗಿರುವೆವು. ಅಪ್ಪಣೆಕೊಡು.” ||೩೭||

ಹೀಗೆ ಸಕಲಪರ್ವತಗಳೂ ಪ್ರಾರ್ಥನೆ ಮಾಡಿದ್ದನ್ನು ನೋಡಿ ನಾನು ಅವರೊಡನೆ ಹೀಗೆಂದೆನು. ಆಗ ಅವರೆಲ್ಲರೂ ಕೈಜೋಡಿಸಿಕೊಂಡು ವಿನಯಾವನತರಾಗಿ ನಿಂತುಕೊಂಡಿದ್ದರು. ||೩೮||

“ ಎಲೈ ಪರ್ವತಶ್ರೇಷ್ಠರುಗಳಿರಾ, ಈ ಕೈಲಾಸಪರ್ವತರಾಜನು ದೃಢಭಕ್ತಿಯಿಂದ ನನ್ನನ್ನು ತೃಪ್ತಿಗೊಳಿಸಿ, ನನ್ನ ಅನುಗ್ರಹಕ್ಕೆ ಪಾತ್ರನಾಗಿರುವನು. ನನ್ನ

ತೇನಾಪಾರತಪಃಪ್ರಚಾರಕೃತಿತಸ್ತುಷ್ಟೋಽಸ್ಮಿಕೇಷ್ಟಾಪಹೋ ।
ಯೂಯಂ ಶೈಲವರಂ ಮಮೈವ ವಸತಿಂ ಸಂಪೂಜ್ಯ ನತ್ವಾ ಮುದಾ ॥೩೯॥

ಯಾತ ಸ್ಥಾನಮಹೋಽಭಿಷಿಚ್ಯ ಸುಘಟೈಸ್ಸೌವರ್ಣನೀರೈರಪಿ ।
ಚೇತ್ಯುಕ್ತ್ವಾ ಗಿರಯಸ್ತದಾ ಪುರಹರಂ ನತ್ವಾ ಸಮಾನಿನ್ಯಿರೇ ।
ಸಿಂಹಸ್ಯಾಸನಮುತ್ತಮಂ ಶಶಿನಿಭಂ ಛತ್ರಂ ಚ ಸಚ್ಚಾಮರೇ ।
ಚೇಂದ್ರೋಪೇಂದ್ರಮರುದ್ಗಣೈಸ್ಸಹ ತದಾ ಕೈಲಾಸಶೈಲೇಶ್ವರಂ ॥೪೦॥

ಶೈಲೇಶಂ ತ್ವಭಿಷಿಚ್ಯ ಶಂಕರಗಿರಾ ದೇವಾ ನಗಾಃ ಪ್ರೋಚಿರೇ ।
ಧನ್ಯೋಽಸ್ಯದ್ಯ ಸುರಾಮರೇಂದ್ರಗಿರಿರಾಡ್ವಿಶ್ವೇಶಭಕ್ತೋಽಹ್ಯಸಿ ।
ತ್ವನ್ಮೌಲೌ ನಿವಸಚ್ಛುಭಾನಿ ವಿತರತ್ವೇಷೇಶ್ವರಃ ಕೇವಲಂ ।
ತನ್ಮೌಲಿಸ್ಥಿತಚಂದ್ರರಶ್ಮಿನಿಕರೈಸ್ಸಂಶೋಧಿತಸ್ತ್ವಂ ಸದಾ ॥೪೧॥

---

ವಾಸಸ್ಥಾನವಾದ ಈ ಪರ್ವತಕ್ಕೆ ಪ್ರಮಥಗಣಾಧಿಪತ್ಯವನ್ನು ಅನುಗ್ರಹಿಸಿರುವೆನು. ಮತ್ತು ಸಕಲ ಗಿರಿಗಳಿಗೂ ಚಕ್ರವರ್ತಿಯನ್ನಾಗಿ ಮಾಡಿರುವೆನು. ಇನ್ನುಮೇಲೆ ನೀವೆಲ್ಲರೂ ನನಗೆ ಆಶ್ರಯವಾಗಿರುವ ಕೈಲಾಸಪರ್ವತವನ್ನು ಪೂಜಿಸಬೇಕು. ನಿಮಗೆಲ್ಲರಿಗೂ ಇನ್ನುಮೇಲೆ ಈತನೇ ಒಡೆಯನು. ॥೩೯॥

ಎಲೈ ಶ್ರೇಷ್ಠರಾದ ಪರ್ವತಗಳೇ, ನೀವೆಲ್ಲರೂ ಸೇರಿ ಈಗಲೇ ಈ ಪರ್ವತ ರಾಜನಿಗೆ ಸಾಮ್ರಾಜ್ಯಾಭಿಷೇಕಮಾಡಿರಿ. ಸುವರ್ಣಮಯವಾದ ಕಲಶಗಳಿಂದ ಅಭಿಷೇಕಮಾಡಿ, ಚಂದ್ರನಂತೆ ಹೊಳೆಯುವ ಛತ್ರಿಯಿಂದ ಕೂಡಿದ ಸಿಂಹಾಸನದಲ್ಲಿ ಕೂರಿಸಿರಿ. ಇಂದ್ರೋಪೇಂದ್ರಾದಿಗಳಿಂದ ಕೂಡಿ, ಚಾಮರಾದಿಗಳಿಂದ ಸೇವಿಸಿ, ಈಗಲೇ ಗಿರಿಚಕ್ರವರ್ತಿಯನ್ನಾಗಿ ಮಾಡಿರಿ." ॥೪೦॥

ಎಂದು ಹೇಳಿದ ಮಹೇಶ್ವರನ ಮಾತುಗಳನ್ನು ಕೇಳಿ ಸಮಸ್ತ ಪರ್ವತಗಳೂ ಕೈಲಾಸಗಿರಿಯನ್ನು ಪರ್ವತರಾಜನನ್ನಾಗಿ ಭಾವಿಸಿ ಪಟ್ಟಾಭಿಷೇಕಮಾಡಿ, ಹೀಗೆ ಹೊಗಳಿದರು. " ಗಿರಿರಾಜನೇ, ನೀನೇ ಧನ್ಯನು. ದೇವತೆಗಳಿಗೂ, ದೇವೇಂದ್ರನಿಗೂ, ನಮ್ಮೆಲ್ಲರಿಗೂ ನೀನು ಈಗ ಒಡೆಯನಾಗಿರುವೆ. ಈಶ್ವರಭಕ್ತಾಗ್ರಗಣ್ಯನೆನಿಸಿರುವೆ. ಶಂಕರನು ನಿನ್ನ ಶಿಖರದಲ್ಲಿ ವಾಸಮಾಡುತ್ತಾ ತನ್ನ ಶಿರೋಭಾಗದಲ್ಲಿರುವ ಚಂದ್ರಕಾಂತಿಯಿಂದ ನಿನ್ನನ್ನು ಪರಿಶುದ್ಧನನ್ನಾಗಿ ಮಾಡುವನು. ಅಲ್ಲದೆ ಈಗ ನಿನ್ನ ಶಿಖರ ಪ್ರದೇಶವನ್ನು ಮಂಗಳಮಯವನ್ನಾಗಿ ಮಾಡಿರುವನು. ॥೪೧॥

ನಾನಾನಿರ್ಝರಸನ್ಮೃಗಾಯುತಯುತೋ ವರ್ಧಸ್ವ ನಶ್ಶ್ರೇಯಸೇ ॥೪೨॥

ಇತಿ ಗಿರಿವಚನಾಚ್ಛಿನ್ನೈತತಾನೋ ।
ವವೃಧೇತ್ಯಂತಶಿಖಾಸಮೂಹಮೇಘಪಾಲಿಃ ।
ಕಲಧೌತರಸೈರ್ನಿವರ್ಧಿಕೇವ ಪ್ರಸಭಂ
ವಾಕ್ಯಮಿದಂ ಜಗಾದ ಹರ್ಷಾತ್ ॥೪೩॥

॥ ಕೈಲಾಸ ಉವಾಚ ॥

ಪ್ರಾಲೇಯಾಚಲಕನ್ಯಕಾಪರಿಲಸದ್ವಾಮಾರ್ಧಭಾಗಂ ಸದಾ
ಜ್ವಾಲಾಜಾಲಯುತಾನಲಾಕ್ಷಿ ತಿಲಕಸ್ಫಾಲೇ ತ್ರಿಪುಂಡ್ರೋಜ್ವಲಂ ।
ಲೀಲಾವೀಕ್ಷಿತದಗ್ಧಕಾಮವಪುಷಂ ಕಲ್ಪದ್ರುಮೂಲೇ ಸ್ಥಿತಂ ।
ಲೀಲಾಚಾಲಿತಲೋಕಜಾಲಮನಿಶಂ ಕಾಲಾಂತಕಂ ಭಾವಯೇ ॥೪೪॥

---

ಹೀಗೆಯೇ ನೀನು ಅನೇಕ ನದಿಗಳಿಗೂ, ಸಹಸ್ರಾರು ಸಾಧುಪ್ರಾಣಿಗಳಿಗೂ ಆಶ್ರಯದಾತನಾಗಿ ನಮಗೆ ಶ್ರೇಯಸ್ಸನ್ನುಂಟುಮಾಡುತ್ತಾ ಸರ್ವೋತ್ಕೃಷ್ಟನಾಗಿರು." ||೪೨||

ಹೀಗೆ ಗಿರಿವಚನಗಳಿಂದ ಸ್ತುತಿಸಲ್ಪಟ್ಟ ಕೈಲಾಸರಾಜನು ಅನೇಕ ಉನ್ನತವಾದ ಶಿಖರಗಳಿಂದಲೂ, ಅವುಗಳ ಮೇಲೆ ಓಡಾಡುವ ಮೇಘಾಲಿಗಳಿಂದಲೂ ಮನೋಹರವಾಗಿರುವಂತೆ ಎತ್ತರವಾಗಿ ಬೆಳೆದುನಿಂತನು. ಮತ್ತು ತನ್ನ ನೈಸರ್ಗಿಕವಾದ ಶುಭ್ರಕಾಂತಿಯನ್ನು ಹೆಚ್ಚಿಸುತ್ತಾ ಮುಂದೆ ಹೇಳುವಂತೆ ಕೆಲವು ಮಾತುಗಳಿಂದ ಪರಮೇಶ್ವರನನ್ನು ಸ್ತುತಿಸಿದನು. ||೪೩||

" ಪರಮೇಶ್ವರನು ಸರ್ವದಾ ಗಿರಿರಾಜಪುತ್ರಿಯಾದ ಪಾರ್ವತಿಯನ್ನು ವಾಮಭಾಗದಲ್ಲಿ ಹೊಂದಿರುವನು. ಜ್ವಾಲಾಮಯವಾದ ಅಗ್ನಿಯನ್ನೇ ನೇತ್ರವನ್ನಾಗಿ ಉಳ್ಳವನು. ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿ ಶೋಭಿಸುತ್ತಿರುವನು. ಲೋಕದಲ್ಲೆಲ್ಲಾ ಶೂರನೆನಿಸಿದ ಮನ್ಮಥನನ್ನು ಲೀಲಾಮಾತ್ರದಿಂದ ಸುಟ್ಟು ಧ್ವಂಸಮಾಡಿರುವವನು. ಕಲ್ಪವೃಕ್ಷದ ಬುಡದಲ್ಲಿ ಸರ್ವದಾ ನೆಲಸಿರುವನು. ಸಕಲ ಲೋಕಗಳನ್ನೂ ತನ್ನ ಇಷ್ಟದಂತೆ ನಡೆಸುವ ಶಕ್ತಿಯುಳ್ಳವನು. ಇಂತಹ ಕಾಲಕಾಲನಾದ ಮಹೇಶ್ವರನನ್ನು ಸರ್ವದಾ ಮನಸ್ಸಿನಲ್ಲಿ ಅನುಸಂಧಾನಮಾಡುತ್ತಿರುವೆನು. ||೪೪||

ತ್ರಿಶೂಲವಿಲಸತ್ಕರಂ ತದಪರೇಣ ಚಾಲಾದರಂ ।
ಕುರಂಗವಿಲಸತ್ಕರಂ ಕುಮುದಿನೀಶಭೂಷಾಮಣಿಂ ।
ನೀಲೋದ್ದಾಮತಮಾಲಸನ್ನಿಭಗಲಂ ಗಂಗಾಜಲಾಪ್ಲಾವಿತಂ ।
ಸ್ಫಾರೋತ್ಸ್ಫುಟಜಟಾಕುಟೀರವಿಲಸತ್ಸೋಮಾರ್ಧಚೂಡಂ ಸದಾ ॥೪೫॥

ವಂದೇ ಸುಂದರತಾಂಡವಾದಿಚತುರಂ ಕೈಲಾಸಮೌಲಿಸ್ಥಿತಂ ॥೪೬॥

ಇಲಾಮಿಲನ್ಮೌಲಿರುವಾಚ ಶಂಭುಂ ನಮೋ ನಮಸ್ತೇ ಗಿರಿಶೇತಿ ಶೈಲಃ ।
ಸ್ವಮೌಲಿಗಾಪಾರಮಹೋರುಲಿಂಗಪಾಲೀಷು ಚ ಪ್ರೀತಿಯುತಶ್ಚ ಭೂಯಾಃ ॥೪೭॥

ವೇದೋಪಿ ಸ್ವಯಮಾದ್ಯಮಾಹ ಭಗವನ್ ರುದ್ರೈರ್ನಮೋಂತ್ಯೈಃ ಪದೈ ।
ಸ್ತ್ವತ್ಸರ್ವಾತ್ಮಕತಾಂ ಗದತ್ಯಥತರಾಂ ಭಕ್ತ್ಯಾ ಪರಂ ತ್ವಾಂ ಸದಾ ।

---

ಪರಶಿವನ ಒಂದು ಕೈಯ್ಯಲ್ಲಿ ಬಲಿಷ್ಠವಾದ ತ್ರಿಶೂಲವೂ, ಮತ್ತೊಂದರಲ್ಲಿ ಜಿಂಕೆಯು ಮರಿಯೂ ವಿರಾಜಿಸುತ್ತಿರುವುದು. ಕುಮುದಿನೀನಾಯಕನಾದ ಚಂದ್ರನೇ ಶಿರದಲ್ಲಿ ನಿಂತು ಭೂಷಣವಾಗಿರುವನು. ಕಂಠಪ್ರದೇಶವಾದರೋ ಹೊಂಗೆಯ ಮರದಂತೆ ನೀಲವರ್ಣವಿಶಿಷ್ಟವಾಗಿರುವುದು. ಶಿರಸ್ಸಿನಲ್ಲಿರುವ ಜಟಾಜೂಟವು ಗಂಗಾ ಜಲದಿಂದ ಸಿಕ್ತವಾಗಿಯೂ ಅರ್ಧಚಂದ್ರನಿಂದ ತೇಜೋವಿಶಿಷ್ಟವಾಗಿಯೂ ಕಾಣು ತ್ತಿರುವುದು. ಈದೃಶಕಾಂತಿವಿಶಿಷ್ಟನಾದ ಮಹಾದೇವನನ್ನು ಸರ್ವದಾ ಧ್ಯಾನ ಮಾಡುವೆನು. ||೪೫||

ಮಹೇಶ್ವರನೇ, ನೀನು ಮನೋಹರವಾದ ನಾಟ್ಯಶಾಸ್ತ್ರಕ್ಕೆ ಮುಖ್ಯಾಚಾರ್ಯನು. ಕೈಲಾಸಮೌಲಿಯಲ್ಲಿ ಶಾಶ್ವತವಾಗಿ ನಿಂತಿರುವವನು. ಪರಶಿವನೇ, ನನ್ನ ಶಿಖರಭಾಗದ ಲ್ಲಿರುವ ಅಸಂಖ್ಯಾತವಾದ ಶಿವಲಿಂಗಗಳಲ್ಲೆಲ್ಲಾ ಅತ್ಯಂತ ಪ್ರೀತಿಯುಳ್ಳವನಾಗಿ, ಅವುಗಳಲ್ಲಿ ನಿನ್ನ ಸಾನ್ನಿಧ್ಯವನ್ನಿತ್ತು ಮಹಿಮಾಶಾಲಿಗಳನ್ನಾಗಿ ಮಾಡು. ಗಿರೀಶನೇ, ಮಹಾದೇವನೇ, ನಿನಗೆ ವಂದನೆ. ನಿನ್ನನ್ನೇ ಮೊರೆಹೊಕ್ಕಿರುವೆನು, ಎಂದು ಅವನತ ಶಿರಸ್ಕನಾಗಿ, ಶಂಭುವನ್ನು ಬಹುವಾಗಿ ಹೊಗಳಿದನು. ||೪೭||

ಕೈಲಾಸರಾಜನು ಮತ್ತೆ ಶಂಕರನನ್ನು ಕುರಿತು ಅನಾದಿಯಾದ ವೇದವು ನಿನ್ನನ್ನು ಆದಿಪುರುಷನನ್ನಾಗಿ ಘೋಷಿಸುತ್ತಿರುವುದು. ನಮಶ್ಶಬ್ದಾಂತವಾದ ಪದ

ತ್ವತ್ಸಾನ್ನಿಧ್ಯಬಲೇನ ಮಾಮಪಿ ವಿಭೋ ಸ್ತೋಷ್ಯನ್ನಮಸ್ಯನ್ ಪುನ ।
ರ್ಮಂತ್ರೈರ್ಯತ್ರ ನಿಷೀದಸೀತಿ ಚ ಪುನರ್ಧನ್ಯೋ ಮದನ್ಯೋ ಹಿ ಕಃ
॥೪೮॥

ಇತ್ಥಂ ಕೈಲಾಸಶೈಲಸ್ಯ ಶ್ರುತ್ವಾ ವಚನಮಂಬಿಕೇ ।
ತಮಬ್ರುವಂ ಮಹಾಶೈಲಂ ಕೈಲಾಸಂ ವರಭೂಧರಂ ॥೪೯॥

॥ ಶಿವ ಉವಾಚ ॥

ಕೈಲಾಸಶೈಲ ವರಸಾನುಗತೋರ್ಧ್ವಸೌಧ
ಲಿಂಗಾವಲೀಷು ಸತತಂ ನಿವಸಾಮಿ ಕಾಮಂ ।
ಪಾಪಂ ಹರಾಮಿ ಸುತರಾಂ ಜನನಾದಿಲೋಕ
ದುಃಖಂ ಚ ಮುಕ್ತಿಮಥ ಭುಕ್ತಿಮಥೋ ದಿಶಾಮಿ ॥೫೦॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸ ವರಪ್ರದಾನಂ ನಾಮ
ಪಂಚಚತ್ವಾರಿಂಶೋಽಧ್ಯಾಯಃ

---

ಗಳಿಂದ ಕೂಡಿ ರುದ್ರಾಧ್ಯಾಯಗಳನ್ನೊಳಗೊಂಡು ಸರ್ವದಾ ನಿನ್ನನ್ನು ಸರ್ವಾತ್ಮಕನನ್ನಾಗಿ ಅತಿಶಯವಾಗಿ ಹೊಗಳುತ್ತಿರುವುದು. ನಿನ್ನ ಸಾನ್ನಿಧ್ಯವು ನನ್ನಲ್ಲಿರುವುದರಿಂದ ಅದೇ ವೇದಗಳು ನನ್ನನ್ನೂ ಸಹ ಸ್ತುತಿಸುತ್ತಾ, ನಮಸ್ಕರಿಸುತ್ತಿರುವುವು. ನನಗೆ ಬಂದಿರುವ ಈ ಮಹಿಮೆಯು ನಿನ್ನ ಆಶ್ರಯದಿಂದಲೇ ಅಲ್ಲವೆ ? ಈ ವಿಷಯದಲ್ಲಿ ನಾನೇ ಧನ್ಯನು. ನನ್ನಂತಹ ಸುಕೃತಿಗಳು ಲೋಕದಲ್ಲಿ ಮತ್ತಾರಿರುವರು ?" ||೪೮||

ಎಂದು ವಿಧವಿಧವಾಗಿ ಸ್ತುತಿಸಿದ ಕೈಲಾಸಾಚಲದ ಮಾತುಗಳನ್ನು ಕೇಳಿ ಎಲೌ ದೇವಿಯೇ, ಆ ಶೈಲರಾಜನನ್ನು ಕುರಿತು ನಾನು ಹೀಗೆ ಹೇಳಿದೆನು. ||೪೯||

ಕೈಲಾಸಪರ್ವತರಾಜನೇ, ನಿನ್ನ ತಪ್ಪಲು ಭೂಮಿಯಲ್ಲಿಯೂ, ಶಿರೋಭಾಗದಲ್ಲಿಯೂ, ಸಕಲ ಶಿವಾಲಯಗಳಲ್ಲಿಯೂ ನೆಲಸಿರುವ ಶಿವಲಿಂಗಗಳಲ್ಲಿ ನಾನು ಸರ್ವದಾ ನೆಲಸಿರುವೆನು. ಸಕಲರ ಪಾಪಗಳನ್ನೂ ನಾಶಮಾಡುವೆನು. ಅಲ್ಲಿ ಬಂದು ಭಜಿಸಿದ ನನ್ನ ಭಕ್ತರಿಗೆಲ್ಲಾ ಜನನಮರಣಾದಿ ಸಕಲ ದುಃಖಗಳನ್ನೂ ನಿವಾರಿಸಿ,

ಅವರಿಗೆ ಭುಕ್ತಿಯನ್ನೂ, ಮುಕ್ತಿಯನ್ನೂ ಅನುಗ್ರಹಿಸುವೆನು. ಇದರಲ್ಲಿ ಸಂಶಯ ವಿಲ್ಲವೆಂದು ಶಂಕರನು ಕೈಲಾಸರಾಜನಿಗೆ ವರವಿತ್ತನು. ||೫೦||

ಇಲ್ಲಿಗೆ ಶ್ರೀಶಿವರಹಸ್ಯದ ಮೊದಲನೆಯ ಅಂಶದಲ್ಲಿ ಕೈಲಾಸವರಪ್ರದಾನವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.

# ಅಥ ಶ್ರೀಶಿವರಹಸ್ಯೇ

## ಷಟ್ಚತ್ವಾರಿಂಶೋಽಧ್ಯಾಯಃ

### ಕೈಲಾಸಚಾಲನೇ ರಾವಣಕೃತಸ್ತುತಿಃ

|| ಈಶ್ವರ ಉವಾಚ ||

ಮತ್ತೋ ಲಬ್ಧವರೋ ದೇವಿ ಕೈಲಾಸೋ ಧರಣೀಧರಃ ।
ಕಿಂಚಿತ್ಸ್ಮಯಯುತಶ್ಚಾಸೀತ್ಪ್ರಿಯೋಽಹಂ ಪಾರ್ವತೀಪತೇಃ ||೧||

ನ ಮತ್ಸಮಶ್ಶಿಖರಿಷು ಸರ್ವಲಿಂಗಾಶ್ರಯಸ್ಸದಾ ।
ಮಯಿ ದೇವಸ್ಸದಾಧ್ಯಾಸ್ತೇ ಮಣಿಪ್ರಾಸಾದಮೌಲಿಗಃ ||೨||

ಕ್ವ ಮೇರುಃ ಪಾರಿಯಾತ್ರಶ್ಚ ಮೈನಾಕೋ ಮಂದರೋಽಪಿ ವಾ ।
ವಿಂಧ್ಯೋ ವಾ ನಿಷಧೋ ಗೌರಿ ಹಿಮವಾನ್ವಾ ನಗಾಧಿಪಃ ||೩||

---

### ಶ್ರೀಶಿವರಹಸ್ಯದಲ್ಲಿ ನಲವತ್ತಾರನೆಯ ಅಧ್ಯಾಯ

ಈಶ್ವರನು ಕೈಲಾಸಪರ್ವತದ ವಿಷಯವನ್ನು ಮುಂದುವರಿಸುತ್ತಾ ದೇವಿಗೆ ಹೀಗೆಂದನು. "ದೇವಿಯೇ, ನನ್ನಿಂದ ವರವನ್ನು ಪಡೆದ ಕೈಲಾಸಪರ್ವತಕ್ಕೆ ತಾನೇ ಪರಶಿವನ ಪ್ರಿಯಭಕ್ತನೆಂಬ ಅಹಂಕಾರವು ಅತಿಯಾಯಿತು. ||೧||

ನನಗೆ ಸಮಾನವಾದ ಮತ್ತೊಂದು ಪರ್ವತವಿಲ್ಲ ಎಂಬುದೇ ಅವನ ಅಹಂಕಾರಕ್ಕೆ ಮುಖ್ಯಕಾರಣ. ಯಾವ ಪರ್ವತದಲ್ಲಿಯೂ ಇಷ್ಟು ಶಿವಲಿಂಗಗಳಿಲ್ಲ. ಶಂಕರನು ಎಲ್ಲಿಯೂ ಸ್ಥಿರವಾಗಿ ಮಣಿಗೃಹದಲ್ಲಿ ವಾಸಮಾಡುತ್ತಿಲ್ಲ. ಮೇರು, ಪಾರಿಯಾತ್ರ, ಮೈನಾಕ, ಮಂದರ, ವಿಂಧ್ಯ, ನಿಷಧ, ಮಹಾ ಹಿಮವಂತ, ನೀಲ, ಅಸ್ತಾಚಲ, ಉದಯಾಚಲ, ಭದ್ರ, ಶತಶೃಂಗ, ರೈವತ, ವಾಮನ, ಶ್ರೀಕ, ಕುಮುದ, ಗಂಧಮಾದನ, ಮಹೇಂದ್ರ, ಮಲಯ, ಸಹ್ಯ, ದರ್ದುರ, ಚಿತ್ರಕೂಟ

ನೀಲೋಸ್ತ್ರ ಉದಯೋ ವಾಪಿ ಭದ್ರೋ ವಾ ಶತಶೃಂಗಕಃ ।
ರೈವತೋ ವಾಮನ ಶ್ರೀಕಃ ಕುಮುದೋ ಗಂಧಮಾದನಃ ॥೪॥

ಮಹೇಂದ್ರೋ ಮಲಯಸ್ಸಹ್ಯೋ ದರ್ದುರಶ್ಚಿತ್ರಕೂಟಕಃ ।
ಕೇ ವಾ ಕುಲಾಚಲಾಸ್ಸರ್ವೇ ಶಂಭೋಃ ಪ್ರಿಯತರಾ ಇತಿ ॥೫॥

ಅಹಮೇವ ಪ್ರಿಯಶ್ಶಂಭೋಸ್ಸರ್ವದಾ ವಾಸ ಏವ ಹಿ ।
ಗರ್ವಪರ್ವತಸಂಕ್ರಾಂತಸ್ಸಕೈಲಾಸಃ ಪುರಾಂಬಿಕೇ ॥೬॥

ಶೈಲಸಾರಸ್ವಹೃದಯಕಾಠಿನ್ಯೇನ ನಗೋತ್ತಮಃ ।
ತಸ್ಯ ತದ್ಭಾವಮಾಲೋಕ್ಯ ದೇವಾನಾಮಪಿ ಶೈಲಜೇ ॥೭॥

ದಕ್ಷಮನ್ಯೌ ಮನ್ಯುವಾಘಮನ್ಯುನಾ ದೇವತಾಗಣಾಃ ।
ವಿಷ್ಣುರುದ್ರಾದಯಸ್ಸರ್ವೇ ಶಿಕ್ಷಿತಾ ಭದ್ರಕೇಣ ಹಿ ॥೮॥

ಇವೇ ಮೊದಲಾದ ಪರ್ವತಗಳು ಶಂಕರನ ಅನುಗ್ರಹಕ್ಕೆ ಎಂದೂ ಪಾತ್ರವಾಗಿಲ್ಲ. ಯಾವ ಕುಲಾಚಲವೂ ನನ್ನಷ್ಟು ಶಿವನಿಗೆ ಪ್ರೀತಿಕರವಾಗಿಲ್ಲ. ||೨-೩-೪-೫||

ನಾನು ಶಂಕರನಿಗೆ ಪ್ರೀತಿಪಾತ್ರನಾಗಿರುವುದರಿಂದಲೇ ಆತನು ನನ್ನಲ್ಲಿ ಸರ್ವದಾ ವಾಸಿಸುತ್ತಿರುವನು, ಎಂಬುದಾಗಿ ಕೈಲಾಸಪರ್ವತವು ಬಹಳವಾದ ಗರ್ವದಿಂದ ಕೂಡಿದ್ದಾಯಿತು. ||೬||

ಹೀಗೆ ಪರ್ವತರಾಜನಿಗೆ ಸಹಜವಾದ ಹೃದಯಕಾಠಿನ್ಯವು ಅಹಂಕಾರದಲ್ಲಿ ಪರಿಣತವಾದದ್ದನ್ನು ಅರಿತೆನು. ಇಷ್ಟೇ ಅಲ್ಲ. ಎಲೌ ಗಿರಿಜೆಯೇ, ಇದೇ ರೀತಿ ಹಿಂದೆ ಅನೇಕ ದೇವತೆಗಳೂ ಅಹಂಕಾರಪಟ್ಟು ಅದಕ್ಕೆ ತಕ್ಕ ಶಿಕ್ಷೆಯನ್ನು ಪಡೆದಿರುವರು. ||೭||

ದಕ್ಷಬ್ರಹ್ಮನು ಮಾಡಿದ ಯಾಗದಲ್ಲಿ ನನ್ನನ್ನು ಕೆರಳಿಸಿ, ಸಕಲ ದೇವತೆಗಳೂ, ವಿಷ್ಣುರುದ್ರಾದಿಗಳೂ, ನನ್ನಿಂದ ಸೃಷ್ಟಿಸಲ್ಪಟ್ಟ ವೀರಭದ್ರನಿಂದ ಶಿಕ್ಷೆಯನ್ನನುಭವಿಸಿದರು. ||೮||

ನಿರ್ದಗ್ಧಾನ್ನಿಂದನಾದ್ದೇವಿ ಸದಕ್ಷಾನ್ ಬ್ರಹ್ಮಪೂರ್ವಕಾನ್ ।
ಪುನಃ ಪುನಸ್ತಾನ್ ದುಃಖೌಘೈರ್ದೈತ್ಯೈರ್ದೇವಿ ಯುಗೇ ಯುಗೇ॥೯॥

ಪಾತಯಾಮಿ ಸುರಾನ್ಯುದ್ಧೇ ಭವಾಬ್ಧೌ ಭಕ್ತಿವರ್ಜಿತಾನ್ ।
ದುಃಖಾಂಬುಧೌ ಮಹಾದೇವಿ ಮಮ ಭಕ್ತಿವಿವರ್ಜಿತಾಃ ॥೧೦॥

ಪತಂತಿ ಸರ್ವದಾ ಸರ್ವೇ ಜನ್ಮಮೃತ್ಯುಜರಾಸು ಚ ।
ಸ್ವರ್ಗೇಷು ನರಕೇಷ್ವೇವ ತಾನಶೈವಾನ್ ಸದಾಶಿವೇ ॥೧೧॥

ಮಯಿ ಭಸ್ಮನಿ ರುದ್ರಾಕ್ಷೇ ಶೈವೇ ವಾ ಯೇ ಚ ದೂಷಕಾಃ ।
ಶಿವಲಿಂಗೇ ಶಿವಕ್ಷೇತ್ರೇ ತ್ರಿಪುಂಡ್ರೇ ವೇದವರ್ತ್ಮನಿ ॥೧೨॥

ಮದ್ಭಕ್ತಂ ದೂಷಯೇದ್ಯಸ್ತು ಯೋ ವಾ ಕೋ ವಾ ಸುರೋಽಪಿ ವಾ ।
ಭೂಪತಿರ್ವಾ ಯತಿರ್ವಾಽಪಿ ತಂ ದುಃಖೇ ಪಾತಯಾಮ್ಯಹಂ ॥೧೩॥

---

ನನ್ನನ್ನು ನಿಂದಿಸಿದ ಪಾಪಿಷ್ಠರಾದ ದಕ್ಷಬ್ರಹ್ಮನೇ ಮೊದಲಾದವರಿಗೆ ಅನೇಕ ದುಃಖಗಳನ್ನು ಕೊಡುವುದರಿಂದ ಅವರು ತಮ್ಮ ಪಾಪಕ್ಕೆ ಪಶ್ಚಾತ್ತಾಪಪಡುವಂತೆ ಮಾಡುವೆನು. ಅಲ್ಲದೆ ಪಾಪಿಷ್ಠರಾದ ದೈತ್ಯರಿಂದ ಪ್ರತಿಯುಗದಲ್ಲಿಯೂ, ಭಕ್ತಿಶೂನ್ಯರಾದ ದೇವತೆಗಳನ್ನು ಶಿಕ್ಷಿಸುವೆನು. ||೯||

ಶಂಕರನೆಂಬ ಸಮುದ್ರದಲ್ಲಿ ಭಕ್ತಿಶೂನ್ಯರಾದ ದೇವತೆಗಳನ್ನು ದುಃಖವೆಂಬ ಸಮುದ್ರದಲ್ಲಿ ಮುಳುಗಿಸುವೆನು. ಮಹಾದೇವಿಯೇ, ಆದ್ದರಿಂದ ನನ್ನಲ್ಲಿ ಭಕ್ತಿಯನ್ನಿಡದಿದ್ದವರು ದುಃಖಾಬ್ಧಿಯಿಂದ ಎಂದೂ ದಾಟಿಹೋಗಲಾರರು. ||೧೦||

ಅಲ್ಲದೆ ಅವರು ಸ್ವರ್ಗದಲ್ಲಿಯೇ ಇರಲಿ, ನರಕದಲ್ಲಿಯೇ ಇರಲಿ, ಅಂತಹ ಭವಭಕ್ತರಲ್ಲದವರು ಜನ್ಮ, ಮೃತ್ಯು, ಮುಪ್ಪು ಇವುಗಳಲ್ಲಿ ಬಿದ್ದು ನರಳುವರು. ||೧೧||

ಭಸ್ಮದಲ್ಲಿ, ರುದ್ರಾಕ್ಷಿಯಲ್ಲಿ, ಶಿವಸೇವಕನಲ್ಲಿ, ಹಾಗೆಯೇ ಶಿವಲಿಂಗದಲ್ಲಿ, ಶಿವಕ್ಷೇತ್ರದಲ್ಲಿ, ತ್ರಿಪುಂಡ್ರಧಾರಣೆಯಲ್ಲಿ, ವೇದಮಾರ್ಗದಲ್ಲಿ ಯಾವನು ನನ್ನ ಭಕ್ತನನ್ನು ದೂಷಿಸುವನೋ, ಅವನು ದೇವತೆಯೇ ಆಗಿರಲಿ, ರಾಜನೇ ಆಗಿರಲಿ, ಅಥವಾ ಸಂನ್ಯಾಸಿಯೇ ಆಗಿರಲಿ, ಅಂತಹವನನ್ನು ನರಕಕ್ಕೆ ತಳ್ಳುವೆನು. ||೧೨-೧೩||

ವೇದಾಂತೇ ವಾ ಗುರೌ ಮೋಹಾದವಿಮುಕ್ತೇ ಮಹೇಶ್ವರಿ ।
ಪಂಚಾಕ್ಷರೇ ಮುಕ್ತಿದೇ ತು ರುದ್ರಾಧ್ಯಾಯೇಽಪಿ ವಾ ಮಮ ॥೧೪॥

ಶತಶಾಖಾಶ್ರುತಂ ಮಂತ್ರಂ ಪಾಪಸ್ತೋಮನಿವಾರಕಂ ।
ಸರ್ವಶ್ರುತಿಸ್ತುತಿಂ ದೇವಿ ಶ್ರೀಮಹಾದೇವಪೂಜನೇ ॥೧೫॥

ಏಕ ಏವ ಮಹಾರುದ್ರಃ ಪೂಜ್ಯ ಇತ್ಯಾಹ ಹಿ ಶ್ರುತಿಃ ।
ರುದ್ರಂ ವಿಶ್ವಾಧಿಕಂ ಮಾಂ ತು ಯೋಽನ್ಯತುಲ್ಯತಯಾ ವದೇತ್॥೧೬॥

ಸರ್ವಮನ್ಯತ್ಪರಿತ್ಯಜ್ಯ ಧ್ಯೇಯೋಽಹಂ ಪಾರ್ವತೀಪತಿಃ ।
ನ ಮತ್ಸಮಶ್ಚಾಭ್ಯಧಿಕೋ ದೃಶ್ಯತೇ ಶ್ರೂಯತೇ ಪಿ ವಾ ॥೧೭॥

ಅಣುಸ್ತ್ವಣೀಯಸಾಮಸ್ಮಿ ಮಹತಾಂ ಚ ಮಹತ್ತರಃ । ।
ಇಂದ್ರಮಿತ್ರಾದಿವಾಕ್ಯೈಶ್ಚಾಪ್ಯಹಮೇಕೋಽಖಿಲಾಂತರಃ ॥೧೮॥

---

ವೇದಾಂತದಲ್ಲಿಯೂ, ಸದ್ಗುರುವಿನಲ್ಲಿಯೂ, ಅವಿಮುಕ್ತೇಶ್ವರಕ್ಷೇತ್ರದಲ್ಲಿಯೂ, ಮುಕ್ತಿಪ್ರದವಾದ ಶಿವಪಂಚಾಕ್ಷರೀಮಂತ್ರದಲ್ಲಿಯೂ, ಯಾರು ಅಜ್ಞಾನದಿಂದ ತಿರಸ್ಕಾರಬುದ್ಧಿಯನ್ನಿಡುವರೋ ಅವರು ನರಕಭಾಗಿಗಳಾಗುವರು. ಅಲ್ಲದೆ ರುದ್ರಾಧ್ಯಾಯವೆಂಬುದು ಶತಶಾಖೆಯುಳ್ಳ ಮಹಾಮಂತ್ರವು. ಸಮಸ್ತ ಪಾಪವನ್ನೂ ನಿವಾರಿಸತಕ್ಕದ್ದು. ಮಹಾದೇವಾರ್ಚನೆಗಂತೂ ಅತ್ಯಂತ ಮುಖ್ಯವಾದದ್ದು. ॥೧೪-೧೫॥

ಸಕಲ ಶ್ರುತಿಗಳೂ, ಮಹಾರುದ್ರನೊಬ್ಬನೇ ದೇವಶ್ರೇಷ್ಠನು, ಸಕಲರಿಗೂ ಆತನೇ ಪೂಜ್ಯನೆಂದು ಸಾರುತ್ತಿರುವುವು. ಹೀಗಿರುವಲ್ಲಿ ವಿಶ್ವಾಧಿಕನಾದ ನನ್ನನ್ನು ಇತರ ದೇವತೆಗಳಿಗೆ ಸಮನನ್ನಾಗಿ ತಿಳಿಯುವುದು ಮಹಾಪಾಪಕರ. ॥೧೬॥

ಆದ್ದರಿಂದ ಲೋಕದಲ್ಲಿ ಎಲ್ಲವನ್ನೂ ಬಿಟ್ಟು ಪಾರ್ವತೀಪತಿಯಾದ ನನ್ನನ್ನು (ಶಂಕರನನ್ನು) ಸೇವಿಸುವುದೇ ಉಚಿತವಾದದ್ದು. ಏಕೆಂದರೆ ಪ್ರಪಂಚದಲ್ಲಿ ನನಗೆ ಸಮನಾದ ಅಥವಾ ನನಗಿಂತ ಅಧಿಕನಾದ ದೇವನೊಬ್ಬನು ಬೇರೆ ಯಾರೂ ಸಿಕ್ಕಲಾರರು. ॥೧೭॥

ಪ್ರಪಂಚದ ಸೂಕ್ಷ್ಮವಸ್ತುಗಳೆಲ್ಲಕ್ಕಿಂತಲೂ, ಸೂಕ್ಷ್ಮವಸ್ತುರೂಪನಾಗಿಯೂ, ಮಹಾವಸ್ತುಗಳೆಲ್ಲಕ್ಕಿಂತ ಮಹತ್ತಮವಸ್ತುವಾಗಿಯೂ ಇರುವೆನು. ಇಂದ್ರಂ ಮಿತ್ರಂ

ಮಾಮೇವ ವೇದವೇದಾಂತಾ ವದಂತಿ ಶ್ರುತಯೋಽಖಿಲಾಃ ।
ತುರೀಯೋಽಹಂ ಶಿವಾದ್ವೈತಸ್ಸತ್ಯಂ ಜ್ಞಾನಂ ಪ್ರಿಯಸ್ತ್ವಹಂ ॥೧೯॥

ಮಾಂ ನಯುತ್ಯನ್ಯಥಾ ವಾಕ್ಯೈರ್ವೇದೋಕ್ತೈರ್ನೋಽಹಿತಾ ಜನಾಃ ।
ತಾನ್ ಪಾತಯಾಮಿ ನರಕೇ ದುರ್ಬುದ್ಧೀನ್ ಪಾಪಯೋನಿಷು ॥೨೦॥

ಮನ್ಯೈವ ಹಿ ಪರಾಶಕ್ತಿಸ್ತ್ವಂ ಜಗತ್ಕಾರಿಣೀ ಶಿವಾ ।
ತವೇಕ್ಷಣಾಜ್ಜಗಜ್ಜಾಲಂ ಸಂಭವೇತ ಯುಗೇ ಯುಗೇ ॥೨೧॥

ಮಮ ಸರ್ವಾಂತರಸ್ತ್ವಂ ಹಿ ಅವಿಜ್ಞಾಯ ಸುರಾಧಮಾಃ ।
ನರಾ ವಾ ಭೂಸುರಾ ವಾ ಪಿ ಮಮ ಲಿಂಗಸ್ಯ ಪೂಜನೇ ॥೨೨॥

---

ಎಂಬ ಮಂತ್ರದ ಅರ್ಥದಂತೆ ನಾನೊಬ್ಬನೇ ಆಗಿದ್ದರೂ, ಅಖಂಡ ಬ್ರಹ್ಮಾಂಡದಲ್ಲಿ ಬೇರೆ ಬೇರೆ ಆಕಾರದಿಂದ ಬೇರೆ ಬೇರೆಯಾಗಿ ತೋರಿಬರುತ್ತಿರುವೆನು. ॥೧೮॥

ಸಕಲ ವೇದವೇದಾಂತಗಳೂ, ಎಲ್ಲಾ ಸ್ಮೃತ್ಯಾದಿ ಶಾಸ್ತ್ರಗಳೂ ನನ್ನ ಪಾರಮ್ಯವನ್ನೇ ವಿವರಿಸುತ್ತಿವೆ. ಶಿವಾದ್ವೈತದ ಪ್ರತಿಪಾದನೆಯಂತೆ ಜಾಗ್ರದಾದಿ ಅವಸ್ಥಾತ್ರಯಗಳಿಗೆ ಸಿಕ್ಕದೇ ತುರೀಯಾವಸ್ಥೆಯಲ್ಲಿ ಸ್ಥಿರವಾಗಿ ಕಂಡುಬರುವ, ಸತ್ಯ, ಜ್ಞಾನ, ಆನಂದ, ಏತತ್ಸ್ವರೂಪನಾಗಿ ಪ್ರಪಂಚಾಭೇದದಿಂದ ತೋರಿಬರುವ ಸ್ವರೂಪವೇ ನನ್ನದು. ॥೧೯॥

ಹಾಗಿದ್ದರೂ ಅಜ್ಞಾನಿಗಳಾದ ಕೆಲವರು ಶಿವಸಂಬಂಧವಾಗಿರುವ ಮಹಾ ಮಹಾವಾಕ್ಯಗಳಿಗೆ ಅರ್ಥಾಂತರವನ್ನು ಕಲ್ಪಿಸುವುದರ ಮೂಲಕ ನನ್ನನ್ನು ದೂಷಿಸುತ್ತಿರುವರು. ಅಂತಹವರನ್ನು ನರಕಕ್ಕೆ ತಳ್ಳಿ, ಅದರಿಂದ ಅವರು ಪಾಪಜನ್ಮವನ್ನು ಪಡೆದು, ಪುನಃ ನರಕಿಗಳಾಗುವಂತೆ ಮಾಡುವೆನು. ॥೨೦॥

ಎಲೌ ದೇವಿಯೇ, ನೀನೇ ನನ್ನ ಪರಾಶಕ್ತಿಯು. ನಿನ್ನ ಸಹಾಯದಿಂದಲೇ ನಾನು ಈ ಜಗದ್ರೂಪವಾಗಿ ಪರಿಣಮಿಸಿರುವೆನು. ನಿನ್ನ ದೃಷ್ಟಿಯಿಂದಲೇ ಈ ಜಗತ್ತೆಲ್ಲಾ ಯುಗಾಂತರಗಳವರೆಗೂ ಉತ್ಪತ್ತಿಯಾಗುತ್ತಿರುವುದು. ॥೨೧॥

ನಾನಿರುವ ಸ್ಥಳದಲ್ಲೆಲ್ಲಾ ನೀನು ಸರ್ವಾಂಶದಲ್ಲಿಯೂ ನೆಲಸಿರುವೆ. ಈ ವಿಷಯವನ್ನು ದೇವತೆಗಳೂ, ಮನುಷ್ಯರೂ, ಬ್ರಾಹ್ಮಣರೂ ಸರಿಯಾಗಿ ಅರಿತು

ಮತಿರ್ನ ತೇಷಾಂ ಪಾಪಾನಾಂ ಕಲೌ ದೇವಿ ಭವಿಷ್ಯತಿ ।
ತಸ್ಮಾದ್ದುಃಖಾಂಬುಧೌ ಮಗ್ನಾ ಭವಿಷ್ಯಂತಿ ಸುರಾಸುರಾಃ ॥೨೩॥

ಮಮ ಭಕ್ತಿವಿಹೀನಾ ಯೇ ಬ್ರಾಹ್ಮಣಾಶ್ಚಾಪಿ ಸಂಕರಾಃ ।
ಭವಂತಿ ತೇ ಮಹಾಪಾಪಾಸ್ತೇಷಾಂ ದುಃಖಂ ಪದೇ ಪದೇ ॥೨೪॥

ಅನರ್ಚಿತಮಹೇಶಾನಾಮಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೨೫॥

ಅಜಪ್ತಶತರುದ್ರಾಣಾಮಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೨೬॥

ಅಜಪ್ತಪಂಚಬ್ರಹ್ಮಾಣಾಮಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೨೭॥

---

ಕೊಳ್ಳದೆ, ಶಿವಲಿಂಗಾರಾಧನೆಯಲ್ಲಿ ಅನಾಸಕ್ತರಾಗಿ ಪಾಪಿಗಳೆನಿಸುವರು. ಕಲಿಯುಗದಲ್ಲಂತೂ ಇದು ಬಹಳವಾಗಿರುವುದು. ದೇವಿಯೇ ಅದರಿಂದಲೇ ದೇವರಾಕ್ಷಸರೂ ಈ ವಿಧದ ಅಜ್ಞಾನದಿಂದ ದುಃಖಾಂಬುಧಿಯಲ್ಲಿ ಮುಳುಗಿ ತೇಲುವರು. ॥೨೨-೨೩॥

ಜಾತಿಯಲ್ಲಿ ಬ್ರಾಹ್ಮಣರಾಗಿದ್ದರೂ, ಯಾರು ನನ್ನಲ್ಲಿ ದೃಢಭಕ್ತಿಯನ್ನಿಡದೆ ಸಂಕರಜಾತಿಯವರಾಗುವರೋ, ಅವರು ಮಹಾಪಾಪಿಗಳೆನಿಸುವರು. ಅಲ್ಲದೆ ಪದೇ ಪದೇ ಮಹಾ ದುಃಖಗಳಿಗೆ ಈಡಾಗುತ್ತಿರುವರು. ॥೨೪॥

ಈಶ್ವರನನ್ನು ಆರಾಧಿಸದಿದ್ದವರು ಶೈವರೆನಿಸುವುದಿಲ್ಲ. ಅವರು ದುರಾತ್ಮರು. ಯಾರು ಶತರುದ್ರೀಯ ಮಂತ್ರವನ್ನು ಜಪಿಸುವುದಿಲ್ಲವೋ, ಅವರೂ ಅದೇ ವರ್ಗಕ್ಕೇ ಸೇರಿದವರು. ಅಂತಹವರಿಗೆ ಅನೇಕ ವಿಪತ್ತುಗಳೂ, ಭಯಂಕರವಾದ ನರಕ ದುಃಖಗಳೂ ಒದಗುವುವು. ॥೨೫-೨೬॥

ಪಂಚಬ್ರಹ್ಮಾನುವಾಕಗಳನ್ನು ಪಠಿಸದೆ, ಶಿವಸೂಕ್ತಮಂತ್ರಗಳನ್ನು ಜಪಿಸದೆ, ಪಂಚಮುಖವಿಶಿಷ್ಟನಾದ ಮಹೇಶ್ವರನನ್ನು ಧ್ಯಾನಮಾಡದಿರುವವರು ದುರಾತ್ಮರೆನಿಸುವರು. ಅವರೇ ಅಶೈವರು. ಐದು ಅಕ್ಷರಗಳಿಂದ ಕೂಡಿರುವ ಶಿವಪಂಚಾಕ್ಷರೀ ಮಂತ್ರವನ್ನು ಪುರಶ್ಚರಣೆಮಾಡದವರೂ, ಶಿವಭಕ್ತಿಯಿಂದ ಭಸ್ಮಲಿಪ್ತಾಂಗರಲ್ಲ

ಅಜಪ್ತಲಿಂಗಸೂಕ್ತಾನಾ ಮುಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೨೮॥

ಅಧ್ಯಾತಪಂಚಪಂಚಾಸ್ಯಧ್ಯಾನಹೀನಾಂತರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೨೯॥

ಅಜಪ್ತಪಂಚವರ್ಣೋತ್ಥಪಂಚಾಕ್ಷರನಿವರ್ತಿನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೦॥

ಅನುದ್ಧೂಲಿತದೇಹಾನಾಮುಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೧॥

ತ್ರಿಪುಂಡ್ರರಹಿತಾಂಗಾನಾಂ ಕಾಲಕಂಠೋರುಬಾಹುಷು ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೨॥

ಅಧೃತಾಕ್ಷಸರಾಣಾಂ ಚ ಅಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೩॥

ಅದೃಷ್ಟಮುಮಲಿಂಗಾನಾಮುಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ

ಪ್ರದೋಷಾರ್ಚನಹೀನಾನಾಮುಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೫॥

ಭೂತಾರ್ಚನವಿಹೀನಾನಾಮುಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೬॥

ದವರೂ, ಹಣೆಯಲ್ಲಿ, ಕಂಠದಲ್ಲಿ, ತೋಳುಗಳಲ್ಲಿ ಭಸ್ಮತ್ರಿಪುಂಡ್ರರಹಿತರಾದವರೂ, ಅಕ್ಷಮಾಲೆಯನ್ನು ಧರಿಸದಿರುವವರೂ, ಶಿವಲಿಂಗದರ್ಶನಮಾಡದವರೂ, ಪ್ರದೋಷ ಕಾಲದಲ್ಲಿ ಶಿವಲಿಂಗಾರ್ಚನೆಮಾಡದವರೂ, ಭೂತಪತಿಯಾದ ಶಂಕರನನ್ನು ಭಜಿಸ ದವರೂ, ಮಹಾಪಾಪಿಗಳೆನಿಸುವರು. ಸೋಮವಾರವ್ರತ, ಅಷ್ಟಮೀತಿಥಿಯಲ್ಲಿ ಮಾಡುವ ಶೈವವ್ರತ, ಶಿವಕ್ಷೇತ್ರವಾಸ, ಶಿವಕ್ಷೇತ್ರಾತಿರಿಕ್ತಸ್ಥಳದಲ್ಲಿ ವಾಸಮಾಡ ದಿರುವಿಕೆ, ಶಿವನಾಮುಗಳನ್ನು ಧರಿಸುವಿಕೆ, ಶಿವನೈವೇದ್ಯಶುದ್ಧವಾದ ಆಹಾರ ಭೋಜನ

ಸೋಮವಾರವಿಹೀನಾನಾಮಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೭॥

ಅಷ್ಟಮ್ಯರ್ಚನಹೀನಾನಾಮಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೮॥

ಮಮ ಕ್ಷೇತ್ರೋಜ್ಝಿತಾನಾಂ ಚ ಅಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೩೯॥

ಅನ್ಯಕ್ಷೇತ್ರಸ್ಥಿತಾನಾಂ ಚಾಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೪೦॥

ಮಮ ನಾಮವಿಹೀನಾನಾಮಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೪೧॥

ಮಮ ನೈವೇದ್ಯಹೀನಾನಾಮಶೈವಾನಾಂ ದುರಾತ್ಮನಾಂ ।
ಭವಂತಿ ವಿಪದಸ್ಸದ್ಯೋ ನರಕಾಶ್ಚಾಪಿ ದಾರುಣಾಃ ॥೪೨॥

ಮಮ ಲಿಂಗಸಮಂ ದೇವಿ ವಿಷ್ಣ್ವಾದಿಪರಿಪೂಜನಂ ।
ಯೇ ಕುರ್ವಂತಿ ಮಹಾಪಾಪಾಸ್ತೇಷಾಂ ದುಃಖಮನರ್ಗಲಂ ॥೪೩॥

ಭವಂತಿ ವಿಪದಸ್ಸದ್ಯೋ ನರಕಾಶ್ಚಾತಿದಾರುಣಾಃ ।
ಬಿಲ್ವಪತ್ರೋಜ್ಝಿತಾನಾಂ ತು ಅಶೈವಾನಾಂ ದುರಾತ್ಮನಾಂ ॥೪೪॥

ಇವುಗಳನ್ನು ದೂರಮಾಡಿ ಶಿವನಲ್ಲಿ ಭಕ್ತಿಯಿಡದವರು ನಿಜವಾಗಿಯೂ ದುರಾತ್ಮರೆನಿಸುವರು. ಅಂತಹವರಿಗೆ, ಅನೇಕ ವಿಪತ್ತುಗಳೂ, ಭಯಂಕರವಾದ ನರಕಪ್ರಾಪ್ತಿಯೂ ಒದಗುವುದರಲ್ಲಿ ಸಂಶಯವಿಲ್ಲ. ||೨೭-೨೮-೨೯-೩೦-೩೧-೩೨-೩೩-೩೪-೩೫-೩೬-೩೭-೩೮-೩೯-೪೦-೪೧-೪೨||

ಎಲೌ ದೇವಿಯೇ, ಯಾರು ನನ್ನ ಶಿವಲಿಂಗಪೂಜೆಗೆ ಸಮನಾಗಿ ವಿಷ್ಣ್ವಾದಿ ದೇವತೆಗಳ ಪೂಜೆಯನ್ನು ತಿಳಿಯುವರೋ, ಅವರು ಮಹಾಪಾಪಿಗಳೆನಿಸುವರು. ಮತ್ತು ಪೂಜಾಕಾಲದಲ್ಲಿ ಯಾರು ಬಿಲ್ವಪತ್ರೆಯನ್ನು ಶಿವಲಿಂಗಕ್ಕೆ ಅರ್ಪಿಸುವುದಿಲ್ಲವೋ ಅವರು ನಿಜವಾಗಿಯೂ ಅನೇಕ ದುಃಖಗಳಿಗೆ ಸಿಕ್ಕಿ ನರಕಭಾಗಿಗಳಾಗುವುದರಲ್ಲಿ ಸಂಶಯವಿಲ್ಲ. ||೪೩-೪೪||

ಭವಂತಿ ವಿಪದಸ್ಸದ್ಯೋ ನರಕಾಶ್ಚಾತಿದಾರುಣಾಃ ।
ಮಾಂ ಪಶ್ಯಂತಿ ಸಮಂ ದೇವಿ ಯೇ ತು ವಿಷ್ಣ್ವಾದಿಭಿಸ್ಸಹ ॥೪೫॥

ತೇಷಾಂ ನ ದೂರಗಾ ದೇವಿ ಚಾಪದೋ ನಿರಯಾ ಅಪಿ ।
ಮದ್ಭಕ್ತಮನ್ಯಭಕ್ತೈಶ್ಚ ಸಮಂ ಪಶ್ಯಂತಿ ಯೇ ಜಡಾಃ ॥೪೬॥

ತೇಷಾಂ ನ ದೂರಗಾ ದೇವಿ ಚಾಪದೋ ನಿರಯಾ ಅಪಿ ।
ಏವಂ ಧರ್ಮೋಜ್ಝಿತಧಿಯೋ ನರಾ ಅಪಿ ಸುರಾಶ್ಮಿನೇ ॥೪೭॥

ತ ಏವ ರಾಸಭಾ ಜಾತಾ ವಿದ್ವಾಂಸೋ ಬಹುವಿಶ್ರುತಾಃ ।
ಮೃದೋರ್ಧ್ವಪುಂಡ್ರಂ ಯೇ ಕುರ್ಯುರಶೈವಾ ಜಡಬುದ್ಧಯಃ ॥೪೮॥

ತ ಏವ ನಾರಕಾಃ ಪಾಪಾಸ್ತೇ ಯಮಾತಿಥಯೋಽಂಬಿಕೇ ।
ಭಸ್ಮತ್ರಿಪುಂಡ್ರರುದ್ರಾಕ್ಷೇ ಯೇಷಾಂ ಲಜ್ಜಾ ಶಿವಾರ್ಚನೇ ॥೪೯॥

ಯಾರು ವಿಷ್ಣ್ವಾದಿದೇವತೆಗಳನ್ನು ನನಗೆ ಸಮನನ್ನಾಗಿ ತಿಳಿಯುವರೋ, ಹಾಗೆಯೇ ನನ್ನ ಭಕ್ತರನ್ನು ಉಳಿದ ದೇವತೆಗಳ ಭಕ್ತರಿಗೆ ಸಮರನ್ನಾಗಿ ಭಾವಿಸುವರೋ ಅವರೆಲ್ಲರೂ ಜಡರೆನಿಸುವರು. ಮತ್ತು ಅಂತಹವರಿಗೆ ಆಪತ್ತೆಂಬುದೂ, ನರಕವೆಂಬುದೂ ಅತ್ಯಂತ ಹತ್ತಿರದಲ್ಲಿರತಕ್ಕದ್ದಾಗುವುವು. ॥೪೫-೪೬॥

ದೇವಿಯೇ, ನನ್ನ ಭಕ್ತರ ಮಹಿಮೆಯನ್ನು ಸರಿಯಾಗಿ ತಿಳಿಯದೆ ಅವರನ್ನು ಇತರ ದೇವತೆಗಳ ಭಕ್ತರಿಗೆ ಸಮರನ್ನಾಗಿ ತಿಳಿದವರಿಗೂ, ಮೇಲೆ ಹೇಳಿಪ ಶಿವಧರ್ಮಗಳನ್ನು ದೂರಮಾಡಿದ ಮನುಷ್ಯರಿಗೂ, ದೇವತೆಗಳಿಗೂ, ನರಕದ ದುಃಖಗಳೂ, ಐಹಿಕವಾದ ವಿಪತ್ತುಗಳೂ ಬಹಳ ಹತ್ತಿರದಲ್ಲಿಯೇ ಇರುವುವು. ॥೪೭॥

ಯಾರು ದೊಡ್ಡವಿದ್ವಾಂಸರಾಗಿದ್ದಾಗ್ಯೂ, ಅಜ್ಞಾನದಿಂದ ಶಿವಭಕ್ತಿಯಿಲ್ಲದೆ ಮಣ್ಣಿನಿಂದ ಊರ್ಧ್ವಪುಂಡ್ರವನ್ನು ಹಣೆಯಲ್ಲಿ ಧರಿಸುವರೋ, ಅವರು ಕತ್ತೆಗಳಾಗಿ ಜನಿಸುವರು. ॥೪೮॥

ಯಾರು ಶಿವಾರ್ಚನೆಮಾಡುವಾಗ ಭಸ್ಮತ್ರಿಪುಂಡ್ರ, ರುದ್ರಾಕ್ಷಿ ಇವುಗಳನ್ನು ಧರಿಸಿಕೊಳ್ಳಲು ನಾಚಿಕೆಪಡುವರೋ ಅವರು ನರಕಭಾಗಿಗಳಾಗುವರು. ಮತ್ತು

ತ ಏವ ರಾಸಭಾ ದೇವಿ ತೇ ಯಮಾತಿಥಯೋಽಂಬಿಕೇ ।
ಸರ್ವಶ್ರುತಿಶ್ರುತಂ ನಿತ್ಯಂ ಲಿಂಗಾರ್ಚನಮುಮೇ ಮಮ ॥೫೦॥

ತ್ಯಕ್ತ್ವಾನ್ಯದೇವಪೂಜಾಯಾಂ ಯೇ ರತಾ ರಾಸಭಾಧರಾಃ ।
ಗೃಹಸ್ಥಾ ಯತಯೋ ದೇವಿ ತೇ ಯಮಾತಿಥಯೋಽಂಬಿಕೇ ॥೫೧॥

ಮೃತ್ಫಲಾ ದಗ್ಧಚಕ್ರಾಂಕಾ ಯೇ ವಿಪ್ರಾ ವೇದವರ್ಜಿತಾಃ ।
ಆಚಾರಭಾಸುರಾಶ್ಚಾಪಿ ಅಸುರಾ ಭೂಸುರಾಶ್ಚ ತೇ ॥೫೨॥

ಯೇಽನ್ಯದೇವಸಮಂ ಮತ್ವಾ ಮಾಂ ತಿಷ್ಠಂತಿ ಕ್ಷಣಂ ವೈ ।
ತೇ ಸರ್ವೇಽಪ್ಯಂತ್ಯಜಾ ಏವ ಕರ್ಮಾನರ್ಹಾಸ್ತ ಏವ ಹಿ ॥೫೩॥

ಮಲ್ಲಿಂಗಂ ಚಾನ್ಯಲಿಂಗೈಶ್ಚ ಪೂಜಯಂತಿ ಚ ಯೇಽಧಮಾಃ ।
ತ ಏವ ಲಿಂಗದಗ್ಧಾಂಗಾಸ್ಸೂಕರೀಯೋನಿಸಂಭವಾಃ ॥೫೪॥

ಯಮನಿಗೆ ಅತಿಥಿಗಳಂತಾಗುವರು. ಅಲ್ಲದೆ ಅವರು ಗರ್ದಭಜನ್ಮದಲ್ಲಿ ಅವತರಿಸುವರು. ಅಂಬಿಕೆಯೇ, ಲಿಂಗಾರ್ಚನೆಯೆಂಬುದು, ಸರ್ವಶ್ರುತಿ ಸಮ್ಮತವಾದದ್ದು. ||೫೦-೫೧||

ಅಂತಹ ಲಿಂಗಾರ್ಚನೆಯನ್ನು ಗೃಹಸ್ಥರೂ, ಯತಿಗಳೂ, ತಪ್ಪದೆ ಆಚರಿಸಬೇಕು. ಹಾಗೆ ಲಿಂಗಾರ್ಚಕರಾಗದೆ ಇತರ ದೇವತಾರಾಧನೆ ಮಾಡುವ ಗೃಹಸ್ಥರೂ, ಸಂನ್ಯಾಸಿಗಳೂ, ಗರ್ದಭಜನ್ಮ ತಾಳಿದವರಾಗಿ, ಯಮನ ಅತಿಥಿಗಳಾಗಿ ಹೋಗುವರು. ||೫೨||

ಬ್ರಾಹ್ಮಣರಾದರೂ, ವೈದಿಕಕರ್ಮಬಾಹಿರರಾಗಿ, ಮೃತ್ತನ್ನು ಹಣೆಯಲ್ಲಿಟ್ಟು ತಪ್ತಮುದ್ರಾಧಾರಣೆಯಿಂದ ತಾವು ಆಚಾರಶೀಲರೆಂದು ಹೇಳಿಕೊಳ್ಳುವರು. ನಿಜವಾಗಿಯೂ ಅವರು ಆಚಾರಶೀಲರಲ್ಲ. ರಾಕ್ಷಸರಾದ ಭೂಸುರರು. ಯಾರು ನನ್ನನ್ನು ಉಳಿದ ಸಾಮಾನ್ಯದೇವತೆಗಳಂತೆ ಭಾವಿಸಿ, ಕ್ಷಣಕಾಲ ಆ ಮನೋಭಾವನೆಯಲ್ಲಿದ್ದರೂ, ಅವರು ಅಂತ್ಯಜರಿಗೆ ಸರಿಸಮರಾಗುವರು. ಕರ್ಮಬಾಹಿರರೆನಿಸುವರು. ||೫೨-೫೩||

ಕೆಲವರು ನನ್ನ ಶಿವಲಿಂಗವನ್ನೇ ರೂಪಾಂತರಗೊಳಿಸಿ ಅನ್ಯದೇವತಾಚಿಹ್ನೆಗಳಿಂದ ಬೇರೆ ದೇವರೆಂದು ತೋರ್ಪಡಿಸಿ ಪೂಜಿಸುವರು. ಅಂತಹವರು ಲಿಂಗದೇಹ

ತಸ್ಮಾನ್ಮದರ್ಚನಂ ಧ್ಯಾನಂ ನ ತ್ಯಾಜ್ಯಂ ವೈದಿಕೈರ್ದ್ವಿಜೈಃ ।
ತೇಷಾಮೇವಾತ್ಮವಿಜ್ಞಾನಂ ಮಮ ಲಿಂಗಾರ್ಚನೇ ರತಾಃ ॥೫೫॥

ಯೇ ಭಸ್ಮನಿಷ್ಠಾಸ್ಸತತಂ ರುದ್ರಾಧ್ಯಾಯಾರ್ಥವಿತ್ತಮಾಃ ।
ತೇಷಾಮೇವಾತ್ಮವಿಜ್ಞಾನಂ ಮಮ ಲಿಂಗಾರ್ಚನೇ ರತಾಃ ॥೫೬॥

ಯೇ ತು ಪಂಚಾಕ್ಷರಾಸಕ್ತಾಸ್ಸದಾರುದ್ರಾಕ್ಷಧಾರಿಣಃ ।
ತೇಷಾಮೇವಾತ್ಮವಿಜ್ಞಾನಂ ಮಮ ಲಿಂಗಾರ್ಚನೇ ರತಾಃ ॥೫೭॥

ಯೇ ತು ಮತ್ಕ್ಷೇತ್ರನಿರತಾಶ್ಶ್ರುತ್ಯುಕ್ತೇನೈವ ವರ್ತ್ಮನಾ ।
ತೇಷಾಮೇವಾತ್ಮವಿಜ್ಞಾನಂ ಮಮ ಲಿಂಗಾರ್ಚನೇ ರತಾಃ ॥೫೮॥

ತಸ್ಮಾನ್ಮತ್ಪರಮೋ ಭೂಯಾದಹಂ ತೇಷಾಂ ತು ಮೋಚಕಃ
ಪಾಪಸಂಸಾರದುಃಖಾಬ್ಧೇಸ್ತಾರಕೋಽಹಂ ಮಹೇಶ್ವರಿ ॥೫೯॥

ವನ್ನು ಕಳೆದುಕೊಂಡು, ಒಡನೆಯೇ ಹಂದಿಯ ಜನ್ಮವನ್ನು ತಾಳುವರು. ಆದ್ದರಿಂದ ವೈದಿಕರಾದ ದ್ವಿಜರು ಯಾವಾಗಲೂ, ನನ್ನ ಅರ್ಚನೆಯನ್ನೂ, ಧ್ಯಾನವನ್ನೂ ಬಿಡಬಾರದು. ಯಾರು ಲಿಂಗಾರ್ಚನೆಯಲ್ಲಿ ಆಸಕ್ತರಾಗುವರೋ, ಅವರೇ ಆತ್ಮಜ್ಞಾನಿಗಳೆನಿಸುವರು. ॥೫೫-೫೬॥

ಯಾರು ಭಸ್ಮಲಿಪ್ತಾಂಗರಾಗಿ ರುದ್ರಾಧ್ಯಾಯಪಾರಾಯಣವನ್ನು ಅರ್ಥವತ್ತಾಗಿ ಮಾಡುವರೋ, ಯಾರು ರುದ್ರಾಕ್ಷಿಯ ಧಾರಣೆಯಿಂದ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುವರೋ, ಯಾರು ವೇದವಿಹಿತವಾದ ಕರ್ಮಗಳನ್ನೆಲ್ಲಾ ನನ್ನ ಕ್ಷೇತ್ರಗಳಲ್ಲಿ ನೆರವೇರಿಸುವರೋ ಅವರೇ ಆತ್ಮಜ್ಞಾನಿಗಳು. ಅವರೇ ಶಿವಲಿಂಗಾರ್ಚನಾಸಕ್ತರು. ॥೫೭-೫೮-೫೯॥

ಮಹೇಶ್ವರಿಯೇ, ಯಾರು ಸರ್ವದಾ ನನ್ನನ್ನೇ ಧ್ಯಾನಿಸುವರೋ, ಅವರನ್ನು ನಾನು ಸುಲಭವಾಗಿ ಮುಕ್ತರನ್ನಾಗಿ ಮಾಡುವೆನು. ಪಾಪಭೂಯಿಷ್ಠವಾದ ಸಂಸಾರ ದುಃಖವೆಂಬ ಸಮುದ್ರದಿಂದ ಪಾರುಗಾಣಿಸುವವನು ನಾನೇ ಅಲ್ಲವೆ! ॥೫೯॥

ಸುರಾಣಾಂ ಗರ್ವನಾಶಾರ್ಥಂ ಸೃಷ್ಟೋ ವಿಶ್ರವಸಸ್ಸುತಃ ।
ವಿಷ್ಣುಶ್ಚ ಭೃಗುಶಾಪೇನ ಮಾನುಷೇಷು ಜನಿಷ್ಯತಿ ॥೬೦॥

ತಸ್ಯ ಭಾರ್ಯಾಪಹರಣಾನ್ಮುನಿಸಂಪೀಡನಾದಪಿ ।
ಕದಾಚಿದಾಗಾದ್ಧರ್ಷೇಣ ಕೈಲಾಸಂ ಮಮ ರಾವಣಃ ॥೬೧॥

ಅಖರ್ವಗರ್ವಸಂಕ್ರಾಂತಃ ಕೈಲಾಸಸ್ಯಾಪಿ ಗರ್ವಹೃತ್ ।
ತೋಲಯಾಮಾಸ ಬಾಹುಭ್ಯಾಂ ಕೈಲಾಸಂ ಮಮ ಶೈಲಜೇ ॥೬೨॥

ಕೈಲಾಸಶ್ಚಾಲಿತಸ್ತೇನ ನಾನಾಲಿಂಗಸಮಾಶ್ರಯಃ ।
ಮಹಾಮನ್ಯೋರ್ಮಮ ತದಾ ಮನ್ಯುನಾ ಸೋಧರೀಕೃತಃ ॥೬೩॥

ತೇನ ಸ್ತುತೋಽಸ್ಮಿ ವೇದೈಶ್ಚ ವೇದವೇದ್ಯೋಽಹಮೀಶ್ವರಿ ।
ಸಾಮ್ನಾ ಸಹಸ್ರಂ ಶರದಾಂ ತುಷ್ಟಾವಾಷ್ಟಾಕೃತಿಂ ಹಿ ಮಾಂ ॥೬೪॥

---

ಹಿಂದೆ ದೇವತೆಗಳಿಗೆ ಒದಗಿದ್ದ ಗರ್ವವನ್ನು ನಿವಾರಣೆಮಾಡಲೋಸುಗ ವಿಶ್ರವಸುಪುತ್ರನಾದ ರಾವಣನನ್ನು ನಾನೇ ಸೃಷ್ಟಿಮಾಡಿದೆನು. ಆ ಕಾಲಕ್ಕೆ ಸರಿಯಾಗಿ ಭೃಗುಋಷಿಯ ಶಾಪದಿಂದ ವಿಷ್ಣುವೂ ಮನುಷ್ಯನಾಗಿ ಜನಿಸಿದನು. ॥೬೦॥

ಶ್ರೀರಾಮನಾಗಿ ಅವತರಿಸಿದ್ದ ವಿಷ್ಣುವಿನ ಭಾರ್ಯೆಯನ್ನು ಅಪಹರಿಸಿ, ಅನೇಕ ಋಷಿಜನರನ್ನು ಹಿಂಸಿಸಿ, ರಾವಣನು ಒಂದು ಸಾರಿ ಸಂತೋಷದಿಂದ ಕೈಲಾಸಕ್ಕೆ ಬಂದನು. ॥೬೧॥

ಅತಿಶಯವಾದ ಅಹಂಕಾರದಿಂದ ಮೆರೆಯುತ್ತಿದ್ದ ಕೈಲಾಸಪರ್ವತದ ಸೊಕ್ಕನ್ನು ಮುರಿಯಲು ರಾವಣನು ತನ್ನ ಎರಡು ಬಾಹುಗಳಿಂದ ಕೈಲಾಸಪರ್ವತವನ್ನು ಅಲ್ಲಾಡಿಸಿದನು. ॥೬೨॥

ಅನೇಕ ಲಿಂಗಗಳಿಗೆ ಆಶ್ರಯವಾಗಿರುವ ಕೈಲಾಸಪರ್ವತವು ಅವನ ಶಕ್ತಿಯಿಂದ ಅಲುಗಾಡಿಹೋಯಿತು. ಇದರಿಂದ ಕುಪಿತನಾದ ನಾನು ಆ ರಾವಣನನ್ನು ತೋಳುಗಳ ಸಮೇತವಾಗಿ ಮೆಟ್ಟಿದೆನು. ॥೬೩॥

ಆಗ ರಾವಣನು ಸಹಸ್ರವರ್ಷಪರ್ಯಂತವಾಗಿ, ಸಾಮವೇದದಿಂದ ನನ್ನನ್ನು ಬಹುವಾಗಿ ಸ್ತುತಿಸಿದನು. ವೇದವೇದ್ಯನೂ, ಅಷ್ಟಮೂರ್ತಿಯೂ ಆದ ನಾನು ಅದರಿಂದ ತೃಪ್ತಿಗೊಂಡೆನು. ॥೬೪॥

**ಮದಂಗುಷ್ಠಾಗ್ರನಿರ್ಮಗ್ನಧರಣೀಧರಮೂಲಗೈಃ ।**
**ಬಾಹುಭಿಃ ಪೀಡಿತೋ ದೇವಿ ದಶಾಸ್ಯೈರ್ಮಾಮರೋರವೀತ್ ॥೬೫॥**

**ದಯಯಾ ಮೋಚಿತಂ ರಕ್ಷಸ್ತದಾ ಸ್ತೋತ್ರೇಣ ಮಾಂ ಸ್ತುವತ್ ।**
**ಸ್ತುತ್ವಾ ನತ್ವಾ ನಿರ್ಜಗಾಮ ದಿಶಂ ಮೇ ನಾವಲೋಕಯನ್ ॥೬೬॥**

**ಕೈಲಾಸೋಽಪಿ ಮಹಾದೇವಿ ತ್ಯಕ್ತಗರ್ವೋ ಬಭೂವ ಹ ॥೬೭॥**

॥ ದೇವ್ಯುವಾಚ ॥

**ಕಥಂ ತೇನ ಮಹಾದೇವ ಸಂಸ್ತುತೋಽಸಿ ವದಾದ್ಯ ತಂ ।**
**ಕಿಂ ವಾ ತೇನ ತಪಸ್ತಪ್ತಂ ಶ್ರೋತುಮಿಚ್ಛಾಽಸ್ತಿ ಮೇ ಪ್ರಭೋ ॥೬೮॥**

॥ ಈಶ್ವರ ಉವಾಚ ॥

**ತತ್ಸ್ತುತಿಂ ಸಾವಧಾನೇನ ಪಾರ್ವತಿ ಶೃಣು ತೇ ವದೇ ।**
**ರಾವಣೋ ರೋರವೀದ್ದೇವಿ ಮಚ್ಛೈಲವರಮೂಲಗಃ ।**
**ದೀನಸ್ವರೋಽತಿವಿಕೃತಂ ಸಾಮ್ನಾವಿಲವಿಲೋಚನಃ ॥೭೦॥**

---

ನನ್ನ ಕಾಲಿನ ಒಂದು ಬೆರಳಿನಿಂದ ಮೆಟ್ಟಿದ ಮಾತ್ರದಿಂದಲೇ ಅವನ ತೋಳುಗಳು ಪಾತಾಳಲೋಕದಲ್ಲಿ ಸಿಕ್ಕಿಕೊಂಡಿದ್ದುವು. ಅದರಿಂದ ರಾವಣನು ದುಃಖಿತನಾಗಿ ತನ್ನ ಹತ್ತು ಮುಖಗಳಿಂದಲೂ ನನ್ನನ್ನು ಬಹುವಾಗಿ ಸ್ತುತಿಸುತ್ತಾ ರೋದಿಸಲಾರಂಭಿಸಿದನು. ॥೬೫॥

ಆಗ ನಾನು ದಯೆಯಿಂದ ಅವನ ತೋಳುಗಳನ್ನು ಬಿಡಿಸಿದೆನು. ಅದಕ್ಕಾಗಿ ಅವನು ಬಹುವಾಗಿ ನನ್ನನ್ನು ಸ್ತುತಿಸಿ, ನಮಸ್ಕರಿಸಿ, ಮತ್ತೆ ನನ್ನ ದಿಕ್ಕನ್ನೇ ತಿರುಗಿ ನೋಡದಂತೆ ಓಡಿಹೋದನು. ದೇವಿಯೇ, ಅಂದಿನಿಂದ ಕೈಲಾಸವು ತನ್ನ ಅಹಂಕಾರವನ್ನು ಬಿಟ್ಟು ಬಿಟ್ಟಿತು." ॥೬೬-೬೭॥

ಎಂದು ಪರಮೇಶ್ವರನು ಹೇಳಲು, ಮತ್ತೆ ಪಾರ್ವತಿಯು ಈಶ್ವರನನ್ನು ಕುರಿತು, "ಸ್ವಾಮಿಯೇ, ರಾವಣನು ನಿನ್ನನ್ನು ಹೇಗೆ ಸ್ತುತಿಸಿದನು? ಅವನು ಮಾಡಿದ ತಪಸ್ಸಿನ ಕ್ರಮವೆಂತು? ಯಾವ ಸ್ತೋತ್ರದಿಂದ ನೀನು ಆಗ ತೃಪ್ತನಾದೆ? ಅದನ್ನು ದಯೆಯಿಂದ ನನಗೆ ತಿಳಿಸಬೇಕು" ಎಂದು ಕೇಳಿಕೊಂಡಳು. ॥೬೮॥

ಅದನ್ನು ಕೇಳಿ ಮಹೇಶ್ವರನು, ರಾವಣನು ಕೈಸಿಕ್ಕಿಸಿಕೊಂಡು ಗೋಳಾ

|| ರಾವಣ ಉವಾಚ ||

ತಾರಾರಾಜನಿರಾಜಮಾನಮಕುಟಂ ಕಾಕೋದರಾಕಲ್ಪಕಂ ।
ಕರ್ಪೂರಾಭಶರೀರಕಾಂತಿವಿಲಸನ್ಮಾರಾಂಗಭಸ್ಮಾದರಂ ।
ಕೈಲಾಸಾಚಲತೋಲನೇನ ಕುಪಿತಾಂಗುಷ್ಠಾಗ್ರಸಂಪೀಡಿತಃ ।
ಶೈಲಾಘಾತಸ್ವಬಾಹುಭಗ್ನ ಜರತದ್ವೈರಾಜಸಾಮಶ್ರವಾ ।
ದುನ್ಮುಕ್ತಾಖಿಲರಾವಣಂ ಪುರಹರಂ ದೇವಂ ಭಜೇ ಶಂಕರಂ ॥೭೦॥

ವೈರಾಜರಾಜನಗಹಿಂಕೃತಿಕಾತಿತುಷ್ಟಂ ।
ರಾಜಚ್ಛಶಾಂಕಧವಲಂ ಲಲಿತೋತ್ತಮಾಂಗಂ ।
ಯಕ್ಷಾಧಿರಾಜಕೃತಸಖ್ಯಮುಮಾಸಹಾಯಂ ।
ದೇವಂ ನಮಾಮಿ ಸುರರಾಜಕೃತಪ್ರಣಾಮಂ ॥೭೧॥

ಡಿದ್ದನ್ನೂ, ದೀನಸ್ವರದಿಂದ ಕೈಲಾಸದ ತಪ್ಪಲಿನಲ್ಲಿ ನಿಂತು ತನ್ನನ್ನು ವಿಧವಿಧವಾಗಿ ಸ್ತುತಿಸಿದ್ದುದನ್ನೂ ದೇವಿಗೆ ತಿಳಿಯುವಂತೆ ವಿವರಿಸಿದನು. ||೭೦||

ಕೈಲಾಸಪರ್ವತವನ್ನು ತನ್ನ ಬಾಹುಬಲದಿಂದ ಅಲುಗಾಡಿಸಲು ಹೋಗಿ, ಅಲ್ಲಿ ಕುಪಿತನಾದ ಪರಶಿವನ ಅಂಗುಷ್ಠಾಗ್ರದಿಂದ ಮೆಟ್ಟಿದ ಬೆಟ್ಟಕ್ಕೆ ಕೈಸಿಕ್ಕಿಸಿಕೊಂಡು ನರಳುತ್ತಿರುವ ರಾವಣನು ಹೀಗೆ ಸ್ವಾಮಿಯನ್ನು ಸ್ತುತಿಸಿದನು. " ಓ ಪರಮೇಶ್ವರನೇ, ತಾರಾಧಿಪತಿಯಾದ ಚಂದ್ರನನ್ನು ಕಿರೀಟದಲ್ಲಿ ಧರಿಸಿಕೊಂಡಿರುವನೇ, ಸರ್ಪಗಳನ್ನೇ ಆಭರಣಗಳನ್ನಾಗಿಯುಳ್ಳವನೇ, ಕರ್ಪೂರರಾಶಿಯಂತೆ ಶುಭ್ರವಾಗಿರುವ ಸ್ವದೇಹಕ್ಕೆ ಮನ್ಮಥನ ದೇಹಭಸ್ಮವನ್ನು ಬಳಿದುಕೊಂಡಿರುವವನೇ, ನೀನು ನನ್ನ ವೈರಾಜಸಾಮ ಗಾನವನ್ನು ಕೇಳಿ, ತೃಪ್ತನಾಗಿ ನನಗೆ ಒದಗಿದ್ದ ದುಃಖವನ್ನು ಪರಿಹರಿಸಿರುವೆ. ತ್ರಿಪುರಾರಿಯೇ, ಶಂಕರನೇ, ನಿನ್ನನ್ನು ಸರ್ವದಾ ಭಜಿಸುತ್ತಿರುವೆನು. ||೭೦||

ವೈರಾಜ, ರಾಜನ ಮುಂತಾದ ಹಿಂಕಾರಪ್ರಧಾನವಾದ ಸಾಮಗಾನದಿಂದ ತುಷ್ಟನೂ, ಶುಭ್ರವಾದ ಶಶಾಂಕದಂತೆ ಕಾಂತಿಯುಳ್ಳವನೂ, ಮನೋಹರವಾದ ಶಿರಸ್ಸುಳ್ಳವನೂ, ಕುಬೇರನ ಪರಮಮಿತ್ರನೂ, ಪಾರ್ವತೀಪತಿಯೂ, ದೇವದೇವೇಂದ್ರಾದಿಗಳಿಂದ ವಂದಿತನೂ ಆದ ಪರಶಿವನೇ, ನಿನಗೆ ನಮಸ್ಕರಿಸುವೆನು. ||೭೧||

ಇಲಾಧರಸುತಾಪ್ರಿಯಂ ವರಸುನಂದಿವಾಹಪ್ರಿಯಂ ।
ಸುರೇಂದ್ರವರಸುಪ್ರಿಯಂ ಪ್ರಭವಕುಂದಮಾಲಾಪ್ರಿಯಂ ।
ಮುಕುಂದನಯನಾರ್ಚಿತಂ ಭವಹರಂ ಸುಮೇರುಸ್ಥಿತಂ ।
ರಮಾರಮಣಸುಂದರಾಕ್ಷಿಯುಗಪೂಜಿತಂ ಶಂಕರಂ ॥೭೩॥

ಗಂಧಬಂಧಮಧುರಾಲಕಲೋಲಂ
ರುದ್ರನೇತ್ರಸುಚರಿತ್ರಮಪಾರಂ ।
ದಯಾನಿಧಾನಾಖಿಲಮಿತ್ರಶಕ್ತೇ
ಕೃಪಾಂಬುಧೇ ಕಾಮದ ಕಾಮವೈರಿನ್ ॥೭೪॥

ಸ್ತೌಮಿ ಪ್ರಕೃಷ್ಟವಚಸಾಪರಮೇಶಮಿತ್ರ ।
ಸಾಮ್ಯೈಃ ಭರ್ಗವಂತಮನುಗತಃ ಪರಿಮೋಚಯಾಶು ॥೭೫॥

ಪರ್ವಾನಂದಿತಶರ್ವರೀರಮಣವತ್ಕಾಂತೇಂದುಧಾಮಾನನ
ಗಾತ್ರಾರ್ಧಾಧಿಕೃತಸ್ವಕಾಂತಿವದನೇ ನೇತ್ರೇ ಚ ಮೌಲೌ ತಥಾ ।

---

ಗಿರಿರಾಜಪುತ್ರಿಯೂ, ನಂದಿವಾಹನನೂ ಆದ ಪರಮೇಶ್ವರನೇ, ನೀನು ದೇವೇಂದ್ರನಿಗೆ ಹಿತವನ್ನುಂಟುಮಾಡಿರುವೆಯಲ್ಲವೇ ? ಕುಂದಪುಷ್ಪಗಳ ಮಾಲಾ ಧಾರಣೆಯಲ್ಲಿ ಅತ್ಯಂತಾಸಕ್ತನಾದವನಲ್ಲವೇ ? ಮಹಾವಿಷ್ಣುವಿನ ನೇತ್ರಕಮಲಗಳಿಂದ ಅರ್ಚಿತನಾಗಿ, ಸಕಲರ ಸಂಸಾರದುಃಖಗಳನ್ನೂ ನಿವಾರಿಸುತ್ತಾ ಮೇರುಪರ್ವತದಲ್ಲಿ ನೆಲಸಿ, ಲಕ್ಷ್ಮೀಪತಿಯಿಂದ ಅರ್ಚಿತವಾದ ಪಾದಪದ್ಮವುಳ್ಳ ಮಹೇಶ್ವರನೇ, ನಿನಗೆ ವಂದನೆ. ॥೭೩॥

ಸುವಾಸನಾವಿಶಿಷ್ಟವಾಗಿರುವ ಚಂಚಲವಾದ ಮುಂಗುರುಳುಳ್ಳ ಮತ್ತು ಭಯಂಕರವಾದ ಅಗ್ನಿನೇತ್ರದಿಂದ ಪ್ರಳಯಕಾಲನೆನಿಸಿರುವ ಪರಮೇಶ್ವರನೇ, ಸಕಲ ಇಷ್ಟಾರ್ಥಗಳನ್ನೂ ಭಕ್ತರಿಗೆ ಒದಗಿಸುವ ಕಾಮವೈರಿಯೇ, ನಿನಗೆ ಶಿರಸಾನಮಸ್ಕರಿಸುವೆನು. ॥೭೪॥

ಪರಮೇಶ್ವರನೇ, ನಿನ್ನನ್ನು ಉತ್ಕೃಷ್ಟಗಳಾದ ಸಾಮಭೇದಗಳಿಂದ ಅತಿಶಯವಾಗಿ ಸ್ತುತಿಸುವೆನು. ನನ್ನನ್ನು ಉದ್ಧರಿಸು. ॥೭೫॥

ಪೂರ್ಣಿಮಾಚಂದ್ರನಂತೆ ಸರ್ವದಾ ಪ್ರಕಾಶಿಸುತ್ತಿರುವ ವದನವುಳ್ಳ ಪರಮೇಶ್ವರನೇ, ನಿನ್ನ ಅರ್ಧದೇಹವೂ, ಕಣ್ಣು, ಶಿರಸ್ಸು ಮುಂತಾದ ಅವಯವಗಳಲ್ಲಿ ಅರ್ಧ

ದೇವೇಶೇನ ಸದೈವ ಶೋಭಿತಕಲಾಯುಕ್ತೇನ ಬಾಲಾಂಕಧೃ
ಕ್ತ್ರಾದೃಕ್ಷಂ ಜಗತಾಂ ಗುರುಂ ತ್ರಿಜಗತಾಂ ಪಾಪಾಪಹಂ ತಂ ಭಜೇ॥೭೬॥

ಏವಂ ತುಷ್ಟಾವ ಚಾಷ್ಟಾಕೃತಿಮುಖಿಲತನೂದ್ಭಾಸಿಕೋಽಶೈಕಕಾಶಂ
ಮಾಮೀಶಂ ಜಗದಾರ್ತಿನಾಶನಮುನೋ ಚಾರ್ತಸ್ತದಾ ರಾವಣಃ ।
ಕೈಲಾಸಾಚಲತೋ ವಿಮುಕ್ತಭುಜಧೃಙ್ನತ್ವಾ ಯಯೌ ಧಾಮುಕಂ
ಲಂಕಾಮೂಲನಿಕೇತನಂ ಮಮ ಸದಾ ಲಿಂಗಾರ್ಚಕಶ್ಶಂಕರಿ ॥೭೭॥

ಸುರಶರಗಜಜೋರುಸದ್ವಿಷಾಣೈಃ
ಪರಿಧೃತಕಿಣತಃ ಕಿಣಾಕ್ತವಕ್ಷಾಃ ।
ರಣಭುವಿ ರಾವಿತದೇವರಾಜಸಂಘಃ
ಪರಿಣತಪ್ರಾಣಗಣಸ್ಸರಾವಣೇಶಃ ॥೭೮॥

ಭಾಗವೂ ನಿನ್ನ ಪುರುಷವರ್ಚಸ್ಸಿನಿಂದ ಪ್ರಕಾಶಿಸುತ್ತಿರುವುದಲ್ಲವೇ ? ಸಕಲ ಕಲಾಪೂರ್ಣನಾದ ಬಾಲಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿ, ಜಗತ್ತಿಗೆಲ್ಲಾ ಗುರುವೆನಿಸಿ, ಜಗತ್ತ್ರಯದ ಭಕ್ತರ ಪಾಪವನ್ನೆಲ್ಲಾ ಪರಿಹರಿಸುವ ಮಹೇಶ್ವರನೇ, ನಿನಗೆ ಭಕ್ತಿಯಿಂದ ವಂದಿಸುವೆನು." ॥೭೬॥

ಹೀಗೆಂದು ದುಃಖಮುಕ್ತನಾದ ರಾವಣನು ಅಷ್ಟಮೂರ್ತಿಯೂ, ಜಗದಾರ್ತಿ ನಾಶಕನೂ ಆದ ನನ್ನನ್ನು ಬಹುವಿಧವಾಗಿ ಸ್ತುತಿಸಿ, ಭುಜಪೀಡೆಯಿಂದ ವಿಮುಕ್ತನಾಗಿ, ಕೈಲಾಸಪರ್ವತದಿಂದ ತನ್ನ ರಾಜಧಾನಿಯಾದ ಲಂಕಾನಗರಿಗೆ ತೆರಳಿದನು. ಅಂದಿನಿಂದ ರಾವಣನು ಶಿವಲಿಂಗಾರ್ಚನೆಯಲ್ಲಿ ತೊಡಗಿ ಹರಭಕ್ತಾಗ್ರಗಣ್ಯನೆನಿಸಿದನು. ॥೭೭॥

ಅಲ್ಲಿಂದ ಮುಂದೆ ದೇವೇಂದ್ರಾದಿ ದೇವತೆಗಳೊಡನೆ ಯುದ್ಧಕ್ಕೆ ಹೊರಟು, ಅವರ ಬಾಣಗಳ ಪೆಟ್ಟಿನಿಂದಲೂ ಐರಾವತದ ದಂತಗಳ ತಿವಿತದಿಂದಲೂ ಜಡ್ಡುಗಟ್ಟಿದ ಎದೆಯುಳ್ಳವನಾಗಿ ಕೊನೆಗೆ ತನ್ನ ಬಾಹುಬಲದಿಂದ ಆ ದೇವತೆಗಳನ್ನೆಲ್ಲಾ ಹೊಡೆದೋಡಿಸಿದನು. ಅಲ್ಲದೆ ತನ್ನ ಗರ್ಜನೆಯಿಂದಲೇ ಅವರು ಹೆದರುವಂತೆ ಮಾಡಿ ಸಕಲ ದೇವತಾಧಿಪನೆನಿಸಿಕೊಂಡನು. ॥೭೮॥

ನಾಲೀಕಾಸನನಂದನೋದ್ಭವಭವಃ ಪೌಲಸ್ತ್ಯ ಏಷೋಽಂಬಿಕೇ
ಮಾಮಾರಾಧ್ಯ ಗಣೇಂದ್ರತಾಮಗಸುತೇ ಪ್ರಾಪ್ತೋ ಹ್ಯವಧ್ಯಸ್ಸುರೈಃ ।
ಯೇನಾಕಾರಿ ತಪಸ್ಸ್ವಕೀಯಮನಲೇ
ಚೋತ್ಕೃತ್ಯ ಮಾಂಸಂ ಜಹೌ ॥೭೯॥

ಮಲ್ಲಿಂಗೇ ವಿದಧಾದಯಂ ಸ್ವಶಿರಸಃ ಪದ್ಮಾಲಿಮಾಲಾಪುರಾ ।
ಭ್ರಾತೃಭ್ಯಾಂ ನಿಜವೀರ್ಯನಿರ್ಜಿತಮಹಾಸೀನ್ಮೈಕಭೂಮಾಯಶಃ॥೮೦॥

ವೈರೂಪವೈರಾಜಬೃಹದ್ರಥಂತರೈ
ಶ್ಶ್ರೀವಾಮದೇವ್ಯೈರ್ವರರುದ್ರಶಾಂಕರೈಃ ।
ಶ್ರೀರೈವತೇಲಾಧರಕೈರ್ಮಹೇಂದ್ರೈ
ರ್ಮಹಾಷ್ಟದಂಷ್ಟ್ರಾಭಿರನ್ಯೈಶ್ಚ ಮಿತ್ರೈಃ ॥೮೧॥

ಅಂಬಿಕೆಯೇ, ಬ್ರಹ್ಮನ ವಂಶೋತ್ಪನ್ನನಾದ ಈ ರಾವಣನು ನನ್ನನ್ನು ಅರ್ಚಿಸಿ, ಗಾಣಾಪತ್ಯಪದವಿಯನ್ನೂ, ಹಾಗೆಯೇ ದೇವತೆಗಳಿಗೆ ಸೋಲದಿರುವ ಶಕ್ತಿಯನ್ನೂ ಪಡೆದನು. ಅವನು ತಪಸ್ಸುಮಾಡುವಾಗಲಂತೂ ತನ್ನ ತಪೋಜ್ವಾಲೆ ಯಲ್ಲಿ ತನ್ನ ದೇಹದ ಮಾಂಸವನ್ನೇ ನನಗೆ ಆಹುತಿಯನ್ನಾಗಿ ಸಮರ್ಪಿಸಿದನು.॥೭೯॥

ಅಲ್ಲದೆ ಅತ್ಯಂತ ಬಲಿಷ್ಠರಾದ ಕುಂಭಕರ್ಣ, ವಿಭೀಷಣರಿಂದ ಕೂಡಿ ತನ್ನ ನಿರತಿಶಯವಾದ ಬಾಹುಬಲದಿಂದ ಸಮಸ್ತ ಜಗತ್ತನ್ನೇ ಗೆದ್ದು ಖ್ಯಾತಿಪಡೆದನು. ಇದಕ್ಕೆ ಕಾರಣವೇನೆಂದರೆ, ಹಿಂದೆ ಈತನು ತಪಸ್ಸುಮಾಡುವಾಗ ತನ್ನ ಶಿರೋಮಾಲೆ ಗಳನ್ನು ಕತ್ತರಿಸಿ ಆಹುತಿಯಾಗಿ ಕೊಟ್ಟು, ಅದನ್ನು ನನ್ನ ಶಿವಲಿಂಗಕ್ಕೆ ಮಾಲೆಯ ನ್ನಾಗಿ ಮಾಡಿದ್ದನು. ॥೮೦॥

ವೈರೂಪ, ವೈರಾಜ, ಬೃಹದ್ರಥಂತರ, ವಾಮದೇವ, ಮುಂತಾದ ಸಾಮಗಾನ ಭೇದದಿಂದಲೂ, ಈಶ್ವರಪ್ರಿಯವಾದ ರುದ್ರಾಧ್ಯಾಯಗಳಿಂದಲೂ ನನ್ನನ್ನು ಗಟ್ಟಿಯಾಗಿ ಸ್ತುತಿಸಿದನು. ಆ ಸ್ತೋತ್ರದ ಧ್ವನಿಯು ರೈವತ, ಮಹೇಂದ್ರ ಮುಂತಾದ ಪರ್ವತಗಳ ಗುಹಗಳಿಂದ ಹೊರಡುವ ದಿಗ್ಗಜಗಳ ಧ್ವನಿಗೆ ಸದೃಶವಾಗಿತ್ತು. ॥೮೧॥

ತುಷ್ಟಾವ ಸಾಮ್ನೈಶ್ಶಿವಮೌಲಿಮಂಬಿಕೇ
ಸರಾವಣೋ ರಾವಿತಸರ್ವಲೋಕಃ ।
ರವೈಸ್ತದಾ ಸಾಮಸುಗಾನತೋಷಿತಂ ॥೮೨॥

ಕ್ಷೀರೋದಾರಪಯೋಜಜಾಪತಿಕೃತಾಪಾರಾರವಿಂದಾರ್ಚನಾ
ತ್ತುಷ್ಟಂ ಕಷ್ಟಹರಂ ಪ್ರಕೃಷ್ಟವಚಸಾ ಸ್ರಷ್ಟ್ರಾ ಪುನಸ್ಸಂಸ್ತುತಂ ।
ತ್ವಷ್ಟ್ರಾ ಶಾತಕರಾಬ್ಜಗಂಧಸಹನಾಸತ್ಕೈರವೀ ॥೮೩॥

ಮಿತ್ರಾಯೇದ್ಯ ಶಿವಸ್ಯ ನೇತ್ರನಿವಹಾಃ ಪಾಂತ್ವದ್ಯ
ದೃಷ್ಟ್ಯಾದಿ ಮಾಂ ತೇನೈವಾಮಿತಗಂಧಪರ್ವತಮಹಾ
ಪಾಪಾದಪಾಯಾಚ್ಛಿವಃ ॥೮೪॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಕೈಲಾಸಚಾಲನೇ
ರಾವಣಕೃತಸ್ತುತಿರ್ನಾಮ ಷಟ್ಚತ್ವಾರಿಂಶೋಽಧ್ಯಾಯಃ

ಸರ್ವಲೋಕಭಯಂಕರವಾದ ಗರ್ಜನೆಯುಳ್ಳ ರಾವಣನು ಸಾಮಗಾನದಿಂದ ಮನೋಹರವಾದ ಧ್ವನಿಯಿಂದ ಕೂಡಿದವನಾಗಿ ಚಂದ್ರಶೇಖರನಾದ ನನ್ನನ್ನು ಬಹುವಾಗಿ ಸ್ತುತಿಸಿದನು. ॥೮೨॥

ಮತ್ತು ರಾವಣನು, ಕಮಲಾಪತಿಯ ನೇತ್ರಕಮಲದಿಂದ ಅರ್ಚಿತನೂ, ಸರಸ್ವತೀಪತಿಯಾದ ಬ್ರಹ್ಮನಿಂದ ಸಂಸ್ತುತನೂ ಆದ ಪರಮೇಶ್ವರನನ್ನು ವಿಧವಿಧವಾಗಿ ಸ್ತುತಿಸಿದನು. ಹೀಗೆ ಸರ್ವದೇವಸ್ತುತನೂ, ಸಕಲ ದೇವತೆಗಳೆಂಬ ನೇತ್ರಕಮಲಗಳಿಗೆ ಸೂರ್ಯನಂತಿರುವವನೂ ಆದ ಪರಮೇಶ್ವರನ ನೇತ್ರಪಂಕ್ತಿಗಳು ನಮ್ಮೆಲ್ಲರ ವಿಪತ್ತುಗಳನ್ನೆಲ್ಲಾ ಪರಿಹರಿಸಿ ಸಂರಕ್ಷಿಸಲಿ. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೮೩-೮೪॥

ಇಲ್ಲಿಗೆ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಕೈಲಾಸವನ್ನು ಅಲುಗಿಸಿ ಸಂಕಟಪಟ್ಟು
ರಾವಣನು ಮಾಡಿದ ಶಿವಸ್ತುತಿಯನ್ನು ವಿವರಿಸುವ
ನಲವತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಸಪ್ತಚತ್ವಾರಿಂಶೋಽಧ್ಯಾಯಃ

### ವೇದರಹಸ್ಯಕಥನಂ

|| ದೇವ್ಯುವಾಚ ||

**ದೇವದೇವ ಮಹಾದೇವ ಕರುಣಾರಸವಾರಿಧೇ ।**
**ವಿಶ್ವ ವಿಶ್ವಾಧಿಕಾಶಾಸ್ಯ ಪ್ರಣತಾನಂದದಾಯಕ ॥೧॥**

**ಚಂದ್ರಶೇಖರ ಭೂತೇಶ [1]ಪ್ರಣತಾನಂದದಾಯಕ ।**
**ಕಿಂಚಿದ್ವಿಜ್ಞಪ್ತುಮಿಚ್ಛಾಮಿ ತನ್ಮೇ ಕಾರುಣ್ಯತೋ ವದ ॥೨॥**

**ಸುಗೋಪ್ಯಮಪಿ ದೇವೇಶ ಕರುಣಾಪಾತ್ರತಾಂ ಮಯಿ ।**
**ಜ್ಞಾತ್ವಾ ತದ್ವದ ದೇವೇಶ ರಹಸ್ಯಮಪಿ ಶಂಕರ ॥೩॥**

---

## ಶ್ರೀಶಿವರಹಸ್ಯದಲ್ಲಿ ನಲವತ್ತೇಳನೆಯ ಅಧ್ಯಾಯ

ಸುಖಾಸೀನನಾಗಿದ್ದ ಪರಮೇಶ್ವರನನ್ನು ನೋಡಿ ಮಹೇಶ್ವರಿಯು "ದೇವ ದೇವನೇ, ಮಹಾದೇವನೇ, ದಯಾಸಮುದ್ರನೇ, ಲೋಕಾತೀತನೇ, ನೀನು ಭಕ್ತರ ಇಷ್ಟಾರ್ಥವನ್ನು ನೆರವೇರಿಸಿ ಅವರಿಗೆ ಆನಂದವನ್ನುಂಟುಮಾಡುವವನಲ್ಲವೇ? ಚಂದ್ರಶೇಖರನೇ, ಸಮಸ್ತಭೂತಪತಿಯೇ, ಈಗ ನಿನ್ನಲ್ಲಿ ಕೆಲವು ವಿಷಯಗಳನ್ನು ಕೇಳಬಯಸುವೆನು. ದಯೆಯಿಂದ ನನ್ನ ಇಷ್ಟಾರ್ಥವನ್ನು ಪೂರ್ತಿಗೊಳಿಸು. ||೧-೨||

ನನ್ನ ಪ್ರಶ್ನೆಗೆ ಉತ್ತರವು ಅತ್ಯಂತ ರಹಸ್ಯವಾಗಿರಬಹುದು. ಯಾರಿಗೂ ಹೇಳಬಾರದಂತಹ ವಿಷಯವಾಗಿರಬಹುದು. ನಿನ್ನ ದಯೆಗೆ ನಾನು ಮುಖ್ಯಪಾತ್ರಳಾಗಿರುವುದನ್ನು ತಿಳಿದು, ನನ್ನ ಮೇಲಿನ ಮಮತೆಯಿಂದ ಅದನ್ನು ನನಗೆ ಉಪದೇಶಿಸು" ಎಂದು ವಿನಯದಿಂದ ಕೇಳಿಕೊಂಡಳು. ||೩||

---

1 ತ್ರಿಣೇತ್ರಮುದಾನಂದಕ ಪಾ. ರ,

|| ಸ್ಕಂದ ಉವಾಚ ||

ತದಾ ದೇವ್ಯಾ ವಚಶ್ಶ್ರುತ್ವಾ ಕೈಲಾಸಶಿಖರೇ ಸ್ಥಿತಃ ।
ಮಣಿಪ್ರಾಸಾದಮಧ್ಯಸ್ಥಮಹಾಮಂಚಾಸನಸ್ಥಿತಃ ||೪||

ಸೋಮಧಾಮಶತೋದ್ಭಾಸಿಮುಖೇನೇಂದುಕಲಾವತಾ ।
ತ್ರಿಲೋಕೋದ್ಯತ್ಪ್ರಭಾಕಾರಸೋಮಸೂರ್ಯಾಗ್ನಿಲೋಚನಃ ||೫||

ಸಜಲೋದ್ದಾಮಘನವತ್ಕಂಠಮಂಡಲಮಂಡಿತಃ ।
ಫೂತ್ಕೃತೋರುಫಣಿಭ್ರಾಜನ್ಮಣಿಕುಂಡಲಮಂಡಿತಃ ||೬||

ನವರತ್ನಚಿತಾನೇಕಮಾಲಾಜಾಲನಿರಾಜಿತಃ ।
ತ್ರಿಪುಂಡ್ರತಿಲಕಭ್ರಾಜತ್ಸಲಲಾಟತಟೋಜ್ಜ್ವಲಃ ||೭||

ಕುಂದೇಂದುಹಿಮಧಾವಲ್ಯನಿಂದಕೋತ್ತಮದೇಹಕಃ ।
ಚಂದನಾಗರುಕಸ್ತೂರೀ ಪಾಟೀರಾಸಾರಗಂಧಧೃಕ್ ||೮||

ಹೀಗೆ ಕೇಳಿಕೊಂಡ ದೇವಿಯ ಮಾತುಗಳನ್ನು ಪರಮೇಶ್ವರನು ಮಣಿಪ್ರಾಸಾದಮಧ್ಯದಲ್ಲಿ ರತ್ನಸಿಂಹಾಸನದಲ್ಲಿ ಮಂಡಿಸಿದವನಾಗಿ ಕೇಳಿದನು. ||೪||

ಪರಮೇಶ್ವರನ ಮುಖವು ನೂರಾರು ಚಂದ್ರರ ಕಾಂತಿಯನ್ನು ಏಕದಾ ಬೀರುವಂತಿತ್ತು. ತ್ರಿಲೋಕಗಳನ್ನೂ ಬೆಳಗಿಸುವಂತಹ ಸೂರ್ಯ, ಚಂದ್ರ, ಅಗ್ನಿಗಳನ್ನೇ ನೇತ್ರಗಳನ್ನಾಗಿ ಮಾಡಿಕೊಂಡಿದ್ದನು. ||೫||

ನೀರಿನಿಂದ ತುಂಬಿದ ಮೇಘದಂತೆ ಪರಶಿವನ ಕಂಠಪ್ರದೇಶವು ನೀಲವರ್ಣವಾಗಿತ್ತು. ಕಂಠದಲ್ಲಿ ಹಾರದಂತಿರುವ ಆದಿಶೇಷನ ಫೂತ್ಕಾರದಿಂದ ಪರಶಿವನ ಕರ್ಣಕುಂಡಲವು ಅತಿಶಯವಾಗಿ ಶೋಭಿಸುತ್ತಿದ್ದಿತು. ||೬||

ನವರತ್ನಮಯವಾದ ರತ್ನಹಾರವು ಸ್ವಾಮಿಯ ಉರದಲ್ಲಿ ಪ್ರಕಾಶಿಸುತ್ತಿದ್ದಿತು. ಹಣೆಯಲ್ಲಿ ಭಸ್ಮತ್ರಿಪುಂಡ್ರವೂ, ತಿಲಕವೂ ಉಜ್ಜ್ವಲವಾಗಿ ತೋರಿಬರುತ್ತಿದ್ದಿತು.||೭||

ಮಹೇಶ್ವರನ ದೇಹದ ಧಾವಳ್ಯವು ಕುಂದಪುಷ್ಪದ ಮತ್ತು ಚಂದ್ರನ ಮತ್ತು ಹಿಮರಾಶಿಯ ಶುಭ್ರತೆಯನ್ನು ತಿರಸ್ಕರಿಸುತ್ತಿದ್ದಿತು. ದೇಹವಾದ್ಯಂತವೂ, ಚಂದನ, ಅಗರು, ಕಸ್ತೂರೀ, ಶ್ರೀಗಂಧ ಇವುಗಳ ಸಾರದಿಂದ ಬಳಿಯಲ್ಪಟ್ಟದ್ದಾಗಿದ್ದಿತು. ||೮||

**ದಿವ್ಯಮಂದಾರಮಾಲಾನಾಂ ಬೃಂದಸಂದೋಹಬಂಧುರೈಃ ।**
**ಆಮೋದೋದ್ದಾಮಗಂಭೀರವಾತೈಸ್ಸಂಸೇವಿತಶ್ಶಿವಃ ॥೯॥**

**ಮಹಾರ್ಹಕಾಶಿವಾಸ್ತೀರ್ಣೇ ರತ್ನಪರ್ಯಂಕಮಂಡಲೇ ।**
**ವರರತ್ನಾಂಬರಚಿತ [1]ಉಪಧಾನಸುಶೋಭಿತೇ ॥೧೦॥**

**ನಾನಾದರ್ಶಕುಲೋದ್ಭಾಸಿಮಣಿಕುಟ್ಟಿಮಮಂಡಿತೇ ।**
**ದೀಪಿತೇ ಮಣಿದೀಪೇನ ಪ್ರಭಾವಿದ್ಯೋತಿತಾಂಬರೇ ॥೧೧॥**

**ತದ್ವಾತಾಯನಜಾಲೈಶ್ಚ ಪಶ್ಯನ್ ಲೋಕವಿಚೇಷ್ಟಿತಂ ।**
**ನಿಮೀಲನೋನ್ಮೀಲಮಿಷಾಚ್ಚಂದ್ರಸೂರ್ಯಾನಲೇಕ್ಷಣಃ ॥೧೨॥**

**ಸ್ವರ್ಗೌಕಸಾಂ ಚ ದೇವಾನಾಂ ದೈತ್ಯಾನಾಂ ವೈರಯಾತನಂ ।**
**ತೇಷಾಂ ಭಾಗಾಶ್ಚ ವಿವಿಧಾ ನಂದನಾದಿಷು ಸುಂದರಾಃ ॥೧೩॥**

ದಿವ್ಯವಾದ ಮಂದಾರಪುಷ್ಪವೇ ಮೊದಲಾದ ಪುಷ್ಪಗಳ ಮಾಲೆಯಿಂದ ಹೊರಹೊರಡುವ ಸುವಾಸನೆಯನ್ನು ಪರಮೇಶ್ವರನು ಸರ್ವದಾ ಸೇವಿಸುತ್ತಿರುವನು. ||೯||

ರತ್ನಮಯವಾದ ಮಂಚದಲ್ಲಿ ಅಮೂಲ್ಯವಾದ ಹಾಸಿಗೆಯೂ, ಅದರ ಮೇಲೆ ರತ್ನಖಚಿತವಾದ ದಿವ್ಯಪೀತಾಂಬರವೂ, ತಲೆದಿಂಬುಗಳೂ ವಿರಾಜಿಸುತ್ತಿದ್ದುವು. ಅದರ ಮೇಲೆ ಪರಶಿವನು ಮಂಡಿಸಿದ್ದನು. ||೧೦||

ಅನೇಕ ರತ್ನಗನ್ನಡಿಗಳೂ, ರತ್ನಮಯವಾದ ಜಗಲಿಗಳೂ ಬಹಳವಾಗಿ ಕಂಗೊಳಿಸುತ್ತಿದ್ದವು. ಅಕ್ಕಪಕ್ಕದಲ್ಲಿ ರತ್ನದೀಪವು ತನ್ನದೇ ಆದ ಕಾಂತಿಯಿಂದ ಸಕಲ ವಸ್ತುಗಳನ್ನೂ ಪ್ರಕಾಶಗೊಳಿಸುತ್ತಿದ್ದಿತು. ||೧೧||

ಚಂದ್ರ, ಸೂರ್ಯ, ಅಗ್ನಿ ಇವುಗಳನ್ನೇ ಕಣ್ಣುಗಳನ್ನಾಗಿ ಉಳ್ಳ ಮಹೇಶ್ವರನು, ಲೋಕರಕ್ಷಣಾರ್ಥವಾಗಿ ಒಂದೊಂದನ್ನು ಮುಚ್ಚುತ್ತಲೂ, ಮತ್ತೊಂದನ್ನು ತೆರೆಯುತ್ತಲೂ, ಅಲ್ಲಿಂದಲೇ ಅಲ್ಲಿರುವ ಕಿಟಕಿಗಳ ಮೂಲಕ ಲೋಕವ್ಯಾಪಾರವನ್ನೆಲ್ಲಾ ನೋಡುತ್ತಿರುವನು. ||೧೨||

ಸ್ವರ್ಗವಾಸಿಗಳಾದ ದೇವತೆಗಳಿಗೂ, ದೈತ್ಯರಿಗೂ ಇರುವ ದ್ವೇಷದ ಪರಿಣಾಮವನ್ನು ಅಲ್ಲಿಂದಲೇ ತಿಳಿದುಕೊಳ್ಳುವನು. ಅಲ್ಲದೆ ನಂದನವೇ ಮೊಧಲಾದ

1 ಉಪಧಾನಶತೋತ್ತರೆ, ಎಂಬ ಪಾಠಾಂತರವಿದೆ.

ಭೂಮಂಡಲೇ ನೃಪಾಣಾಂ ಚ ಪರಸ್ಪರಜಯೈಷಿಣಾಂ ।
ಯುದ್ಧಶ್ರದ್ಧಾಸಖಾನಾಂ ಚ ಧರ್ಮಾಚರಣಮುತ್ತಮಂ ॥೧೪॥

ತಪಸ್ವಿನಾಂ ಚಾಶ್ರಮಿಣಾಂ ತನುಸಂಶೋಷಣಕ್ರಿಯಾಂ ।
ಸ್ವರ್ಗಾದಿಗಮನಂ ಚೈವ ತತ್ರ ಭೋಗಪರಂಪರಾಃ ॥೧೫॥

ಭೋಗಾಂತೇ ಪತನಂ ಚೈವ ಪುನರ್ಜನ್ಮಪರಂಪರಾಃ ।
ಪಾಪಿನಾಂ ಪತನಂ ಚೈವ ನರಕಾಂಶ್ಚಾತಿಯಾತನಾನ್ ॥೧೬॥

ಗತಾಗತಂ ಚ ಲೋಕಾನಾಂ ಜನ್ಮನಾಶಸ್ಥಿತೀರಪಿ ।
ಪಶ್ಯಂತ್ಸರ್ವಂ ಸ್ವನಯನೈಃ ಕುರ್ವನ್ ಕಾಲಗತೀಸ್ತಥಾ ॥೧೭॥

ಉದ್ಯಾನವನಗಳಲ್ಲಿ ದೇವರಾಕ್ಷಸರಿಗೆ ಸಂಬಂಧಿಸಿದ ಸುಂದರವಾದ ಪ್ರದೇಶಗಳನ್ನು ಕಾಣುವನು. ||೧೩||

ಹಾಗೆಯೇ ಭೂಲೋಕದಲ್ಲಿ ರಾಜರು ಪರಸ್ಪರವಾದ ಜಯಾಭಿಲಾಷೆಯಿಂದ ಯುದ್ಧದಲ್ಲಿ ಆಸಕ್ತಿವಹಿಸುವುದನ್ನೂ, ತತ್ಪ್ರಯುಕ್ತವಾಗಿ ಇತರ ಸ್ನೇಹಿತರು ಸಹಾಯ ಕಾರ್ಯಗಳನ್ನು ನೆರವೇರಿಸುವುದನ್ನೂ ನೋಡುವನು. ||೧೪||

ಬ್ರಹ್ಮಚರ್ಯಾದಿ ಆಶ್ರಮಗಳಲ್ಲಿ ನಿಂತು ತಪಸ್ಸುಮಾಡುವ ಉದ್ದೇಶದಿಂದ ಜನರು ದೇಹಶೋಷಣಮಾಡುವುದನ್ನೂ, ತತ್ಫಲವಾಗಿ ಅವರು ಸ್ವರ್ಗಾದಿಲೋಕಗಳನ್ನು ಹೊಂದಿ ಅಲ್ಲಿನ ಸೌಖ್ಯಗಳನ್ನು ಅನುಭವಿಸುವುದನ್ನೂ ನೋಡುತ್ತಿರುವನು. ||೧೫||

ಹಾಗೆಯೇ ಪುಣ್ಯಶಾಲಿಗಳು ತಮ್ಮ ಪುಣ್ಯವು ಕಳೆಯುವವರೆಗೂ ಸ್ವರ್ಗದಲ್ಲಿ ವಾಸಿಸುತ್ತಿದ್ದು, ಅದು ಕಳೆದಮೇಲೆ ಪುನಃ ಭೂಲೋಕಕ್ಕೆ ಬೀಳುವುದನ್ನೂ, ಪಾಪಿಷ್ಠರು ತಮ್ಮ ಪಾಪಕರ್ಮಕ್ಕನುಸಾರವಾಗಿ ಬಹುಯಾತನೆಗಳಿಂದ ಕೂಡಿದ ನರಕಲೋಕಕ್ಕೆ ಬೀಳುವುದನ್ನೂ ಮಹೇಶ್ವರನು ನೋಡುತ್ತಿರುವನು. ||೧೬||

ಮತ್ತು ಜನರು ಲೋಕಾಂತರಗಳಿಗೆ ಹೋಗಿ ಬರುವುದನ್ನೂ ಇದ್ದಲೋಕದಲ್ಲಿ ಜನನ,ಮರಣಗಳನ್ನು ಹೊಂದುವುದನ್ನೂ ಮಹೇಶ್ವರನು ತನ್ನ ಕಣ್ಣುಗಳ ಮೂಲಕ ನೋಡುತ್ತಿರುವನು. ||೧೭||

ಉದಯಾಸ್ತಮನೇ ಚೈವ ರಾತ್ರ್ಯಹಾನಿ ಕ್ರಮೇಣ ತು ।
ನಾಶವೃದ್ಧೀ ಚ ಭೂತಾನಾಂ ಸರ್ವೇಷಾಂ ಭೂತನಾಯಕಃ ॥೧೮॥

ದೇವ್ಯಾ ಪ್ರಾಸಾದಮಧ್ಯಸ್ಥೋ ವಿಹರತ್ಯೇವಮೀಶ್ವರಃ ।
ಕಾಲಕಾಲೋ ಮಹಾದೇವಃ ಕಾಲಾವಚ್ಛೇದವರ್ಜಿತಃ ॥೧೯॥

ಕಾಲಾವಚ್ಛೇದಯುಕ್ತಾನಾಂ ಬ್ರಹ್ಮವಿಷ್ಣುಹರಾತ್ಮನಾಂ ।
ಇಂದ್ರಾದೀನಾಂ ಮುನೀನಾಂ ಚ ಗ್ರಹಾಣಾಂ ಚ ಋಷೇಸ್ತಥಾ॥೨೦॥

ಸಪ್ತರ್ಷೀಣಾಂ ಚ ಸಿದ್ಧಾನಾಂ ಪಿತೄಣಾಂ ಚ ಸನಾತನಃ ।
ಭೂತಾನಾಂ ಚ ಭವಿಷ್ಯಾಣಾಂ ಸಾಂಪ್ರತಾನಾಂ ಚ ಶಂಕರಃ ॥೨೧॥

ಕರೋತಿ ಸೃಷ್ಟಿಂ ನಾಶಂ ಚ ಸ್ಥಿತಿಂ ಕಾಲಸ್ಯ ಕಲ್ಪನಾಂ ।
ಮಾಯಾಭಿರ್ಮೋಹಿತಾನಾಂ ಚ ಬ್ರಹ್ಮವಿಷ್ಣುಹರಾತ್ಮನಾಂ ॥೨೨॥

---

ಕಾಲಾನುಸಾರವಾಗಿ, ಗ್ರಹಗಳ ಉದಯಾಸ್ತಮನಗಳನ್ನೂ, ಅದರಿಂದಾಗುವ ಅಹೋರಾತ್ರಗಳ ಬದಲಾವಣೆಯನ್ನೂ, ಸಕಲ ಪ್ರಾಣಿಗಳ ನಾಶವೃದ್ಧಿಯನ್ನೂ, ಭೂತಪತಿಯಾದ ಶಂಕರನು ತಾನೇ ನೋಡುತ್ತಿರುವನು. ||೧೮||

ದೇವಿಯ ಪ್ರಾಸಾದಮಧ್ಯದಲ್ಲಿ ಕುಳಿತು, ದೇವಿಯೊಡನೆ ವಿಹರಿಸುತ್ತಲಿರುವ, ಕಾಲಕಾಲನೂ, ಕಾಲಾತೀತನೂ, ಮಹಾದೇವನೂ ಆದ ಶಂಕರನು ಇದನ್ನೆಲ್ಲಾ ನೋಡುತ್ತಲಿರುವನು. ||೧೯||

ಅಲ್ಲದೆ ಕಾಲಚಕ್ರಕ್ಕೆ ಸಿಕ್ಕಿ ತೊಳಲುತ್ತಿರುವ, ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳನ್ನೂ, ಇಂದ್ರಾದಿದೇವತೆಗಳನ್ನೂ, ಆದಿತ್ಯಾದಿ ನವಗ್ರಹಗಳನ್ನೂ, ಸಪ್ತರ್ಷಿಗಳನ್ನೂ, ಸಿದ್ಧಸಾಧ್ಯರನ್ನೂ, ಪಿತೃದೇವತೆಗಳನ್ನೂ, ಭೂತಭವಿಷ್ಯದ್ವರ್ತಮಾನಕಾಲಿಕರಾದ ಸಕಲಭೂತವರ್ಗವನ್ನೂ ಸೃಷ್ಟಿಮಾಡುವನು. ಹಾಗೆಯೇ ಸೃಷ್ಟಿ, ಸ್ಥಿತಿ, ಲಯಗಳಿಗಾಗಿ ನಿಯಮಿತರಾಗಿ ಮಾಯಾವಿಶಿಷ್ಟರಾಗಿರುವ ಬ್ರಹ್ಮ, ರುದ್ರಾದಿಗಳ ಶರೀರವನ್ನು ತಾನೇ ಪ್ರವೇಶಿಸಿ, ಅವರಿಂದ ಆಯಾ ಕಾರ್ಯಗಳನ್ನು ಮಾಡಿಸುವನು. ||೨೦-೨೧-೨೨||

ಶರೀರಾಣಿ ಪ್ರವಿಶ್ಯೈವ ಕರೋತೀದಂ ಚರಾಚರಂ ।
ಸ ಏವ ಸರ್ವಭೂತಾನಾಂ ಪ್ರಾಣಾನಾದಾಯೋದೇತಿ ಚ ॥೨೩॥

ಸ ಏವ ಸರ್ವಭೂತಾನಾಂ ಪ್ರಾಣಾನಾದಾಯಾಸ್ತಮೇತಿ ಚ ।
ಸ್ತ್ರನ್ನಪಾನೋಪಭೋಗ್ಯೈಶ್ಚ ತತ್ತದ್ದೇಹೇಷು ಸರ್ವದಾ ॥೨೪॥

ಪರಾಂ ಪ್ರೀತಿಂ ವಿತನುತೇ ಜಡೇಷ್ವಜಡ ಈಶ್ವರಃ ।
ಸ ಏವ ಜಾಗ್ರದಾದ್ಯಾಸು ಹ್ಯವಸ್ಥಾಸ್ವಪಿ ಶಂಕರಃ ॥೨೫॥

ಅವಸ್ಥಾರಹಿತಶ್ಚಾಯಂ ಸರ್ವೇಷ್ವಂತರ್ಗತಸ್ಥಿತಿಃ ।
ಸ ಏವ ಜಾಗ್ರದ್ಭೂತೇಷು ಸ್ವಪಿತ್ಯೇಕೋ ಮಹೇಶ್ವರಃ ॥೨೬॥

ಸ ಏವಾನಂದಮೂರ್ತಿರ್ಹಿ ತಸ್ಯಾನಂದೈಕಲೇಶತಃ ।
ಪ್ರಿಯಾತ್ಮಕಂ ಜಗಜ್ಜಾಲಂ ಕುರುತೇ ದುಃಖದಾಯಕಂ ॥೨೭॥

ಅದೂ ಅಲ್ಲದೆ ಈ ಚರಾಚರಾತ್ಮಕವಾದ ವಸ್ತುಜಾಲದಲ್ಲೆಲ್ಲಾ ವ್ಯಾಪಿಸಿ, ಅವುಗಳನ್ನು ಪ್ರಾಣಿಗಳನ್ನಾಗಿ ಮಾಡಿ ಅವುಗಳಲ್ಲಿ ತಾನು ಸ್ವಯಂಪ್ರಕಾಶಿಸುವನು.॥೨೩॥

ಸಕಲ ಪ್ರಾಣಿಗಳಿಗೂ, ಸ್ತ್ರೀ, ಅನ್ನ, ಪಾನ ಮುಂತಾದ ಭೋಗ್ಯವಸ್ತುಗಳನ್ನು ಒದಗಿಸಿ, ಅವರನ್ನು ಸುಖಿಗಳನ್ನಾಗಿ ಮಾಡಿ ಕೊನೆಗೆ ಅವರ ಪ್ರಾಣಗಳನ್ನು ಅಪಹರಿಸುವುದರ ಮೂಲಕ ತಾನು ಕಣ್ಮರೆಯಾಗುವನು. ॥೨೪॥

ಸ್ವಯಂ ಅಜಡನಾದರೂ ಶಂಕರನು ಜಡವಸ್ತುಗಳಲ್ಲಿ ಹೆಚ್ಚಿನ ಅಭಿಮಾನವನ್ನು ಹುಟ್ಟಿಸುವನು. ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯಗಳಲ್ಲಿಯೂ ಚೇತನಾತ್ಮಕನಾಗಿ ವಸ್ತುಗಳಲ್ಲಿ ಭಾಸಮಾನವಾಗುವನು. ॥೨೫॥

ಮಹೇಶ್ವರನಿಗೆ ಜಾಗ್ರದಾದಿ ಯಾವ ಅವಸ್ಥೆಗಳೂ ಇಲ್ಲ. ಆದರೆ ಎಲ್ಲಾ ಅವಸ್ಥೆಗಳನ್ನೂ ಹೊಂದಿರುವ ಸಕಲ ಭೂತಗಳಲ್ಲಿಯೂ ಅಡಗಿರುವನು. ಜಾಗ್ರದವಸ್ಥೆಯಲ್ಲಿರುವ ಪ್ರಾಣಿಗಳಲ್ಲಿ ಜಾಗ್ರದವಸ್ಥೆಯಿಂದಲೂ, ಸುಷುಪ್ತ್ಯವಸ್ಥೆಯಲ್ಲಿರುವ ಪ್ರಾಣಿಗಳನ್ನು ಸುಷುಪ್ತಾವಸ್ಥೆಯಿಂದಲೂ ಅನುಸರಿಸುವನು. ॥೨೬॥

ಪರಮೇಶ್ವರನು ಆನಂದಮಯನು. ಆ ಆನಂದದ ಏಕದೇಶವೇ ಈ ಜಗತ್ತಿನಲ್ಲಿ ಜನರಿಗೆ ಪ್ರಿಯಾತ್ಮಕವಾಗಿ ಕಾಣುವುದು. ವಸ್ತುತಃ ಜಗತ್ತು ದುಃಖದಾಯಕವಾದದ್ದು. ॥೨೭॥

ಅಸತ್ಯಮೇತಚ್ಚ ಜಡಂ ಸ್ವಸತ್ಯಾತ್ಸತ್ಯವತ್ ಸ್ಥಿತಃ ।
ಕರೋತಿ ಚ ಜಡಂ ಸರ್ವಂ ಚೇತನಾನಾಂ ಸಚೇತನಃ ॥೨೮॥

ಅಸಂಗೋಽಪಿ ಸದಾ ಭಾತಿ ಜಗತ್ಸ್ವೇತೇಷು ಶಂಕರಃ ।
ಸಂಗವಾನಿವ ವಿಶ್ವೇಶಶ್ಚಿವಸ್ಸರ್ವಾಂತರಂಗತಃ ॥೨೯॥

ಬುದ್ಧೇರ್ಬೋಧಯಿತಾ ಮಂತಾ ಮನಸಶ್ಚ ಗತಾಗತಿಃ ।
ಅಪ್ರಾಣಃ ಪ್ರಾಣರೂಪೇಣ ಹ್ಯಾಕಾಶಾದಪಿ ಚೋತ್ತರಃ ॥೩೦॥

ಬ್ರಹ್ಮಬ್ರಹ್ಮಮಯೋ ಭಾತಿ ಶಿವ ಏವ ಸನಾತನಃ ।
ನ ತಸ್ಯ ಕರಣಂ ಕಾರ್ಯಂ ನ ಕ್ರಿಯಾ ಪರಮಾರ್ಥತಃ ॥೩೧॥

ನಿಶ್ಚಯವಾಗಿಯೂ ಈ ಜಗತ್ತು ಮಿಥ್ಯಾಭೂತವಾದದ್ದು. ಮತ್ತು ಜಡಾತ್ಮಕವೆನಿಸಿರುವುದು. ಆದರೆ ಪರಮೇಶ್ವರನು ಸ್ಥಿರನಾಗಿರುವುದರಿಂದ ತದಭೇದವಾಗಿ ಕಾಣುವ ಈ ಜಗತ್ತೂ ಸ್ಥಿರಾತ್ಮನಾ ಜನರಿಗೆ ಭಾಸಮಾನವಾಗುವುದು. ಚೈತನ್ಯ ವಿಶಿಷ್ಟನಾದ ಪರಶಿವನ ಮಹಿಮೆಯಿಂದ ಚೈತನ್ಯವುಳ್ಳದ್ದಾದರೂ ಈ ಜಗತ್ತೆಲ್ಲವೂ ಜಡವಸ್ತುವಿನಂತೆ ಪರಿಣತವಾಗುವುದು. ॥೨೮॥

ಜಗದ್ರೂಪನಾಗಿ ಕಾಣುತ್ತಿದ್ದರೂ ಪರಶಿವನಿಗೆ ಜಗತ್ತಿನ ಸಂಬಂಧವಿರುವುದಿಲ್ಲ. ಸರ್ವ ವಸ್ತುಗಳಲ್ಲಿಯೂ ಅಡಗಿರುವವನಾಗಿರುವುದರಿಂದ ಸರ್ವಜಗತ್ತಿನ ಸಂಬಂಧವೂ ಶಂಕರನಿಗೆ ಇರುವಂತೆ ತೋರಿಬರುವುದು. ॥೨೯॥

ಬುದ್ಧಿಗೆ ಬೋಧಕನಾಗಿಯೂ, ಮನಸ್ಸಿಗೆ ಮನಸ್ವಿಯಾಗಿಯೂ, ತೋರುವನು. ಪ್ರಾಣರಹಿತನಾಗಿದ್ದರೂ ಮಾಯಾಸಂಬಂಧದಿಂದ ಪ್ರಾಣರೂಪದಲ್ಲಿ ಕಂಡು ಬರುತ್ತಿರುವನು. ಏಕಗುಣಾತ್ಮಕವಾದ ಆಕಾಶಕ್ಕಿಂತಲೂ ವಿಭುವೆನಿಸಿ ಸರ್ವವ್ಯಾಪಕನೆನಿಸಿರುವನು. ॥೩೦॥

ಸನಾತನನಾದ ಈ ಶಂಕರನೇ ಪರಬ್ರಹ್ಮವಸ್ತುವು. ಇವನೇ ಜಗನ್ಮಯನಾಗಿ ಕಾಣುತ್ತಿರುವನು. ಇವನಿಗೆ ಕರಣವಾಗಲಿ, ಕಾರ್ಯವಾಗಲಿ, ಕ್ರಿಯೆಯಾಗಲಿ ಯಾವುದೂ ಇಲ್ಲ. ॥೩೧॥

ಶೀರ್ಣೇಷು ದೇಹಜಾಲೇಷು ಹ್ಯಶೀರ್ಣಸ್ಸರ್ವದಾ ಸ್ಥಿತಃ ।
ವಿಕಾರಭೂತೇ ಜಗತಿ ನಿರ್ವಿಕಾರತಯಾ ಸ್ಥಿತಃ ॥೩೨॥

ನ ನಶ್ಯನ್ನ ಚ ಸೀದಾನೋ ಶಿವ ಏವ ಹಿ ಕೇವಲಃ ।
ಗುಹಾಹಿತೋ ನಿರಿಚ್ಛೋ ಹಿ ಸದಾ ಭೇದವಿವರ್ಜಿತಃ ॥೩೩॥

ಕಾರಣಂ ಕಾರಣಾನಾಂ ಚ ಮಹಾನ್ಹಿ ತಮಸಃ ಪರಃ ।
ಯಸ್ಮಾದ್ಬ್ರಹ್ಮೇಂದ್ರವಿಷ್ಣ್ವಾದ್ಯಾ ರುದ್ರಾಸ್ಸರ್ವೇ ಮರುದ್ಗಣಾಃ॥೩೪॥

ಸಂಪ್ರಸೂತಾ ಮಹಾದೇವಾನ್ನ ತತೋಽಸ್ತ್ಯಧಿಕಃ ಪರಃ ।
ಯಸ್ಯ ನಿಶ್ವಸಿತಂ ವೇದಾ ನಾನಾಶಾಖಾವಿಭೂಷಿತಾಃ ॥೩೫॥

ಯಸ್ಯ ಜ್ಞಾನೇನ ಸರ್ವೇಷಾಂ ಮುಕ್ತಯಸ್ಸರ್ವತೋ ದ್ವಿಜಾಃ ।
ಸ ಸಂತರತಿ ಸಂಸಾರಂ ಅಸಾರಂ ಭಯದಾಯಕಂ ॥೩೬॥

---

ಪಂಚಭೂತಾತ್ಮಕವಾದ ದೇಹಗಳು ಎಂದೂ ನಶ್ವರಗಳೇ. ಆದರೆ ಅವುಗಳಲ್ಲಿ ಅಡಗಿರುವ ಮಹೇಶ್ವರನು ಮಾತ್ರ ಶಾಶ್ವತನಾಗಿರುವನು. ಜಗತ್ತಿಗೆ ನಾನಾವಿಕಾರಗಳುಂಟು. ಪರಬ್ರಹ್ಮನು ಮಾತ್ರ ಸರ್ವದಾ ನಿರ್ವಿಕಾರಸ್ವರೂಪನು. ||೩೨||

ಪರಶಿವನಿಗೆ ನಾಶವಿಲ್ಲ. ಕ್ಷಯವಿಲ್ಲ. ಪಂಚಭೂತಾತ್ಮಕವಾದ ಶರೀರದಲ್ಲಿ ಅಡಗಿದ್ದರೂ ಆಶಾರಹಿತನು. ಜಗತ್ತಿಗೂ ತನಗೂ ಭೇದವಿಲ್ಲದವನು. ||೩೩||

ಲೋಕದ ಸಕಲ ಕಾರಣವಸ್ತುಗಳಿಗೂ ಆದಿಕಾರಣನಾದ ಈ ಮಹೇಶ್ವರನು, ಮಾಯಾತೀತನು. ಆದ್ದರಿಂದಲೇ, ಬ್ರಹ್ಮ, ಇಂದ್ರ ವಿಷ್ಣು ಮೊದಲಾದ ಸಕಲ ದೇವತೆಗಳಿಗೂ, ಸಕಲ ರುದ್ರಗಣಗಳಿಗೂ ಶಂಕರನು ಮೂಲಕಾರಣನಾಗಿರುವನು. ||೩೪||

ಮೇಲಿನ ಸಕಲ ದೇವತೆಗಳೂ ಇವನಿಂದಲೇ ಹುಟ್ಟಿದವರು. ಈ ಶಂಕರನಿಗಿಂತ ದೊಡ್ಡ ವಸ್ತುವೇ ಬೇರೊಂದಿಲ್ಲ. ಉಪನಿಷತ್ತೇ ಮೊದಲಾದ ವೇದಭಾಗಗಳಿಂದ ಒಳಗೊಂಡ ಸಕಲ ಶ್ರುತಿಗಳೂ ಮಹೇಶ್ವರನ ಉಸುರುಗಳೇ. ||೩೫||

ಪರಮೇಶ್ವರ ವಿಷಯಕವಾದ ದಿವ್ಯಜ್ಞಾನವೇ ಜಂತುಗಳಿಗೆ ಮುಕ್ತಿಯೆನಿಸುವುದು. ನಿಸ್ಸಾರವಾಗಿಯೂ, ಭಯಪ್ರದವಾಗಿಯೂ ಇರುವ ಸಂಸಾರದಿಂದ ತಪ್ಪಿಸಿಕೊಳ್ಳಲು ಜನರು ಪರಶಿವ ವಿಷಯಕವಾದ ಜ್ಞಾನವನ್ನು ಸಂಪಾದಿಸಬೇಕು. ||೩೬||

ಸರಸೋಽಯಂ ಯದ್ರಸೇನ ಜಗದ್ರಸಮಯಂ ಭವೇತ್ ।
ಸ ಏವ ಜ್ಯೋತಿಷಾಂ ಜ್ಯೋತಿಸ್ಸಚಕ್ಷುಸ್ಸತಪೋಮಹತ್ ॥೩೭॥

ಸ ಭೂಮಾ ಕೇವಲಾನಂದಸ್ಸ ಬೋಧಃ ಕೇವಲಂ ಶಿವಃ ।
ಸ ಏವ ಸ್ಥೂಲಮಣೂ ರುದ್ರೋ ವಿಶ್ವಾರ್ತಿನಾಶಕಃ ॥೩೮॥

ನಿರಿಂದ್ರಿಯಶ್ಚೇಂದ್ರಿಯಾಣಾಂ ಗತಿಶ್ಶಾಸ್ತಾ ಮಹೇಶ್ವರಃ ।
ನಿರಾಭಾಸೋ ನಿರಾಸಂಗೋ ವಿಶ್ವಭಾಸಪ್ರವರ್ತಕಃ ॥೩೯॥

ಸರ್ವಂ ತಸ್ಮಿನ್ಮಹಾದೇವೇ ಜಗದ್ಬ್ರಹ್ಮಣಿ ಲೀಯತೇ ।
ವಿಭಾತಿ ಮಾಯಯಾ ಸಾಕ್ಷಾತ್ತಸ್ಮಿನ್ ಜ್ಞಾನೇ ಮುನೀಶ್ವರಾಃ ॥೪೦॥

ಸರ್ವಂ ಶಿವತಯಾ ಭಾತಿ ಪ್ರಸಾದೇನ ಮಹೇಶಿತುಃ ।
ಸ ಷೋಡಶಾತ್ಮಾ ಪುರುಷೋ ನೇಹ ನಾನಾಸ್ತಿ ಕಿಂಚನ ॥೪೧॥

---

ರಸಾತ್ಮಕನಾದ ಶಂಕರನ ಸಂಬಂಧದಿಂದಲೇ ಜಗತ್ತು ಇಂದೂ ರಸಮಯವಾಗಿದೆ. ಲೋಕದಲ್ಲಿ ಕಂಡುಬರುವ ಸಕಲ ಜ್ಯೋತಿಸ್ಸುಗಳಿಗೂ ಶಂಕರನೇ ಮೂಲ ಜ್ಯೋತಿಯು. ಅವನೇ ಲೋಕಕ್ಕೆ ಕಣ್ಣು. ತಪಸ್ವಿಯೂ, ತಪಸ್ಸೂ ಅವನೇ. ॥೩೭॥

ಆನಂದಮಯನೂ, ಜ್ಞಾನರೂಪಿಯೂ ಆದವನು ಶಂಕರನೊಬ್ಬನೇ. ಅವನೇ ಸ್ಥೂಲವಸ್ತುರೂಪದಲ್ಲಿಯೂ, ಅಣುರೂಪದಲ್ಲಿಯೂ ಇದ್ದು ಜಗತ್ತಿನ ಸಕಲ ದುಃಖಗಳನ್ನೆಲ್ಲಾ ನಿವಾರಿಸುವವನಾಗಿರುವನು. ॥೩೮॥

ಮಹೇಶ್ವರನಿಗೆ ಯಾವ ಇಂದ್ರಿಯಗಳೂ ಇಲ್ಲ. ಆದರೆ ಇಂದ್ರಿಯಗಳಿಗೆಲ್ಲಾ ಶಕ್ತಿಪ್ರದನೂ, ಶಿಕ್ಷಕನೂ ಅವನೇ ಆಗಿರುವನು. ಚಕ್ಷುರಿಂದ್ರಿಯಕ್ಕೆ ಅಗೋಚರನಾಗಿ, ನಿಸ್ಸಂಗನಾಗಿ ಜಗತ್ತಿನಂತೆ ತೋರಿಬರುತ್ತಾ ಶಂಕರನು ಜಗನ್ಮಯಿಯಾಗಿರುವನು. ॥೩೯॥

ಕೊನೆಗೆ ಈ ಜಗತ್ತೆಲ್ಲವೂ ಮಹಾದೇವನಲ್ಲಿಯೇ ಐಕ್ಯವಾಗುವುದು. ಆದರೆ ಮಾಯಾ ಸಂಬಂಧದಿಂದ ಜಗತ್ತು ಮತ್ತು ಪರಬ್ರಹ್ಮನು ಬೇರೆ ಎಂಬ ಭಾವನೆಯುಂಟಾಗುವುದು. ॥೪೦॥

ಮಹೇಶ್ವರನ ಅನುಗ್ರಹಕ್ಕೆ ಪಾತ್ರರಾದ ಜ್ಞಾನಿಗಳಿಗೆ ಈ ಲೋಕವೆಲ್ಲವೂ ಶಿವಾಭೇದವಾಗಿಯೇ ತೋರಿಬರುವುದು. ಅವರಿಗೆ ಷೋಡಶತತ್ತ್ವ (ಕಲಾ) ಪರಿ

ವಿಕಾರವೋತತ್ಸರ್ವಂ ಹಿ ಅವಿಕಾರೇ ವಿಕಾರಿತಂ ।
ತಸ್ಯೈವ ತಪಸಾ ಧ್ಯಾನಾತ್ತಲ್ಲಿಂಗಾರ್ಚನತೋ ದ್ವಿಜ ॥೪೨॥

ಸರ್ವಂ ಶೋಕಂ ತರತ್ಯೇವ ನಾತ್ರ ಕಾರ್ಯಾ ವಿಚಾರಣಾ ।
ಭಿದ್ಯಂತೇ ಗ್ರಂಥಯಸ್ಸರ್ವಾ ಏಕತ್ವೇನಾನುಪಶ್ಯತಃ ॥೪೩॥

ತಮಾತ್ಮಾನಂ ಮಹಾದೇವಂ ವಿಶ್ವಾಕಾರತಯಾ ಸ್ಥಿತಂ ।
ವಹ್ನಿರ್ವಾಯುಂ ಜಲಂ ಕ್ಷ್ಮಾ ಚ ವಿದ್ಯತೇ ತನ್ಮಹೇಶ್ವರಃ ॥೪೪॥

ಏತೇಷಾಮಾನುಲೋಮ್ಯೇನ ಪ್ರಾತಿಲೋಮ್ಯೇನ ಸೃಷ್ಟಯಃ ।
ಸಂಜಾತಾ ಅತ್ರ ಲೀನಾಶ್ಚ ತಸ್ಮಿನ್ನೇವ ಮಹೇಶ್ವರೇ ॥೪೫॥

ಪೂರ್ಣನಾದ ಶಂಕರನೊಬ್ಬನೇ ಪುರುಷನೆನಿಸುವನು. ಅಂತಹ ಪುರುಷನನ್ನು ಬಿಟ್ಟು ಜಗತ್ತಿನಲ್ಲಿ ಮತ್ತಾವ ವಸ್ತುವೂ ಇಲ್ಲವೆಂಬುದೇ ಆತನ ಮುಖ್ಯ ತತ್ತ್ವವಾಗುವುದು. ||೪೧||

ಈ ಜಗತ್ತೆಲ್ಲವೂ ವಿಕಾರಿಯು. ಅಲ್ಲದೆ ಅವಿಕಾರ ಸ್ವರೂಪನಾದ ಪರಮೇಶ್ವರ ನಲ್ಲಿ ವಿಕೃತಿರೂಪದಲ್ಲಿ ಲೀನವಾಗಿ ಹೋಗುವುದು. ಅಂತಹ ಪರಮೇಶ್ವರನನ್ನು ಯಾರು ತಪಸ್ಸಿನಿಂದ ತೃಪ್ತಿಗೊಳಿಸುವರೋ, ಲಿಂಗಾರ್ಚನೆಯಿಂದ ಯಾರು ಅವನ ಅನುಗ್ರಹಕ್ಕೆ ಪಾತ್ರರಾಗುವರೋ ಅವರೇ ಸಾಂಸಾರಿಕವಾದ ಈ ದುಃಖವನ್ನೆಲ್ಲಾ ಕಳೆದುಕೊಳ್ಳುವರು. ಅಲ್ಲದೆ ಶಿವೈಕತ್ವಬುದ್ಧಿಯಿಂದ ಶಿವಾನುಸಂಧಾನ ಮಾಡುವ ವರು ಲೋಕದ ಇತರ ಎಡರುಗಳಿಗೆ ಸಿಕ್ಕಿ ನರಳದೆ, ನಿಶ್ಚಯಜ್ಞಾನಿಗಳಾಗಿ ಕಡೆಗೆ ಮುಕ್ತರಾಗುವರು. ಇದರಲ್ಲಿ ಚರ್ಚೆಯೇ ಇಲ್ಲ. ||೪೨-೪೩||

ಜಗದ್ರೂಪಿಯಾಗಿರುವ ಮಹಾದೇವನೇ ಪರಮಾತ್ಮರೂಪಿಯು. ಅವನೇ ಅಗ್ನಿಯು. ವಾಯು, ಜಲ, ಮುಂತಾದ ಭೂತದ್ರವ್ಯಗಳೂ ಪರಮೇಶ್ವರನೇ. ||೪೪||

ಈ ಪಂಚ ಭೂತಗಳನ್ನು ಮೊದಲು ಅನುಲೋಮವಾಗಿ ಆಕಾಶಾದಿಯಾಗಿ ಸೃಷ್ಟಿಮಾಡಿದವನು ಪರಮೇಶ್ವರನೇ. ಕೊನೆಗೆ ಪೃಥಿವ್ಯಾದಿಯಾಗಿ ನಾಶಮಾಡು ವವನೂ ಆ ದೇವದೇವನೇ. ||೪೫||

ತಸ್ಮಾದ್ಭೂತಾನಿ ಜಾತಾನಿ ತತ್ರ ಜೀವಂತಿ ತಾನ್ಯಪಿ ।
ತಸ್ಮಿನ್ನೇವ ಲಯಂ ಯಾಂತಿ ಈಶಸಂಸ್ಥಂ ಚರಾಚರಂ ॥೪೬॥

ಈಶಾವಾಸ್ಯಮಿದಂ ಸರ್ವಂ ತಸ್ಮಿಂತ್ಸರ್ವಂ ಪ್ರವರ್ತತೇ ।
ಏವಂ ಯೋ ವೇದವೇದಾಂತೈಃ ಪ್ರಾಸಾದಾತ್ಪರಮೇಶ್ವರಾತ್ ॥೪೭॥

ಗುರೋಶ್ಚ ಶ್ರದ್ಧಯಾ ಚೈವ ಸರ್ವಜ್ಞಸ್ಸ ಚ ಶಾಂಭವಃ ।
ಸಮುನಿಸ್ಸಶ್ಶಿವಶ್ಚಾಪಿ ಸ ಶಿವಜ್ಞಾನಸತ್ತ್ರಮಃ ॥೪೮॥

॥ ಸ್ಕಂದ ಉವಾಚ ॥

ಅಪಾಣಿಪಾದೋಽಸಿ ನಿರಿಂದ್ರಿಯೋಽಸಿ
ರೂಪಸ್ಪರ್ಶಶ್ಶಬ್ದಗಂಧೋ ರಸಾದಿಃ ।
ಸರ್ವಸ್ಯ ವೇತ್ತಾ ತ್ವಂ ತ್ವಾಂ ನ ವೇತ್ತಿ
ಕಶ್ಚಿದ್ದೃಷ್ಟೇರ್ದ್ರಷ್ಟಾರಂ ತ್ವಾಂ ನವೇತ್ತ್ಯೇವ ಕಶ್ಚಿತ್ ॥೪೯॥

ಹೀಗೆ ಸಮಸ್ತ ಭೂತಗಳೂ ಅವನಿಂದಲೇ ಹುಟ್ಟುತ್ತವೆ. ಕೊನೆಗೆ ಅವನಲ್ಲಿಯೇ ಲೀನವಾಗುತ್ತವೆ. ಹೀಗೆ ಚರಾಚರವಸ್ತುಗಳೆಲ್ಲವೂ ಈಶ್ವರನಲ್ಲಿಯೇ ನಿಂತಿರುತ್ತವೆ. ॥೪೬॥

ಈ ಜಗತ್ತೆಲ್ಲವೂ ಈಶ್ವರನಲ್ಲಿಯೇ ಆಶ್ರಯವನ್ನು ಪಡೆದಿರುವುದು. ಹೀಗೆ ವೇದವೇದಾಂತಪ್ರತಿಪಾದ್ಯಮಾನವಾದ ಈಶಾವಾಸ್ಯೋಪನಿಷತ್ತಿನ ಸಾರವನ್ನು ಗುರುಮೂಲಕವಾಗಿ ಶ್ರದ್ಧೆಯಿಂದ ಯಾವನು ಚೆನ್ನಾಗಿ ತಿಳಿಯುವನೋ, ಅವನೇ ಸರ್ವಜ್ಞನೆನಿಸುವನು. ಅವನೇ ಮುನಿಯು. ಸಾಕ್ಷಾಚ್ಛಿವಸ್ವರೂಪಿಯೂ ಶಿವಜ್ಞಾನತತ್ಪರನೂ ಆತನೇ. ॥೪೭-೪೮॥

ಎಂದು ಹೇಳಿ ಕೊನೆಯದಾಗಿ ಕುಮಾರಸ್ವಾಮಿಯು ಮಹೇಶ್ವರನನ್ನು ಹೀಗೆ ಧ್ಯಾನಮಾಡಿದನು. "ಓ ಪರಮೇಶ್ವರನೇ, ನಿನಗೆ ಕರಚರಣಾದ್ಯವಯವಗಳು ಯಾವುವೂ ಇಲ್ಲ. ಹಾಗೆಯೇ ತತ್ಕಾರ್ಯಕಾರಿಗಳಾದ ಇಂದ್ರಿಯಗಳೂ ನಿನ್ನಲ್ಲಿ ಇಲ್ಲ. ಆದರೆ ಪಂಚೇಂದ್ರಿಯಗಳಿಗೆ ವಿಷಯಗಳಾದ, ರೂಪ, ಸ್ಪರ್ಶ, ರಸ, ಗಂಧ, ಶಬ್ದ ಈ ಗುಣಗಳೆಲ್ಲವನ್ನೂ ನೀನು ಸಂಪೂರ್ಣವಾಗಿ ಅರಿತಿರುವೆ. ಎಲ್ಲವನ್ನೂ ಅರಿತಿರುವವನು

ವೃದ್ಧೋ ಬಾಲಃ ಪೂರುಷಸ್ತ್ವಂ ಯುವಾಸಿ ।
ಸ್ತ್ರೀತ್ವಂ ಕ್ಲೀಬೋ ನ ತ್ವಮೇವಾಸಿ ಕಿಂಚಿತ್ ।
ಸ್ಥಾಣುರ್ಗಚ್ಛದ್ಭೂತಭವ್ಯಂ ಜಗದ್ವೈ ।
ದೇಹ್ಯೈರ್ಯುಕ್ತೋ ಭಾಸಿ ತಸ್ಮಾನ್ನತೋಽಸ್ಮಿ ॥೫೦॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ವೇದರಸ್ಯಕಥನಂನಾಮ
ಸಪ್ತಚತ್ವಾರಿಂಶೋಽಧ್ಯಾಯಃ

---

ನೀನಾದರೂ ನಿನ್ನನ್ನು ಅರಿತವನು ಮಾತ್ರ ಯಾರೂ ದೊರೆಯಲಾರರು. ಪ್ರತ್ಯಕ್ಷಾದಿ ಪ್ರಮಾಣಕ್ಕೆ ದೊರೆಯುವವನಾದರೂ ನಿನ್ನನ್ನು ಸಂಪೂರ್ಣವಾಗಿ ನೋಡಿದವನು ಮತ್ತು ಅರಿತವನು ಲೋಕದಲ್ಲಿ ಯಾವನೂ ದೊರೆಯಲಾರನು. ಇದರಲ್ಲಿ ಸಂಶಯ ವಿಲ್ಲ. ||೪೯||

ಮಹೇಶ್ವರನೇ, ನೀನು ಮುದುಕನಂತೆ ಕಾಣುವೆ. ಆದರೆ ಹುಡುಗನಾಗಿ ರುವೆ. ಒಂದೊಂದುವೇಳೆ ಯುವಕನಂತೆಯೂ ತೋರಿಬರುವೆ. ಇದನ್ನು ನೋಡಿ ದರೆ ನಿನ್ನ ವಯೋಧರ್ಮವೇ ಅನಿಶ್ಚಿತವಾಗಿರುವುದು. ನೀನು ಸ್ತ್ರೀಯೂ ಅಲ್ಲ, ನಪುಂಸಕನೂ ಅಲ್ಲ, ಪುರುಷನೂ ಅಲ್ಲ. ನಿನ್ನ ಜಾತಿವ್ಯವಚ್ಛೇದಕಗಳಾದ ಯಾವ ಲಾಂಛನಗಳೂ ಕಂಡುಬರುವುದಿಲ್ಲ. ಅಷ್ಟಾದರೂ ಸ್ಥಾಣುವಿನಂತೆ ನಿಶ್ಚಲವಾಗಿದ್ದು, ಭೂತ, ಭವಿಷ್ಯದ್ವರ್ತಮಾನರೂಪಗಳಿಂದ ಕಾಲತ್ರಯಗಳಿಗೆ ಸಿಕ್ಕಿ ಮುನ್ನಡೆಯುತ್ತಿ ರುವ ಈ ಜಗತ್ತಿನಲ್ಲಿ ನೀನು ದೇಹಿಯಾಗಿ ಭಾಸಮಾನವಾಗುತ್ತಿರುವೆ. ಈ ರೀತಿ ಪ್ರತಿಬಿಂಬದಂತೆ ತೋರಿಬರುತ್ತಿರುವ ನಿನಗೆ ನಮಸ್ಕಾರಮಾಡುವೆನು. ವಸ್ತುತಃ ಯಾವ ರೂಪಲಿಂಗಾದಿಗಳು ನಿನಗಿಲ್ಲದಿದ್ದರೂ, ವ್ಯವಹಾರ ದೃಷ್ಟಿಯಲ್ಲಿ ಶರೀರಿ ಯಾಗಿ ಕಾಣುತ್ತಿರುವ ನಿನಗೆ ವಂದನೆಯು ನ್ಯಾಯವೇ ಅಲ್ಲವೇ, ಎಂದು ಕುಮಾರ ಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ||೫೦||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಪ್ರಥಮಾಂಶಾಂತರ್ಗತವಾದ ವೇದರಹಸ್ಯಕಥನವೆಂಬ
ನಲವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಅಷ್ಟಚತ್ವಾರಿಂಶೋಽಧ್ಯಾಯಃ

### ಶಿವಗೌರೀಸಂವಾದಃ

|| ಸ್ಕಂದ ಉವಾಚ ||

**ಏತಾದೃಶಂ ಮಹಾದೇವಂ ನೀರೂಪಂ ರೂಪವತ್ ಸ್ಥಿತಂ ।**
**ಪ್ರಾಹ ದೇವೀ ಮಹಾದೇವಂ ಪ್ರಾಂಜಲಿಃ ಪ್ರಣತಾ ತದಾ ॥೧॥**

|| ದೇವ್ಯುವಾಚ ||

**ಕರುಣಾಸಾಗರಾಪಾರ ಸುಧಾಕರಶಿಖಂಡಕ ।**
**ಬ್ರಹ್ಮಮುಂಡಮಹಾಷಂಡಮಾಲಾಕಲಿತಕಂಧರ ॥೨॥**

## ಶ್ರೀಶಿವರಹಸ್ಯದಲ್ಲಿ ನಲವತ್ತೆಂಟನೆಯ ಅಧ್ಯಾಯ

ಶಿವಕಥಾಶ್ರವಣಕ್ಕಾಗಿ ಕುಳಿತಿದ್ದ ಜೈಗೀಷವ್ಯಾದಿಗಳನ್ನು ನೋಡಿ ಕುಮಾರಸ್ವಾಮಿಯು ಮುಂದಿನ ಕಥೆಯನ್ನು ವಿವರಿಸುತ್ತಾ ಹೀಗೆಂದನು.—ಮಹಾದೇವನು ವಸ್ತುತಃ ರೂಪಲಿಂಗಾದಿಗಳನ್ನು ಧರಿಸದಿದ್ದರೂ, ಆಗ ಶರೀರಿಯಾಗಿ ಕುಳಿತಿದ್ದ ಮಹೇಶ್ವರನನ್ನು ಕುರಿತು ಪಾರ್ವತಿಯು ನಮಸ್ಕರಿಸಿದವಳಾಗಿ ಮತ್ತೆ ಹೀಗೆ ಪ್ರಾರ್ಥಿಸ್ಸಿದಳು. ||೧||

" ದಯಾಸಾಗರನೇ, ಸುಧಾಕರನಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನೇ, ಬ್ರಹ್ಮಕಪಾಲವೇ ಮೊದಲಾಗಿ ಅನೇಕ ರಾಕ್ಷಸರ ರುಂಡಗಳನ್ನೆಲ್ಲಾ ಮಾಲಾರೂಪವಾಗಿ ಧರಿಸಿರುವವನೇ, ||೨||

ಅನಾಧಾರ ಮಹಾದೇವ ಜಗದಾಧಾರ ಧೂರ್ಜಟೇ ।
[1]ಪ್ರಯತ್ನ ಜಿತಮಂದಾರ ಸುಂದರಾನಂದವಿಗ್ರಹ

ಕಥಂ ಕೈಲಾಸಮೌಲಿಸ್ಥಲಿಂಗಾನಾಮುದ್ಭವಶ್ಶಿವ ।
ಶ್ರೋತುಂ ಮೇ ಕೌತುಕಂ ಶಂಭೋ ವದ ಸರ್ವಜ್ಞ ಮತ್ಪ್ರಿಯ॥೪॥

ಶೈಲಮೌಲೌ ಮಹಾದೇವ ಲಿಂಗಾನಾಮುದ್ಭವೋऽತ್ರ ಹಿ ।
ಕಥಂ ಸಮಭವಚ್ಛಂಭೋ ತನ್ಮೇ ವಿಸ್ತರತೋ ವದ ॥೫॥

॥ ಸ್ಕಂದ ಉವಾಚ ॥

ಇತ್ಥಂ ಗೌರ್ಯಾ ತದಾ ಪೃಷ್ಟೋ ಮಹಾದೇವೋ ದಯಾಪರಃ
ತಾಮುವಾಚ ಪ್ರಹೃಷ್ಟಾತ್ಮಾ ಜಗದಾತ್ಮಾ ಮಹೇಶ್ವರಃ ॥೬॥

॥ ಈಶ್ವರ ಉವಾಚ ॥

ಶೃಣು ಶೈಲಸುತೇ ಬಾಲೇ ಕಮಲಾಮಲಲೋಚನೇ ।
ರಹಸ್ಯಮೇತದ್ಗೋಪ್ಯಂತೇ ನಾಖ್ಯೇಯಂ ಯಸ್ಯ ಕಸ್ಯ ಚಿತ್ ॥೭॥

ನಿನಗೆ ಆಧಾರವಸ್ತುವು ಯಾವುದೂ ಇಲ್ಲ. ಜಗತ್ತೇ ನಿನ್ನಲ್ಲಿ ಆಶ್ರಯವನ್ನು ಪಡೆದಿರುವುದು. ಗಂಗಾಧರನಾಗಿ, ನಮಸ್ಕರಿಸಿದ ಜನರಿಗೆ ಮಂದಾರವೃಕ್ಷದಂತೆ ಸರ್ವ ಸುಖಪ್ರದನಾಗಿ, ಸೌಂದರ್ಯದಿಂದ ಕೂಡಿರುವ ದೇಹವುಳ್ಳವನೇ ನಿನಗೆ ವಂದಿಸುವೆನು. ॥೩॥

ಶಂಭೋ, ಸರ್ವಜ್ಞನೇ, ಈ ಕೈಲಾಸಪರ್ವತದ ಶಿರೋಭಾಗದಲ್ಲಿ ಇಷ್ಟು ಶಿವಲಿಂಗಗಳು ಉದ್ಭವವಾಗಿರುವುದು ಹೇಗೆ? ಆ ವಿಷಯವನ್ನು ತಿಳಿದುಕೊಳ್ಳಲು ನನಗೆ ಬಹಳ ಕುತೂಹಲವಿರುವುದು. ॥೪॥

ಈ ಕೈಲಾಸ ಪರ್ವತದ ಅಗ್ರಭಾಗದಲ್ಲಿ ಇಷ್ಟು ಶಿವಲಿಂಗಗಳು ಹುಟ್ಟಿದುದಕ್ಕೆ ಕಾರಣವನ್ನು ವಿಸ್ತಾರವಾಗಿ ಅನುಗ್ರಹಿಸು." ॥೫॥

ಹೀಗೆ ಗೌರಿಯಿಂದ ಪ್ರಶ್ನಿಸಲ್ಪಟ್ಟ ಪರಮೇಶ್ವರನು ದೇವಿಯಲ್ಲಿ ದಯಾಶಾಲಿಯಾಗಿ ಸಂತೋಷದಿಂದ ಹೀಗೆ ಹೇಳತೊಡಗಿದನು. ॥೬॥

ಪಾರ್ವತಿಯೇ, ಕಮಲಲೋಚನೆಯೇ, ಕೇಳು. ಈಗ ನಾನು ಹೇಳಲಿರುವ ಸಮಾಚಾರವು ಬಹು ಗೋಪ್ಯವಾದದ್ದು. ಎಲ್ಲರಿಗೂ ಇದು ಹೇಳತಕ್ಕದ್ದಲ್ಲ. ॥೭॥

---

1 ಪ್ರಪನ್ನಜನಮಂದಾರ

ಮದ್ಭಕ್ತಾಯೈವ ದೇಯಂ ಸ್ಯಾದನ್ಯಥಾ ಪತಿತೋ ಭವೇತ್ ।
ಯೋ ಭೂತಿಭೂಷಣಾಸಕ್ತೋ ಯಸ್ತ್ರಿಪುಂಡ್ರೈಕಭಾಸುರಃ ॥೮॥

ಯೋ ರುದ್ರಾಕ್ಷಾಂಕಿತಕರೋ ರುದ್ರಾಕ್ಷಾಮಲಭೂಷಣಃ ।
ಯೋ ರುದ್ರಜಪಸುಪ್ರೀತೋ ಯೋ ಮಲ್ಲಿಂಗಾರ್ಚನೇ ರತಃ ॥೯॥

ಯೋ ಭಸ್ಮಶಾಯೀ ಸತತಂ ಪಂಚಾಕ್ಷರಜಪಾದರಃ ।
ಯೋ ಬಿಲ್ವಾರ್ಚನಸುಪ್ರೀತೋ ಯಶ್ಚ ಬಿಲ್ವಾರ್ಚನಪ್ರಿಯಃ ॥೧೦॥

ಯೋ ಮದ್ಭಕ್ತಿಸುಧಾಪಾರಕಥಾಶ್ರವಣತತ್ಪರಃ ।
ಯೋ ಮನ್ನೈವೇದ್ಯಭೋಜೀ ಸ್ಯಾದನ್ಯನೈವೇದ್ಯವರ್ಜಿತಃ ॥೧೧॥

ಯೋ ಮದ್ಧ್ಯಾನಮನಾ ನಿತ್ಯಂ ಅನ್ಯಧ್ಯಾನವಿವರ್ಜಿತಃ ।
ಮನ್ನಾಮಪರಮೋ ಯಶ್ಚಾಪ್ಯನ್ಯನಾಮವಿವರ್ಜಿತಃ ॥೧೨॥

ವಿಭೂತಿಧಾರಣೆಯಿಂದ ಶುದ್ಧನಾಗಿ ತ್ರಿಪುಂಡ್ರದಿಂದ ಪ್ರಕಾಶಿಸುತ್ತಿರುವ, ನಿಜವಾದ ನನ್ನ ಭಕ್ತರಿಗೆ ಮಾತ್ರ ಈ ವಿಷಯುಗಳನ್ನು ವಿವರಿಸಬೇಕು. ಇತರರಿಗೆ ಉಪದೇಶಮಾಡಿದ್ದೇ ಆದರೆ, ಉಪದೇಶಕನು ಪತಿತನೆನಿಸುವನು ॥೮॥

ಕೈಯ್ಯಲ್ಲಿ ರುದ್ರಾಕ್ಷಿಯ ಸರವನ್ನು ಧರಿಸಿ, ರುದ್ರಾಕ್ಷಿಯಿಂದ ನಿರ್ಮಿತವಾದ ಆಭರಣಗಳನ್ನು ತೊಟ್ಟು, ಯಾರು ಸರ್ವದಾ ರುದ್ರಜಪದಲ್ಲಿಯೂ, ಶಿವಲಿಂಗಾರ್ಚನೆಯಲ್ಲಿಯೂ, ನಿರತರಾಗಿರುವರೋ ಮತ್ತು ಭಸ್ಮಶಾಯಿಯಾಗಿ, ಶಿವಪಂಚಾಕ್ಷರ ಪಾರಾಯಣದಿಂದ ಶಿವಲಿಂಗಕ್ಕೆ ಬಿಲ್ವಾರ್ಚನೆ ಮಾಡುತ್ತಾ, ಅಥವಾ ಬಿಲ್ವಾರ್ಚನೆ ಮಾಡುವುದನ್ನು ನೋಡಿ ತೃಪ್ತಿಪಡುತ್ತಾ ಕಾಲಕಳೆಯುವರೋ, ಅವರೇ ಈ ರಹಸ್ಯೋಪದೇಶಕ್ಕೆ ಯೋಗ್ಯರೆನಿಸುವರು. ॥೯-೧೦॥

ಅಲ್ಲದೆ ಯಾರು ನನ್ನ ಅಮೃತಮಯವಾದ ಕಥೆಯನ್ನು ಕೇಳುವುದರಲ್ಲಿ ಕುತೂಹಲಿಗಳಾಗಿದ್ದು, ನನ್ನ ಪ್ರಸಾದವನ್ನೇ ಭುಂಜಿಸುತ್ತಾ, ಇತರ ದೇವತಾ ಪ್ರಸಾದಗಳಿಗೆ ಆಸೆಪಡದೆ ಇರುವರೋ ಅವರಿಗೆ ಈ ರಹಸ್ಯವನ್ನು ಉಪದೇಶಿಸಬೇಕು. ॥೧೧॥

ಅನ್ಯದೇವತಾಧ್ಯಾನಮಾಡದೆ ಸರ್ವದಾ ನನ್ನನ್ನೇ ಯಾರು ಸ್ಮರಿಸುತ್ತಿರುವರೋ, ಇತರ ದೇವತಾನಾಮಗಳಿಗಿಂತ ನನ್ನ ಹೆಸರನ್ನೇ ದಿವ್ಯಮಂತ್ರವನ್ನಾಗಿ

ಯೋ ಮತ್ಕ್ಷೇತ್ರನಿವಾಸೀಸ್ಯಾದನ್ಯಕ್ಷೇತ್ರವಿವರ್ಜಿತಃ ।
ಯೋ ಮದ್ಭಕ್ತಜನಪ್ರೀತೋಽಪ್ಯನ್ಯಭಕ್ತಪರಾಙ್ಮುಖಃ ॥೧೩॥

ಧನೈಃ ಪುಷ್ಣಾತಿ ಯೋ ಭಕ್ತಾನ್ ಮದಿಯಾನ್ ಸತತಂ ಶಿವೇ ।
ಯಮಾದಿನಿಯಮೋಪೇತಸ್ಸರ್ವದಾ ಶಿವಪೂಜಕಃ ॥೧೪॥

ವೇದಾಂತಸಾರಸಾದಜ್ಞಃ ಪ್ರಕಾಶ್ಯಂ ತೇಷ್ವಿದಂ ಶಿವೇ ।
ನಾನ್ಯೇಷು ಸೋಽದ್ಯ ದೇವೇಶಿ ರಹಸ್ಯಂ ಗೋಪ್ಯಮೇವ ಹಿ ॥೧೫॥

ವಿದ್ಯಾವಿದಿ ಕಥಾಸಾರಂ ದತ್ವಾ ಮುಕ್ತಿಮವಾಪ್ನುಯಾತ್ ।
ಪ್ರರೋಹಂ ಯಾತಿ ಸುಭಗೇ ಸುಭೂಮೌ ವಟಬೀಜವತ್ ॥೧೬॥

ಮೂಢೇಽಲ್ಪಪ್ರಜ್ಞತಾಪನ್ನೇ ದತ್ವೇದಂ ಶಾಂಭವಂ ರಹಃ ।
ಯಥಾಮಕುಂಭೇ ಕ್ಷಿಪ್ತಾಂಭೋ ವೃಥಾ ಭವತಿ ಶಂಕರಿ ॥೧೭॥

ಯಾವನು ಅರಿತಿರುವನೋ, ಇತರ ದೇವತಾ ಕ್ಷೇತ್ರಗಳಲ್ಲಿ ಮತ್ತು ಇತರ ಭಕ್ತರಲ್ಲಿ ಅಷ್ಟಾಗಿ ಆದರವಿಡದೆ ನನ್ನ ಶಿವಕ್ಷೇತ್ರಗಳಲ್ಲಿಯೇ ಮತ್ತು ನನ್ನ ಭಕ್ತರಲ್ಲಿಯೇ ಯಾರಿಗೆ ಭಕ್ತಿಯಿರುವುದೋ, ಅಂತಹವರಿಗೇ ನನ್ನ ರಹಸ್ಯವನ್ನು ನೀನು ನಿರೂಪಿಸಬೇಕು. ॥೧೨-೧೩॥

ನನ್ನ ಭಕ್ತರ ಪೋಷಣೆಗಾಗಿ ಯಾರು ಧನವ್ಯಯ ಮಾಡುವರೋ, ಯಮ ನಿಯಮಾದಿಗಳಿಂದ ಶುದ್ಧಚಿತ್ತರಾಗಿ, ಯಾರು ನನ್ನ ಆರಾಧನೆಯಲ್ಲಿ ಆಸಕ್ತರಾಗಿರುವರೋ, ಉಪನಿಷತ್ತಿನ ಸಂಪೂರ್ಣಾರ್ಥವನ್ನು ಯಾರು ಚೆನ್ನಾಗಿ ಅರಿತಿರುವರೋ ಅಂತಹವರಿಗೆ ಮಾತ್ರ ಈ ರಹಸ್ಯವನ್ನು ಉಪದೇಶಿಸಬೇಕೇ ಹೊರತು ಮತ್ತೆ ಯಾರಿಗೂ ಹೇಳಕೂಡದು. ॥೧೪-೧೫॥

ಅತಿಶಯವಾದ ವಿದ್ಯೆಯನ್ನರಿತವರಿಗೆ ಈ ಶಿವರಹಸ್ಯವನ್ನು ಉಪದೇಶ ಮಾಡಿದ್ದೇ ಆದರೆ, ಫಲವತ್ತಾದ ಭೂಮಿಯಲ್ಲಿ ಹುಟ್ಟುಹಾಕಿದ ಆಲದಮರದ ಬೀಜದಂತೆ ಬೆಳೆದು ವಿಶಾಲವಾಗಿ ಸರ್ವತ್ರ ಹರಡಿ ಜನರಿಗೆ ಉಪಕಾರಿಯಾಗುವುದು. ॥೧೬॥

ಮೂಢನಾಗಿಯೂ, ಅಲ್ಪಬುದ್ಧಿಯುಳ್ಳವನಾಗಿಯೂ ಇರುವವನಿಗೆ ಈ ಶಿವರಹಸ್ಯವನ್ನು ಉಪದೇಶಮಾಡುವುದು, 'ಹಸೀಮಣ್ಣಿನ ಗಡಿಗೆಯಲ್ಲಿಟ್ಟ ನೀರಿನಂತೆ ವ್ಯರ್ಥವಾಗಿ ಹೋಗುವುದು. ॥೧೭॥

ತದ್ವದ್ಭವತಿ ಮೂರ್ಖೇಷು ಪಶುಧರ್ಮೇಷು ಶಂಕರಿ ।
ಮಹಾಪಾಪಮವಾಪ್ನೋತಿ ತಸ್ಯ ನೈವೇಹ ನಿಷ್ಕೃತಿಃ ॥೧೮॥

ಯಥಾ ಸುಗಂಧಕರ್ಪೂರಚಂದನೈರ್ಭೂಷಿತಃ ಖರಃ ।
ರಥ್ಯಾಭಸ್ಮಕರೀಷೇಷು ಸ್ವಾಂಗಂ ಸಂಲೇಪಯೇತ್ಸ ಹಿ ॥೧೯॥

ತಥೈವಾಶಾಂಭವೇ ದತ್ತಂ ನೋಪಕಾರಾಯ ಭಾಮಿನೀ ।
ಶಾಂಭವಪ್ರವರೇ ದತ್ತಂ ವಿಸ್ತಾರಂ ಯಾತಿ ಶಂಕರಿ ॥೨೦॥

ಯಥೋತ್ಸೃಷ್ಟಂ ಜಲೇ ತೈಲಂ ವಿಸ್ತಾರಮುಪಗಚ್ಛತಿ ।
ತಸ್ಮಾದ್ಯೋಗ್ಯತಮಂ ದೇವಿ ಸಾಧುಷ್ವೇವ ನಿದರ್ಶಯೇತ್ ॥೨೧॥

ಮಯೈವ ಮನಸಾ ಸೃಷ್ಟಃ ಕೈಲಾಸೋಽಯಂ ಮಹೀಧರಃ
ನಾನಾತರುಗಣಾಚ್ಛನ್ನಸ್ಸರ್ವಪಕ್ಷಿವರಾಶ್ರಯಃ ॥೨೨॥

ಹಾಗೆಯೇ ಕೇವಲ ಪಶುಧರ್ಮದಲ್ಲಿರತಕ್ಕ ಅಜ್ಞಾನಿಗಳಿಗೂ ಈ ರಹಸ್ಯಾಂಶವನ್ನು ಬೋಧಿಸಕೂಡದು. ಹಾಗೆ ಉಪದೇಶ ಮಾಡಿದರೆ, ಉಪದೇಶಕನಿಗೆ ಮಹಾಪಾಪಸಂಘಟನೆಯಾಗುವುದೇ ಹೊರತು ಪುಣ್ಯಲೇಶವೂ ದೊರೆಯುವಂತಿಲ್ಲ. ॥೧೮॥

ಅಜ್ಞಾನಿಯು ಎಂದಿದ್ದರೂ ಅಜ್ಞಾನಿಯೇ. ಕತ್ತೆಗೆ, ಕರ್ಪೂರಮಯವಾದ ಸುಗಂಧ ಚಂದನಲೇಪಮಾಡಿದರೂ, ಅದು ಬೀದಿಯ ಧೂಳಿನಲ್ಲಿ ಹೊರಳಾಡುವುದನ್ನು ಎಂದಾದರೂ ಬಿಟ್ಟೀತೆ? ॥೧೯॥

ಹಾಗೆ ಶಂಭುಭಕ್ತನಲ್ಲದವನಿಗೆ ಈ ರಹಸ್ಯವನ್ನು ಉಪದೇಶಿಸಿದರೆ ಅದರಿಂದ ಯಾರಿಗೂ ಉಪಕಾರವಾಗಲಾರದು. ಶಂಕರಕಿಂಕರರಿಗೆ ಉಪದೇಶ ಮಾಡಿದ್ದೇ ಆದರೆ ಅದು ವಿಶೇಷ ಫಲಕಾರಿಯಾಗುವುದರಲ್ಲಿ ಸಂದೇಹವಿಲ್ಲ. ॥೨೦॥

ಸಾಧುಗಳಾದ ಪಾತ್ರರಿಗೆ ಉಪದೇಶಮಾಡಿದ ರಹಸ್ಯವು ನೀರಿನಲ್ಲಿ ಹಾಕಿದ ಎಣ್ಣೆಯಂತೆ ಎಲ್ಲಾ ಕಡೆಗೂ ಹರಡುವುದು. ಆದ್ದರಿಂದ ಯಾವಾಗಲೂ ಯೋಗ್ಯರಾದವರಿಗೆ ಉಪದೇಶಮಾಡಬೇಕು. ॥೨೧॥

ದೇವಿಯೇ, ನಾನಾವಿಧವಾದ ವೃಕ್ಷಗಳಿಗೂ, ಪಕ್ಷಿಗಳಿಗೂ ಆಶ್ರಯವಾದ ಈ ಕೈಲಾಸಪರ್ವತವನ್ನು ನಾನೇ ಮನಸ್ಸಿನಿಂದ ಸೃಷ್ಟಿಮಾಡಿರುವೆನು. ॥೨೨॥

ರತ್ನಸೌಧವರೋಪೇತೋ ರಮ್ಯಪುಷ್ಕರಿಣೀಯುತಃ ।
ಕೋಟಿಯೋಜನವಿಸ್ತಾರಶ್ಶೂನ್ಯ ಏವ ಮಹೀಧರಃ ॥೨೩॥

ರಮ್ಯೋಽಯಮಪಿ ಶೈಲೇಂದ್ರೋ ವಿಪಿನಾವಲಿಮಂಡಿತಃ ।
ಮೃಗಾಶ್ರಯೋಽಪಿ ಸತತಂ ಶೂನ್ಯ ಏವ ವಿಭಾತಿ ಮೇ ॥೨೪॥

ತಸ್ಮಾನ್ಮಯಾ ಮಹಾದೇವಿ ಮನಸೇದಂ ಸುನಿಶ್ಚಿತಂ ।
ತತ್ಸರ್ವಂ ಮಂಗಲಾಕಾರಂ ಶಿವಲಿಂಗಾಶ್ರಯಂ ಹಿ ತತ್ ॥೨೫॥

ಲಿಂಗೋಜ್ಝಿತಂ ಹಿ ಯದ್ದೇವಿ ತದಮಂಗಲಮೀರ್ಯತೇ ।
ಯಸ್ಮಿನ್ ಗ್ರಾಮೇಽಪಿ ವಾ ದೇವಿ ಪುರೇ ವಾ ವಿಪಿನೇಽಪಿ ವಾ ॥೨೬॥

ಮದೀಯಲಿಂಗಹೀನಂ ಚ ಸ್ಮಶಾನಸದೃಶಂ ಶಿವೇ ।
ಯತ್ರ ವಾ ಶಿವಲಿಂಗಂ ಸ್ಯಾದುತ್ತುಂಗಾಲಯಮಧ್ಯಗಂ ॥೨೭॥

ಇದರಲ್ಲಿ ರತ್ನಮಯವಾದ ಸೌಧಗಳೂ, ಸುಂದರವಾದ ಕೊಳಗಳೂ ಹೇರಳವಾಗಿವೆ. ವಿಸ್ತಾರದಲ್ಲಿ ಕೋಟಿಯೋಜನ ವಿಸ್ತೀರ್ಣವುಳ್ಳದ್ದಾದರೂ ಪರ್ವತದಲ್ಲಿ ಯಾರೂ ಸುಲಭವಾಗಿ ವಾಸಮಾಡುವಂತಿಲ್ಲ. ॥೨೩॥

ಈ ಶೈಲದಲ್ಲಿ ಅನೇಕ ಕಾಡುಗಳೂ, ಅದರಲ್ಲಿ ವಿವಿಧವಾದ ಮರಗಳೂ ಮೃಗಗಳೂ ವಾಸಮಾಡುತ್ತಿದ್ದರೂ, ಇವುಗಳಿಂದ ಪರ್ವತವು ರಮ್ಯವಾಗಿ ಕಾಣುತ್ತಿದ್ದರೂ ನನ್ನ ಮನಸ್ಸಿಗೆ ಶೂನ್ಯವಾಗಿರುವಂತೆಯೇ ತೋರಿಬರುವುದು. ॥೨೪॥

ಇದೇ ದೃಷ್ಟಿಯಿಂದಲೇ ನಾನು ಈ ಪರ್ವತವನ್ನು ಮಾನಸಿಕ ಸೃಷ್ಟಿಯಿಂದ ನಿರ್ಮಿಸಿದೆನು. ಇದರಲ್ಲಿ ಮಂಗಳಾಕಾರವಾದ ಅನೇಕ ಶಿವಲಿಂಗಗಳು ನೆಲಸಿವೆ. ॥೨೫॥

ದೇವಿಯೇ, ಯಾವ ಊರಿನಲ್ಲಾಗಲಿ, ಯಾವ ಅರಣ್ಯದಲ್ಲಾಗಲಿ, ಪರ್ವತದಲ್ಲಾಗಲಿ ಶಿವಲಿಂಗವು ಕಾಣಬರಲಾರದೋ, ಅಂತಹ ಪ್ರದೇಶಗಳು ಅಮಂಗಲಪ್ರದಗಳೆಂದು ತಿಳಿಯಬೇಕು. ॥೨೬॥

ಶಿವಲಿಂಗವಿಲ್ಲದ ಪ್ರದೇಶವು ಸ್ಮಶಾನಕ್ಕೆ ಸಮಾನವಾದದ್ದು. ಯಾವ ಪ್ರದೇಶದಲ್ಲಿ ಉತ್ತುಂಗವಾದ ಶಿವಾಲಯದ ಮಧ್ಯದಲ್ಲಿ ಶಿವಲಿಂಗವೊಂದು ಗೋಚರಿಸುವುದೋ, ॥೨೭॥

ಗ್ರಾಮೇ ವಾ ವಿಪಿನೇ ವಾಪಿ ತತ್ಕ್ಷೇತ್ರಮವಿಮುಕ್ತಕಂ ।
ಪ್ರಾತಸ್ತದ್ಗ್ರಾಮನಿವಸಾಃ ಪಶ್ಯನ್ನಪಿ ಶಿವಾಲಯಂ ॥೨೮॥

ನ ತೇಷಾಂ ಪಾಪಸಂಬಂಧಸ್ತದಹ್ನಾತ್ಪ್ರತಿಮುಚ್ಯತೇ ।
ಯತ್ರ ಲಿಂಗಾಲಯಂ ದೇವಿ ಧನ್ಯೋ ದೇಶಸ್ಸ ಏವ ಹಿ ॥೨೯॥

ಯತ್ರೈವ ಶಾಂಭವಾ ವಿಪ್ರಾ ಯತ್ರ ಲಿಂಗಾರ್ಚನಪ್ರಿಯಾಃ ।
ಭಸ್ಮತ್ರಿಪುಂಡ್ರರುದ್ರಾಕ್ಷಮಾಲಾಲಂಕೃತವಿಗ್ರಹಾಃ ॥೩೦॥

ಯತ್ರ ರುದ್ರಜಪಾಸಕ್ತಾ ಯತ್ರ ಪಂಚಾಕ್ಷರಪ್ರಿಯಾಃ ।
ಯತ್ರ ಬಿಲ್ವವನಂ ಭದ್ರೇ ತದ್ಧನ್ಯಂ ಪರಮಂ ಶಿವೇ ॥೩೧॥

ತದ್ದರ್ಶನೇಽಪಿ ಪಾಪಾನಾಂ ಪ್ರಲಯೋ ಭವತಿ ಕ್ಷಣಾತ್ ।
ತ್ರ್ಯಕ್ಷಲಿಂಗೇಕ್ಷಣಾದೇವ ಕ್ಷಣಾನ್ನಶ್ಯತಿ ಪಾತಕಂ ॥೩೨॥

---

ಆ ಪ್ರದೇಶವು ಗ್ರಾಮದಲ್ಲಿರಲಿ, ಕಾಡಿನಲ್ಲಿರಲಿ ಅದು ಅವಿಮುಕ್ತಕ್ಷೇತ್ರಕ್ಕೆ ಸದೃಶವಾಗುವುದು. ಆ ಗ್ರಾಮವಾಸಿಗಳು ಪ್ರಾತಃಕಾಲದಲ್ಲಿ ಶಿವದೇವಾಲಯ ದರ್ಶನಮಾಡಿದರೆ, ||೨೮||

ಅವರಿಗೆ ಆ ದಿನದಲ್ಲಿ ಸಂಚಿತವಾದ ಪಾಪರಾಶಿಯೆಲ್ಲವೂ ನಾಶವಾಗುವುದು. ಅಲ್ಲದೆ ಯಾವ ಊರಿನಲ್ಲಿ ಶಿವದೇವಾಲಯವಿರುವುದೋ, ಆ ಊರು ಉತ್ತಮಕ್ಷೇತ್ರವೆನಿಸುವುದು. ||೨೯||

ಯಾವ ಊರಿನಲ್ಲಿ ಭಸ್ಮತ್ರಿಪುಂಡ್ರಗಳನ್ನೂ, ರುದ್ರಾಕ್ಷಿಯ ಸರಗಳನ್ನೂ ಧರಿಸಿಕೊಂಡು, ಶಿವಲಿಂಗಾರ್ಚನೆ ಮಾಡುವ ವಿಪ್ರರು ವಾಸಮಾಡುವರೋ, ಆ ಊರೇ ಧನ್ಯನಗರಿಯೆನಿಸುವುದು. ||೩೦||

ಯಾವ ಊರಿನಲ್ಲಿ ರುದ್ರಮಂತ್ರವನ್ನು ಜಪಿಸುವವರೂ, ಶಿವಪಂಚಾಕ್ಷರೀ ಮಂತ್ರಪುರಶ್ಚರಣೆಮಾಡುವವರೂ, ಬಿಲ್ವವೃಕ್ಷಗಳ ಸಮುದಾಯವೂ ಇರುವವೋ ಅದೇ ಧನ್ಯವಾದ ಊರು. ||೩೧||

ಅಂತಹ ಗ್ರಾಮದ ದರ್ಶನಮಾತ್ರದಿಂದಲೇ ಮನುಷ್ಯರ ಸಮಸ್ತ ಪಾಪವೂ ನಾಶವಾಗುವುದು. ಹಾಗೆಯೇ ಶಿವಲಿಂಗ ದರ್ಶನಮಾತ್ರದಿಂದ ಸಕಲ ಪಾಪವೂ ಕ್ಷಣಮಾತ್ರದಲ್ಲಿ ನಾಶವನ್ನೈದುವುದು. ||೩೨||

ಧಿಗ್ಭಸ್ಮರಹಿತಂ ಫಾಲಂ ಧಿಗ್ಗ್ರಾಮಮಶಿವಾಲಯಂ ।
ಧಿಗನೀಶಾರ್ಚನಂ ಜನ್ಮ ಧಿಗ್ವಿದ್ಯಾಮಶಿವಾಶ್ರಯಾಂ ॥೩೩॥

ಶಿವಲಿಂಗಕುಲಂ ಭದ್ರೇ ಕಲ್ಪಿತಂ ಮಣಿಸೌಧಗಂ ।
ಸಮಾಧಿನಿಷ್ಠೋ ಹ್ಯಭವಂ ಶತಂ ವರ್ಷಾಣಿ ಶೈಲಜೇ ॥೩೪॥

ವ್ಯಾಘ್ರಚರ್ಮಪರೀಧಾನೋ ಭಸ್ಮಧೃಗ್ಭಸ್ಮಸಂಶ್ರಯಃ ।
ತ್ರಿಪುಂಡ್ರವಿಲಸತ್ಫಾಲೋ ಜಟಾಗಂಗೇಂದುಶೋಭಿತಃ ॥೩೫॥

ಸಮಾಸೀನಶಿರೋಗ್ರೀವೋ ನಾಸಾಗ್ರನ್ಯಸ್ತಲೋಚನಃ ।
ಆತ್ಮನ್ಯೇವಾತ್ಮನಾ ಧ್ಯಾಯಂಸ್ತದ್ವಕ್ತುಂ ನೈವ ಶಕ್ಯತೇ ॥೩೬॥

ಶರ್ವಂ ಸರ್ವಾತಿಗಂ ಶಾಂತಮೋತಪ್ರೋತಂ ಸನಾತನಂ ।
ಅಜಮವ್ಯಯಮಾಶಾಸ್ಯಂ ಹೃತ್ಸ್ಥಂ ವ್ಯಾಪ್ಯ ಜಗಚ್ಚ ಯಃ ॥೩೭॥

---

ಭಸ್ಮಧಾರಣೆಯಿಲ್ಲದ ಹಣೆಯೂ, ಶಿವಾಲಯವಿಲ್ಲದ ಗ್ರಾಮವೂ, ಈಶ್ವರಾರ್ಚನೆಮಾಡದ ಜನ್ಮವೂ, ಶಿವವಿಷಯವಿಲ್ಲದ ವಿದ್ಯೆಯೂ ವ್ಯರ್ಥವೆನಿಸುವುದು. ॥೩೩॥

ದೇವಿಯೇ, ನಾನು ಈ ಕೈಲಾಸಶಿಖರದಲ್ಲಿ ಮಣಿಸೌಧಾಂತರ್ಗತವಾಗಿ ಅನೇಕ ಶಿವಲಿಂಗಗಳನ್ನು ಪ್ರತಿಷ್ಠಿಸಿ ಅನಂತರ ನೂರುವರ್ಷಪರ್ಯಂತ ಸಮಾಧಿಯಲ್ಲಿ ಮನಸ್ಸನ್ನು ನಿರೋಧಿಸಿದ್ದೆನು. ॥೩೪॥

ಸಮಾಧಿ ದಶೆಯಲ್ಲಿ ನಾನು ಹುಲಿಯ ಚರ್ಮವನ್ನುಟ್ಟು, ಭಸ್ಮಧಾರಿಯಾಗಿ, ಭಸ್ಮಲಿಪ್ತಾಂಗನಾಗಿ, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನಿಟ್ಟು, ಜಟೆಯಲ್ಲಿ ಗಂಗೆಯನ್ನೂ ಚಂದ್ರನನ್ನೂ ಧರಿಸಿದವನಾಗಿದ್ದೆನು. ॥೩೫॥

ಶಿರಸ್ಸನ್ನೂ, ಕಂಠವನ್ನೂ, ಸ್ಥಿರವಾಗಿ ಸಮನಾಗಿ ನಿಲ್ಲಿಸಿಕೊಂಡು, ದೃಷ್ಟಿಯನ್ನು ನಾಸಾಗ್ರದಲ್ಲಿರಿಸಿ, ಆತ್ಮಧ್ಯಾನಮಾಡಿದೆನು. ಅದರ ಕ್ರಮವನ್ನು ಬಾಯಿಂದ ಹೇಳಲು ಸಾಧ್ಯವಿಲ್ಲ. ॥೩೬॥

ಸುಖಪ್ರದನೂ, ಸರ್ವಲೋಕಾತೀತನೂ, ಶಾಂತನೂ, ಸಕಲವ್ಯಾಪಕನೂ, ಸನಾತನನೂ, ಆದ್ಯಂತರಹಿತನೂ ಆದ ಜಗದ್ವ್ಯಾಪಿ ಪರಮಾತ್ಮನನ್ನು ಮನಸ್ಸಿನಲ್ಲಿ ಧ್ಯಾನಿಸಿದೆನು. ॥೩೭॥

ಅಕ್ರಿಯಂ ಮನಸಾ ವಾಚಾ ವೇದೈರ್ನಾ ವಕ್ತುಮಕ್ಷಮಂ ।
ಕೋಶಾತಿಗಂ ಕೋಶಭಾಸಂ ದೇಶಕಾಲಾದಿವರ್ಜಿತಂ ॥೩೮॥

ಅಸ್ಥೂಲಮಣುತಾಹೀನಮಸಂಗಮರಸಂ ವಿಭುಂ ।
ಅಖಂಡತೇಜಸಾಂ ರಾಶಿಂ ತೇಜೋಹೀನಂ ಗುಣಾತಿಗಂ ॥೩೯॥

ವ್ಯಾಪ್ಯವ್ಯಾಪಕತಾಹೀನಂ ಮಹಾಂತಂ ವಿಸ್ತೃತಂ ಚ ತತ್ ।
ಆನಂದಮರಸಂ ಭೋಗ್ಯಂ ಭೋಗಭೋಗ್ಯಾದಿವರ್ಜಿತಂ ॥೪೦॥

ವಿಶೋಕಂ ವಿರಜಂ ಸೂಕ್ಷ್ಮಮಜಿಘ್ರೃಕ್ಷಂ ಗುಣಾತಿಗಂ ।
ಸತ್ಯಕಾಮಂ ಚ ಸಂಕಲ್ಪಂ ಕಲ್ಪನಾಜಾಲವರ್ಜಿತಂ ॥೪೧॥

ಕ್ರಿಯಾತ್ಮಕನಲ್ಲದ ಪರಮಾತ್ಮ ಸ್ವರೂಪವನ್ನು ಮನಸ್ಸಿನಿಂದಲೂ, ಮಾತಿನಿಂದಲೂ, ವೇದವಾಣಿಯಿಂದಲೂ ವರ್ಣಿಸಲಸದಳ. ಅಂತೂ ಅನ್ನಮಯಾದಿ ಪಂಚಕೋಶಾದಿಗಳಿಗೆ ಮೀರಿದ್ದಾಗಿ ಕೋಶಾಂತರ್ವರ್ತಿಯಾಗಿರುವಂತೆ ತೋರಿ ಬರುವ ,ದೇಶಕಾಲಾದಿಗಳಿಗೆ ಸಿಕ್ಕಿಬಿದ್ದಿರುವವನೇ ಪರಮಾತ್ಮನು. ||೩೮||

ಸೂಕ್ಷ್ಮರೂಪಿಯಾಗಿದ್ದರೂ, ಪರಮಾತ್ಮನು ಅಣುರೂಪಿಯಲ್ಲ. ಸಂಗ ವಿವರ್ಜಿತನಾಗಿ ರಸಾತ್ಮಕನಲ್ಲದೆ, ಸರ್ವವ್ಯಾಪಿಯಾಗಿ ಅಖಂಡತೇಜೋರೂಪಿಯಾಗಿ ರುವ ಪರಮಾತ್ಮನನ್ನು ಅನುಸಂಧಾನಮಾಡಬೇಕು. ||೩೯||

ವ್ಯಾಪ್ಯ ವ್ಯಾಪಕ ಧರ್ಮಗಳು ಪರಮಾತ್ಮನಲ್ಲಿಲ್ಲ. ಆದರೆ ಆ ಪರಬ್ರಹ್ಮ ವಸ್ತುವಿಗಿಂತ ದೊಡ್ಡದಿಲ್ಲ. ವಿಸ್ತಾರವಾದ ವಸ್ತುವು ಮತ್ತೊಂದು ಇಲ್ಲ. ಆನಂದ ರೂಪಿಯಾಗಿ, ಭೋಗ್ಯರೂಪಿಯಾಗಿ ಕಂಡರೂ, ಭೋಗಭಾಗ್ಯಾದಿಗುಣಗಳಿಗೆ ಆಶ್ರಯನಲ್ಲ. ||೪೦||

ಪರಮಾತ್ಮನಿಗೆ ಶೋಕವಾಗಲಿ, ಕೋಪವಾಗಲಿ ಇರುವುದಿಲ್ಲ. ಕೈಯ್ಯಲ್ಲಿ ಹಿಡಿಯಲಾಗದಷ್ಟು ಸೂಕ್ಷ್ಮರೂಪಿಯು. ಸರ್ವಗುಣಾತೀತನು. ನಿತ್ಯತೃಪ್ತನು. ಕಲ್ಪನೆಗಳ ಗುಂಪಿಗೆ ಸಿಕ್ಕದವನಾಗಿ, ಕೇವಲ ಸಂಕಲ್ಪಸ್ವರೂಪನಾಗಿ ಕಾಣುತ್ತಿರುವನು. ||೪೧||

ನಾನ್ಯತ್ಕಿಂಚಿಚ್ಚ ವೇದಾಹಂ ಸತ್ಯಜ್ಞಾನಾದಿವರ್ಜಿತಂ ।
ಆನಂದರೂಪೋ ನಿಶ್ಚೇಷ್ಟಸ್ತದಹಂ ಬ್ರಹ್ಮ ಕೇವಲಂ ॥೪೨॥

ಏವಂ ಸ್ಥಿತಸ್ಯ ಮೇ ಗಾತ್ರಾತ್ಪುಲಕಸ್ಸಂಬಭೂವ ಹ ।
ದೇಹೀ ದೇಹ್ಯಂಗನಾಶೋತ್ಥಸ್ವಾತ್ಮೈಕ್ಯಪರಮಾತ್ಮನೋಃ ॥೪೩॥

ಆನಂದಾಂಬುನಿಧೇರ್ಮತ್ತಃ ಕಾಶ್ಚ ವೀಚ್ಯಸ್ಸಮುತ್ಥಿತಾಃ ।
ಮದ್ರೋಮಕಣಲಿಂಗಾನಿ ಕೈಲಾಸಸ್ಥಾನಿ ಪಾರ್ವತಿ ॥೪೪॥

ತತಃ ಕಾಲಾಂತರೇ ದೇವಿ ಸಮಾಧಿವಿರತೇ ಮಯಿ ।
ಪಶ್ಯಾಮಿ ತಾನಿ ಸರ್ವಾಣಿ ಲಿಂಗಾಕಾರಾಣಿ ಶೈಲಜೇ ॥೪೫॥

ಪ್ರೋದ್ಯತ್ಸುಧಾಂಶುಧವಲಜ್ವಾಲಾಮೌಲಿಷು ಶಂಕರಿ ।
ಕೈಲಾಸೇಶ್ವರಮುಖ್ಯಾನಿ ತ್ರೀಣಿ ಕೋಟ್ಯಧಿಕಾನಿ ಚ ॥೪೬॥

ಸಮಾಧ್ಯವಸ್ಥೆಯಲ್ಲಿ ಅಹಂಬ್ರಹ್ಮಾಸ್ಮಿ ಎಂಬ ತಿಳಿವಳಿಕೆಯನ್ನು ಬಿಟ್ಟು ಬೇರೆ ಮತ್ತೊಂದನ್ನು ನಾನು ಪಡೆಯಲಿಲ್ಲ. ಸಮಾಧ್ಯವಸ್ಥೆಯಲ್ಲಿ ಸತ್ಯ, ಜ್ಞಾನ ಇವುಗಳಿಗಿಂತ ಅಧಿಕನಾಗಿರುವ ಆನಂದರೂಪಿಯಾಗಿಯೇ ನಿಶ್ಚೇಷ್ಟನಾಗಿದ್ದೆನು.॥೪೨॥

ಹೀಗೆ ನಾನು ಸಮಾಧಿಗತನಾಗಿದ್ದಾಗ ನನ್ನ ದೇಹದಲ್ಲಿ ಅತಿಶಯವಾದ ರೋಮಾಂಚವುಂಟಾಯಿತು. ಸಮಾಧಿಸ್ಥಿತಿಯಲ್ಲಿ ಪುರುಷನು, ತನ್ನ ಅವಯವಗಳ ಅಪರಿಜ್ಞಾನತೆಯಿಂದ, ಸ್ವಾತ್ಮವನ್ನು ಪರಮಾತ್ಮನಲ್ಲಿ ಐಕ್ಯಮಾಡುವನು. ಆ ಐಕ್ಯತೆಯೇ ಆನಂದ. ಆ ಆನಂದವೆಂಬ ಸಮುದ್ರದಲ್ಲಿ ಅಲೆಗಳು ಏಳುವಂತೆ ದೇಹಿಯ ದೇಹದಲ್ಲಿ ರೋಮಾಂಚವೇರ್ಪಡುವುದು. ಅಂಥ ರೋಮಾಂಚಕಾಲದಲ್ಲಿ ಆ ಒಂದೊಂದು ನನ್ನ ರೋಮವೇ ಪ್ರತ್ಯೇಕವಾಗಿ ಕೈಲಾಸದಲ್ಲಿ ಲಿಂಗರೂಪವಾಗಿ ನಿಂತಿತು. ॥೪೩-೪೪॥

ಕೆಲವು ಕಾಲದಮೇಲೆ ಸಮಾಧ್ಯವಸ್ಥೆಯನ್ನೂ ಬಿಟ್ಟು, ಕೈಲಾಸವನ್ನು ನೋಡಲಾಗಿ ಆ ನನ್ನ ಒಂದೊಂದು ರೋಮವೂ, ಒಂದೊಂದು ಲಿಂಗವಾಗಿ ಪರಿಣತವಾಗಿದ್ದಿತು. ॥೪೫॥

ಪ್ರತಿಲಿಂಗವು ಚಂದ್ರನ ಕಲೆಯಿಂದ ಕೂಡಿದ್ದಾಗಿ, ಧವಳಕಾಂತಿಯಿಂದ ಪ್ರಜ್ವಲಿತವಾಗಿದ್ದಿತು. ಕೈಲಾಸೇಶ್ವರಲಿಂಗವೇ ಮೊದಲಾಗಿ ಒಟ್ಟು ಲಿಂಗಗಳ ಸಂಖ್ಯೆಯು ಮೂರುಕೋಟಿಗಳಿಗಿಂತ ಅಧಿಕವಾಗಿ ಕಂಡುಬಂದಿತು. ॥೪೬॥

ಮಣೀಂದ್ರಸಾರಸುಭಗಮೌಲಿಕಂಠೋರುಭಾಸುರೈಃ ।
ಪ್ರಾಸಾದಾವರಣೋಪೇತೈರ್ದಿವ್ಯಪೂಜಾಭರೈರಪಿ ॥೪೭॥

ಬಿಲ್ವಮಂದಾರಮೌಲೀನಿ ಫಣಾಮೌಲಿತತಾನಿ ಚ ।
ದೃಷ್ಟ್ವಾಽಶ್ಚರ್ಯೇಣ ತಲ್ಲಿಂಗಕುಲಂ ಮಂಗಲದಾಯಕಂ ॥೪೮॥

ಕೈಲಾಸಶೈಲೇ ತಲ್ಲಿಂಗಂ ಪೂಜ್ಯಂ ತಾನಿ ಚ ಪೂಜಯೇ ।
ಲೋಕಲೀಲಾವಿನೋದಾಯ ಕಾರ್ಯಮೇತನ್ಮಮ ಪ್ರಿಯಂ ॥೪೯॥

ಏತತ್ತೇ ಕಥಿತಂ ದೇವಿ ನಾಖ್ಯೇಯಂ ಯಸ್ಯ ಕಸ್ಯ ಚಿತ್ ॥೫೦॥

ಅಶಾಂಭವಜನೇರ್ಪಿತಂ ಗದಿತಮೇತದಾದ್ಯಂ ಯದಿ
ವೃಥಾ ಭವತಿ ತದ್ವ್ರತಂ ನಿಗಮಹೀನಭಸ್ಮೇ ಹುತಂ ।
ಮರೂಷರಭವಸ್ತರುರ್ನ ಭವತಿ ಪ್ರರೂಢೋ ಯಥಾ
ತಥಾಪಿ ತೃಣಕೋಪಮೋ ಭವತಿ ಭಾಗ್ಯಹೀನೇ ನರೇ ॥೫೧॥

ಅನೇಕ ದಿವ್ಯರತ್ನಗಳಿಂದ ನಿರ್ಮಿತವಾದ ರತ್ನಹಾರಗಳು ಪ್ರತಿಲಿಂಗದ ಕಂಠ ಪ್ರದೇಶವನ್ನೂ ಅಲಂಕರಿಸುತ್ತಿದ್ದುವು. ಆ ಲಿಂಗಗಳಿಗೆಲ್ಲಾ ಒಂದೊಂದು ಪ್ರಾಸಾದ ವೇರ್ಪಟ್ಟಿತು. ದಿವ್ಯವಾದ ಪೂಜಾಸಾಮಗ್ರಿಗಳೆಲ್ಲಾ ಭರದಿಂದ್ಸಿಅಣಿಯಾದವು.॥೪೭॥

ಪ್ರತಿ ಲಿಂಗದ ಶಿರೋಭಾಗವೂ, ಬಿಲ್ವ, ಮಂದಾರಪುಷ್ಪ ಇವುಗಳಿಂದ ಅಲಂಕೃತವಾಯಿತು. ನಾಗಾಭರಣದಿಂದ ಶೋಭಿತವಾಯಿತು. ಹೀಗೆ ಮಂಗಳಪ್ರದ ವಾಗಿ ಸುಂದರವಾಗಿರುವ ಲಿಂಗಸಮೂಹವನ್ನು ನೋಡಿ ನನಗೇ ಆಶ್ಚರ್ಯವಾ ಯಿತು. ॥೪೮॥

ದೇವಿಯೇ, ಕೈಲಾಸಪರ್ವತದಲ್ಲಿ ಶಿವಲಿಂಗಗಳ ಉತ್ಪತ್ತಿಯಾದದ್ದು ಹೀಗೆ. ಶಿವಲಿಂಗಗಳು ಸರ್ವದಾ ಪೂಜ್ಯವಸ್ತುಗಳಾದ್ದರಿಂಧ, ನಾನೂ ಸಹ ಈ ಲಿಂಗಗಳನ್ನು ಲೋಕಲೀಲೆಯನ್ನನುಸರಿಸಿ ಪೂಜಿಸುತ್ತಿರುವೆನು. ಇದೇ ಶಿವಲಿಂಗಗಳ ಉತ್ಪತ್ತಿ ರಹಸ್ಯ. ಇದು ಗೋಪ್ಯವಾಗಿರತಕ್ಕದ್ದು. ॥೪೯-೫೦॥

ಅವೈದಿಕವಾದ ಮತ್ತು ಅಸಂಸ್ಕೃತವಾದ ಅಗ್ನಿಯ ಬೂದಿಯಲ್ಲಿ ಹೋಮ ಮಾಡುವುದು, ಮರುಭೂಮಿಯಲ್ಲಿ ಮರವನ್ನು ನೆಡುವುದು, ಹೇಗೆ ಫಲಕೊಡ ಲಾರವೋ, ಹಾಗೆ ಈ ರಹಸ್ಯಾದಿಗಳನ್ನು ಶಂಭುಭಕ್ತರಲ್ಲದವರಿಗೆ ಉಪದೇಶಿಸಿದರೆ,

ಅಶಾಂಭವಜನಾಶ್ರಯೋ ನರಕವರ್ಗದುಃಖಾಂಬುಧಿ
ಸ್ಸ ಏವ ತದುಪಾಶ್ರಯೋ ಭವತಿ ಭಸ್ಮತ್ರಿಪುಂಡ್ರೋಜ್ಝಿತಃ ।
ಮಮಾರ್ಚನಕಥಾಸುಧಾಶ್ರವಣಹೀನಪಾನಾಂತರಃ
ಕಥಂ ಮಲಜಲಾವಿಲೋ ಭವತಿ ಸೂಕರಸ್ಸಿಂಹವತ್ ॥೫೨॥

ಅಗಾಧಜನಿನಾಶನಪ್ರಭವಭೂತಿದುಃಖಾಂಬುಧಿಂ
ನ ಸಂತರತಿ ಮಾನುಷಃ ಕುಮತಿರಷ್ಟವಿಷ್ಟಾಶನಃ ।
ಅರಿಷ್ಟಮರಣೋನ್ಮುಖಶ್ಶಿವಮಹೇಶನಾಮೋಜ್ಝಿತಃ
ಕರಂಟಕಕುಲೋದ್ಭವೋ ಭವತಿ ಭಾಗ್ಯಹೀನೋಽಧಮಃ ॥೫೩॥

ಏಷಾ ಸಾ ಶಿವನಾಮಸನ್ಮಧುರಸಾ ಶ್ರೀದಿವ್ಯನಾಮಾನಿ ಮೇ
ವ್ಯಾಖ್ಯೇಯೇತ ಸುಜಿಹ್ವಯಾ ಕರಯುಗೈಶ್ಶ್ರೀಬಿಲ್ವಪತ್ರಾರ್ಚಕಾಃ ।

---

ಅದು ವ್ಯರ್ಥವೆನಿಸುವುದು. ಅದರಲ್ಲಿಯೂ ನಿರ್ಭಾಗ್ಯನಿಗೆ ಮಾಡುವ ಉಪದೇಶ ವಂತೂ ಹುಲ್ಲುಕಡ್ಡಿಗೆ ಸಮನಾಗಿ ಆತನಿಗೆ ನಿಷ್ಫಲವೆನಿಸೀತು. ॥೫೧॥

ನರಕವರ್ಗಕ್ಕೆ ಸೇರಿದ ದುಃಖವೆಂಬ ಸಮುದ್ರವು ಯಾವಾಗಲೂ ಶಾಂಭವ ರಲ್ಲದವರನ್ನೇ ಅನುಸರಿಸಿಕೊಂಡಿದೆ. ಭಸ್ಮತ್ರಿಪುಂಡ್ರಾದಿಗಳಿಂದ ವರ್ಜಿತನಾದ ಆ ಅಶಾಂಭವನು ಕೊನೆಗೆ ಆ ದುಃಖಸಮುದ್ರವನ್ನೇ ಹೊಂದುವನು. ನನ್ನ ಕಥೆ ಯೆಂಬ ದಿವ್ಯಾಮೃತಪಾನಮಾಡದವನು, ದಿವ್ಯಕಥಾಶ್ರವಣಮಾಡದವನು ಹಂದಿ ಯಂತೆ ಯಾವಾಗಲು ಕೊಳೆಯೆಂಬ ಪಾಪಕೂಪದಲ್ಲಿಯೇ ಬಿದ್ದಿರುವನು. ಪಾಪ ಸಂಬಂಧವಿಲ್ಲದೇ ಶುಚಿಯಾಗಿ, ಧೀರನಾಗಿ ಸಿಂಹದಂತೆ ಅವನು ಇರಲು ಸಾಧ್ಯವೇ ? ॥೫೨॥

ಮಹೇಶ್ವರನ ನಾಮಪಾರಾಯಣಮಾಡದ ಮೂಢನು, ಜನನಮರಣಗಳ ಸುಳಿಯಿಂದ ಕೂಡಿರುವ ದುಃಖಸಮುದ್ರವನ್ನು ಖಂಡಿತವಾಗಿ ದಾಟಲಾರನು. ಅಲ್ಲದೆ ಅಷ್ಟವಿಧವಾದ ಮಲಪ್ರಾಶನೆಯಿಂದ ಜೀವಿಸುವವನಾಗಿ, ಕರಂಟಕ ( ಕಾಗೆ ) ಕುಲದಲ್ಲಿ ನಿರ್ಭಾಗ್ಯನಾಗಿ ಜನಿಸುವನು. ॥೫೩॥

ದಿವ್ಯವಾದ ಶಿವನಾಮಸ್ಮರಣೆಮಾಡಿದವರೂ, ಅಲ್ಲದೆ ನನ್ನ ನಾಮಗಳಿಗೆ ತಮ್ಮ ನಾಲಗೆಗಳಿಂದಲೇ ಅರ್ಥವಿವರಣೆಮಾಡಿದವರೂ, ತಮ್ಮ ಕೈಗಳಿಂದ ಶಿವಲಿಂಗ

ಕಥಾಸು ಮಮ ಶಾಂಕರಾಃ ಪ್ರಥಿತಶ್ರೋತ್ರಪಾತ್ರಾದರಾ
ಭವಂತಿ ಸುಕೃತೈಃ ಪರಂ ಪರಮನನ್ಯಭಾವಂ ಗತಾಃ ॥೫೪॥

ತೇಷಾಂ ಮುಕ್ತಿಯ ಏವ ಲಭ್ಯತ ಉಮೇ ಮದ್ಭಾವಸಾರಾದರಾ
ಹೀರೋದಾರಕುಮಾರದಾರನಿಕರೈಸ್ಸೌಖ್ಯೈಕಸಾರಾಶ್ಚ ತೇ ।
ಪಾರಾವಾರವಿಕಾರಸಂಸೃತಿಭವಂ ದುಃಖಂ ನ ತೇಷು ಧ್ರುವಂ
ಮತ್ಪಾದಾಬ್ಜಪರಾಗಸಂಹತಮನಸ್ತಾಪಾದಿರಾಗಾದಯಃ ॥೫೫॥

ಸುಖಾಂಬುಧಿಸುಧಾಂಬುಧಿಪ್ರಚಲಲೀಲಲೀನಾ ಹಿ ತೇ
ನಿಧಾನಕಲಶಾಸ್ಸದಾ ಭುವಿ ಸದೈವ ತೇಷಾಂ ಸುಖಂ ।
ಶರೀರವಿಗಮೇಽಪಿ ತೇ ಪ್ರಥಿತಚಂದ್ರಚೂಡಾರ್ಚಕಾ
ನಗೇಶ್ವರಮಿಮಂ ಶಿವೇ ಸಮಧಿವಾಪ್ಯ ಮೇ ಸದ್ಮಗಾಃ ॥೫೬॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಶಿವಗೌರೀಸಂವಾದೋ ನಾಮ
ಅಷ್ಟಚತ್ವಾರಿಂಶೋಽಧ್ಯಾಯಃ

---

ಗಳಿಗೆ ಬಿಲ್ವಪತ್ರಾರ್ಚನೆ ಮಾಡಿದವರೂ, ನನ್ನ ಸಂಬಂಧವಾದ ಕಥೆಗಳಲ್ಲಿ ತಮ್ಮ ದಿವ್ಯವಾದ ಕಿವಿಗಳನ್ನು ಕೊಟ್ಟು ಅನನ್ಯಭಾವದಿಂದ ಕೇಳಿದವರೂ, ಸುಕೃತಿಗಳೆನಿಸುವರು ಮತ್ತು ಧನ್ಯರೆನಿಸುವರು. ॥೫೪॥

ಎಲೌ ದೇವಿಯೇ, ಯಾರು ಅನನ್ಯಭಾವದಿಂದ ನನ್ನನ್ನೇ ಸ್ಮರಿಸುತ್ತಿರುವರೋ, ಅವರು ಪತ್ನೀಪುತ್ರಸಮೇತರಾಗಿ, ಐಹಿಕವಾದ ಸೌಖ್ಯಗಳನ್ನು ಅನುಭವಿಸಿ ಕೊನೆಗೆ ಮುಕ್ತರಾಗುವರು. ಸಂಸಾರಸಮುದ್ರದ ಕಷ್ಟಪರಂಪರೆಗಳು ಅವರನ್ನು ಮುಟ್ಟಲಾರವು. ನನ್ನ ಪಾದಕಮಲದ ಪರಾಗದಿಂದ ಭೂಷಿತರಾದ ನನ್ನ ಭಕ್ತರ ಮನಸ್ಸಿಗೆ ರಾಗದ್ವೇಷಾದಿಗಳ ಸಂಬಂಧವಿಲ್ಲದೆ ಸರ್ವದಾ ಆನಂದವು ದೊರಕುತ್ತಿರುವುದು. ॥೫೫॥

ದೇವಿಯೇ, ನನ್ನ ಪಾದಧ್ಯಾನನಿರತರಾದವರು, ಐಹಿಕವಾದ ಶಾಶ್ವತಸುಖವೆಂಬ ಸಮುದ್ರದಲ್ಲಿ ಮುಳುಗಿದವರಾಗಿ, ಸಕಲ ಸಂಪತ್ತಿಗೂ ಕಲಶಪ್ರಾಯರಾಗಿ ಜೀವಿಸುವರು. ಶರೀರತ್ಯಾಗಾನಂತರ, ಅವರು ನನ್ನ ಅರ್ಚನೆಯ ಫಲವಾಗಿ, ಈ

ಕೈಲಾಸಪರ್ವತವನ್ನು ಹೊಂದಿ, ಇಲ್ಲಿಯೂ ನನ್ನನ್ನು ಬಹುವಾಗಿ ಆರಾಧಿಸುತ್ತಾ ಕೊನೆಗೆ ನನ್ನ ಸಾಯುಜ್ಯವನ್ನು ಹೊಂದುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ||೫೬||

ಇಲ್ಲಿಗೆ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಶಿವಗೌರೀಸಂವಾದವೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಏಕೋನಪಂಚಾಶೋಽಧ್ಯಾಯಃ



### ದೇವವಾಕ್ಯಂ

|| ಈಶ್ವರ ಉವಾಚ ||

ಪುರಾ ಮಾಂ ಸುಖಮಾಸೀನಂ ಮಂದರೇ ಚಾರುಕಂದರೇ ।
ನಾನಾತರುವರಾಪಾರಶೋಭಿತೇ ಚಿತ್ರಕಂದರೇ ॥೧॥

ರಮ್ಯಪುಷ್ಕರವಿಸ್ತೀರ್ಣೇ ಪುಷ್ಕರಿಣ್ಯಾಸ್ತಟೇ ಶುಭೇ ।
ದೇವದಾರುವನಚ್ಛನ್ನೇ ದೇವೋದ್ಯಾನಮನೋಹರೇ ॥೨॥

ನಾನಾಸಿದ್ಧಸಮಾಕೀರ್ಣೇ ಮುನಿಗಂಧರ್ವಶೋಭಿತೇ ।
ನಗಾಗ್ರಕುಸುಮಾಪಾರಸ್ತಬಕೋಚ್ಛಿನ್ನಗುಚ್ಛಕೇ ॥೩॥

---

## ಶ್ರೀಶಿವರಹಸ್ಯದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ

ಅನಂತರ ಪರಮೇಶ್ವರನು ಪಾರ್ವತಿಯೊಡನೆ ಹೀಗೆಂದನು, "ದೇವಿಯೇ, ಹಿಂದೆ ನಾನು ಮನೋಹರವಾದ ಗುಹಾಪ್ರದೇಶಗಳಿಂದಲೂ, ಚಿತ್ರವಿಚಿತ್ರವಾದ ಸಾನುಭಾಗದಿಂದಲೂ, ವಿವಿಧವಾದ ವೃಕ್ಷರಾಜಿಗಳಿಂದಲೂ ಶೋಭಿತವಾಗಿದ್ದ ಮಂದರ ಪರ್ವತದಲ್ಲಿ ಸುಖವಾಗಿ ಕುಳಿತಿದ್ದೆನು. ||೧||

ಆ ಪ್ರದೇಶವು ಮನೋಪರವಾದ ಕೊಳಗಳಿಂದ ಪರಿವೃತವಾಗಿತ್ತು. ದೇವದಾರುವೃಕ್ಷಗಳಿಂದ ಕೂಡಿದ ದೇವೋದ್ಯಾನವೂ ಅಲ್ಲಿ ಮನೋಹರವಾಗಿ ಕಾಣುತ್ತಿದ್ದಿತು. ||೨||

ಅನೇಕ ಸಿದ್ಧಸಾಧ್ಯರೂ, ಋಷಿಗಳೂ, ಗಂಧರ್ವರೂ ಅಲ್ಲಿ ವಿಹರಿಸುತ್ತಿದ್ದರು. ಪರ್ವತಾಗ್ರದಲ್ಲಿ ಅನೇಕ ಪುಷ್ಪಗಳಿಂದ ಕೂಡಿದ ಹೂಗೊಂಚಲುಗಳು ಗುಂಪು ಗುಂಪಾಗಿ ಕಾಣುತ್ತಿದ್ದುವು. ||೩||

ಮುದಿತಾಲಿಗಣಾಚ್ಛಾಚ್ಛೇ ಶಲ್ಮಲೀಕುಸುಮಾವೃತೇ ।
ಪುನ್ನಾಗತರುಸಂಭೂತಮಾರುತೇ ಚಾತಿಶೀತಲೇ ॥೪॥

ಮಯೂರವರಸಾರಂಗಮತ್ತವಾನರವಾರಣೈಃ ।
ಪುಂಸ್ಕೋಕಿಲಕಲಾಲಾಪಶುಕಸಾರಸಶೋಭಿತೇ ॥೫॥

ಕಲಹಂಸಕುಲಾರಾವಕುರರಧ್ವನಿಸುಂದರೇ ।
ಮಂದಾರಕುಸುಮೋದ್ಭೂತಮಂದಮಾರುತಶೋಭಿತೇ ॥೬॥

ಕಿಂಪೂರುಷಕೃತಾಪಾರಮೃದಂಗಧ್ವನಿದಿಕ್ತಟೇ ।
ವೈಖಾನಸೈರ್ವಾಲಖಿಲ್ಯೈರ್ಮುನಿಭಿಶ್ಚ ಮರೀಚಿಭಿಃ ॥೭॥

ಉದ್ಯಚ್ಚಂಡಾಂಶುನಿಚಯೈರೂರ್ಧ್ವಬಾಹುಭಿರುನ್ನತೈಃ ।
ತಾಪಸೈರ್ಮೌಲಿವಿಲಸತ್ಕಪರ್ದೋತ್ಕೀಲಶೋಭಿತೈಃ ॥೮॥

ಮಕರಂದಪಾನದಿಂದ ಮದಿಸಿದ ಭ್ರಮರಗಳ ಸಮೂಹವೂ, ಬೂರುಗದ ಪುಷ್ಪಗಳ ರಾಶಿಯೂ, ಪುನ್ನಾಗವೃಕ್ಷಗಳ ಮೇಲೆ ಬೀಸುವ ಶೀತಲಮಾರುತವೂ ಬಹಳ ಆಹ್ಲಾದಕರಗಳಾಗಿದ್ದುವು. ॥೪॥

ನವಿಲು, ಸಾರಂಗ, ಕಪಿಗಳು, ಮದ್ದಾನೆಗಳು, ಸುಂದರವಾದ ಗರಿಗಳುಳ್ಳ ಗಂಡುಕೋಗಿಲೆಗಳು, ಗಿಳಿ, ಸಾರಸ, ಮುಂತಾದ ಪ್ರಾಣಿಗಳಿಂದ ಆ ಪ್ರದೇಶವು ನಿಬಿಡವಾಗಿದ್ದಿತು. ॥೫॥

ಕಲಹಂಸಗಳ ಸುಂದರಧ್ವನಿಯೂ, ಜಿಂಕೆಗಳ ಮಧುರಶಬ್ದವೂ, ಮಂದಾರ ಕುಸುಮಗಳ ಪರಾಗದಿಂದ ಕೂಡಿರುವ ಮಂದಮಾರುತವೂ ಅತ್ಯಂತ ಮನೋಹರ ವಾಗಿದ್ದಿತು. ॥೬॥

ಕಿಂಪುರುಷರು, ಮೃದಂಗಧ್ವನಿಗೈಯ್ಯುತ್ತಾ ದಿಕ್ಕುಗಳನ್ನೆಲ್ಲಾ ಮೊಳಗಿಸುತ್ತಿದ್ದರು. ವೈಖಾನಸರೂ, ವಾಲಖಿಲ್ಯರೂ, ಮರೀಚಿಯೇ ಮೊದಲಾದ ಮಹರ್ಷಿಗಳು ಅಲ್ಲಿ ನೆರೆದಿದ್ದರು. ॥೭॥

ಅನೇಕ ಋಷಿಗಳು ಅಲ್ಲಿ ತಮ್ಮ ತೋಳುಗಳನ್ನು ಮೇಲೆತ್ತಿಕೊಂಡು, ಉರಿ ಬಿಸಿಲಿನಲ್ಲಿ ಜಟಾಧಾರಿಗಳಾಗಿ ತಪಸ್ಸಿಗಾಗಿ ನಿಂತಿದ್ದರು. ॥೮॥

**ಕಪರ್ದಕೃತನೀಡೈಶ್ಚ ಪಕ್ಷಿಪಕ್ಷೋತ್ಥಮಾರುತೈಃ ।**
**ವಿಶ್ರಾಂತೈಸ್ಸೂರ್ಯಕಿರಣೈಸ್ತಪ್ತಗಾತ್ರೈರ್ಮುನೀಶ್ವರೈಃ ॥೯॥**

**ರಮ್ಯಸಾನುಶತಾಕೀರ್ಣೇ ನಿರ್ಯದ್ರ್ರೀತಿವಿರಾಜಿತೇ ।**
**ತಗರಾಗರುಜೋದ್ಭೂತದಾವಾಗ್ನಿವರಧೂಪಿತೇ ॥೧೦॥**

**ವರಸೌಧೇ ಗಂಧಲಿಪ್ತೇ ಸುಖಾಸೀನಂ ತ್ವಯಾ ಸಹ ।**
**ಉದ್ಯಚ್ಚಂದ್ರಾಂಶುಧವಲಬಾಲೇಂದುಕೃತಶೇಖರಂ ॥೧೧॥**

**ರಾಜತ್ಫಣಿಫಣಾರತ್ನಕೆನ್ಯತ್ಕಂಕಣಶೋಭಿತಂ ।**
**ಉರಗೇಂದ್ರಮಹಾಹಾರಂ ನೀಲಕಂಠಂ ತ್ರಿಲೋಚನಂ ॥೧೨॥**

ಅವರ ಜಟಾಜೂಟದಲ್ಲಿ ಅನೇಕ ಹಕ್ಕಿಗಳು ಗೂಡುಕಟ್ಟಿಕೊಂಡಿದ್ದುವು. ಅದರೊಳಗೆ ಹಕ್ಕಿಗಳು ರೆಕ್ಕೆಗಳನ್ನು ಬಡಿಯುತ್ತಾ ತಾಪಸರಿಗೆ ಗಾಳಿಯನ್ನು ಬೀಸುವಂತಿದ್ದುವು. ಹಾಗಾದರೂ ಜ್ವಲಿಸುವ ಸೂರ್ಯಕಿರಣಗಳಿಂದ ಋಷಿಗಳ ದೇಹವೆಲ್ಲಾ ಸುಟ್ಟುಹೋಗಿದ್ದಿತು. ॥೯॥

ಆ ಪರ್ವತದ ಸಾನುಪ್ರದೇಶದಲ್ಲಿ, ತಗರು, ಅಗರು, ಮುಂತಾದ ವೃಕ್ಷಗಳಿಗೆ ಕಾಡುಕಿಚ್ಚು ಬಿದ್ದು, ಅದರ ವಾಸನೆಯಿಂದ ಆ ಪರ್ವತವೆಲ್ಲಾ ಘಮಘಮಿಸುತ್ತಿದ್ದಿತು. ॥೧೦॥

ಅಂತಹ ಪ್ರದೇಶದಲ್ಲಿ ಸುವಾಸನೆಯಿಂದ ಕೂಡಿರುವ ದಿವ್ಯಸೌಧವೊಂದರಲ್ಲಿ ನಾನು ಉದಯಿಸುವ ಪೂರ್ಣಚಂದ್ರನಂತೆ ಹೊಳೆಯುತ್ತಾ, ಕಿರಣಗಳಿಂದ ಪ್ರಕಾಶಿತವಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿದವನಾಗಿ ನಿನ್ನ ಜೊತೆಯಲ್ಲಿ ಸುಖವಾಗಿ ಕುಳಿತಿದ್ದೆನು. ॥೧೧॥

ನನ್ನ ಕೈಯ್ಯಲ್ಲಿ ನಾಗರತ್ನಗಳಿಂದ ಅಲಂಕೃತವಾದ ಸರ್ಪವೇ ಬಳೆಯಾಗಿದ್ದಿತು. ಆದಿಶೇಷನನ್ನೇ ಹಾರವನ್ನಾಗಿ ಮಾಡಿಕೊಂಡು ನೀಲಕಂಠನಾಗಿ ತ್ರಿಲೋಚನನಾಗಿ ಕುಳಿತಿದ್ದೆನು. ॥೧೨॥

ವ್ಯಾಘ್ರಚರ್ಮೋತ್ತರಾಸಂಗಂ ಗಂಗಾಪಿಂಗಜಟಾಧರಂ ।
ತ್ರಿಶೂಲವಿಲಸದ್ಬಾಹುಂ ಮೃಗಹಸ್ತಂ ಮಹೇಶ್ವರಂ ॥೧೩॥

ಮನ್ಮೈವ ಮಾಯಾಪರಿಮೋಹಿತಾಸ್ಸುರಾ
ರುದ್ರೇಂದ್ರವಿಷ್ಣ್ವಬ್ಜಜಮಿತ್ರಸೋಮಾಃ ।
ಭಗೋರ್ಯಮಾ ವರುಣೋ ಗಂಧವಾಹ
ಸ್ತಥಾನಲೋ ವಸವೋ ಮಾರುತಶ್ಚ ॥೧೪॥

ಊಚುಃ ಪ್ರಾಂಜಲಯಸ್ಸರ್ವೇ ಪ್ರಣಮ್ಯಾಥ ಸುರೋತ್ತಮಾಃ ।
ಮತ್ತೇಜಸಾ ಧರ್ಷಿತಾಶ್ಚ ಭೀತಾ [1]ಮನು ಮಹೌಜಸಾ ॥೧೫॥

॥ ದೇವಾ ಊಚುಃ ॥

ಕೋ ಭವಾಂಸ್ತವ ಕಿಂ ರೂಪಂ ನಾನಾಶ್ಚರ್ಯೈಕಭಾವನಃ ।
ನಗ್ನೋಸಿ ದೇವದೇವೇಶ ಬ್ರಹ್ಮಮುಂಡಲಸದ್ಗಲಃ ॥೧೬॥

---

ವ್ಯಾಘ್ರಚರ್ಮವನ್ನೇ ಹೊದ್ದಿದ್ದೆನು. ಗಂಗಾನದಿಯಿಂದ ಕೂಡಿದ ಜಟೆಯನ್ನು ಧರಿಸಿದ್ದೆನು. ಕೈಯ್ಯಲ್ಲಿ ತ್ರಿಶೂಲವನ್ನೂ, ಬಾಲಕುರಂಗವನ್ನೂ ಹಿಡಿದಿದ್ದೆನು. ॥೧೩॥

ಆಗ ನನ್ನ ಮಾಯೆಗೆ ಸಿಕ್ಕಿ ಮೋಹಿತರಾಗಿದ್ದ ರುದ್ರ, ಇಂದ್ರ, ವಿಷ್ಣು, ಬ್ರಹ್ಮ, ಸೂರ್ಯ, ಚಂದ್ರ, ಭಗ, ಅರ್ಯಮಾ, ವರುಣ, ವಾಯು, ಅಗ್ನಿ, ಅಷ್ಟವಸುಗಳು, ವಾಯುದೇವತೆಗಳು ಇವರೇ ಮೊದಲಾದವರು ನನ್ನಲ್ಲಿಗೆ ಬಂದು, ನನ್ನ ತೇಜಸ್ಸಿಗೆ ಹೆದರಿದವರಾಗಿ, ಎದುರಿನಲ್ಲಿ ಕೈಜೋಡಿಸಿ ನಿಂತು ಹೀಗೆ ಪ್ರಾರ್ಥನೆ ಮಾಡಿದರು. ॥೧೪-೧೫॥

" ಸ್ವಾಮಿಯೇ, ನೀನು ಯಾರು ? ನಿನ್ನ ನಿಜರೂಪವೇಂತು ? ಅನೇಕ ಆಶ್ಚರ್ಯಕರಗಳಾದ ಭಾವನೆಗಳನ್ನು ತೋರ್ಪಡಿಸುವೆ. ದಿಗಂಬರನಾಗಿರುವೆ. ನಿನ್ನ ಕಂಠದಲ್ಲಿ ಬ್ರಹ್ಮರುಂಡವು ಪ್ರಕಾಶಿಸುತ್ತಿರುವುದು. ॥೧೬॥

---

1. ಮಾಮಾಹು ರೋಜಸಾ, ಇತಿ ಪಾಠಾಂತರಂ.

ತ್ರಿಣೇತ್ರಶ್ಚ ಗರಾದಶ್ಚ ನೀಲಕಂಠಶ್ಚ ಶಂಕರಃ ।
ಮಹಾಹಿವಲಯೋದ್ಭಾಸಿರತ್ನಮಾಲಾಗಲದ್ಯುತಿಃ ॥೧೭॥

ಪಿತೃಕಾನನಸಂಭೂತಭಸ್ಮಧಾರ್ಯಸಿ ಸರ್ವದಾ ।
ಜಟಿಲೋಽಸಿ ಮಹಾದೇವ ಮಹಾವೃಷಭವಾಹನಃ ॥೧೮॥

ಮತ್ಸ್ಯಕೂರ್ಮವರಾಹಾದಿನರಸಿಂಹಾಜಿನಪ್ರಿಯಃ ।
ಗಜಕೃತ್ತಿಧರೋ ನಿತ್ಯಂ ಚಂದ್ರಮೂರ್ಧಾಸಿ ಶಾಶ್ವತಃ ॥೧೯॥

ಮೃಗಬಾಲಮಹಾಶೂಲಧಾರಕೋಽಸಿ ಮಹೇಶ್ವರಃ ।
ವಾಮಭಾಗೈಕವಿಲಸತ್ಕಾಮಿನೀನೋಽಸಿ ವಿಶ್ವಭುಕ್ ॥೨೦॥

ಸದಾ ಗಿರಿಪ್ರಿಯಶ್ಚಾಸಿ ಹ್ಯಸಂಗಶ್ಚ ಚರಿಷ್ಯಸಿ ।
ಗಣೌಘಗಣನಾಂ ದೇವ ಗಣಿತುಂ ತೇ ನ ಶಕ್ಯತೇ ॥೨೧॥

ನಿನಗೆ ಮೂರು ಕಣ್ಣುಗಳಿವೆ. ವಿಷಭಕ್ಷಕನಾಗಿರುವೆ. ನಿನ್ನ ಕಂಠಪ್ರದೇಶವು ನೀಲವರ್ಣವಿಶಿಷ್ಟವಾಗಿದೆ. ನಾಗಾಭರಣದಿಂದಲೂ, ರತ್ನಮಾಲೆಯಿಂದಲೂ ಶೋಭಿತನಾಗಿರುವೆ. ॥೧೭॥

ಯಾವಾಗಲೂ ಸ್ಮಶಾನದಲ್ಲಿ ಹುಟ್ಟಿದ ಭಸ್ಮವನ್ನೇ ಬಳಿದುಕೊಳ್ಳುವೆ. ಜಟಾಧಾರಿಯಾಗಿ ವೃಷಭಾರೂಢನಾಗಿರುವ ನೀನು ನಿಜವಾಗಿ ಯಾರು ? ॥೧೮॥

ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಈ ಪ್ರಾಣಿಗಳ ಚರ್ಮದಲ್ಲಿ ಅತ್ಯಂತಾಸಕ್ತನಾಗಿರುವೆ. ಗಜಚರ್ಮಾಂಬರಧಾರಿಯಾಗಿ, ಚಂದ್ರಶೇಖರನಾಗಿರುವ ನೀನು ಯಾರು ? ॥೧೯॥

ಕೈಯ್ಯಲ್ಲಿ ಬಾಲಕುರಂಗವನ್ನೂ ತ್ರಿಶೂಲವನ್ನೂ ಹಿಡಿದಿರುವೆ. ಎಡಭಾಗದಲ್ಲಿ ಸರ್ವದಾ ಗೌರಿಯನ್ನು ಹೊಂದಿರುವೆ. ವಿಶ್ವಭೋಜಿಯಾಗಿ ಮಹೇಶ್ವರನೆನಿಸಿಕೊಂಡಿರುವೆ. ॥೨೦॥

ಸರ್ವದಾ ಗಿರಿಯಲ್ಲೇ ವಾಸಮಾಡಲು ಇಷ್ಟಪಡುವೆ. ಯಾವುದರ ಸಂಸರ್ಗವೂ ಇಲ್ಲದೆ ಅಲ್ಲಲ್ಲಿ ಸಂಚರಿಸುವೆ. ನಿನ್ನ ಪ್ರಮಥಗಣಗಳ ಸಂಖ್ಯೆಯನ್ನು ಎಣಿಸಲು ಯಾರಿಂದಲೂ ಸಾಧ್ಯವಿಲ್ಲವಾಗಿದೆ. ॥೨೧॥

ಕಾ ನಿಷ್ಠಾ ತವ ದೇವೇಶ ವದ ತ್ವಂ ಕರುಣಾನಿಧೇ ।
ಸಶರೀರೋಽಸಿ ಚಾರಿತ್ರ್ಯಂ ತವ ಜ್ಞಾತುಂ ನ ಶಕ್ಯತೇ ॥೨೨॥

ತವ ಮಾಯಾಮಯೈಃ ಪಾಶೈರ್ಮೋಹಿತಾಶ್ಚೈವ ಭೂಸುರಾಃ ।
ಶರೀರಿಣಂ ತ್ವಾಂ ದೃಷ್ಟ್ವೈವ ಹ್ಯಸ್ಮಾಭಿಸ್ಸಮುಪಾಸ್ಯಸೇ ॥೨೩॥

ಪುತ್ರಾಭ್ಯಾಂ ಪ್ರೀತಿಯುಕ್ತೋಽಸಿ ದ್ವಿಪಾನನಷಡಾನನೇ ।
ಷಡೂರ್ಮಿರಹಿತಂ ದೇವದೇವಂ ತ್ವಾಂ ಮನ್ಮಹೇ ವಯಂ ॥೨೪॥

ವಯಂ ಚ ಲೋಕಪಾಲಾಸ್ಸರ್ವೇ ಬ್ರಹ್ಮಾವಿಷ್ಣುಮಹೇಶ್ವರಾಃ ।
ರುದ್ರಾದಯಶ್ಚ ದಿಕ್ಪಾಲಾ ಗ್ರಹರ್ಷಿಮನವಸ್ಸುರಾಃ ॥೨೫॥

ಬ್ರಹ್ಮಾ ಸೃಜತಿ ಲೋಕಾಂಶ್ಚ ವಿಷ್ಣುಃ ಪಾಲಯತೇ ಜಗತ್ ।
ರುದ್ರಸ್ಸಂಹರತೇ ಚಾಂತೇ ಚಂದ್ರೇಂದ್ರಸುರನಾಯಕೈಃ ॥೨೬॥

---

ದಯಾಸಮುದ್ರನೇ, ನಿನ್ನ ಕರ್ತವ್ಯವಾವುದು ? ಶರೀರಿಯಾಗಿ ಕಂಡು ಬಂದರೂ ನಿನ್ನ ಸ್ವರೂಪವನ್ನರಿಯಲು ಸಾಧ್ಯವಿಲ್ಲವಾಗಿದೆ. ॥೨೨॥

ನಿನ್ನ ಮಾಯೆಗೆ ಸಿಕ್ಕಿದವರಾಗಿ ನಾವೆಲ್ಲರೂ ಸಗುಣೋಪಾಸನೆಯಿಂದ ಶರೀರ ವಿಶಿಷ್ಟನಾದ ನಿನ್ನನ್ನೇ ಸರ್ವದಾ ಸೇವಿಸುತ್ತಿರುವೆವು. ॥೨೩॥

ಗಜಾನನನೂ, ಷಡಾನನನೂ ಆದ ಇಬ್ಬರು ಮಕ್ಕಳಲ್ಲಿ ವಿಶೇಷ ಪ್ರೀತಿಯಿಂದಿರುವೆ. ನಿನ್ನಲ್ಲಿ ಮಾತ್ರ ಅರಿಷಡ್ವರ್ಗಗಳೆಂಬ ಅಲೆಗಳು ಯಾವಾಗಲೂ ಹರಡಲಾರವು ಎಂದು ನಾವು ತಿಳಿದಿದ್ದೇವೆ. (ಶೀತೋಷ್ಣ, ಸುಖದುಃಖ, ಕ್ಷುತ್ಪಿಪಾಸಾ, ಈ ಆರು ಧರ್ಮಗಳಿಗೆ ಷಡೂರ್ಮಿಗಳೆಂದು ಹೆಸರು.) ॥೨೪॥

ಬ್ರಹ್ಮ ವಿಷ್ಣು ಮಹೇಶ್ವರರೂ, ದಿಕ್ಪಾಲಕರೂ, ರುದ್ರಗಣಗಳೂ, ಸಕಲ ಗ್ರಹನಕ್ಷತ್ರಗಳೂ, ಮನುಗಳೂ, ಸಕಲ ದೇವತೆಗಳೂ ಆದ ನಾವು ನಿನ್ನನ್ನೇ ಸೇವಿಸುತ್ತಿರುವೆವು. ॥೨೫॥

ಬ್ರಹ್ಮನು ಸಕಲ ಲೋಕವನ್ನೂ ಸೃಷ್ಟಿಸುವನು. ವಿಷ್ಣುವು ರಕ್ಷಿಸುವನು. ರುದ್ರನು ನಾಶಮಾಡುವನು. ಈ ಸೃಷ್ಟಿ ಸ್ಥಿತಿ ಲಯ ಕಾರ್ಯಗಳಿಗೆ ಚಂದ್ರ, ಇಂದ್ರಾದಿ ಸಕಲ ದೇವತಾಧಿಪತಿಗಳೂ ತ್ರಿಮೂರ್ತಿಗಳಿಗೆ ಸಹಾಯಕರಾಗಿರುವರು. ॥೨೬॥

ಹಂತ್ಯಾಜೌ ಸರ್ವದೈತ್ಯಾಂಶ್ಚ ಮುಖಭುಗ್ವಿಷ್ಟಪಾಧಿಪಃ ।
ವಿಶ್ವೇ ಚ ಋಭವಸ್ಸೋಮಂ ತೇಽಪಿ ಯಜ್ಞೇ ಪಿಬಂತ್ಯಪಿ ॥೨೭॥

ಸೋಮಂ ತವಾಜ್ಞಯಾ ಶಂಭೋಽಹ್ಯಶ್ವಿನೌ ಸೋಮಪೀಥಿನೌ ।
ವಸವಶ್ಚ ತತಶ್ಶಂಭೋ ಸೂರ್ಯಃ ಪಾತಿ ಗಭಸ್ತಿಭಿಃ ॥೨೮॥

ನಿಶಾನಾಥಸ್ತದಾ ಚಂದ್ರಸ್ತಾರಾಶ್ಚಾನ್ಯೇ ಗ್ರಹಾದಯಃ ।
ಇಂದ್ರೋಽಗ್ನಿಸ್ಸೂರ್ಯತನಯೋ ನಿಋೃತಿರ್ವರುಣೋ ಮರುತ್ ॥೨೯॥

ಯಕ್ಷೇಂದ್ರೋಽಯಂ ಧನಾಧೀಶ ಈಶಾನೋಽಯಂ ಮಹೇಶ್ವರಃ ।
ಮನವೋ ಋಷಯಶ್ಚೈವ ಸ್ವಂ ಸ್ವಂ ಕಾರ್ಯಮುಪಾಸತೇ ॥೩೦॥

ತಾರಾಚಕ್ರಮಿದಂ ಸರ್ವಂ ಲೋಕಾಶ್ಚೈವ ಚತುರ್ದಶ ।
ಏತೇಷಾಮತಿರಿಕ್ತಸ್ತ್ವಂ ಕಸ್ತ್ವಂ ದೇವ ವದಾಧುನಾ ॥೩೧॥

---

ಯಜ್ಞಾಧಿಪತಿಯೂ, ಸ್ವರ್ಗಾಧಿಪನೂ ಆದ ದೇವೇಂದ್ರನು ಯುದ್ಧದಲ್ಲಿ ಸಕಲ ದೈತ್ಯರನ್ನೂ ನಾಶಮಾಡುವನು. ವಿಶ್ವೇದೇವತೆಗಳೂ, ಋಭುದೇವತೆಗಳೂ ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸುತ್ತಾ ಸೋಮಪಾನಮಾಡುವರಾಗುವರು. ॥೨೭॥

ಶಂಭುವೇ, ನಿನ್ನ ಆಜ್ಞಾನುವರ್ತಿಗಳಾಗಿ, ಅಶ್ವಿನೀ ದೇವತೆಗಳೂ, ಅಷ್ಟವಸುಗಳೂ, ಯಾಗದಲ್ಲಿ ಸೋಮಪಾನಮಾಡುವರು. ಹಾಗೆಯೇ ಸೂರ್ಯನೂ ತನ್ನ ಕಿರಣಗಳಿಂದ ಲೋಕವನ್ನೆಲ್ಲಾ ರಕ್ಷಿಸುತ್ತಿರುವನು. ॥೨೮॥

ಅಷ್ಟಲ್ಲದೆ ನಿನ್ನ ಅಪ್ಪಣೆಯಿಂದಲೇ, ಈ ಚಂದ್ರನೂ, ಗ್ರಹನಕ್ಷತ್ರಾದಿಗಳೂ, ಇಂದ್ರ, ಅಗ್ನಿ, ಯಮ, ನಿಋೃತಿ, ವರುಣ, ವಾಯು, ಕುಬೇರ, ಈಶಾನ, ಚತುರ್ದಶ ಮನುಗಳು, ಸಪ್ತರ್ಷಿಗಳೂ, ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿ ಕಾಲಕಳೆಯುತ್ತಿರುವರು. ॥೨೯-೩೦॥

ಈ ನಕ್ಷತ್ರಮಂಡಲ, ಈ ಹದಿನಾಲ್ಕು ಲೋಕಗಳು ಇವೆಲ್ಲವೂ ನಿನ್ನ ವಶವರ್ತಿಗಳಾಗಿರುವುವು. ಇವುಗಳೆಲ್ಲಕ್ಕೂ ಸಿಕ್ಕದೆ ಪ್ರತ್ಯೇಕವಾಗಿರುವ ನೀನು ಯಾರು ? ಎಂಬುದನ್ನು ನಮಗೆ ಈಗ ತಿಳಿಸಬೇಕು. ॥೩೧॥

ಚರಿತ್ರಾಣ್ಯಪಿ ತೇ ದೇವ ವಿಶ್ವಾತೀತಾನಿ ದರ್ಶಯ ।
ನೈವ ವಿಶ್ವಪರೋಽಸಿ ತ್ವಂ ದೇವೋ ವಿಶ್ವಾಧಿಕೋ ಹ್ಯಸಿ ॥೩೨॥

ತವ ದೇವ ಕಥಂ ರೂಪಂ ರೂಪವಾನಿವ ದೃಶ್ಯಸೇ ।
ನ ಸಜ್ಜಸೇ ಗುಣೇಷು ತ್ವಂ ಗುಣವಾನಿವ ದೃಶ್ಯಸೇ ॥೩೩॥

ವಿಶ್ವಾತಿಗೋಽಸಿ ಭೂತೇಶ ವಿಶ್ವವಾನಿವ ದೃಶ್ಯಸೇ ।
ನಿರ್ಗುಣೋಽಪಿ ಚ ದೇವೇಶ ಸಗುಣೇಷ್ವಿವ ದೃಶ್ಯಸೇ ॥೩೪॥

ದೇವ್ಯಾನಯಾ ವಿಹರಸೇ ಕೈಲಾಸಾಚಲಮೂರ್ಧಗಃ ।
ನಿಷ್ಕಿಂಚನೋಽಸಿ ಚ ಸದಾ ಸರ್ವಭಾಗ್ಯಸುಧೋದಯಃ ॥೩೫॥

ತವ ದೃಕ್ಕೋಟಿಸಂಲಗ್ನಾ ಭವಂತ್ಯೇವೇಶ್ವರಾ ಹಿ ತೇ ।
ಸಸುರಾಸುರಗಂಧರ್ವಮಾನವಾಃ ಪಶವೋಽಪಿ ಹಿ ॥೩೬॥

---

ದೇವದೇವನೆ, ನಿನ್ನ ನಡೆವಳಿಕೆಗಳಾದರೋ, ಲೋಕವನ್ನು ಮೀರಿದ್ದಾಗಿವೆ. ಆ ನಿನ್ನ ದಿವ್ಯಸ್ವರೂಪವನ್ನು ನಮಗೆ ತೋರಿಸು. ನೀನು ಎಂದಿಗೂ ಪ್ರಪಂಚಕ್ಕೆ ಸಿಕ್ಕುವವನಲ್ಲ. ಪ್ರಪಂಚವನ್ನು ಮೀರಿದವನಾಗಿ ನಮಗೆ ಕಾಣುತ್ತಿರುವೆ. ॥೩೨॥

ಸ್ವಾಮಿಯೇ, ನಿನ್ನ ರೂಪು ಎಂತಹುದು? ನಮಗೆ ರೂಪವುಳ್ಳವನಂತೆ ತೋರಿಬರುತ್ತಿರುವೆಯಲ್ಲವೆ? ಹಾಗೆಯೇ ನೀನು ಯಾವ ಗುಣಗಳನ್ನು ಪಡೆಯದಿದ್ದರೂ ಗುಣವುಳ್ಳವನಂತೆ ಕಂಡುಬರುತ್ತಿರುವೆ. ಇದು ಹೇಗೆ? ॥೩೩॥

ವಿಶ್ವವನ್ನು ಅತಿಕ್ರಮಿಸಿರುವವನಾದರೂ, ವಿಶ್ವಾಂತರ್ವರ್ತಿಯಂತೆಯೂ, ಸ್ವಯಂ ನಿರ್ಗುಣರೂಪಿಯಾದರೂ, ಸಗುಣನಂತೆಯೂ ನಮಗೆ ತೋರಿಬರುತ್ತಿರುವೆ. ॥೩೪॥

ಸ್ವಾಮಿಯೇ, ಈ ಕೈಲಾಸಶಿಖರದಲ್ಲಿ ದೇವಿಯೊಡನೆ ಸರ್ವದಾ ವಿಹರಿಸುತ್ತಿರುವೆ. ಸಕಲ ಸಂಪತ್ತುಗಳಿಗೆ ಮೂಲಸ್ಥಾನನಾದರೂ ನೋಡುವವರಿಗೆ ಕೇವಲ ದರಿದ್ರನಂತೆ ಕಂಡುಬರುತ್ತಿರುವೆ. ॥೩೫॥

ನಿನ್ನ ಕಟಾಕ್ಷಪಾತಕ್ಕೆ ಸಿಕ್ಕಿ ಅನುಗೃಹೀತರಾದ ದೇವತೆಗಳೂ, ರಾಕ್ಷಸರೂ, ಗಂಧರ್ವರೂ, ಮನುಷ್ಯರೂ, ಪಶುಗಳೂ ಸಹ ಸಾಕ್ಷಾತ್ ನಿನ್ನ ಸ್ವರೂಪವನ್ನೇ ಪಡೆಯುವರಲ್ಲವೆ? ॥೩೬॥

ಯತ್ರ ಯತ್ರೋತ್ಕೃಷ್ಟತಮಾಸ್ತವಕಾರುಣ್ಯತೋಽಖಿಲಾಃ ।
ರಮಸೇ ಪ್ರಮಥಾಧೀಶೈಸ್ಸ್ಕಂದಹೇರಂಬಸಂಯುತಃ ॥೩೭॥

ತವಾಪಾರಚರಿತ್ರಾಣಾಂ ಜ್ಞೇಯತಾದ್ಯ ಮಹೇಶ್ವರ ।
ವೇದೈರೀಡ್ಯೋಽಸಿ ಭಗವನ್ ನೈವ ಕಿಂಚಿತ್ಕರೋಷಿ ಚ ॥೩೮॥

ತವ ಲಿಂಗಂ ಸುರೈಸ್ಸರ್ವೈರಸುರೈರ್ಮುನಿಪುಂಗವೈಃ ।
ಪೂಜ್ಯಸೇ ಬಿಲ್ವಪತ್ರೈಶ್ಚ ತೇಷಾಂ ತ್ವಂ ಮೋಚಕೋಽಹ್ಯಸಿ ॥೩೯॥

ಭವಜಾಲಮಯೈಃ ಪಾಶೈಃ ಕಿಂ ತೇ ರೂಪಂ ಮಹೇಶ್ವರ ।
ಭಸ್ಮಪ್ರಿಯೋಽಸಿ ಭಗವನ್ ಭಸ್ಮನಿಷ್ಠೇ ತು ತೇ ಕೃಪಾ ॥೪೦॥

ರುದ್ರಾಕ್ಷಧಾರಿಣೋ ಯೇ ತು ತೇಽಪಿ ತ್ವದ್ಭಕ್ತಸತ್ತಮಾಃ ।
ಪಂಚಾಕ್ಷರಪರಾಣಾಂ ಚ ತ್ವಂ ಸದಾ ಮೋಕ್ಷದೋ ಹ್ಯಸಿ ॥೪೧॥

---

ಯಾರು ಯಾರು ನಿನ್ನ ಕರುಣೆಗೆ ಪಾತ್ರರಾಗುವರೋ, ಅವರೆಲ್ಲರೂ ಉತ್ಕೃಷ್ಟತಮರೆನಿಸುವರು. ಸ್ಕಂದ, ಗಣಪತಿ ಇನ್ನೂ ಪ್ರಮಥಗಣಾಧಿಪತಿಗಳು ಇವರೊಡನೆ ನೀನು ಸರ್ವದಾ ಆಟವಾಡುತ್ತಿರುವೆ. ॥೩೭॥

ಮಹೇಶ್ವರನೇ, ಈಗ ನಾವು ನಿನ್ನ ಅಗಾಧವಾದ ಮಹಿಮೆಗಳನ್ನು ತಿಳಿಯ ಬಯಸುತ್ತೇವೆ. ವೇದಗಳಿಂದ ಸ್ತುತನಾಗಿರುವೆ. ಆದರೆ ನಿನ್ನ ಕರ್ಮವೊಂದನ್ನೂ ನಾವು ಅರಿಯಲಾರದವರಾಗಿರುವೆವು. ॥೩೮॥

ಲಿಂಗರೂಪಿಯಾದ ನಿನ್ನನ್ನು ಸಕಲ ದೇವತೆಗಳೂ, ಋಷಿವರ್ಯರೂ ಬಿಲ್ವ ಪತ್ರೆಯೇ ಮೊದಲಾದುವುಗಳಿಂದ ಪೂಜಿಸುತ್ತಿರುವರು. ಅದರಿಂದ ಅವರ ಕಷ್ಟಗಳ ನ್ನೆಲ್ಲಾ ನೀನು ಪರಿಹಾರಮಾಡುವವನೂ ಆಗಿರುವೆ. ॥೩೯॥

ಈ ಸಂಸಾರಬಂಧನಗಳಿಗೆ ಸಿಕ್ಕಿರುವ ನಿನ್ನ ನಿಜಸ್ವರೂಪವು ಎಂತಹುದು? ಭಗವಂತನೇ, ಭಸ್ಮದಲ್ಲಿ ಆಸಕ್ತಿಯಿಂದಿರುವೆ. ಭಸ್ಮಧಾರಿಗಳಲ್ಲಿ ನೀನು ಅತಿಶಯ ವಾದ ದಯೆಯನ್ನಿಡುವೆ. ॥೪೦॥

ರುದ್ರಾಕ್ಷಿಯನ್ನು ಧರಿಸಿ, ನಿನ್ನ ಭಕ್ತರಲ್ಲಿ ಬೆರೆತು, ಶಿವಪಂಚಾಕ್ಷರೀಮಂತ್ರ ಪುರಶ್ಚರಣೆಯಿಂದ ಕಾಲಕಳೆದವರಿಗೆ ನಿಜವಾಗಿಯೂ ಮೋಕ್ಷಪ್ರದನಾಗುವೆ. ॥೪೧॥

ರುದ್ರಾಧ್ಯಾಯಾರ್ಥಕಥನತಜ್ಜಪಾಸಕ್ತಚೇತಸಾಂ ।
ತೇಷಾಂ ತ್ವಂ ಪಾಪಜಾಲಾನಿ ವಿನಾಶಯಸಿ ಶಂಕರ ॥೪೨॥

ಭಕ್ತಿಪ್ರಿಯೋಽಸಿ ಭಗವನ್ ಮೋಹಿತಾಸ್ತವ ಮಾಯಯಾ ।
ಸಂಶಯಾವಿಷ್ಟಹೃದಯಾಸ್ತ್ವಾಂ ಪೃಚ್ಛಾಮೋ ಮಹೇಶ್ವರ ॥೪೩॥

ತವೈವ ರೂಪಂ ದೇವೇಶ ಕೃಪಯಾ ವದ ತಚ್ಛಿವ ।
ಅಸ್ಮಾಭಿರೇವ ಲೋಕೇಷು ರೂಪವಾನಿವ ದೃಶ್ಯಸೇ ॥೪೪॥

ಸ್ತ್ರ್ಯನ್ನಪಾನಾದಿಭೋಗೈಶ್ಚ ವಿಹರಸ್ಯಜರಾಮರಃ ।
ಅರಿಮಿತ್ರೇಷ್ವಪಿ ಸದಾ ತುಲ್ಯೋಽಹ್ಯಸಿ ಮಹೇಶ್ವರ ॥೪೫॥

ಸ್ಮರತ್ರಿಪುರದೈತ್ಯೇಂದ್ರಯಮಾಂಧಕಗಜಾದಿಹೃತ್ ।
ಉತ್ತಮೋಽಸಿ ಕಥಂ ದೇವ ಹ್ಯಸ್ಮಾಭಿರಪಿ ತೇ ಸದಾ ॥೪೬॥

---

ರುದ್ರಾಧ್ಯಾಯವನ್ನು ಪಾರಾಯಣಮಾಡಿ, ಅದರ ಅರ್ಥಾನುಸಂಧಾನದಿಂದ ಚಿತ್ತಶುದ್ಧಿಪಡೆದವರಿಗೆ, ನೀನು ಅವರ ಪಾಪಗಳನ್ನೆಲ್ಲಾ ನಾಶಮಾಡಿ ಅವರಿಗೆ ಮುಕ್ತಿಪ್ರದನಾಗುವೆ. ॥೪೨॥

ಪರಮಾತ್ಮನೇ, ನೀನು ಭಕ್ತಿಪ್ರಿಯನು. ನಿನ್ನ ಮಾಯೆಯಿಂದ ನಾವೆಲ್ಲಾ ಮೋಹಿತರಾಗಿರುವೆವು. ಅದರಿಂದಲೇ ನಮಗೆ ನಿನ್ನ ವಿಷಯದಲ್ಲಿ ಅನೇಕ ಸಂಶಯಗಳು ಒದಗಿರುವುವು. ಅದರ ನಿವಾರಣೆಗಾಗಿ ನಾವು ಅನೇಕ ಪ್ರಶ್ನೆಗಳನ್ನು ಕೇಳುತ್ತಿರುವೆವು. ॥೪೩॥

ಮಹೇಶ್ವರನೇ, ನೀನು ನಮ್ಮಗಳಿಗೆಲ್ಲಾ ಯಾವುದೋ ಒಂದು ರೂಪದಿಂದ ತೋರಿಬರುತ್ತಿರುವೆ. ನಿಜವಾದ ನಿನ್ನ ಸ್ವರೂಪವು ಯಾವುದು ? ಅದನ್ನು ನಮಗೆ ದಯೆಯಿಂದ ತಿಳಿಸುವವನಾಗು. ॥೪೪॥

ಸಾಮಾನ್ಯ ಮಾನವರಂತೆ ನೀನೂ ಸಹ ಸ್ತ್ರೀ, ಅನ್ನ, ಪಾನ ಮುಂತಾದ ಭೋಗಗಳಿಂದ ಕಾಲಕಳೆಯುವೆ. ಆದರೆ ಅವರಿಗಿರುವಂತೆ ಮುಪ್ಪಾಗಲಿ, ಮರಣವಾಗಲಿ ನಿನಗೆ ತೋರಿಬರುತ್ತಿಲ್ಲ. ಶತ್ರುಗಳಲ್ಲಿಯೂ, ಮಿತ್ರರಲ್ಲಿಯೂ, ಭೇದಭಾವ ವಿಡದೆ ಒಂದೇ ರೀತಿಯಲ್ಲಿ ವರ್ತಿಸುತ್ತಿರುವೆ. ॥೪೫॥

ಶಂಭುವೇ, ಮನ್ಮಥ, ತ್ರಿಪುರಾಸುರರು, ಯಮ, ಅಂಧಕ, ಗಜಾಸುರ, ಇವರೇ ಮೊದಲಾದವರನ್ನೆಲ್ಲಾ ಧ್ವಂಸಮಾಡಿರುವೆ. ನಮ್ಮೆಲ್ಲರಿಗಿಂತಲೂ ಶ್ರೇಷ್ಠ

ಚರಿತ್ರಂ ದೃಶ್ಯತೇ ಶಂಭೋ ವದ ತತ್ಕರುಣಾವಲಾತ್ ॥೪೭॥

ಇತ್ಥಂ ತೈರ್ನೋಹಿತೈರ್ದೇವೈಃ ಪರಿಪೃಷ್ಟೋ ಮಹೇಶ್ವರಃ ।
ಉವಾಚ ತಾನ್ ಶೃಣು ಮುನೇ ವೇದವೇದಾಂತಸಂಭವಂ ॥೪೮॥

ವಿಶ್ವಾಕ್ಷೋ ಭಗವಾನುತೋತ ಇಷುಮಾನ್ ಖ್ಯಾತಶ್ಚ ಸರ್ವಾತ್ಮಕೋ
ರುದ್ರಾಣಾಂ ಚ ಗಣೈಸ್ಸಹಸ್ರವದನಸ್ಸರ್ವಾತ್ಮಕಶ್ಶಕ್ತಿಮಾನ್ ।
ನಾನಾಕಾರಜಗತ್ಕೃತೀಷು ವಿಹರತ್ಯೇಕೋಽಪಿ ಸರ್ವಾತ್ಮಕ
ಸ್ತದ್ವತ್ತತ್ರ ಶಿವಾಯುತೋ ಗಿರಿವರೇ ಕ್ರೀಡಾರಸೈರ್ನಿರ್ಭರಃ ॥೪೯॥

ಕ್ವಚಿದ್ಧೀರೆ ಸೌಧೇ ವಿಹರತಿ ಸಹಾಂಬೋ ಹಿ ಭಗವಾನ್
ಕ್ವಚಿಲ್ಲಿಂಗಂ ಸಾಂಗಂ ತ್ವಪಚಿತಿವಿಶೇಷೈರ್ವಿಹರತಿ ।
ಕ್ವಚಿನ್ನೀಲೇ ಸೌಧೇ ವಿಹರತಿ ಚ ವಾತಾಯನಗತಃ
ಕ್ವಚಿತ್ಪೌಷ್ಪೇ ಮಂಚೇ ವಿಹರತಿ ಕಥಾಸಾರಸುರಸಂ ॥೫೦॥

---

ತಮನೆಂಬ ಬಿರುದನ್ನು ಸಂಪಾದಿಸಿರುವೆ. ದಿವ್ಯಚಾರಿತ್ರಗಳನ್ನು ವಿಶದವಾಗಿ ತೋರ್ಪಡಿಸುತ್ತಿರುವೆ. ಸ್ವಾಮಿಯೇ, ನಿಜವಾದ ನಿನ್ನ ಸ್ವರೂಪವನ್ನು ದಯೆಯಿಂದ ನಮಗೆ ತಿಳಿಸುವವನಾಗು.” ||೪೬-೪೭||

ಹೀಗೆ ಮಾಯಾಮೋಹಿತರಾದ ದೇವತೆಗಳು ವಿನಯದಿಂದ ಮಹೇಶ್ವರನನ್ನು ವಿಧವಿಧವಾಗಿ ಪ್ರಾರ್ಥಿಸಿಕೊಳ್ಳಲು, ವೇದವೇದಾಂತಪ್ರತಿಪಾದ್ಯನಾದ ಮಹೇಶ್ವರನು ದೇವತೆಗಳಿಗೆ ಉಪದೇಶಿಸಿದ ಕ್ರಮವನ್ನು ಹೇಳುವೆನು ಕೇಳು, ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹಾಮುನಿಗೆ ಹೇಳಲಾರಂಭಿಸಿದನು. ||೪೮||

ಪರಮೇಶ್ವರನಿಗೆ ಪ್ರಪಂಚವೇ ಒಂದು ಕಣ್ಣು, ಮತ್ತು ಆತನು ಪ್ರಶಸ್ತವಾದ ಬಾಣಗಳುಳ್ಳವನು. ಸರ್ವಾತ್ಮಕನೆನಿಸಿ ಖ್ಯಾತನಾಗಿರುವವನು. ಸಕಲ ರುದ್ರಗಣಗಳೊಡನೆ ಕೂಡಿರುವವನು. ಸಹಸ್ರವದನನಾಗಿ ಸರ್ವಶಕ್ತಿಮಯಿಯಾಗಿರುವನು. ತಾನು ಒಬ್ಬನೇ ಆದರೂ, ಪ್ರಪಂಚದಲ್ಲಿ ನಾನಾವಿಧವಾದ ಆಕಾರಗಳಿಂದ ತೋರಿಬರುತ್ತಿರುವನು. ಮತ್ತು ಪಾರ್ವತಿಯೊಡನೆ ಕೈಲಾಸಗಿರಿಯಲ್ಲಿ ನಾನಾವಿಧವಾದ ಕ್ರೀಡಾದಿಗಳಿಂದ ವಿಹರಿಸುತ್ತಿರುವನು. ||೪೯||

ಒಂದೊಂದುಸಾರಿ, ದಿವ್ಯವಾದ ಹೀರರತ್ನಮಯವಾದ ಸೌಧದಲ್ಲಿ ಶಂಕರನು ಪಾರ್ವತಿಯೊಡನೆ ವಿಹರಿಸುವನು. ಒಮ್ಮೆ ಲಿಂಗರೂಪಿಯಾಗಿರುವ ಮಹೇಶ್ವರನನ್ನು

ಕ್ವಚಿತ್ತಿಷ್ಠನ್ ಧಾವನ್ ಮೃಗಮನುಧನುರ್ಬಾಣಸಹಿತಃ
ಕ್ವಚಿದ್ದೇವ್ಯಾ ಪುಷ್ಪಂ ತ್ವಪಚಿನುತಿ ಪುಷ್ಪದ್ರುಮಕುಲೇ ।
ಕ್ವಚಿಜ್ಜಲ್ಪನ್ನಾಸ್ತೇ ಜಲಸರಸಿ ದೇವ್ಯಾವಗಹತೇ
ಕ್ವಚಿತ್ಪುಷ್ಪೈರ್ಗಂಧೈಃ ಕ್ವಚಿದಪಿ ಮಣೀಜಾಲಸದನೈಃ ॥೫೧॥

ಕ್ವಚಿನ್ನೃತ್ತಂ ಪಶ್ಯನ್ ಕ್ವಚಿದಪಿ ಚ ವೀಣಾದಿನಿನದೈಃ
ಕ್ವಚಿದ್ಭಕ್ಷ್ಯಂ ಭುಂಕ್ತೇ ವಿಹರತಿ ಚ ಡೋಲಾಸು ಶಿವಯಾ ।
ಕ್ವಚಿದ್ದೀವ್ಯತ್ಯಕ್ಷೈಃ ಕ್ವಚಿದಪಿ ಚ ಹಲ್ಲೀಸರಯುತೋ
ಮಹಾರತ್ನೈಃ ಕ್ಲಪ್ತೈರ್ವರತರಗವಾಕ್ಷೈಕವಸತಿಃ ॥೫೨॥

ಪೂಜಾವಿಶೇಷಗಳಿಂದ ಪೂಜಿಸುತ್ತಿರುವನು. ಒಂದೊಂದುವೇಳೆ ನೀಲಮಯವಾದ ಸೌಧದಲ್ಲಿರುವ ಗವಾಕ್ಷಿಯ ಪಕ್ಕದಲ್ಲಿ ಕುಳಿತು ಪ್ರಕೃತಿಸೌಂದರ್ಯವನ್ನು ನೋಡಿ ಆನಂದಿಸುವನು. ಒಂದೊಂದುಸಾರಿ ಪುಷ್ಪಮಯವಾದ ಮಂಚದಲ್ಲಿ ದಿವ್ಯಕಥೆಗಳನ್ನು ಬೋಧಿಸುತ್ತಾ ವಿಹರಿಸುವನು. ॥೫೦॥

ಒಂದೊಂದು ಸಾರಿ ಮಹೇಶ್ವರನು, ಮೃಗಾನುಸಾರಿಯಾಗಿ ಓಡುತ್ತಾ ಧನುರ್ಬಾಣಗಳನ್ನು ಹಿಡಿದು ನಿಲ್ಲುವನು. ಹಾಗೆಯೇ ದೇವಿಯೊಡನೆ ಪುಷ್ಪೋದ್ಯಾನದಲ್ಲಿ ಪುಷ್ಪಾಪಚಯಮಾಡುವನು. ಅನಂತರ ದೇವಿಯೊಡನೆ ಸುಖಸಲ್ಲಾಪದಿಂದಿರುವನು. ಜಲಕ್ರೀಡೆಯಾಡುವನು. ರತ್ನಮಯವಾದ ಅರಮನೆಗಳಲ್ಲಿ ಪುಷ್ಪಗಂಧಗಳಿಂದ ಘ್ರಾಣೇಂದ್ರಿಯಸೌಖ್ಯವನ್ನು ಅನುಭವಿಸುವನು. ॥೫೧॥

ನಾಟ್ಯಕುಶಲರಾದವರ ನರ್ತನವನ್ನು ನೋಡುತ್ತಾ, ವೀಣೆಯೇ ಮೊದಲಾದ ಇಂಪಾದ ವಾದ್ಯರವವನ್ನು ಕೇಳುತ್ತಾ ಆನಂದಿಸುವನು. ಮತ್ತು ಮೃದುಮಧುರವಾದ ಭಕ್ಷ್ಯಗಳನ್ನು ಆಸ್ವಾದಿಸುತ್ತಾ, ದೇವಿಯೊಡನೆ ಉಯ್ಯಾಲೆಯಾಟಯಾಡುವನು. ವಿಹಾರಾರ್ಥವಾಗಿ ದೇವಿಯೊಡನೆ ಪಗಡೆಯಾಡುತ್ತಾ, ಹಲ್ಲೀಸವೆಂಬ ನಾಟ್ಯವಿಶೇಷದಲ್ಲಿ ಮಗ್ನನಾಗಿ ಶ್ರೇಷ್ಠವಾದ ಮತ್ತು ನವರತ್ನಮಯವಾದ ಗವಾಕ್ಷಗಳ ಪಕ್ಕದಲ್ಲಿ ಆಗಾಗ ಓಡಾಡುತ್ತಿರುವನು.

ಕ್ರೀಡಾಕಂದುಕಮುತ್ಕ್ಷಿಪತ್ಯವಿರತಂ ದೇವ್ಯಾ ನು ಲೋಕಾದರೋ
ಧ್ಯಾಯನ್ ಸ್ವಾತ್ಮತಯಾ ಕದಾಚಿದಪಿ ವೈ ಹ್ಯೇಕೋಽಪಿ ನಾನಾಕೃತಿಃ ।
ಇತ್ಥಂ ಕೈಲಾಸಶೈಲೇಷ್ವನವರತಮೀಶೋಽಧಿವಸತಿ
ಭವಾನ್ಯಾ ತಾದೃಕ್ಷ್ಯಾ ಕಿಮಿಹಮಹಮೀಡೇಽದ್ಯ ಚರಿತಂ ॥೫೩॥

ತತಃ ಕಿಂಚಿತ್ ಕಿಂ ವಾ ಹರಚರಿತಮಾತ್ರಂ ಕಥಮಪಿ ।
ಬ್ರುವೇ ಶಂಭೋಃ ಪಾದಾಂಬುಜಭಜನಭಕ್ತ್ಯೈವ ಸಹಸಾ ॥೫೪॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ದೇವವಾಕ್ಯಂ ನಾಮ
ಏಕೋನಪಂಚಾಶೋಽಧ್ಯಾಯಃ

---

ವ್ಯವಹಾರಮಾರ್ಗವನ್ನನುಸರಿಸಿ, ಕೆಲವುವೇಳೆ ಶಂಕರನು ದೇವಿಯೊಡನೆ ಚೆಂಡನ್ನಾಡುವನು. ನಿಜವಾದ ಪರಬ್ರಹ್ಮವಸ್ತುವು ತಾನೊಬ್ಬನೇ ಆದರೂ, ಆತ್ಮಧ್ಯಾನ ಮಾಡುತ್ತಾ ಕುಳಿತುಕೊಳ್ಳುವನು. ಹೀಗೆ ಶಂಕರನು ಕೈಲಾಸಪರ್ವತದಲ್ಲಿ ಭವಾನಿಯೊಡನೆ ಸರ್ವದಾ ವಿಹರಿಸುತ್ತಾ ವಾಸಮಾಡುವನು. ಅವನ ಲೀಲೆಯನ್ನು ನಾನು ಹೇಗೆ ವರ್ಣಿಸಲಿ ?

ಎಲೈ ಜೈಗೀಷವ್ಯಾದಿ ಮಹರ್ಷಿಗಳೇ, ನಾನೂ ಸಹ ಪರಮೇಶ್ವರನ ಪಾದಕಮಲಧ್ಯಾನಮಹಿಮೆಯಿಂದಲೇ ಇಷ್ಟು ಶಕ್ತಿಯನ್ನು ಸಂಪಾದಿಸಿ ಮಹೇಶ್ವರನ ಕೆಲವು ಲೀಲೆಗಳನ್ನಾದರೂ ವಿವರಿಸುವಷ್ಟು ಸಮರ್ಥನಾಗಿರುವೆನು. ಎಂದು ಕುಮಾರಸ್ವಾಮಿಯು ಮಹರ್ಷಿಗಳಿಗೆ ಬೋಧಿಸಿದನು. ॥೫೪॥

ಇಲ್ಲಿಗೆ ಶಿವರಹಸ್ಯದ ಪ್ರಥಮಾಂಶದಲ್ಲಿ ದೇವವಾಕ್ಯನಿರೂಪಣೆಯೆಂಬ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಪಂಚಾಶೋಽಧ್ಯಾಯಃ

---

### ಸುರೋಪದೇಶಃ

|| ಸ್ಕಂದ ಉವಾಚ

ನಿಲಿಂಪವಚನಂ ಶ್ರುತ್ವಾ ನಿರ್ಲೇಪೋ ನಿರ್ಮಲಶ್ಶಿವಃ ।
ಅನುಕಂಪಾರಸಾಕ್ರಾಂತಃ ಕಂಪಿತಾನಾಹ ತಾನ್ ಸುರಾನ್ ||೧||

|| ಈಶ್ವರ ಉವಾಚ ||

ಇತಿ ಗೀರ್ವಾಣಬೃಂದಾನಾಂ ಶ್ರುತ್ವಾಹಂ ವಚನಂ ಶಿವೇ ।
ಮಂದಸ್ಮಿತಾಧರೋ ದೇವಿ ವಿಸ್ಮಯಾನಂದಿತಾಂತರಃ ||೨||

ಮನ್ಮಾಯಾಮೋಹಿತಾನ್ ಜ್ಞಾತ್ವಾ ತಾನವೋಚಮುಥಾಂಬಿಕೇ ।
ಬ್ರಹ್ಮವಿಷ್ಣುಮಹೇಶಾದ್ಯಾ ಇಂದ್ರಾಗ್ನ್ಯನಿಲಮಿತ್ರಕಾಃ ||೩||

---

## ಶ್ರೀಶಿವರಹಸ್ಯದಲ್ಲಿ ಐವತ್ತನೆಯ ಅಧ್ಯಾಯ

ಹಾಗೆ ದೇವತೆಗಳು ಮೋಹಿತರಾಗಿ, ಭಯದಿಂದ ನಡುಗುತ್ತಾ ಕೇಳಿಕೊಂಡದ್ದನ್ನು ನೋಡಿ, ಸಕಲಗುಣಲೇಪವಿಲ್ಲದವನೂ, ಮಲಾದ್ಯಶುದ್ಧವಸ್ತುವಿವರ್ಜಿತನೂ ಆದ ಶಂಕರನು ದಯೆಯಿಂದ ಅವರೊಡನೆ ಹೀಗೆಂದನು. ||೧||

" ದೇವಿಯೇ, ಭಯಭಕ್ತಿಯಿಂದ ಕೇಳಿಕೊಂಡ ದೇವತೆಗಳ ಮಾತನ್ನು ಕೇಳಿ ನನಗೆ ಅತ್ಯಾಶ್ಚರ್ಯವುಂಟಾಯಿತು. ಮತ್ತು ಅವರ ಅಜ್ಞಾನಕ್ಕೆ ಸ್ವಲ್ಪ ನನಗೆ ನಗುವೂ ಬಂದಿತು. ||೨||

ಅಂಬಿಕೆಯೇ, ಅವರೆಲ್ಲರೂ ನನ್ನ ಮಾಯೆಗೆ ಸಿಕ್ಕಿದವರೆಂಬುದನ್ನು ತಿಳಿದುಕೊಂಡೆನು. ಅನಂತರ ಅಲ್ಲಿ ನೆರೆದಿದ್ದ, ಬ್ರಹ್ಮ, ವಿಷ್ಣು, ರುದ್ರ, ಇಂದ್ರ,

ವಸವೋಽಶ್ವಿಮುಖಾಸ್ಸರ್ವೇ ಮರುತಶ್ಚರ್ಷಯೋಽಖಿಲಾಃ ।
ಶೃಣುಧ್ವಂ ಮಮ ಸಾರ್ವಾತ್ಮ್ಯಂ ಯದಜ್ಞಾನಾತ್ಸುರಾಸುರಾಃ ॥೪॥

ಮನ್ಮಾಯಯಾಮೋಹಿತಾ ಯೂಯಂ ಅಭಿಜಾತಾಸ್ಸ್ಥ ಸತ್ತಮಾಃ ।
ಭವಂತಃ ಪಶವಸ್ಸರ್ವೇ ಚಾಬ್ರಹ್ಮಸ್ತಂಭಪೂರ್ವಕಾಃ ॥೫॥

ಅಹಂ ಮಾಯಾಮಯೈಃ ಪಾಶೈರೀಷಣಾಭಿಸ್ಸುರಾಸುರಾನ್ ।
ಬಧ್ವಾ ಕ್ರೀಡಾಮಿ ದೇವ್ಯಾ ಚ ಜಗತ್ಯಸ್ಮಿಂಶ್ಚರಾಚರೇ ॥೬॥

ಅಹಮೇವ ಸುರಾನ್ ಸರ್ವಾನ್ ಮೋಚಕೋ ಭಕ್ತಿಭಾವಿತಃ ।
ಮಮ ರೂಪಮವಿಜ್ಞಾಯ ಭವಂತೋ ವಿಗ್ರಹಂ ಮಮ ॥೭॥

ದೃಷ್ಟ್ವೈವ ಚೇಷ್ಟಾಂ ವಿವಿಧಾಂ ಗುಣಭೂತಾಂ ಗುಣಾತಿಗಾಃ ।
ವಿಷಯೇಷ್ವನುರಕ್ತಂ ಮಾಂ ಜ್ಞಾತ್ವಾ ಮೋಹಂ ಪರಂ ಗತಾಃ ॥೮॥

ಅಗ್ನಿ, ವಾಯು, ಸೂರ್ಯ, ವಸುಗಳು, ಅಶ್ವಿನೀದೇವತೆಗಳು, ಸಪ್ತಮರುತ್ತುಗಳು, ಇವರೆಲ್ಲರಿಗೂ ತಿಳಿಯುವಂತೆ, ನನ್ನ ಸರ್ವಸ್ಥಿತಿರೂಪಮಹಿಮೆಯನ್ನು ಹೇಳಿದೆನು. ॥೩-೪॥

ಎಲೈ ದೇವಶ್ರೇಷ್ಠರಿರಾ, ನೀವೆಲ್ಲರೂ ನನ್ನ ಮಾಯೆಗೆ ಸಿಕ್ಕಿ ಹೋಗಿರುವಿರಿ. ನೀವು ಪಶುಗಳಂತೆ ಅಜ್ಞಾನಿಗಳು, ಬ್ರಹ್ಮಾದಿಗಳಾದ ನೀವೆಲ್ಲರೂ ಒಂದೇ ರೀತಿಯಲ್ಲಿರುವಿರಿ. ॥೫॥

ನಾನು ನನ್ನ ಮಾಯಾಮಯವಾದ ಮತ್ತು ಬಿಗಿಯಾದ ಪಾಶಗಳಿಂದ ನಿಮ್ಮನ್ನು ಬಂಧಿಸಿ, ಈ ಜಗತ್ತಿನಲ್ಲಿ ದೇವಿಯೊಡನೆ ನಾನು ವಿಹರಿಸುತ್ತಿರುವೆನು. ॥೬॥

ಕೊನೆಗೆ ಆ ಬಂಧನದಿಂದ ನಿಮ್ಮನ್ನು ತಪ್ಪಿಸಿ ರಕ್ಷಿಸುವವನೂ ನಾನೇ. ನೀವು ನನ್ನ ಈ ಶರೀರವನ್ನೂ, ನನ್ನ ಲೀಲೆಗಳನ್ನೂ, ಗುಣಗಳನ್ನೂ, ವಿಷಯಸುಖಾಭಿಲಾಷೆಯನ್ನೂ ನೋಡಿ, ಮರುಳಾಗಿರುವಿರಿ. ॥೭-೮॥

ತದದ್ಯೈವಾಪನೇಷ್ಯಾಮಿ ಶೃಣುಧ್ವಂ ಪರಮಂ ಮಮ ।
ಗೋಪ್ಯಾದ್ಗೋಪ್ಯತರಂ ಜ್ಞಾನಮಥರ್ವಶಿರಸಿ ಸ್ಥಿತಂ ॥೯॥

ಸರ್ವಶ್ರುತಿಶಿರೋದ್ಭೂತಂ ಸಾಕ್ಷಾದಜ್ಞಾನನಾಶನಂ ।
ಅಹಮೇಕೋ ನಿರಾಧಾರೋ ವರ್ತಾಮ್ಯಾಕಾಶವತ್ ಸದಾ ॥೧೦॥

ನೈವ ಲೇಪೋಽಸ್ತಿ ಮನಸೋ ಮಮ ಕಾರ್ಯೇಂದ್ರಿಯೈಸ್ಸದಾ ।
ನ ಮಹಾಭೂತಸಂಸ್ಪೃಶ್ಯೈಶ್ಚ ನ ಕಾಲೇನ ದಿಶಾ ಸುರಾಃ ॥೧೧॥

ವಸ್ತುತೋ ಹ್ಯಪರಿಚ್ಛಿನ್ನೋಽಹ್ಯಸಂಗೋಽಸ್ಮಿ ನಿರಾಮಯಃ ।
ಅವ್ಯಕ್ತಃ ಪರಮಾತ್ಮಾಹಂ ಸರ್ವೇಷಾಮಂತರಾಸ್ಥಿತಃ ॥೧೨॥

ಈಗಲೇ ನಿಮ್ಮ ಆ ಅಜ್ಞಾನವನ್ನೆಲ್ಲಾ ಪರಿಹರಿಸುವೆನು. ಅಥರ್ವಶೀರ್ಷೋಪನಿಷತ್ತಿನಲ್ಲಿ ಹೇಳಿರುವ ಅತ್ಯಂತ ಗೂಢವಾದ ನನ್ನ ಸ್ವರೂಪವನ್ನು ಈಗ ವಿವರಿಸುವೆನು. ಕೇಳಿರಿ. ||೯||

ನಾನು ಈಗ ಹೇಳುವ ರಹಸ್ಯಾಂಶವು ಸಕಲವೇದ, ವೇದಾಂತಗಳ ಸಾರಸರ್ವಸ್ವವನ್ನು ತಿಳಿದವರ ಅಜ್ಞಾನವನ್ನೆಲ್ಲಾ ನಾಶಮಾಡುವುದು. ಆದ್ದರಿಂದ ನೀವೆಲ್ಲರೂ ಅದನ್ನು ಕೇಳಿರಿ. ನಾನು ಒಬ್ಬನೇ. ನನಗೆ ಆಧಾರವಿಲ್ಲ. ಆಕಾಶದಂತೆ ವಿಭುವಾಗಿ ಸರ್ವವ್ಯಾಪಿಯಾಗಿರುವೆನು. ||೧೦||

ನನ್ನ ಮನಸ್ಸಿಗೆ ಕರಣೇಂದ್ರಿಯಗಳ ಅಥವಾ ಪಂಚಮಹಾಭೂತಗಳ ಮತ್ತು ಕಾಲ ದಿಕ್ಕುಗಳ ಸಂಬಂಧವು ಸ್ವಲ್ಪವೂ ಇರುವುದಿಲ್ಲ. ಅಂದರೆ ನನ್ನ ಮನಸ್ಸಿನ ಭಾವವನ್ನು ತಿಳಿದು ಇಂದ್ರಿಯಾದಿಗಳು ಹಿಂಬಾಲಿಸುತ್ತವೆಯೇ ಹೊರತು ಇಂದ್ರಿಯಾದಿಗಳನ್ನನುಸರಿಸಿ ನನ್ನ ಮನಸ್ಸು ಪ್ರವೇಶಿಸುವುದಿಲ್ಲ. ||೧೧||

ವಾಸ್ತವವಾಗಿ ನಾನು ಒಂದು ಅಳತೆಗೆ ಸಿಕ್ಕದವನು, ಸಂಗವಿವರ್ಜಿತನು, ನಾಶರಹಿತನು. ಆದರೆ ಎಲ್ಲರ ಹೃದಯದಲ್ಲಿಯೂ ಅಡಗಿರುವವನಾಗಿ, ಅವ್ಯಕ್ತರೂಪ ಂದ ಪರಮಾತ್ಮನೆನಿಸಿಕೊಂಡಿರುವೆನು. ||೧೨||

ಅಹಮಾದಿಶ್ಚ ಮಧ್ಯಂ ಚಾಪ್ಯಹಮಂತಸ್ಸನಾತನಃ ।
ಜಗಜ್ಜನ್ಮಾದಿನಾಶೋತ್ಥಂ ಕ್ರಿಯಾಭಿರ್ನಾಹಮೀಶ್ವರಃ ॥೧೩॥

ಮತ್ತ ಏವಾಖಿಲಂ ವಿಶ್ವಂ ಮಯ್ಯೇವೇದಂ ಸ್ಥಿತಂ ಸುರಾಃ ।
ಬ್ರಹ್ಮವಿಷ್ಣ್ವೀಶ್ವರೇಂದ್ರಾದ್ಯಾ ಭವಂತೋ ಮತ್ತ ಏವ ಹಿ ॥೧೪॥

ನಿರ್ಗತಾಸ್ಸ್ಥ ಭವಂತೋ ವೈ ಜಗಜ್ಜಾಲಮಿದಂ ಸುರಾಃ ।
ಸೋಽನೋಽಹಂ ಜನಿತಾ ದೇವಾಸ್ಸರ್ವೇಷಾಂ ಭವತಾಂ ಸುರಾಃ ॥೧೫॥

ಭವದ್ಭಿಸ್ಸಹ ಮಯ್ಯೇವ ವಿದ್ಯತೇ ತಚ್ಚರಾಚರಂ ।
ನ ಮತ್ತೋಽಸ್ತಿ ಪೃಥಕ್ಕಿಂಚಿನ್ನೇಹ ನಾನಾಸ್ತಿ ಕಿಂಚನ ॥೧೬॥

ಮಾಂ ವಿಜ್ಞಾಯೇದಮಖಿಲಂ ಜಾನಂತ್ಯೇಕಂ ಸನಾತನಂ ।
ಮನ್ಯೈಕತ್ವಪರಿಜ್ಞಾನಾತ್ಕೋ ಮೋಹೋತ್ರ ವಿಲಿಂಪಕಾಃ ॥೧೭॥

---

ನನಗೆ ಆದಿ, ಮಧ್ಯ, ಅಂತ್ಯ ಎಂಬ ಕಾಲವ್ಯವಸ್ಥೆಯಿಲ್ಲ. ಆದರೆ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ನಾನು ಕಾರಣನಾದರೂ, ಆ ಸೃಷ್ಟ್ಯಾದಿಕ್ರಿಯೆಗಳಿಗೆ ನಾನು ಆಧಾರನಲ್ಲ. ॥೧೩॥

ನನ್ನಿಂದಲೇ ಈ ಜಗತ್ತು ಆವಿರ್ಭವಿಸಿದೆ. ಕೊನೆಗೆ ನನ್ನಲ್ಲಿಯೇ ಲಯವಾಗುವುದು. ಬ್ರಹ್ಮಾದಿದೇವತೆಗಳಾದ ನೀವೆಲ್ಲರೂ ನನ್ನಿಂದಲೇ ಪ್ರಕಾಶಿತರಾಗಿರುವಿರಿ. ॥೧೪॥

ನೀವೆಲ್ಲರೂ ನನ್ನಿಂದಲೇ ಬೇರೆಯಾಗಿ ಕಾಣುತ್ತಿರುವಿರಿ. ಈ ಜಗತ್ತಿಗೂ, ಉಳಿದ ಸಕಲ ಚರಾಚರವಸ್ತುಗಳಿಗೂ ಮೂಲಕಾರಣನು ಉಮಾಸಹಿತನಾದ ನಾನೇ. ॥೧೫॥

ಕೊನೆಯಲ್ಲಿ ನೀವೂ, ಈ ಚರಾಚರಾತ್ಮಕವಾದ ಜಗತ್ತೂ ನನ್ನಲ್ಲಿಯೇ ಅಡಗಿಹೋಗುವುದು. ಆಗ ನನಗಿಂತ ಭಿನ್ನವಾದ ಮತ್ತೊಂದು ವಸ್ತುವು ಎಲ್ಲೂ ಇರಲಾರದು. ಏಕಸ್ವರೂಪನಾಗಿ ನಾನೊಬ್ಬನೇ ಉಳಿಯುವೆನು. ॥೧೬॥

ಹೀಗೆ ಸನಾತನನಾಗಿರುವ ನನ್ನ ಸ್ವರೂಪವನ್ನು ಅರಿತವರು, ಜಗನ್ಮಿಥ್ಯಾತ್ವವನ್ನು ತಿಳಿಯುವರು. ಮಾಯಾರಾಹಿತ್ಯದಿಂದ ನಿತ್ಯಸ್ವರೂಪನಾದ ನನ್ನನ್ನು ಒಬ್ಬನನ್ನಾಗಿ ತಿಳಿದಮೇಲೆ ಅವರಿಗೆ ಮೋಹವೆಲ್ಲಿ ಬರುವುದು ? ॥೧೭॥

ಮಾಂ ವಿದಿತ್ವೈವ ಪರಮಾ ಶಾಂತಿಸ್ತೇಷಾಂ ಸದೈವ ಹಿ ।
ಗ್ರಂಥಿಭಿರ್ನಾಭಿಭೂಯಂತೇ ಕಾಮ್ಯಕರ್ಮಮಯೈಸ್ಸುರಾಃ ॥೧೮॥

ಬಧ್ಯಂತೇತ್ರ ಭವಂತೋ ಹಿ ವಿವಶಾ ಮಮ ಮಾಯಯಾ ।
ವಾಕ್ಯೈರ್ಗುಣಮಯೈರ್ದೇವಾಸ್ತತ್ಫಲಂ ಪ್ರಾಪ್ಯತೇ ದಿವಿ ॥೧೯॥

ಯೇ ಯಥಾ ಮಾಂ ಪ್ರಪದ್ಯಂತೇ ನಾನೋಪಾಸನಯಾ ಸುರಾಃ ।
ತಾಂಸ್ತಥೈವಾಹಮೇವಾದ್ಯ ತದ್ಭಾವಾನಾಂ ಪ್ರಪೂರಕಃ ॥೨೦॥

ತಥೈವ ಪ್ರೇರಯಾಮ್ಯದ್ಯ ಸೋಽಹಂಕಾರಪರೋ ಭವೇತ್ ।
ಮಾಂ ಪ್ರೇರಕಮವಿಜ್ಞಾಯ ಕರ್ತಾಹಮಿತಿ ಮನ್ಯತೇ ॥೨೧॥

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।
ಸರ್ವಸ್ಯ ಪ್ರಭುರೀಶಾನಂ ಸರ್ವಸ್ಯ ಶರಣಂ ಸುರಾಃ ॥೨೨॥

---

ನನ್ನನ್ನು ಸರಿಯಾಗಿ ತಿಳಿದವರಿಗೆ ನಿಜವಾದ ಶಾಂತಿಯು ದೊರಕುವುದು. ಅವರು ಕಾಮ್ಯ, ಕರ್ಮರೂಪವಾದ ಸಂಸಾರದ ಬಂಧನಗಳಿಗೆ ಸಿಕ್ಕುವುದಿಲ್ಲ. ||೧೮||

ನೀವೂ ಸಹ ನನ್ನ ಮಾಯೆಗೆ ಕಟ್ಟುಬೀಳುವವರೇ. ಆದರೆ ನನ್ನನ್ನು ಅನೇಕ ಜನರು ಸಗುಣೋಪಾಸನಾಕ್ರಮದಿಂದ ಆರಾಧಿಸುವರು. ಅಂತಹವರಿಗೂ ಸ್ವರ್ಗಲೋಕದ ಸೌಖ್ಯಗಳು ಸುಲಭವಾಗಿ ದೊರೆಯುವುವು. ||೧೯||

ದೇವತೆಗಳಿರಾ, ಯಾರು ಯಾವ ಭಾವನೆಯಿಂದ ನನ್ನನ್ನು ಆರಾಧಿಸುವರೋ, ಅವರಿಗೆ ನಾನು ಅದೇ ರೂಪದಲ್ಲಿ ಗೋಚರಿಸಿ, ಅವರ ಕೋರಿಕೆಗಳನ್ನು ಈಡೇರಿಸುವೆನು. ||೨೦||

ಪ್ರೇರಿಸುವವನೂ ನಾನೇ. ಜಗದಾತ್ಮನಾ ಪರಿಣತನಾಗುವವನೂ ನಾನೇ. ಅಹಂಪದವಾಚ್ಯನೂ ನಾನೇ. ಆದರೆ ಮೂಢರು ಅಜ್ಞಾನದಿಂದ ಪ್ರೇರಕನಾದ ನನ್ನನ್ನು ಮರೆತು, ತಾವೇ ಸಕಲ ಕರ್ಮಗಳಿಗೂ ಕರ್ತರೆಂದು ತಿಳಿಯುವರು.

ಸಕಲೇಂದ್ರಿಯಗಳ ವಿಷಯದಂತೆ ಕಂಡುಬರುವವನೂ ನಾನೇ. ನಾನು ಸಕಲ ಇಂದ್ರಿಯಗಳಿಗೂ ದೂರನಾಗಿರುವೆನು. ಎಲ್ಲರಿಗೂ ಪ್ರಭುವಾಗಿರುವೆನು. ಸಕಲರಿಗೂ ರಕ್ಷಕನೂ ಆಗಿರುವೆನು. ||೨೨||

**ಅಪಾಣಿಪಾದೋಽಜವನಃ ಪಶ್ಯಾಮ್ಯಹಮತಂದ್ರಿತಃ ।**
**ಅಚಕ್ಷುಃಶ್ರೋತ್ರಹೀನೋಽಸ್ಮಿ ಮನಃಪ್ರಾಣಾತಿಗೋಽಸ್ಮ್ಯಹಂ ॥೨೩॥**

**ಮಯಾವಾಸ್ಯಮಿದಂ ಸರ್ವಂ ಮಾಂ ವಿಜ್ಞಾಯ ವಿಮುಚ್ಯತೇ ।**
**ಅಹಂ ಸರ್ವಶರೀರೇಷು ವಿಜಾನಾಮೀದಮೇವ ಹಿ ॥೨೪॥**

**ನ ವೇತ್ತಿ ಮಾಂ ಸುರಾಃ ಕೋಽಪಿ ಯೋಗಯುಕ್ತೋಽಪಿ ಕಶ್ಚನ ।**
**ಸರ್ವಾಶ್ರಯೋಽಹಂ ಹಿ ಸದಾ ಸರ್ವಾಧಾರಶ್ಚ ಸತ್ತಮಃ ॥೨೫॥**

**ಪಂಚಕೋಶವಿಹೀನಶ್ಚ ಪಂಚಭೂತಾತಿಗೋಽಸ್ಮ್ಯಹಂ ।**
**ಪಂಚಪ್ರಾಣಾತಿಗಶ್ಚಾಹಂ ಕ್ವೇದಂ ದೇಹೇಂದ್ರಿಯಂ ಸುರಾಃ ॥೨೬॥**

---

ನನಗೆ ಕೈಕಾಲುಗಳು ಯಾವುವೂ ಇಲ್ಲ. ವೇಗ, ಆಯಾಸ, ಮುಂತಾದ ಗುಣಗಳಿಗಾಗಲಿ, ಕಣ್ಣು, ಕಿವಿ, ಮನಸ್ಸು, ಪ್ರಾಣ ಇವುಗಳಿಗಾಗಲಿ ನಾನು ಒಳಪಟ್ಟವನಲ್ಲ. ಅಂತರಿಂದ್ರಿಯಗಳಿಗೂ ಪಂಚಪ್ರಾಣಾದಿಗಳಿಗೂ ಮೀರಿದವನು ನಾನೇ. ||೨೩||

ಈ ಜಗತ್ತೆಲ್ಲವೂ ನನ್ನಲ್ಲಿಯೇ ನೆಲಸಿರುವುದು. ಈ ರೀತಿಯಾಗಿ ಯಾರು ನನ್ನನ್ನು ತಿಳಿಯುವರೋ ಅವರು ನಿಜವಾಗಿಯೂ ಮುಕ್ತರಾಗುವರು. ನಾನು ಸಕಲ ಶರೀರಗಳಲ್ಲಿಯೂ ಅಂತರ್ವರ್ತಿಯಾಗಿ ಸಕಲ ಕರ್ಮಗಳಿಗೂ ಸಾಕ್ಷಿಯಾಗಿರುವೆನು. ||೨೪||

ಆದರೆ ನನ್ನ ನಿಜಸ್ವರೂಪವನ್ನು ದೇವತೆಗಳಾರೂ ತಿಳಿದಿರಲಾರರು. ಸರ್ವಾಶ್ರಯನಾಗಿ, ಸರ್ವಾಧಾರನಾಗಿ, ಸ್ಥಿರನಾಗಿರುವ ನನ್ನನ್ನು ಯಾವ ಯೋಗಿಯೂ ನಿಸ್ಸಂದೇಹವಾಗಿ ತಿಳಿದಿಲ್ಲ. ||೨೫||

ಕಾರಣ, ಕಾರ್ಯ, ಶರೀರಾತ್ಮಕವಾಗಿ, ಆವರಣಭೂತವಾಗಿರುವ ಅನ್ನಮಯಾದಿ ಪಂಚಕೋಶಗಳಾಗಲಿ, ಪೃಥಿವ್ಯಾದಿಪಂಚಭೂತಗಳಾಗಲಿ, ಪ್ರಾಣಾಪಾನಾದಿ ಪಂಚಪ್ರಾಣಗಳಾಗಲಿ, ನಾನಲ್ಲ. ಹೀಗಿರುವಾಗ ಈ ಇಂದ್ರಿಯವಿಶಿಷ್ಟವಾಗಿರುವ ಈ ದೇಹವು ನಾನು ಹೇಗಾದೇನು? ||೨೬||

ಅಪಕ್ಷಪಾತಸಹಿತಸ್ಸರ್ವಭೂತೇಷು ಸರ್ವದಾ ।
ಲೋಕೋತ್ಥಸುಖದುಃಖೈಶ್ಚ ಷಡೂರ್ಮಿಭಿರಪಿ ದ್ರುತಂ ॥೨೭॥

ನೈವ ಲಿಪ್ತೋಽಸ್ಮಿ ದೇಹೇಷು ಹ್ಯಶೀರ್ಣೋಽಹಮವಸ್ಥಿತಃ ।
ಸೂರ್ಯೋ ಯಥಾ ಸರ್ವಲೋಕಂ ಪ್ರವರ್ತಯತಿ ಕರ್ಮಭಿಃ ॥೨೮॥

ಲೋಕಕಾರ್ಯವಿಹೀನಶ್ಚ ತದ್ವತ್ಸಾಕ್ಷಿರಹಂ ಸ್ಥಿತಃ ।
ಕಾಯಪ್ರಾಣಮನೋಧರ್ಮೈರ್ನಾನಾಹಂಕಾರಸಂಭವೈಃ ॥೨೯॥

ಧರ್ಮೈರ್ವಾ ಪಾಪಜಾಲೈರ್ವಾ ನೈವ ಲೇಪೋಽಸ್ತಿ ಮೇ ಸುರಾಃ ।
ಕಾಷ್ಠಾಹಂ ಪರಮಶ್ಚಾಹಂ ಭಾಸಕೋಽಹಂ ಜಡೇಷ್ವಪಿ ॥೩೦॥

ಭೀಷಾಸ್ಮಾದನಿಲೋ ವಾತಿ ಭೀಷೋದೇತಿ ಗಭಸ್ತಿಮಾನ್ ।
ಭೀಷೈವ ಚಂದ್ರಯಮಕಾ ಭೀಷೈವೇದಂ ಸ್ಥಿತಂ ಜಗತ್ ॥೩೧॥

ಎಲ್ಲಾ ಪ್ರಾಣಿಗಳಲ್ಲಿಯೂ ಪಕ್ಷಪಾತವಿವರ್ಜಿತನಾಗಿ ಸಾಮಾನ್ಯ ಮಾನವರಿಗೆ ಒದಗುವ ಶೀತೋಷ್ಣಾದಿ ಷಡೂರ್ಮಿಗಳಿಗೆ ಸಿಕ್ಕದೆ ಶಾಶ್ವತರೀತಿಯಿಂದಿರುವೆನು. ಸಕಲ ದೇಹಗಳಲ್ಲಿದ್ದರೂ ಯಾವ ದೇಹದ ಸಂಬಂಧವೂ ನನಗಿರುವುದಿಲ್ಲ. ||೨೭-೨೮||

ಸೂರ್ಯನು ಹೇಗೆ ಲೋಕದ ಕಾರ್ಯಗಳಿಗೆಲ್ಲಾ ಕಾರಣನಾಗಿದ್ದರೂ, ಕಾರ್ಯಸಂಬಂಧವಿಲ್ಲದೆ ಕೇವಲ ಸಾಕ್ಷೀರೂಪದಲ್ಲಿ ಕಂಡುಬರುವನೋ, ಅದೇರೀತಿ ನಾನೂ ಸಹ ಲೋಕಕಾರ್ಯಮುಕ್ತನಾಗಿ ಸಾಕ್ಷಿಯಾಗಿರುವೆನು. ಕಾಯಿಕವಾದ ಮತ್ತು ಪ್ರಾಣ, ಮನಸ್ಸು, ಅಹಂಕಾರ ಮುಂತಾದ ಚಿತ್ತವೃತ್ತಿಗಳಿಂದ ಹುಟ್ಟಿದ ಧರ್ಮಗಳ ಸಂಬಂಧವಿಲ್ಲದೆ ನಾನು ನಿರ್ಲಿಪ್ತನಾಗಿರುವೆನು. ||೨೯||

ಯಾವ ಧರ್ಮಕಾರ್ಯದಲ್ಲಾಗಲಿ, ಪಾಪರಾಶಿಯಲ್ಲಾಗಲಿ ನನಗೆ ಸಂಬಂಧವಿರುವುದಿಲ್ಲ. ತೇಜೋವಿರಹಿತವಾದ ವಸ್ತುವೂ, ಮಹಾತೇಜಸ್ವಿಯಾದ ವಸ್ತುವೂ ನಾನೇ ಆಗಿರುವೆನು. ವಸ್ತುಗಳ ಪ್ರಕಾಶಗುಣವೂ ನಾನೇ ಆಗಿ ಪದಾರ್ಥಗಳ ಭಾಸಕತ್ವವೂ ನನ್ನನ್ನೇ ಅನುಸರಿಸಿರುವುದು. ||೩೦||

ನನ್ನ ಹೆದರಿಕೆಯಿಂದಲೇ ವಾಯುವು ಲೋಕದಲ್ಲಿ ಬೀಸುತ್ತಿರುವನು. ಸೂರ್ಯನು ಜಗತ್ತನ್ನು ಪ್ರಜ್ವಲಿಸುವನು. ಚಂದ್ರನು ಹೊಳೆಯುವುದೂ, ಯಮನು

ಜ್ಯೋತಿಷಾಂ ಜ್ಯೋತಿರಸ್ಮೀಹ ಬಿಂಬಾಬಿಂಬಾತಿಗೋಽಸ್ಮ್ಯಹಂ ।
ಏಕತ್ವಂ ವಾ ತಥಾ ದ್ವಿತ್ವಂ ಬಹುತ್ವಂ ವಾ ನ ಕಿಂಚನ ॥೩೨॥

ನೈವ ಮುಕ್ತಿರ್ನೈವ ಬಂಧೋ ಮಯಿ ಸರ್ವೇಶ್ವರೇ ಸುರಾಃ ।
ಸರ್ವಭೂಮಾತ್ವಹಂ ದೇವಾಸ್ಸಾಕ್ಷ್ಯಸಾಕ್ಷಿವಿವರ್ಜಿತಃ ॥೩೩॥

ನ ಚಾಣುರ್ನ ಮಹಾಂಶ್ಚಾಪಿ ನಿರ್ಗುಣಸ್ಸಗುಣೋಽಪಿ ವಾ ।
ನ ಮಯಾ ಮಾಯಿ ವಾ ಕಿಂಚಿನ್ನೈವಾಹಮಪಿ ಚೇಶ್ವರಃ ॥೩೪॥

ಏಷೋಽಹಂ ಪರಮಾನಂದೋ ರಸೋಽಹಂ ಸರ್ವವಸ್ತುಗಃ ।
ಏಷ ಬ್ರಹ್ಮಾದಿಸರ್ವಂ ಚಾಪ್ಯಹಮೇವ ಸದಾ ಸುರಾಃ ॥೩೫॥

---

ದುಷ್ಟಶಿಕ್ಷಕನಾಗಿರುವುದೂ ನನ್ನ ಭಯದಿಂದಲೇ. ಈ ಜಗತ್ತು ಸ್ಥಿರವಾಗಿ ನಿಂತಿರುವುದೂ ನನ್ನ ಆಜ್ಞೆಯಿಂದಲೇ. ||೩೧||

ಜ್ಯೋತೀರೂಪದಿಂದ ಹೊಳೆಯುವ ಪದಾರ್ಥಗಳಲ್ಲಿ ಜ್ಯೋತೀರೂಪದಿಂದಿರುವವನೂ, ಬಿಂಬರೂಪವಾದ ಮತ್ತು ಬಿಂಬಾತ್ಮಕವಲ್ಲದ ವಸ್ತುಜಾಲಗಳಲ್ಲಿ, ಸಿಕ್ಕದಿರುವವನೂ, ದ್ವಿತೀಯವಸ್ತುರಹಿತನೂ ಆಗಿರುವೆನು. ಹಾಗಿರುವುದರಿಂದಲೇ ನನ್ನಲ್ಲಿ ಏಕತ್ವ, ದ್ವಿತ್ವ, ಬಹುತ್ವಾದಿ ಪರಿಚ್ಛಿನ್ನಧರ್ಮಗಳು ಕಂಡುಬರಲಾರವು. ||೩೨||

ಎಲೈ ದೇವತೆಗಳಿರಾ, ನನಗೆ ಮುಕ್ತಿಯಾಗಲಿ, ಬಂಧನವಾಗಲಿ ಇರುವುದಿಲ್ಲ. ಸರ್ವವ್ಯಾಪಕನಾಗಿರುವುದರಿಂದಲೇ, ನಾನು ಕಣ್ಣಿಗೆ ಕಾಣುವ ವಸ್ತುವೂ ಅಲ್ಲ, ಕಣ್ಣಿನಿಂದ ಬೇರೆಯಾಗಿ ನೋಡಿ ತಿಳಿಯಬೇಕಾದ ವಸ್ತುವೂ ಅಲ್ಲ. ||೩೩||

ಅಣು, ಮಹತ್, ನಿರ್ಗುಣ, ಸಗುಣ ಈ ವಸ್ತುರೂಪಗಳೂ ನಾನಲ್ಲ. ಲೋಕಸೃಷ್ಟಿಗೆ ಕಾರಣವಾದ ಮಾಯೆಯು ನಾನಲ್ಲ. ನನ್ನಲ್ಲಿ ಮಾಯಾಸಂಬಂಧವಿಲ್ಲ. ಈ ಸಕಲ ವಸ್ತುಭಿನ್ನನಾದ ಈಶ್ವರನೇ ನಾನಾಗಿರುವೆನು. ||೩೪||

ಆದರೆ ಪರಮಾನಂದಸ್ವರೂಪಿಯಾಗಿರುವ ನಾನು ಸರ್ವವಸ್ತುಗಳಲ್ಲಿ ಸಾರರೂಪದಿಂದ ವರ್ತಿಸುವೆನು. ಬ್ರಹ್ಮಾದಿ ಸಕಲವಸ್ತುರೂಪದಲ್ಲಿಯೂ ವಸ್ತ್ವಾತ್ಮನಾ ಭಾಸಮಾನವಾಗಿ ವರ್ತಿಸುತ್ತಿರುವೆನು. ||೩೫||

ಯೂಯಮಾದಿಸ್ಸರ್ವ ಏವ ಸೀಮಾ ಭೂಮಾಹಮೇವ ಹಿ ।
ನ ವೇದವಾದವೇದಾಂತೈರ್ನ ಗುರೂಕ್ತ್ಯಾ ನ ಚೇಚ್ಛಯಾ ॥೩೬॥

ನ ಕರ್ಮಣಾ ವಾ ತಪಸಾ ಪ್ರಾಪ್ಯೋಽತ್ಯೇಕೋಽಪಿ ವಾ ಸುರಾಃ ।
ಮತ್ಪ್ರಸಾದೇನೈವ ದೇವಾ ವೈ ವೃಣುತಂ ಭಕ್ತಿಮೇವ ಹಿ ॥೩೭॥

ಮನ್ನಿಷ್ಠಾಂ ಸರ್ವಭಾವೇನ ಕಶ್ಚಿಜ್ಜಾನಾತಿ ವಾ ನ ವಾ ।
ಅಥಾನ್ಯಥಾ ನಯತ್ಯರ್ಥಂ ವೇದಾಂತಾನಾಂ ದುರಾತ್ಮವಾನ್ ॥೩೮॥

ಮಾಮವಿಜ್ಞಾಯ ದುಃಖೌಘಾನ್ನೈವ ಮುಕ್ತೋ ಭವಿಷ್ಯತಿ ।
ವಿಭೂತಿಂ ಮಮ ವಕ್ಷ್ಯಾಮಿ ಶೃಣ್ವಂತು ಪರಮಾಂ ಸುರಾಃ ॥೩೯॥

ಯಲ್ಲಾಭಾನ್ನಾಪರೋ ಲಾಭೋ ಮತ್ಪ್ರಸಾದೇನ ಲಭ್ಯತೇ ।
ಯೋ ಭಸ್ಮನಿಷ್ಠಾಸ್ಸತತಂ ತೇಷಾಮೇವ ಪ್ರಕಾಶಯೇತ್ ॥೪೦॥

---

ಎಲೈ ದೇವತೆಗಳಿರಾ, ನೀವೆಲ್ಲರೂ ನಾನೇ ಆಗಿರುವೆನು. ನಿಮ್ಮೆಲ್ಲರಲ್ಲಿಯೂ ನಾನೇ ಅಡಗಿರುವೆನು. ನಿಮಗೆ ಕಾಣುವ ದೃಶ್ಯವೆಲ್ಲಾ ನಾನೇ. ವೇದ, ವೇದಾಂತ, ಗುರೂಪದೇಶ, ತನ್ನ ಇಚ್ಛೆ, ಇವುಗಳಾವುದರಿಂದಲೂ ನಾನು ಸುಲಭನಾಗಿ ತಿಳಿಯಲ್ಪಡುವವನಲ್ಲ. ॥೩೬॥

ಯಾವ ಕರ್ಮಾಚರಣೆಯಿಂದಲೂ, ಎಂತಹ ತಪಶ್ಚರ್ಯೆಯಿಂದಲೂ, ನಾನು ಸುಲಭನಾಗಿ ದೊರಕುವನಲ್ಲ. ಎಲೈ ಅಮರರೇ, ನನ್ನ ನಿಜಸ್ವರೂಪವನ್ನರಿಯಲು ನನ್ನ ಅನುಗ್ರಹವನ್ನು ಸಂಪಾದಿಸಿರಿ. ಅದಕ್ಕಾಗಿ ಮೊದಲು ನನ್ನ ಮೇಲಿನ ಭಕ್ತಿಯನ್ನು ಕೇಳಿಕೊಳ್ಳಿರಿ. ॥೩೭॥

ನನ್ನ ನೈಸರ್ಗಿಕ ಸ್ವರೂಪವನ್ನು ತಿಳಿದಿರುವವನು ಯಾರು ಎಂಬುದೇ ಗೊತ್ತಿಲ್ಲ. ಉಪನಿಷತ್ತುಗಳ ನೈಜಾರ್ಥವನ್ನು ಆಗ್ರಹದಿಂದ ಜನರು ಭಿನ್ನರೀತಿಯಲ್ಲಿ ಎಳೆಯುತ್ತಿರುವರು. ನಾನಾರೀತಿ ಪ್ರತಿಪಾದಿಸುತ್ತಿರುವರು. ॥೩೮॥

ನನ್ನ ಸ್ವರೂಪವನ್ನರಿಯದೆ ಯಾರೂ ದುಃಖರಾಶಿಯಿಂದ ತಪ್ಪಿಸಿಕೊಳ್ಳಲಾರರು. ಈಗ ನನ್ನ ಲೀಲೆಯನ್ನು ನಿಮಗೆ ವಿವರಿಸುವೆನು. ಕೇಳಿರಿ. ॥೩೯॥

ಈ ನನ್ನ ಅನುಗ್ರಹರೂಪವಾದ ಉಪದೇಶಕ್ಕಿಂತ ಪ್ರತ್ಯೇಕವಾದ ಲಾಭವೊಂದು ಲೋಕದಲ್ಲಿ ಬೇರೆ ಯಾವುದೂ ಇರಲಾರದು. ಇಂತಹ ಉಪದೇಶವನ್ನು ಭಸ್ಮಧಾರಿಗಳಾಗಿ ನನ್ನ ಭಕ್ತರಾಗಿರುವವರಿಗೆ ಮಾತ್ರ ವಿವರಿಸಬೇಕು. ॥೪೦॥

ಯೇ ತ್ರಿಪುಂಡ್ರಲಸತ್ಫಾಲಾಸ್ತೇಷಾಮೇತತ್ಪ್ರಕಾಶತೇ ।
ಯೇ ರುದ್ರಾಕ್ಷಮಹಾದೇಹಾಸ್ತೇಷಾಮೇತತ್ಪ್ರಕಾಶತೇ ॥೪೧॥

ಯೇ ರುದ್ರಾಧ್ಯಾಯನಿರತಾಸ್ತೇಷಾಮೇತತ್ಪ್ರಕಾಶತೇ ।
ಯೇ ಮಲ್ಲಿಂಗಾರಾಧನೇಚ್ಛಾಸ್ತೇಷಾಮೇತತ್ಪ್ರಕಾಶತೇ ॥೪೨॥

ಯೇ ಪಂಚಾಕ್ಷರಸನ್ಮಂತ್ರಜಪಧ್ಯಾನೈಕಮಾನಸಾಃ ।
ತೇಷಾಂ ಶ್ರುತಿಶಿರೋದ್ಭೂತಂ ಜ್ಞಾನಂ ವಿಪ್ರೇಷು ಜಾಯತೇ ॥೪೩॥

ಯೇ ಶಿವಕ್ಷೇತ್ರನಿರತಾಸ್ತೇಷಾಮೇತತ್ಪ್ರಕಾಶತೇ ।
ಅನನ್ಯಭಾವಾಸ್ಸತತಂ ವೇದಾಂತೇ ಮಯಿ ಯೇ ಗುರೌ ॥೪೪॥

ಅನನ್ಯಭಾವಾ ಯೇ ದೇವಾಸ್ಸದಾ ಕೌಟಿಲ್ಯವರ್ಜಿತಾಃ ।
ಮನ್ನಾಮನಿರತಾ ಯೇ ವೈ ತೇಷಾಮೇತತ್ಪ್ರಕಾಶತೇ ॥೪೫॥

ಸರ್ವೇಭ್ಯೋ ದೇವಸಂಘೇಭ್ಯೋ ವರಿಷ್ಠಂ ಮನ್ಯತೇ ಹಿ ।
ಮದ್ಧ್ಯಾನನಿರತಾ ಯೇ ವೈ ತೇಷಾಮೇತತ್ಪ್ರಕಾಶತೇ ॥೪೬॥

ತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಿ, ರುದ್ರಾಕ್ಷಿಯನ್ನು ದೇಹದಲ್ಲಿ ಹೊತ್ತು ಸರ್ವದಾ ರುದ್ರಾಧ್ಯಾಯವನ್ನು ಜಪಿಸುತ್ತಾ, ಶಿವಲಿಂಗಾರಾಧನೆಯಲ್ಲಿಯೇ ತೊಡಗಿರುವವರಿಗೆ ಈ ನನ್ನ ಉಪದೇಶವು ಸಹಾಯಕವಾದೀತು. ಅವರಿಗೇ ಅದು ಫಲವನ್ನು ಕೊಡಬಲ್ಲದು. ॥೪೧-೪೨॥

ಅಂತಹವರಿಗೂ, ಶಿವಪಂಚಾಕ್ಷರೀಮಂತ್ರಜಪಾಸಕ್ತರೆನಿಸಿ ಜ್ಞಾನಿಗಳಾಗಿರುವವರಿಗೂ ಉಪನಿಷತ್ತುಗಳ ಸಾರಾರ್ಥವು ಸ್ಪಷ್ಟವಾಗಿ ತಿಳಿಯುವುದು. ಶಿವಕ್ಷೇತ್ರದಲ್ಲಿ ವಾಸಮಾಡುವವರಾಗಿ, ಉಪನಿಷತ್ತಿನಲ್ಲಿ, ನನ್ನಲ್ಲಿ, ಸದ್ಗುರುವಿನಲ್ಲಿ, ಯಾರು ಅನನ್ಯಭಕ್ತಿಯಿಂದಿರುವರೋ, ಅಂತಹವರಿಗೂ ಉಪನಿಷದರ್ಥವು ಸಂದೇಹವಿಲ್ಲದೆ ತೋರಿಬರುವುದು. ॥೪೩-೪೪॥

ಎಲೈ ದೇವತೆಗಳಿರಾ, ಯಾರು ಕೃತ್ರಿಮವನ್ನು ಅರಿಯದೆ, ಸರ್ವದಾ ನನ್ನ ನಾಮಸ್ಮರಣೆಯಲ್ಲಿಯೇ ಕಾಲಕಳೆಯುವರೋ, ಯಾರು ನನ್ನನ್ನು ಸರ್ವದೇವಶ್ರೇಷ್ಠನೆಂದು ನಂಬಿರುವರೋ, ಅಂತಹವರಿಗೆ ನನ್ನ ಸ್ವರೂಪದ ಅರಿವು ಉಂಟಾಗುವುದು. ॥೪೫-೪೬॥

ಮದ್ಧ್ಯಾನಂ ವೇದವೇದಾಂತಸಾರತಾತ್ಪರ್ಯಚಿಂತನಂ ।
ತೇಷ್ವಶಕ್ತೇಷು ಮದ್ರೂಪಚಿಂತನಂ ತತ್ಪ್ರಬುಧ್ಯತೇ ॥೪೭॥

ಚಿಂತಯೇನ್ನೀಲಕಂಠಂ ಮಾಂ ತ್ರಿಣೇತ್ರಂ ಚಂದ್ರಶೇಖರಂ ।
ಉಮಾರ್ಧವಿಗ್ರಹಂ ರೂಪಂ ಸ್ವಹೃತ್ಪದ್ಮಸ್ಯ ಸದ್ಮಗಂ ॥೪೮॥

ಭಾವಯನ್ ಸತತಂ ಯುಕ್ತಸ್ತಜ್ಜ್ಞಾನಂ ಪ್ರಾಪ್ನುಯಾತ್ಸುರಾಃ ।
ಅಪರೋಕ್ಷಂ ಹಿ ಮೇ ಜ್ಞಾನಂ ತಸ್ಯ ಜಾಯೇತ ನಿಶ್ಚಿತಂ ॥೪೯॥

ಏವಂ ಸಾಧನಹೀನಾನಾಂ ಜ್ಞಾನಂ ತದ್ದುರ್ಲಭಂ ಸುರಾಃ ।
ಶೃಣ್ವನ್ ಗುರುಮುಖೈರ್ಭಾವ್ಯೈರ್ಬುದ್ಧ್ಯಾ ಶಬ್ದಾರ್ಥವೇದನೈಃ ॥೫೦॥

ನೈವ ತತ್ಪ್ರಾಪ್ನುಯಾಜ್ಜ್ಞಾನಂ ಕೋಟಿಕಲ್ಪಶತೈರಪಿ ।
ಮತ್ಪ್ರಸಾದವಿಹೀನೋ ಯೋ ಗೃಹೀ ವಾಥ ಯತಿರ್ವನೀ ॥೫೧॥

---

ವೇದವೇದಾಂತಗಳ ಸಾರಾರ್ಥವನ್ನು ಗ್ರಹಿಸುವುದೂ, ನನ್ನನ್ನು ಧ್ಯಾನಿಸುವುದೂ ಜ್ಞಾನಸಾಧಕಗಳು. ಈ ಕರ್ಮಗಳಲ್ಲಿ ಅಶಕ್ತರಾದವರಿಗೆ ನನ್ನ ಸ್ವರೂಪ ಜ್ಞಾನದ ಹೆಚ್ಚು ಫಲಕಾರಿಯಾದೀತು. ॥೪೭॥

ನನ್ನನ್ನು ಧ್ಯಾನಿಸುವವರು ಈ ರೀತಿಯಾಗಿ ಅನುಸಂಧಾನಿಸಬೇಕು. ಪರಶಿವನು, ನೀಲಕಂಠನೂ, ತ್ರಿನಯನವುಳ್ಳವನೂ, ಚಂದ್ರಶೇಖರನೂ, ಉಮಾರ್ಧ ದೇಹಧಾರಿಯೂ ಆಗಿರುವನು. ಅಂತಹ ಪರಮೇಶ್ವರನನ್ನು ನನ್ನ ಹೃದಯಕಮಲದಲ್ಲಿ ನಿಲ್ಲಿಸಿಕೊಳ್ಳುವೆನು. ॥೪೮॥

ಈ ರೀತಿ ಯಾವನು ಸರ್ವದಾ ಭಾವಿಸುವನೋ ಅಂತಹವನಿಗೆ ನನ್ನ ವಿಷಯಕವಾದ ಅಪರೋಕ್ಷಜ್ಞಾನವು ಅಂದರೆ ಶಾಸ್ತ್ರಜನ್ಯವೂ, ಪರಮಾತ್ಮಸಾಕ್ಷಾತ್ಕಾರಕವೂ ಆದ ತಿಳಿವಳಿಕೆಯು ಲಭಿಸುವುದು. ಇದು ನಿಜ. ॥೪೯॥

ಹೀಗೆ ಸಾಧಕರಾದವರು ನನ್ನ ಸ್ವರೂಪವನ್ನು ಕೇವಲ ನನ್ನ ಅನುಗ್ರಹದಿಂದ ತಿಳಿಯಬೇಕೇ ಹೊರತು, ಗುರುಮುಖದಿಂದಾಗಲಿ, ಕೇವಲ ಬುದ್ಧಿಶಕ್ತಿಯಿಂದಾಗಲಿ, ಶಬ್ದಾರ್ಥಗಳ ಅರಿವಿನಿಂದಾಗಲಿ ತಿಳಿಯಲಾರರು. ॥೫೦॥

ನನ್ನ ಅನುಗ್ರಹವನ್ನು ಪಡೆಯದೆ, ಗೃಹಸ್ಥನಾಗಲಿ, ವಾನಪ್ರಸ್ಥನಾಗಲಿ, ಸಂನ್ಯಾಸಿಯಾಗಲಿ ಸಂಸಾರದುಃಖನಿವಾರಕವಾದ ನನ್ನ ಸ್ವರೂಪವನ್ನು ಕೋಟಿ ಕಲ್ಪಪರ್ಯಂತವಾಗಿಯೂ ಅರಿಯಲಾರನು. ॥೫೧॥

ತನ್ನೈವ ಪ್ರಾಪ್ನುಯಾತ್ ಜ್ಞಾನಂ ಸಾಕ್ಷಾತ್ಸಂಸಾರಮೋಚಕಂ ॥೫೨॥

ಯಸ್ಮಿನ್ ಗ್ರಾಮೇ ಪುರೇ ವಾ ಸತತಪರಿಚಿತಾಪಾರಶೈವಪ್ರಚಾರಾ
ರುದ್ರಾಧ್ಯಾಯಜಪಾದರಾಸ್ಸಿತಲಸದ್ಭಸ್ಮತ್ರಿಪುಂಡ್ರಾದರಾಃ ।
ಶಂಭೋರ್ಲಿಂಗಸಮರ್ಚಕಾಸ್ತು ಸುತರಾಂ ತೇ ನಾತುರಂ ನೈವ ತೇ
ಸಂಪ್ರಾಪ್ಸ್ಯಂತಿ ಯಮಾದ್ಭಯಂ ಜನಿಜರಾರೋಗಪ್ರಣಾಶೇನ ವಾ ॥೫೩॥

ಜ್ಞಾನಮೇತದತಿದುರ್ಲಭಂ ಸುರಾ
ಭಕ್ತಿಮುಕ್ತಿಜನಕಂ ಮಮ ಭಕ್ತ್ಯಾ ।
ಯುಕ್ತಿಯುಕ್ತಗುರುಸೂಕ್ತಿಸುಧಾಬ್ಧೇ
ರುದ್ಧೃತಮಾದ್ಯಮನಘಂ ಸತತಂ ಚ ॥೫೪॥

ಲಭ್ಯತೇ ಕಿಲ ಪಚೇಲಿಮಪುಣ್ಯೈಃ
ಕಸ್ಯಚಿನ್ಮಮ ಕೃಪಾವಶತೋ ಹಿ ।

---

ಯಾವ ಹಳ್ಳಿಯಲ್ಲಾಗಲಿ, ನಗರದಲ್ಲಾಗಲಿ, ಜನರು ಸರ್ವದಾ ಶಿವಕಥಾ ಪ್ರಚಾರಮಾಡುತ್ತಾ, ರುದ್ರಾಧ್ಯಾಯಾದಿಗಳನ್ನು ಜಪಿಸುತ್ತಾ, ಶುಭ್ರವಾದ ಭಸ್ಮ ತ್ರಿಪುಂಡ್ರಗಳನ್ನು ಧರಿಸುತ್ತಾ, ಶಿವಲಿಂಗಾರ್ಚಕರಾಗಿರುವರೋ, ಅಂತಹ ಗ್ರಾಮ ನಗರಾದಿಗಳಿಗೆ ಯಾವ ರೋಗಾದ್ಯುಪದ್ರವಗಳೂ ಒದಗಲಾರವು. ಅಷ್ಟಲ್ಲದೆ, ಜನನ, ಮರಣ, ರೋಗಾದಿಗಳ ಹಾವಳಿ, ಇವುಗಳಾವುದರಿಂದಲೂ ಯಮನು ಆ ಪ್ರದೇಶ ಗಳನ್ನು ಪೀಡಿಸಲಾರನು. ||೫೩||

ನಿರ್ಜರರೇ, ಇಲ್ಲಿನ ವರೆಗೂ ಉಪದೇಶಿಸಿದ ಈ ನನ್ನ ತತ್ತ್ವಾರ್ಥವು ಎಲ್ಲರಿಗೂ ಸುಲಭವಾಗಿ ದೊರೆಯತಕ್ಕುದಲ್ಲ. ಇದನ್ನು ಅರಿಯುವುದರಿಂದ, ಜನರಿಗೆ ಶಿವಭಕ್ತಿ, ಮುಕ್ತಿ ಇವೆಲ್ಲವೂ ಸುಲಭವಾಗಿ ದೊರೆಯುವುದು. ಗುರೂಪದೇಶವೆಂಬ ಅಮೃತಸಮುದ್ರದಲ್ಲಿ ಯುಕ್ತಿಯುಕ್ತವಾಗಿಯೂ, ಸಾರವತ್ತಾಗಿಯೂ ಇರುವ ತತ್ತ್ವವಿದು. ಈ ಜ್ಞಾನದಲ್ಲಿ ಯಾವ ವಿಧವಾದ ದೋಷವೂ ಇಲ್ಲದೆ ಶುದ್ಧವೆನಿಸಿದೆ. ||೫೪||

ಫಲಕೊಡುವಂತಹ ಪುಣ್ಯರಾಶಿಯನ್ನಾರ್ಜಿಸಿದವನು, ನನ್ನ ಕೃಪಾಬಲ ದಿಂದ, ನನ್ನ ವಿಷಯಕವಾದ ಜ್ಞಾನವನ್ನು ಸಂಪಾದಿಸಿ, ಹೃದಯಾಂತರ್ವರ್ತಿ ಯಾದ ಸಕಲ ಸಂಸಾರದುಃಖಗಳನ್ನೆಲ್ಲಾ ಕಳೆದುಕೊಂಡು, ಮುಕ್ತನಾಗುವನು.

ಬಂಧಹೃದ್ಧೃದಯಭೇದಕಂ ಸುರಾ
ಹ್ಯನ್ಯಥಾಸ್ಯ ನ ಪಥಾ ನ ಕರ್ಮಣಾ ||೫೫||

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಸುರೋಪದೇಶೋ ನಾಮ
ಪಂಚಾಶೋಽಧ್ಯಾಯಃ

---

ಹಾಗಲ್ಲದೆ ಮತ್ತಾವದಾರಿಯಿಂದಲೂ, ಎಂತಹ ಕರ್ಮಾಚರಣೆಯಿಂದಲೂ ಅಷ್ಟು ಸುಲಭವಾಗಿ ಮುಕ್ತಿಯನ್ನು ಪಡೆಯಲಾರನು" ಎಂದು ಶಂಕರನು ದೇವತೆಗಳಿಗೆ ಬೋಧಿಸಿದನು. ||೫೫||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಪ್ರಥಮಾಂಶಾಂತರ್ಗತವಾದ ಸುರೋಪದೇಶವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಏಕಪಂಚಾಶೋಽಧ್ಯಾಯಃ

### ಶ್ರುತಿಸಾರನಿರೂಪಣಂ

|| ಈಶ್ವರ ಉವಾಚ ||

ವಿಭೂತಿಂ ಮಮ ವಕ್ಷ್ಯಾಮಿ ಶೃಣ್ವಂತು ಮುನಿಪುಂಗವಾಃ ।
ಯತ್ ಜ್ಞಾತ್ವಾ ನ ಪುನರ್ಜ್ಞೇಯಂ ವಿದ್ಯತೇ ಸುರಸತ್ತಮಾಃ ॥೧॥

ಅಹಮೇಕೋಽಖಿಲಾಧಾರಶ್ಚಾಹಂ ವಿಶ್ವಪ್ರವರ್ತಕಃ ।
ಅಹಂ ವಿಶ್ವಮಿದಂ ಸರ್ವಂ ಮಯ್ಯೇವಾಂತೇ ವಿಶತ್ಯಪಿ ॥೨॥

ಅಹಂ ಧಾತಾ ವಿಧಾತಾ ಚ ಮತ್ತೋಽನ್ಯೋ ನಾಸ್ತಿ ಕಶ್ಚನ ।
ಸೃಜಾಮೀದಂ ಗ್ರಸಾಮೀದಂ ಭರಾಮೀದಂ ಸುರೋತ್ತಮಾಃ ॥೩॥

---

## ಶ್ರೀಶಿವರಹಸ್ಯದಲ್ಲಿ ಐವತ್ತೊಂದನೆಯ ಅಧ್ಯಾಯ

ಪುನಃ ಮಹೇಶ್ವರನು ದೇವತೆಗಳಿಗೆ ನಿಜಸ್ವರೂಪವನ್ನು ಉಪದೇಶಿಸಲಾರಂಭಿಸಿದನು. "ದೇವಶ್ರೇಷ್ಠರೇ, ಈಗ ಮತ್ತೆ ನನ್ನ ಲೀಲಾಭೂತವಾದ ಮಹಿಮೆಯನ್ನು ನಿಮಗೆ ಉಪದೇಶಿಸುವೆನು. ಕೇಳಿರಿ, ಇದನ್ನು ತಿಳಿದ ಮೇಲೆ ಮತ್ತೆ ತಿಳಿಯಬೇಕಾದ ಅಂಶವು ಮತ್ತೊಂದಿರಲಾರದು. ||೧||

ಲೋಕಗಳಿಗೆಲ್ಲಾ ಆಧಾರನಾಗಿ, ಲೋಕಚಾಲಕನಾಗಿರುವ ನಾನು ಒಬ್ಬನೇ. ನಾನೇ ಜಗತ್ತು. ಸರ್ವವೂ ನಾನೇ. ಕೊನೆಯಲ್ಲಿ ಈ ಜಗತ್ತೆಲ್ಲವೂ ನನ್ನಲ್ಲೇ ಐಕ್ಯಹೊಂದುವುದು. ||೨||

ಸೃಷ್ಟಿಕರ್ತನೂ ನಾನೇ. ಈ ಪ್ರಪಂಚವನ್ನೆಲ್ಲಾ ಸೃಷ್ಟಿಮಾಡಿ, ಅದನ್ನು ಸಂರಕ್ಷಿಸಿ ಕೊನೆಗೆ ನಾಶಮಾಡುವ ಶಕ್ತಿಯೂ ನನ್ನಲ್ಲಿ ಹೊರತು ಮತ್ತಾರಲ್ಲಿಯೂ ಇರಲಾರದು. ||೩||

ಯಥೋರ್ಣನಾಭಿಸ್ಸೂತ್ರಾಂಶ್ಚ ಗ್ರಸತೇ ಸೃಜತೀತ್ಯಪಿ ।
ತಥೈವೇದಂ ಜಗಜ್ಜಾಲಂ ಭವದ್ಭಿಸ್ಸುರಸತ್ತಮಾಃ ॥೪॥

ಕಾಲಾತ್ಮಾಹಂ ಬ್ರಹ್ಮಕ್ಷತ್ರವೋದನಂ ಮೃತ್ಯುಪಾಶದಂ ।
ಅಹಂ ಜೀವಂ ಪ್ರವಿಶ್ಯೈವ ಸರ್ವಭೂತೇಷು ಸಂಸ್ಥಿತಃ ॥೫॥

ಸರ್ವಭೂತೇಷು ಭೂತಾಂತರ್ಗುಹಾಯಾಂ ಸರ್ವದಾ ಸ್ಥಿತಃ ।
ಸರ್ವೇಂದ್ರಿಯಗುಣಾತೀತಸ್ಸರ್ವೇಂದ್ರಿಯವಿವರ್ಜಿತಃ ॥೬॥

ಮದಾಧಾರಾ ಇಮೇ ಲೋಕಾ ಲೋಕ್ಯಾ ಯೂಯಂ ಸುರಾಸುರಾಃ ।
ತಪನೇ ತಾಪಕಶ್ಚಾಹಂ ಚಂದ್ರೇ ಚೈವ ಪ್ರಸಾದಕಃ ॥೭॥

ಹೇಗೆ ಜೇಡರಹುಳುವು ತನ್ನ ಬಾಯಿಂದಲೇ ಸೂತ್ರಗಳನ್ನು ನಿರ್ಮಿಸುವುದೋ, ಕೊನೆಗೆ ಅವೆಲ್ಲವನ್ನೂ ತನ್ನಲ್ಲಿಯೇ ಅಡಗಿಸಿಕೊಳ್ಳುವುದೋ ಮತ್ತು ಅದರ ಮಧ್ಯವರ್ತಿಯಾಗಿಯೇ ಸಂಚರಿಸುವುದೋ, ಹಾಗೆಯೇ ಈ ಜಗತ್ತೆಲ್ಲವೂ ನನ್ನಿಂದ ನಿರ್ಮಿತವಾಗಿ ನನ್ನ ಅಭೇದವನ್ನೇ ಪಡೆದು, ನನ್ನನ್ನು ಒಳಗೊಂಡಿರುವಂತೆ ಕಾಣುತ್ತಿರುವುದು. ॥೪॥

ಕಾಲರೂಪಿಯಾಗಿರುವ ನಾನು ಬ್ರಹ್ಮ, ಕ್ಷತ್ರಜಾತಿಗಳನ್ನು ಓದನವನ್ನಾಗಿ ಮಾಡಿಕೊಂಡು, ಮೃತ್ಯುವನ್ನೇ ಉಪದಂಶವನ್ನಾಗಿ ಮಾಡಿಕೊಂಡು ಆಹ್ಲಾದಕರನಾಗಿರುವೆನು. ನಾನೇ ಸರ್ವಭೂತಗಳಲ್ಲಿಯೂ ಪ್ರವೇಶಿಸಿ ಜೀವರೂಪದಿಂದ ಚಲನವಲನಗಳನ್ನುಂಟುಮಾಡುತ್ತಿರುವೆನು. ॥೫॥

ಸಕಲ ಭೂತಗಳಲ್ಲಿರುವ ಮನೋಬುದ್ಧಿರೂಪಗುಹೆಗಳಲ್ಲಿ ನಾನು ಅಂತರ್ವರ್ತಿಯಾಗಿ ನೆಲಸಿರುವೆನು. ಸಕಲೇಂದ್ರಿಯಗುಣಾತೀತನಾಗಿಯೂ, ಸರ್ವೇಂದ್ರಿಯದಿಂದ ನಿರ್ಮುಕ್ತನಾಗಿಯೂ ಇರುವೆನು. ॥೬॥

ಈ ಲೋಕಗಳೆಲ್ಲವೂ ನನ್ನಲ್ಲಿ ಆಶ್ರಯವನ್ನು ಪಡೆದಿರುವುವು. ಲೋಕಾಂತಃಪಾತಿಗಳಾದ ನೀವೆಲ್ಲರೂ ನನ್ನ ಆಜ್ಞಾವರ್ತಿಗಳೇ ಆಗಿರುವಿರಿ. ಸೂರ್ಯನಲ್ಲಿ ಉರಿಯುವ ಶಕ್ತಿಯನ್ನು ಕೊಡುವವನೂ, ಚಂದ್ರನಲ್ಲಿ ನೈರ್ಮಲ್ಯವನ್ನಿಟ್ಟಿರುವವನೂ ನಾನೇ ಆಗಿರುವೆ. ॥೭॥

ಅನಿಲೇ ಚಲನಶ್ಚಾಹಮನಲೇ ಹ್ಯುಷ್ಣಕೋ ಹ್ಯಹಂ ।
ಇಂದ್ರೇ ಯಮೇ ಪ್ರತಾಪೋಽಹಂ ಲಕ್ಷ್ಮೀಶ್ಚಾಹಂ ಧನಾಧಿಪೇ ॥೮॥

ಅಶ್ವಿನೋರಪಿ ಭೈಷಜ್ಯಂ ಮರುತಾಂ ಮಾತರಸ್ಸದಾ ।
ವಿಶ್ವೇಷಾಂ ಹೃದಯಂ ಚಾಹಂ ವಸೂನಾಂ ಹೃದ್ಗತಸ್ಸದಾ ॥೯॥

ಅಸುರಾಣಾಂ ಸುರಾಣಾಂ ಚ ಸಂಪದಾ ಸಮವಸ್ಥಿತಃ ।
ತಮಸಾ ಸಾತ್ವಿಕೇನೈವ ಮುನೀನಾಂ ರಾಜಸಸ್ಸುರಾಃ ॥೧೦॥

ಗುಣತ್ರಯೋಽಹಂ ವಿಬುಧಾ ಗುಣಹೀನೋಽಸ್ಮಿ ಕೇವಲಃ ।
ಅಹಂ ಹಿ ನಿರ್ಗುಣಸ್ಸಾಕ್ಷಾತ್ತಮಃ ಪಾರೇ ಪ್ರತಿಷ್ಠಿತಃ ॥೧೧॥

ಅಪಾಂ ರಸಸ್ತಥೈವಾಹಂ ಜ್ಯೋತಿಷಾಂ ಜ್ಯೋತಿರಸ್ಮ್ಯಹಂ ।
ಭೂತಾಕಾಶೇ ಚೇತಯಿತಾ ವ್ಯಾಪಕಶ್ಶಬ್ದಗೋಽಸ್ಮ್ಯಹಂ ॥೧೨॥

---

ವಾಯುವಿನಲ್ಲಿರುವ ಚಲನಶಕ್ತಿಯೂ, ಅಗ್ನಿಯಲ್ಲಿ ಕಾಣುವ ದಹಿಸುವ ಶಕ್ತಿಯೂ, ಇಂದ್ರ, ಯಮ, ಇವರಲ್ಲಿ ತೋರುವ ಪ್ರತಾಪವೂ, ಕುಬೇರನಲ್ಲಿ ಅಡಗಿರುವ ಐಶ್ವರ್ಯವೂ ನನ್ನ ಸ್ವರೂಪವೇ ಆಗಿರುವುವು. ॥೮॥

ಅಶ್ವಿನೀದೇವತೆಗಳಲ್ಲಿರುವ ಚಿಕಿತ್ಸಾಸಾಮರ್ಥ್ಯವೂ, ಮರುದ್ಗಣಗಳಲ್ಲಿರುವ ಮಾತೃತ್ವವೂ ನಾನೇ. ವಿಶ್ವೇದೇವತೆಗಳಲ್ಲಿ ಮತ್ತು ವಸುಗಣಗಳಲ್ಲಿ ಹೃದ್ಗತನಾಗಿ ಪ್ರಕಾಶಿಸುವವನೂ ನಾನೇ ಆಗಿರುವೆನು. ॥೯॥

ಸತ್ವ, ರಜಸ್ಸು, ತಮಸ್ಸು ಎಂಬ ಗುಣತ್ರಯರೂಪನಾಗಿ ಋಷಿಜನರಲ್ಲಿಯೂ ಸುರಾಸುರರಲ್ಲಿಯೂ, ಒಂದೊಂದು ಗುಣವನ್ನನುಸರಿಸಿ ಅಡಗಿರುವೆನು. ॥೧೦॥

ಎಲೈ ದೇವತೆಗಳೇ, ಹೀಗೆ ಗುಣತ್ರಯವಿಶಿಷ್ಟನಾಗಿ ಕಂಡರೂ ನನ್ನ ನೈಸರ್ಗಿಕ ಸ್ವರೂಪವು ನಿರ್ಗುಣವಾದದ್ದು. ಹೀಗಿರುವಾಗ ತಮೋಗುಣವು ನನ್ನಲ್ಲಿ ಹೇಗೆ ಇದ್ದೀತು ? ಅಂದರೆ ತಮೋಗುಣಕ್ಕೆ ಸರ್ವದಾ ದೂರದಲ್ಲಿರುವೆನು. ॥೧೧॥

ನೀರಿನಲ್ಲಿ ರಸರೂಪದಿಂದಲೂ, ತೇಜೋವಿಶಿಷ್ಟವಸ್ತುಗಳಲ್ಲಿ ತೇಜೋರೂಪದಿಂದಲೂ, ಪಂಚಭೂತಗಳಲ್ಲಿ ಚೇತೋರೂಪದಿಂದಲೂ, ಆಕಾಶದಲ್ಲಿ ಶಬ್ದರೂಪದಿಂದಲೂ ವ್ಯಾಪಕನಾಗಿರುವೆನು. ॥೧೨॥

ಪೃಥಿವ್ಯಾಂ ಚ ತಥಾ ಗಂಧೋ ಗುಣೋ ದೇವಾಶ್ಚ ಸಂಸ್ಥಿತಃ ।
ವಾಯುಶ್ಚಾಹಂ ತಥಾ ದೇವಾ [1]ಏತೇಷಾಮಾದ್ಯಸೃಷ್ಟಯಃ ॥೧೩॥

ಚರಾಚರಮಿದಂ ಪ್ರೋಕ್ತಂ ಜಗತ್ಸ್ಥಾವರಜಂಗಮಂ ।
ಏತೇಷಾಮಾನುಲೋಮ್ಯೇನ ಸೃಷ್ಟಯಸ್ಸ್ಯುಃ ಪ್ರವರ್ತಿತಾಃ ॥೧೪॥

ಏತೇಷಾಂ ಪ್ರಾತಿಲೋಮ್ಯೇನ ಸ್ಥಿತೌ ಪ್ರಲಯಸಂಜ್ಞಿತಾಃ ।
ಏತೇಷಾಂ ಕಾರ್ಯಕರಣೇ ನೈವ ಕಿಂಚಿದಹಂ ಸುರಾಃ ॥೧೫॥

ನಿಲಿಂಪಾ ನೈವ ಲೋಪೇನ ಕಿಂ ತು ಸಾಕ್ಷೀ ಸನಾತನಃ ।
ಮತ್ಸನ್ನಿಧಾನವಿರಹೇ ಜಗನ್ನೈವ ಪ್ರರೋಚತೇ ॥೧೬॥

ಪೃಥಿವಿಯ ಮುಖ್ಯಗುಣವಾದ ಗಂಧವೇ ನಾನು. ವಾಯುವಿನಲ್ಲಿರುವ ಮುಖ್ಯ ಗುಣವಾದ ಚಲನಾದಿಗಳೇ ನಾನು. ಅಂತೂ ಸೃಷ್ಟಿಕಾರ್ಯದಲ್ಲಿ ಆದಿಭೂತವಾದ ಮುಖ್ಯ ಗುಣಗಳೆಲ್ಲವೂ ನಾನೇ. ||೧೩||

ಸ್ಥಾವರ ಮತ್ತು ಜಂಗಮವಸ್ತುಗಳಿಂದ ಕೂಡಿದ ಈ ಜಗತ್ತನ್ನೇ ಚರಾಚರಾತ್ಮಕವಾದದ್ದು ಎನ್ನುವರು. ಈ ಪೃಥಿವ್ಯಾದಿಪಂಚಭೂತಗಳ ಅನುಲೋಮಸಂಯೋಜನವೇ ಜಗತ್ತಿನ ಉತ್ಪತ್ತಿಗೆ ಕಾರಣ. ಆಕಾಶಾದಿಯಾಗಿ ಸಂಯೋಜನವಾಗಿರುವುದೇ ಅನುಲೋಮಸಂಯೋಗ. ||೧೪||

ಇದೇ ಪಂಚಭೂತಗಳು ವಿರುದ್ಧಕ್ರಮದಲ್ಲಿ ಒಂದರಲ್ಲಿ ಒಂದು ಅಡಗುತ್ತಾ ಬಂದರೆ, ಅದೇ ಪ್ರಲಯವೆನಿಸುವುದು. ಅಂತೂ ಈ ಪಂಚಭೂತಕಾರ್ಯಗಳಲ್ಲಿ ನಾನು ಸ್ವಲ್ಪವೂ ಕಾರಣನಾಗಿಲ್ಲ. ||೧೫||

ಎಲೈ ನಿರ್ಜರರೇ, ಆದರೆ ಪಂಚಭೂತಗಳಲ್ಲಿ ನಾನು ಸೇರದೇ ಇಲ್ಲ. ಜಗತ್ತಿನ ಸಕಲಕಾರ್ಯಗಳನ್ನೂ ನೋಡುವ ಸರ್ವಸಾಕ್ಷಿಯೇ ನಾನು. ನಾನು ಅಸನ್ನಿಹಿತನಾದರೆ ಜಗತ್ತೇ ನಡೆಯಲಾರದು. ||೧೬||

---

1 ಏಷಾಂ ಸಂಧಾವಿಸೃಷ್ಟಯಃ (ಪಾಠಾಂತರ)

ಆಯುಸ್ಕಾಂತಮಣೇರ್ಯದ್ವತ್ ಸನ್ನಿಧೌ ಲೋಹಸೂಚಯಃ ।
ಚೇಷ್ಟಂತಿ ವಿವಿಧಂ ದೇವಾ ಸ್ತಥೈವೇದಂ ಜಗತ್ಸುರಾಃ ॥೧೭॥

ಸನ್ನಿಧೌ ಚೇಷ್ಟತೇ ಮೇದ್ಯ ಸರ್ವೇ ಕ್ರೀಡನಕಾ ಮಮ ।
ಮಮ ರೂಪಪರಿಜ್ಞಾನಂ ಭವತಾಮತಿದುರ್ಲಭಂ ॥೧೮॥

ಷಡೂರ್ಮಿರಹಿತಶ್ಚಾಹಂ ಪಂಚಕೃತ್ಯವಿವರ್ಜಿತಃ ।
ಬ್ರಹ್ಮಾಸ್ಯಹಂ ಸೃಜಾಮೀದಂ ರಜಸಾ ಕೇವಲಂ ಜಗತ್ ॥೧೯॥

ವಿಷ್ಣುಃ ಪಾಲಯಿತಾ ಚಾಹಂ ಸಾತ್ವಿಕಂ ಗುಣಮಾಸ್ಥಿತಃ ।
ರುದ್ರೋ ಭೂತ್ವಾ ಸಂಹರಾಮಿ ತಾಮಸೋಹಂ ಚರಾಚರಂ ॥೨೦॥

ಸದಾಶಿವೋಹಂ ದೇವೇಶೋ ಹ್ಯನುಗ್ರಹಕರೋಸ್ಮ್ಯಹಂ ।
ಮನ್ಮಾಯಾಮೋಹಿತಂ ಚೈವ ಕರೋಮೀಶ್ವರರೂಪಧೃಕ್ ॥೨೧॥

---

ಸೂಜಿಗಲ್ಲಿನ ಸಾನ್ನಿಧ್ಯದಿಂದಲೇ ಕಬ್ಬಿಣದ ಸೂಜಿಗಳು ಹೇಗೆ ಚಲಿಸು ವುವೋ, ಹಾಗೆ ನನ್ನ ಸನ್ನಿಧಿಮಾತ್ರದಿಂದಲೇ ನನ್ನ ಪ್ರಯತ್ನವಿಲ್ಲದೆ ಈ ಚರಾಚರಾತ್ಮಕವಾದ ಜಗತ್ತು ಚಲಿಸುತ್ತಿರುವುದು. ॥೧೭॥

ಜಗತ್ತಿಗೂ ನನಗೂ ಸಂಬಂಧವು ಕಲ್ಪಿತವಾಗದಿದ್ದರೂ ಜಗತ್ತು ಮಾತ್ರ ನನ್ನ ಶಕ್ತಿಯಿಂದ ನಡೆಯುವುದು. ಹಾಗಿರುವಾಗ ನೀವೆಲ್ಲರೂ ಪರತಂತ್ರರಾದ ಬೊಂಬೆಗಳಂತಲ್ಲವೇ! ನಿಮಗೆ ನನ್ನ ರೂಪಪರಿಜ್ಞಾನವಾಗುವುದು ಹೇಗೆ? ॥೧೮॥

ಶೀತೋಷ್ಣ, ಕ್ಷುತ್ಪಿಪಾಸಾ, ಸುಖದುಃಖ ಇವೇ ಮೊದಲಾದ ಷಡೂರ್ಮಿ ಗಳಿಗೆ ಸಿಕ್ಕದೆ, ಪಂಚಕೃತ್ಯ (ಪಂಚಭೂತಗಳ ಕಾರ್ಯಗಳು) ವಿವರ್ಜಿತನಾಗಿ, ಬ್ರಹ್ಮರೂಪದಿಂದ, ಕೇವಲ ರಜೋಗುಣಪ್ರಧಾನನಾಗಿದ್ದು ಲೋಕವನ್ನು ಸೃಷ್ಟಿ ಮಾಡುವೆನು. ॥೧೯॥

ಸತ್ವಗುಣಪ್ರಧಾನನಾಗಿದ್ದು, ವಿಷ್ಣುರೂಪದಿಂದ ಜಗತ್ತನ್ನು ರಕ್ಷಿಸುವೆನು. ತಮೋಗುಣಾತಿಶಯದಿಂದ ಕಾಲರುದ್ರನಾಗಿ ಈ ಚರಾಚರಾತ್ಮಕವಾದ ಜಗತ್ತ ನ್ನೆಲ್ಲಾ ಲಯಗೊಳಿಸುವೆನು. ॥೨೦॥

ಸದಾಶಿವನೆನಿಸಿ ನನ್ನ ಭಕ್ತರಿಗೆಲ್ಲಾ ಸಕಲ ಸನ್ಮಂಗಳಗಳನ್ನೂ ಒದಗಿಸು ವವನಾಗುವೆನು. ಈ ಜಗತ್ತೆಲ್ಲವೂ ನನ್ನ ಮಾಯೆಗೆ ಅಧೀನವಾದದ್ದು. ಐಶ್ವರ್ಯ

ಪಂಚಕೃತ್ಯಪರಶ್ಚಾಹಂ [1]ಪಂಚಕೋಶಾತಿಗೋಽಸ್ಮ್ಯಹಂ ।
ಪಂಚಪ್ರಾಣವಿಹೀನೋಽಹಂ ಪಂಚಭೂತೈಕವರ್ತನಃ ॥೨೨॥

ಇಯಂ ಮಮ ಪರಾ ಶಕ್ತಿರ್ವಿಕ್ಷೇಪಾವರಣಾತ್ಮಿಕಾ ।
ಯಯಾ ಸರ್ವೋ್ಽಹಿತಾ ಯೂಯಂ ಜಗತ್ಸಾಸುರಮಾನುಷಂ ॥೨೩॥

ಪ್ರದನಾದ ಈಶ್ವರರೂಪಧಾರಿಯಾಗಿ ಜಗತ್ತೆಲ್ಲಾ ಮೋಹಗೊಳ್ಳುವಂತೆ ಮಾಡುವೆನು. ||೨೧||

ಬ್ರಹ್ಮಾಂಡಸೃಷ್ಟಿಗೆ ಪೃಥಿವ್ಯಾದಿ ಪಂಚಭೂತಗಳ ಪಂಚೀಕರಣವೇ ಅತ್ಯಾವಶ್ಯಕ. ಪಂಚೀಕರಣವೆಂದರೆ, ಒಂದು ಭೂತದ ಅರ್ಧಭಾಗವೂ ಇತರ ಭೂತಗಳ ಅಂಶಗಳಿಂದ ಅರ್ಧಭಾಗವೂ ಸೇರಿ ಶುದ್ಧ ಚಿನ್ನ ತಾಮ್ರದೊಡನೆ ಸೇರಿ ಕೆಲಸಕ್ಕೆ ಉಪಯೋಗವಾಗುವಂತೆ ಬ್ರಹ್ಮಾಂಡಸೃಷ್ಟಿಗೆ ಅನುಕೂಲವಾಗುವುದು ಎಂದರ್ಥ. ಇಂತಹ ಪಂಚೀಕರಣಕಾರ್ಯದಲ್ಲಿ ನಾನು ಬಹಳ ಮಟ್ಟಿಗೆ ಆಸಕ್ತನಾಗಿರುವೆನು. ಇನ್ನು ಸ್ಥೂಲ, ಸೂಕ್ಷ್ಮಶರೀರಗಳು ಒಟ್ಟಾಗಿ ಸೇರಿ ಚೈತನ್ಯಕ್ಕೆ ಆವರಣವಾಗಿರುವುದು. ಈ ಆವರಣವೇ ಕೋಶವೆನ್ನಲ್ಪಡುವುದು. ಇಂತಹ ಕೋಶಗಳು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂದು ಐದು ವಿಧ. ಕಾರಣಕಾರ್ಯಶರೀರಗಳೇ ಒಟ್ಟಿನಲ್ಲಿ ಪಂಚಕೋಶವ್ಯವಹಾರಕ್ಕೆ ಸಿಕ್ಕುತ್ತವೆ. ಇಂತಹ ಶರೀರಭಿನ್ನನಾದುದರಿಂದಲೇ, ನಾನು ಪಂಚಕೋಶಾತಿರಿಕ್ತನಾಗಿರುವೆನು. ಹಾಗೆಯೇ ರಜೋಗುಣಪ್ರಧಾನವಾದ ಪಂಚಭೂತಗಳಿಂದ ಹಸ್ತಾದಿ ಪಂಚಕರ್ಮೇಂದ್ರಿಯಗಳೂ, ಮಿಳಿತವಾದ ಪಂಚಭೂತಸಮುದಾಯದಿಂದ ಪ್ರಾಣಾಪಾನವ್ಯಾನೋದಾನಸಮಾನಗಳೆಂಬ ಪಂಚ ಪ್ರಾಣಗಳೂ ಹುಟ್ಟುವುವು. ನಿರ್ಗುಣರೂಪಿಯಾದ ನನ್ನಲ್ಲಿ ಅಂತಹ ಪಂಚಪ್ರಾಣಗಳ ಸಂಬಂಧವಿರುವುದಿಲ್ಲ. ತ್ರಿಗುಣವಾದ ಮಾಯಾವಸ್ತುವಿನಿಂದ ಕ್ರಮವಾಗಿ ಆಕಾಶಾದಿ ಪಂಚಭೂತಗಳು ಹುಟ್ಟುವುವು. ಇಂತಹ ಪಂಚಭೂತಗಳು ನನ್ನಲ್ಲಿ ಸೇರದಿದ್ದರೂ, ನಾನು ಮಾತ್ರ ಅವುಗಳ ಕಾರ್ಯದಲ್ಲಿ ಒಳಹೊಕ್ಕು ಸಂಚರಿಸುತ್ತಿರುವೆನು. ||೨೨||

ವಿಕ್ಷೇಪಶಕ್ತಿ, ಆವರಣಶಕ್ತಿ ಎಂದೆರಡು ಸ್ವಭಾವಗಳುಳ್ಳ ಅವಿದ್ಯಾರೂಪವಾದ ಶಕ್ತಿಯು ನನ್ನದಾಗಿರುವುದು. ಆ ಶಕ್ತಿಯ ಬಲದಿಂದಲೇ ಈ ಸುರಾಸುರಾತ್ಮಕವಾದ ಜಗತ್ತೆಲ್ಲವೂ ಮೋಹಿತವಾಗಿರುವುದು. ||೨೩||

---

1 ಪಂಚೀಕರಣತತ್ಪರಃ (ಪಾ ರ)

ಸ್ಥಾಸ್ನುರ್ಗಚ್ಛತ್ಸುರೇಂದ್ರಾಶ್ಚ ಪರಾಶಕ್ತಿರಿಯಂ ಮಮ ।
ಸೃಷ್ಟೌ ಸ್ಥಿತೌ ತಥಾ ನಾಶೇ ಕಾರಣಂ ತ್ವಿಯಮೇವ ಹಿ ॥೨೪॥

ಮಮೈವ ಶಕ್ತಿಃ ಪರಮಾ ವಿವಿಧಜ್ಞಾನದಾಯಿನೀ ।
ಏನಾಂ ಪ್ರಣಮತ ಕ್ಷಿಪ್ರಮೇತಸ್ಯಾಃ ಕೃಪಯಾ ಸುರಾಃ ॥೨೫॥

ಮತ್ಪ್ರಸಾದಾದಾವರಣಶಕ್ತಿನಾಶಃ ಪ್ರಜಾಯತೇ ।
ಯಾವತ್ಕರ್ಮವಿಪಾಕೋ ಹಿ ದೇಹಿನಾಂ ಭವತಾಂ ಸುರಾಃ ॥೨೬॥

ವಿಕ್ಷೇಪಾಯ ಚ ಸಾ ಶಕ್ತಿರನುವರ್ತೇತ ಸತ್ತಮಾಃ ।
ಮಮೈವಾಂಶೋ ಜೀವ ಏವ ಸ್ವಾಜ್ಞಾನಾತ್ಪರಿಜೃಂಭತೇ ॥೨೭॥

ಇಂದ್ರಾದಿಗಳ ಸ್ಥಿತಿಗೂ, ವ್ಯತ್ಯಾಸಕ್ಕೂ ಈ ನನ್ನ ಪರಾಶಕ್ತಿಯೇ ಕಾರಣ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೂ ಈ ಅವಿದ್ಯಾರೂಪವಾದ ಶಕ್ತಿಯೇ ಮುಖ್ಯ ಭೂತವಾದದ್ದು. ॥೨೪॥

ಅಲ್ಲದೆ ನನ್ನ ಈ ದಿವ್ಯಶಕ್ತಿಯು ಸಕಲರಿಗೂ ಜ್ಞಾನದಾತ್ರಿಯೂ ಆಗಿರುವುದು. ಈ ಶಕ್ತಿಯ ಅನುಗ್ರಹದಿಂದಲೇ ಸಕಲರೂ ಜ್ಞಾನಿಗಳೆನಿಸುವರು. ಆದ್ದರಿಂದ ಮೊದಲು ಈ ಪರಾಶಕ್ತಿದೇವತೆಯಾದ ದೇವಿಯನ್ನು ಭಜಿಸಿರಿ. ॥೨೫॥

ಈ ದೇವಿಯ ಅನುಗ್ರಹದಿಂದಲೂ, ನನ್ನ ಪ್ರಸಾದಬಲದಿಂದಲೂ, ಪ್ರಾಣಿಗಳ ಕರ್ಮವಿಪಾಕದಿಂದಲೂ, ಅವಿದ್ಯಾರೂಪವಾದ ಆವರಣಶಕ್ತಿಯು ನಾಶವಾಗಿ ಜ್ಞಾನೋದಯವಾಗುವುದು. ॥೨೬॥

ಅವಿದ್ಯಾಶಕ್ತಿಯು ಸಾಮಾನ್ಯವಾಗಿ ವಿಕ್ಷೇಪವಾದ ಶಕ್ತಿರೂಪದಿಂದಲೇ ಜೀವಿಗಳನ್ನು ಅನುಸರಿಸುವುದು. ವಸ್ತುಗಳು ವಿಚಿತ್ರವಾಗಿ ಕಾಣುವುದೂ ಈ ವಿಕ್ಷೇಪಶಕ್ತಿಯಿಂದಲೇ. ಜೀವನೂ ನನ್ನಿಂದ ಬೇರೆಯಲ್ಲ.ನನ್ನ ಅಂಶವೇ ಜೀವ. ಆದರೆ ಅದಕ್ಕಿರುವ ಅಜ್ಞಾನಾವರಣವೇ ಅದರ ಸುಖದುಃಖಾದಿಗಳಿಗೆ ಕಾರಣ. ವಸ್ತುಸ್ವರೂಪವನ್ನು ಅನ್ಯಥಾ ತೋರುವಂತೆ ಮಾಡುವುದು ವಿಕ್ಷೇಪ ಶಕ್ತಿಯೆಂದೂ, ವಸ್ತುತತ್ತ್ವವನ್ನು ಆಚ್ಛಾದಿಸಿರುವುದು ಆವರಣಶಕ್ತಿಯೆಂದು ವೇದಾಂತಿಗಳು ನಂಬುವರು. ॥೨೭॥

ನಾನಾಯೋನಿಶರೀರೇಷು ಹ್ಯಶೀರ್ಣೋ ದುಃಖಭಾಗಯುಕ್ ।
ಏವಂ ದ್ವಿಧಾ ದೇಹಗೇಹೇ ವೃಕ್ಷೇ ಪಕ್ಷಿವದಾಸ್ಥಿತೌ ॥೨೮॥

ಏಕಃ ಕರ್ಮಾತ್ಮಕಂ ಭುಂಕ್ತೇ ಫಲಂ ವೈ ಸುಖದುಃಖಯೋಃ ।
ತಥಾನ್ಯಃ ಸಾಕ್ಷಿವದ್ಭಾತಿ ದ್ವಾಸುಪರ್ಣೇತಿ ಮಂತ್ರತಃ ॥೨೯॥

ಬ್ರಹ್ಮೈವ ಸಂಸರತ್ಯೇಷ ಸ್ವಾವಿದ್ಯಾತೋ ದಿವೌಕಸಃ ।
ಸ್ವವಿದ್ಯಯಾ ಮುಚ್ಯತೇ ಚ ತಪಸಾ ಕೇವಲೇನ ಹಿ ॥೩೦॥

ಅಹಂಮಾನತಯಾಪನ್ನಃ ಫಲಭುಕ್ ಸುಖದುಃಖಯೋಃ ।
ಸ್ವರ್ಗೇ ಚ ನರಕೇ ಚೈವ ಸದಾ ವೈ ಸಂಪ್ರವರ್ತತೇ ॥೩೧॥

---

ಬ್ರಹ್ಮನೆಂಬ ಒಂದು ವಸ್ತು, ಅವಿದ್ಯೆಯೆಂಬ ದೋಷದಿಂದ ಜೀವ, ಬ್ರಹ್ಮ ಎಂದು ಬೇರೆಬೇರೆಯಾಗಿ ತೋರಿ ನಾನಾವಿಧವಾದ ಯೋನಿಗಳಲ್ಲಿ ಜನಿಸಿ, ಭಿನ್ನ ಭಿನ್ನಾಕಾರದ ಶರೀರಗಳನ್ನು ಧರಿಸಿ, ಸಂಸಾರದ ವಿವಿಧದುಃಖಗಳನ್ನು ಅನುಭವಿಸುವುದು. ಈ ರೀತಿಯಾಗಿ ವ್ಯವಹಾರಮಾರ್ಗದಲ್ಲಿ ಜೀವ, ಬ್ರಹ್ಮ ಎಂದು ಎರಡು ವಸ್ತುಗಳಂತಾಗಿ ಒಂದು ಮರದಲ್ಲಿ ಎರಡು ಹಕ್ಕಿಗಳಿರುವಂತೆ ಒಂದು ದೇಹವೆಂಬ ಮನೆಯಲ್ಲಿ ಈ ಎರಡು ವಸ್ತುಗಳು ವಾಸಿಸುವುವು. ॥೨೮॥

ಅದರಲ್ಲಿ ಜೀವಶಬ್ದವಾಚ್ಯವಸ್ತುವು ಕರ್ಮಾನುಸಾರವಾಗಿ ಒದಗಿದ ಸುಖದುಃಖಗಳನ್ನು ಅನುಭವಿಸುತ್ತಿರುವುದು. ಬ್ರಹ್ಮವಸ್ತುವು ಮಾತ್ರ ಸಕಲ ಕರ್ಮಗಳಿಗೂ ವ್ಯವಹಾರಗಳಿಗೂ ಸಾಕ್ಷಿಯಾಗಿ ಪ್ರಕಾಶಿಸುತ್ತಿರುವುದು. ಇದೇ ಅರ್ಥವನ್ನೇ "ದ್ವಾಸುಪರ್ಣಾ ಸಯುಜಾಸಖಾಯೌಸಮಾನಂ ಪಕ್ಷಂ ಪರಿಷಸ್ವಜಾತೇ" ಎಂಬ ಮಂತ್ರವು ಸ್ಪಷ್ಟಪಡಿಸುತ್ತಿರುವುದು. ॥೨೯॥

ತನ್ನ ಅವಿದ್ಯಾಮಹಿಮೆಯಿಂದ ಬ್ರಹ್ಮವಸ್ತುವೇ ಜೀವರೂಪದಿಂದ ಪ್ರವೇಶಿಸಿ, ಜನನಮರಣಪ್ರವಾಹಾತ್ಮಕಸಂಸಾರಕ್ಕೆ ಸಿಕ್ಕಿರುವುದು. ಆ ಬ್ರಹ್ಮವಸ್ತುವೇ ತನ್ನ ಸ್ವರೂಪಜ್ಞಾನದಿಂದಲೂ ಕಾರಣೀಭೂತವಾದ ತಪಸ್ಸಿನಿಂದಲೂ ಅವಿದ್ಯಾನಿವೃತ್ತಿರೂಪವಾದ ಮುಕ್ತಿಯನ್ನು ಹೊಂದುವುದು. ॥೩೦॥

ಯಾವನು ಅಹಂಕಾರ, ಮಮಕಾರಗಳಿಂದ ಕೂಡಿರುವನೋ, ಅವನೇ ಸಂಸಾರದ ಸುಖದುಃಖಗಳನ್ನು ಅನುಭವಿಸಲು ಅರ್ಹನಾಗುವನು. ಆತನೇ ಸ್ವರ್ಗ

ಮದ್‌ಜ್ಞಾನಾನ್ಮುಕ್ತಿಮಾಪ್ನೋತಿ ನಾನ್ಯಥಾ ಕರ್ಮಕೋಟಿಭಿಃ ।
ಜೀವಾಪೇತಂ ಮ್ರಿಯತ್ಯೇತನ್ನ ಜೀವೋ ಮ್ರಿಯತೇ ಸುರಾಃ ॥೩೨॥

ಷಡೂರ್ಮಿರಹಿತಶ್ಚಾಹಂ ಸರ್ವದೇಹೇಷು ಸತ್ತಮಾಃ ।
ಷಟ್ಕೋಶಕಮಿದಂ ದೇಹಂ ಪ್ರವಿಶ್ಯಾಖಿಲಭಾಸಕಃ ॥೩೩॥

[1]ಷಡೂರ್ಮಿರಿಂದ್ರಿಯಾರ್ಥೈಶ್ಚ ಕಾಮಯಾಮಿ ಚರಾಚರಂ ।
ಸತ್ಯಕಾಮಶ್ಚ ಸಂಕಲ್ಪಸ್ಸರ್ವಲೋಕಾನ್ ಸೃಜಾಮ್ಯಹಂ ॥೩೪॥

ಮತ್ತು ನರಕಲೋಕಗಳಲ್ಲಿ ಚಕ್ರದಂತೆ ಸುತ್ತುತ್ತಾ ಜನನಮರಣಾದಿಗಳಿಗೆ ಸಿಕ್ಕಿ ತೊಳಲುವನು. ||೩೧||

ಮುಕ್ತಿಗೆ ಈಶ್ವರವಿಷಯಕವಾದ ಜ್ಞಾನವೇ ಮುಖ್ಯಸಾಧಕ. ಅನೇಕ ಕರ್ಮಗಳನ್ನಾಚರಿಸುವುದು ಮುಕ್ತಿಗೆ ಸಾಕ್ಷಾತ್ಕಾರವಾಗಲಾರದು. ಜೀವವನ್ನು ಬಿಟ್ಟು ಉಳಿದ ವಸ್ತುಗಳು ಲೋಕದಲ್ಲಿ ನಾಶವಾಗುವವೇ ಹೊರತು, ಜೀವವು ಬೇರೆ ಎಂದೂ ನಾಶವಾಗುವುದೇ ಇಲ್ಲ. ||೩೨||

ಸುಖದುಃಖಾದಿಷಡೂರ್ಮಿಗಳಲ್ಲಿ ನಾನು ಸೇರದವನಾಗಿ, ಎಲ್ಲರ ದೇಹಗಳಲ್ಲಿಯೂ ವ್ಯಾಪಕನಾಗಿರುವೆನು. ಮಾತೃವಿನಿಂದ ಪ್ರಾಪ್ತವಾದ ತ್ವಕ್, ರಕ್ತ, ಮಾಂಸ, ಪಿತೃಶರೀರದಿಂದ ಬಂದ, ಸ್ನಾಯು, ಅಸ್ಥಿ, ಮಜ್ಜ ಎಂಬ ಆರುಧಾತುಗಳಿಂದ ಕೂಡಿದ ಶರೀರಕ್ಕೆ ಷಾಟ್ಕೋಶಕಶರೀರವೆಂದು ಹೆಸರು. ಇಂತಹ ಆರು ಕೋಶಗಳಿಂದ ದೇಹವಾಗಿರುವ ಸಕಲ ಜೀವಿಗಳಲ್ಲಿಯೂ ಅಡಗಿ ನಾನು ಸ್ವಯಂ ಪ್ರಕಾಶಕನಾಗಿರುವೆನು. ||೩೩||

ಕಾಮಕ್ರೋಧಾದಿ ಷಡ್ವರ್ಗಗಳಿಂದಲೂ, ಶಬ್ದಸ್ಪರ್ಶಾದಿ ಇಂದ್ರಿಯವಿಷಯಗಳಿಂದಲೂ ಸೇರಿಸಿ ಚರಾಚರಾತ್ಮಕವಾದ ಈ ಜಗತ್ತನ್ನು, ಸತ್ಯಕಾಮನಾಗಿಯೂ, ಸಂಕಲ್ಪಪೂರ್ಣನಾಗಿಯೂ, ಸೃಷ್ಟಿಮಾಡುವೆನು. ||೩೪||

---

1 ಷಡ್ವರ್ಗೈರಿಂದ್ರಿಯಂರ್ಥೈಶ್ಚ (ಇತಿ ಪಾಠಾಂತರ)

**ಸಂಕಲ್ಪಾತ್ಪಿತರೋ ದೇವಾ ಉಪತಿಷ್ಠಂತಿ ಮಾಮಿಹ ।**
**ನ ಮೇ ಶೋಕೋಽಸ್ತಿ ಮೋಹೋ ವಾ ಜಿಘೃತ್ಸಾ ಚ ಪಿಪಾಸಕಾ ॥೩೫॥**

**ಅಶರೀರಶ್ಶರೀರೇಷು ಹ್ಯನವಸ್ಥೇಷ್ವವಸ್ಥಿತಃ ।**
**ಮಹಾಂಶ್ಚಾಹಂ ವಿಭುಶ್ಚಾಹಂ ಆತ್ಮಾಶ್ರೀಯೋಽಹಮೇವ ಹಿ ॥೩೬॥**

**ಅವಸ್ಥಾತ್ರಯದೂರೋಽಹಂ ಅಸಂಗಃ ಪುರುಷಸ್ತ್ವಹಂ ।**
**ಸರ್ವಾಕಾಶಸ್ಸರ್ವಭಾಸಸ್ಸರ್ವಾವಾಸೋಽಹಮೀಶ್ವರಃ ॥೩೭॥**

**ಯೋ ಮಾಂ ವೇದ ಸ ವೇದೇದಂ ಯೋ ಮಾಮಜ್ಞಾನಮೋಹಿತಃ ।**
**ಪರಾದಾತ್ಮ ಪರಾದೇದಂ ಜ್ಞಾತ್ವಾನಂದಂ ಬಿಭೇತಿ ನ ॥೩೮॥**

ನನ್ನ ಸಂಕಲ್ಪಮಾತ್ರದಿಂದಲೇ ಲೋಕದ ಸಮಸ್ತ ಪಿತೃದೇವತೆಗಳೂ ಸಮೀಪಗತರಾಗುವರು. ನಾನು ಶೋಕ, ಮೋಹ, ಆಸೆ, ಭಕ್ಷಣ, ಬಾಯಾರಿಕೆ ಇವೇ ಮೊದಲಾದ ವ್ಯಸನಗಳಿಗೆ ಸಿಕ್ಕುವವನಲ್ಲ. ॥೩೫॥

ಒಂದು ಕೊನೆಯಿಲ್ಲದೆ ಪರಾಧೀನದಲ್ಲಿ ಸೃಷ್ಟಿಯಾಗುವ ಶರೀರಿಗಳಲ್ಲಿ ನಾನು ಮಾತ್ರ ಅಶರೀರಿಯಾಗಿಯೇ ನಿಂತಿರುವೆನು. ಮಹಾವಸ್ತುರೂಪಿಯಾಗಿ, ಸಕಲ ಜಗದ್ವ್ಯಾಪಕನಾಗಿ ನಾಶರಹಿತನಾದ ಪರಮಾತ್ಮವಸ್ತುವೆಂದರೆ ನಾನೇ.॥೩೬॥

ಜಾಗ್ರತ್, ಸ್ವಪ್ನ, ಸುಷುಪ್ತಿಯೆಂಬ ಅವಸ್ಥಾತ್ರಯಗಳಿಗೆ ಸಿಕ್ಕದೆ, ದೇಹೇಂದ್ರಿಯಾದಿಗಳ ಸಂಸರ್ಗವಿಲ್ಲದೇ ಆಕಾಶದಂತೆ ಸರ್ವವ್ಯಾಪಿಯಾಗಿ, ಸಮಸ್ತ ವಸ್ತುಪ್ರಕಾಶಕನಾಗಿ, ಪುರುಷಾತ್ಮಕನಾಗಿರುವ ಈಶ್ವರನೇ ನಾನು. ॥॥೩೭॥

ಯಾರು ನನ್ನನ್ನು ಸರಿಯಾಗಿ ತಿಳಿಯುವರೋ, ಅವರೇ ಈ ಜಗತ್ಸ್ವರೂಪವನ್ನರಿಯುವರು. ಅಜ್ಞಾನಮೋಹಿತರಾದವರು ಪರಾತ್ಪರಸ್ವರೂಪನಾದ ನನ್ನನ್ನೂ ಪ್ರಾಪಂಚಿಕವಿಷಯವನ್ನೂ ಅರಿಯಲಾರರು. ನಿಜವಾದ ಜ್ಞಾನಿಗಳು ನನ್ನನ್ನು ಅನುಸಂಧಾನಮಾಡಿ, ಅದರಿಂದ ಬ್ರಹ್ಮಾನಂದವನ್ನು ಪಡೆದು ಯಾವುದಕ್ಕೂ ಹೆದರುವುದಿಲ್ಲ. ॥೩೮॥

ಶಾಂತಿಂ ಪರಾಂ ಗಚ್ಛತಿ ಚ ನ ಕಾಮೀ ಭವತಿ ಸ್ಥಿರಃ ।
ಬ್ರಹ್ಮ ಮಾಂ ವೇದ ಸ ಬ್ರಹ್ಮ ಮಾಂ ವೇತ್ತ್ಯೇವ ಸುರಾಸುರಾಃ ॥೩೯॥

ಅಸ್ತಿ ಬ್ರಹ್ಮೇತಿ ಮಾಂ ವೇದ ತಸ್ಯಾಹಂ ಮೋಚಕೋಽಸ್ಮಿ ಚ ।
ನಾಂತಃಪ್ರಜ್ಞಶ್ಚ ನ ಬಹಿಃ ಪ್ರಜ್ಞಾನಂ ಬ್ರಹ್ಮ ಚಾಸ್ಮ್ಯಹಂ ॥೪೦॥

ಏಷೋಽಂತರ್ಯಾಮಿ ಚ ಸದಾ ಹ್ಯಮೃತ್ಯುರ್ಮೃತ್ಯುರೂಪತಃ ।
ಅಹಮೇವ ಸದಾ ಬ್ರಹ್ಮ ಸಾಕ್ಷ್ಯಸಾಕ್ಷ್ಯಾದಿವರ್ಜಿತಃ ॥೪೧॥

ಅಯಮಾತ್ಮಾ ಸದಾ ಬ್ರಹ್ಮ ದೇಶಕಾಲಸ್ಥಿತೋಽಪ್ಯಹಂ
ತತ್ತ್ವಮೇತತ್ಸರ್ವಮಸೀತ್ಯಾದಿವಾಕ್ಯೈಕರೂಪತಃ ॥೪೨॥

ಯಾವನು ಕಾಮುಕಾಮಿಯಲ್ಲವೋ, ಅವನೇ ನೈಜವಾದ ಶಾಂತಿಯನ್ನು ಅನುಭವಿಸುವನು. ಮತ್ತಾವುದನ್ನೂ ಅಪೇಕ್ಷಿಸಲಾರನು. ಬ್ರಹ್ಮಸ್ವರೂಪಿಯಾದ ನನ್ನನ್ನು ಯಾರು ಸರಿಯಾಗಿ ಅರಿಯುವರೋ, ಅವರೇ ಬ್ರಹ್ಮಾಭೇದವನ್ನು ಪಡೆದು ಅದ್ವೈತರೂಪವಾದ ಮುಕ್ತಿಯನ್ನು ಹೊಂದುವರು. ॥೩೯॥

ಯಾರು ನನ್ನನ್ನು "ಅಹಂಬ್ರಹ್ಮಾಸ್ಮಿ" ಎಂಬ ಸೂತ್ರದ ಶಾಬ್ದಬೋಧವನ್ನು ಸರಿಯಾಗಿ ತಿಳಿದು, ಅದರಂತೆ ಅನುಸಂಧಾನಮಾಡುವರೋ ಅವರನ್ನು ಮುಕ್ತರನ್ನಾಗಿ ಮಾಡುವುದು ನನ್ನ ಕೆಲಸ. ಅಂತಃಪ್ರಜ್ಞನೂ ವಿಷಯವಾಸನೆಯಿಂದ ಕೂಡಿ, ಒಳಗಿರುವ ಮನ ಇಂದ್ರಿಯದಿಂದ ಸ್ವಾಪ್ನಿಕಪದಾರ್ಥಗಳನ್ನು ಅನುಭವಿಸುವನು. ಬಹಿಃಪ್ರಜ್ಞನು ಇಂದ್ರಿಯಾದಿಗಳ ಸಹಾಯದಿಂದ ಬಾಹ್ಯವಿಷಯಗಳನ್ನು ಅರಿಯುವನು. ನಾನೇ ಪ್ರಜ್ಞಪ್ತಿರೂಪಿಯಾದ ಬ್ರಹ್ಮನು. ಇದನ್ನು ಸರಿಯಾಗಿ ಮೊದಲು ಅರಿಯಬೇಕು. ॥೪೦॥

ಮೃತ್ಯುವಿವರ್ಜಿತನೂ, ಮೃತ್ಯುರೂಪಿಯೂ, ಸರ್ವಾಂತರ್ಯಾಮಿಯೂ ಸಾಕ್ಷಿ ಮತ್ತು ಅಸಾಕ್ಷಿ ಎಂಬ ವಿಕಲ್ಪಗಳಿಗೆ ಅವಕಾಶವಿಲ್ಲದ ಏಕರೂಪಿಯಾದ ಬ್ರಹ್ಮವಸ್ತುವೇ ನಾನು. ॥೪೧॥

ಆತ್ಮನು, ದೇಶಕಾಲಾದಿಗಳಿಂದ ಪರಿಚ್ಛಿನ್ನಚೈತನ್ಯನಾಗಿ ಕಂಡುಬಂದರೂ, ನಿಜವಾಗಿಯೂ ಅಪರಿಚ್ಛಿನ್ನಚೈತನ್ಯಸ್ವರೂಪನೇ. ದೃಶ್ಯಾದೃಶ್ಯರೂಪದಲ್ಲಿರುವ ಆ ಜಗತ್ತೆಲ್ಲವೂ ನಾನೇ. ನೀನೇ ಸಾಕ್ಷಾದ್ಬ್ರಹ್ಮಸ್ವರೂಪಿಯಾಗಿದ್ದೀಯೆ, ಎಂಬ

ಅಹಂ ವಾಕ್ಯೇಷು ಸರ್ವೇಷು ಚಾಹಮೇವಾಸ್ಮಿ ಭಾಸಕಃ ।
ಆನಂದಂ ಪರಮಂ ಜ್ಞಾತ್ವಾ ತರತ್ಯೇವ ಭವಾರ್ಣವಂ ॥೪೩॥

ಉಪಾಸ್ಯಂ ಮಾಮಭಿಜ್ಞಾತ್ವಾ ಶೋಕಮೋಹೌ ತರತ್ಯಪಿ ।
ಯೂಯಂ ಮಾಮೇವ ಜಾನೀಥಾಪ್ಯನ್ಯತ್ಸರ್ವಂ ವೃಥೈವ ಹಿ ॥೪೪॥

ಸತ್ಯಂ ಜ್ಞಾನಮನಂತೋಽಹಂ [1]ಮತ್ಸತ್ತ್ಯಾತ್ಸತ್ಯತಾ ಜಗತ್ ।
ಮತ್ಸತ್ತಯೈವ ಹಿ ಜಡಂ ಚೇತತೇ ವಿವಿಧಂ ಜಗತ್ ॥೪೫॥

---

ತತ್ತ್ವಮಸ್ಯಾದಿಮಹಾವಾಕ್ಯಗಳಿಂದ ಪ್ರತಿಪಾದಿತನಾಗಿರುವವನೂ ನಾನೇ. ||೪೨||

ತತ್ತ್ವಮಸ್ಯಾದಿ ಮಹಾವಾಕ್ಯಾರ್ಥ ಶ್ರವಣಾನಂತರ ಚಿತ್ತಶುದ್ಧಿಯುಳ್ಳವನಿಗೆ "ಅಹಂಬ್ರಹ್ಮಾಸ್ಮಿ" ಎಂಬ ಅಪರೋಕ್ಷಜ್ಞಾನಬರುವುದು. ಇದೇ ಬ್ರಹ್ಮಾದ್ವೈತಸಾಕ್ಷಾತ್ಕಾರ. ಇಲ್ಲಿ ತೋರಿಬರುವ, ಅಸ್ಮಚ್ಛಬ್ದದಿಂದ ಶಾಬ್ದ ಬೋಧವಾಗುವ ಪರಬ್ರಹ್ಮನೆಂಬ ಆತ್ಮವಸ್ತುವು, ನಿರತಿಶಯ ಆನಂದರೂಪನು ಎಂಬುದನ್ನು ಅರಿಯಬೇಕು. ಆತ್ಮಾನಂದರೂಪವಾದ ಬ್ರಹ್ಮಾನುಭವವೇ ಪರಮಸುಖ. ಅಂತಹ ಸುಖ ಪ್ರಾಪ್ತಿಯೇ ಮೋಕ್ಷ. ಬ್ರಹ್ಮನೇ ಆನಂದರೂಪಿಯೂ, ಅನುಭವರೂಪನೂ ಆಗಿರುವುದರಿಂದ, ಆನಂದಾನುಭವವೇ ಬ್ರಹ್ಮಸ್ವರೂಪ. ಈ ರೀತಿಯಾಗಿ ತಿಳಿದವನು ಸಂಸಾರಸಂಬಂಧವಾದ ದುಃಖಗಳನ್ನು ಸುಲಭವಾಗಿ ದಾಟಿ ಮುಕ್ತನಾಗುವನು. ||೪೩||

ಆದ್ದರಿಂದ ನನ್ನನ್ನೇ ಪೂಜ್ಯದೇವತೆಯೆಂದು ತಿಳಿದು ಉಪಾಸನೆ ಮಾಡಿದವನು ಶೋಕ ಮತ್ತು ಮೋಹಗಳನ್ನು ಕಳೆದುಕೊಳ್ಳುವನು. ಆದ್ದರಿಂದ ಎಲೈ ಸಕಲ ದೇವತೆಗಳಿರಾ, ನೀವು ಎಲ್ಲವನ್ನೂ ಬಿಟ್ಟು ನನ್ನ ಸ್ವರೂಪವನ್ನರಿತು ನನ್ನನ್ನೇ ಶರಣುಹೊಂದಿರಿ. ನನ್ನಿಂದ ಬೇರೆಯಾದ ವಸ್ತುವು ಮಿಥ್ಯಾಭೂತವೆಂದು ತಿಳಿಯಿರಿ. ||೪೪||

ಪರಬ್ರಹ್ಮವಸ್ತುವು, ಸತ್ಯ, ಜ್ಞಾನ, ಆನಂದ, ಏತದ್ರೂಪವಾದದ್ದು. ಇದಕ್ಕೆ ಅಂತವಿಲ್ಲ. ಪರಬ್ರಹ್ಮವಸ್ತುವೊಂದು, ಸತ್ ಪದಾರ್ಥವಾದದ್ದರಿಂದ, ಆ ಪರಬ್ರಹ್ಮನ ಸತ್ಯತೆಯಿಂದಲೇ ಜಗತ್ತೂ ಸತ್ಯವಾಗುವುದು. ಜಡವಸ್ತುವೂ ನನ್ನ

---

1 ಅಸತ್ಯಾತ್ಸತ್ಯತಾ ಜಗತ್, ಇತಿ ಪಾಠಾಂತರಂ.

ಮಹಾನಂದಾಂಬುಧೇಸ್ಸರ್ವಂ ಶೀಕರಂ ಜಗದೇವ ಹಿ ।
ರಸೋಽಹಂ ಸರ್ವಭೂತೇಷು ರಸತಾಂ ಜಾನತೇ ತು ಯೇ ॥೪೬॥

ರಸಾಸ್ತೇನಂದಮಾತ್ರಂ ಚ ಜೀವಂತ್ಯೇವ ಸುರಾಸ್ಸದಾ ।
ಕೋ ವಾನ್ಯಃ ಪ್ರಾಣಿತಿ ಸದಾ ಮದಾಕಾಶಂ ವಿನಾ ಸುರಾಃ ॥೪೭॥

ನ ತತ್ರ ಗಚ್ಛತಿ ಮನೋ ನ ವಾಗ್ಗಚ್ಛತಿ ಚೇಂದ್ರಿಯಂ ।
ಪರಮಾತ್ಮಾಹಮೇವಾದ್ಯ ಸ ಏವಾದ್ಯ ಸ ಉ ಶ್ವಕಃ ॥೪೮॥

ಅಸಂಗಸ್ತ್ವರಸಸ್ಪರ್ಶೋಽಹ್ಯಘ್ರಾಣೋ ಗಂಧ ಏವ ಹಿ ।
ಅಪಾಣಿಪಾದಕಾರ್ಯಾದಿಃ ಪಾಯೂಪಸ್ಥಾದಿವರ್ಜಿತಃ ॥೪೯॥

ಪಾರಮಾರ್ಥಿಕ ಸತ್ತೆಯಿಂದಲೇ ಚೈತನ್ಯವನ್ನು ಹೊಂದಿದಂತೆ ಕಾಣುತ್ತಿರುವುದು. ||೪೫||

ಮಹಾನಂದವೆಂಬ ಸಮುದ್ರದ ಒಂದು ಹನಿಯೇ ಈ ಜಗತ್ತಿನ ಆನಂದ. ಸಕಲ ಪಂಚಭೂತಗಳಲ್ಲಿಯೂ, ಸಾರಭೂತವಾದ ರಸರೂಪದಿಂದಿರುವವನು ನಾನೇ. ||೪೬||

ಆ ರಸಾನುಭವದಿಂದಲೇ ಸಕಲ ಜೀವರಾಶಿಗಳೂ ಜೀವಿಗಳಾಗಿರುವುವು. ಆಕಾಶಸ್ವರೂಪನಾದ ನನ್ನನ್ನು ಬಿಟ್ಟು ಯಾವ ಪ್ರಾಣಿಯು ತಾನೇ ಪ್ರಾಣಾಪಾನಾದಿ ಚೇಷ್ಟೆಗಳನ್ನು ಅನುಭವಿಸೀತು ? ||೪೭||

ಆಕಾಶಭಿನ್ನವಾದ ಪ್ರದೇಶದಲ್ಲಿ ಮನಸ್ಸು, ಮಾತು, ಇಂದ್ರಿಯಗಳು, ಈ ಯಾವುವು ತಾನೇ ನಿಲ್ಲಬಲ್ಲವು ? ಒಟ್ಟಿನಲ್ಲಿ ನಾನೇ ಪರಮಾತ್ಮರೂಪಿಯು,—ಇಂದು ನಾಳೆ, ನಿನ್ನೆ ಮೊದಲಾದ ಕಾಲನಿಯಮಕ್ಕೆ ಮೂಲಕಾರಣನಾದವನೂ ನಾನೇ. ||೪೮||

ಸರ್ವಸಂಗ ಪರಿತ್ಯಾಗಿಯು ನಾನು. ಸ್ಪರ್ಶರಸಗಂಧ ಮುಂತಾದ ಭೂತ ಗುಣಗಳೂ ನಾನಲ್ಲ. ಕೈ, ಕಾಲು, ಅವುಗಳ ಕಾರ್ಯ, ಪಾಯು, ಉಪಸ್ಥಾದಿ ಅಂಗ ಪ್ರತ್ಯಂಗಗಳು, ಇವು ಯಾವುವೂ ನಾನಲ್ಲ. ||೪೯||

ಪ್ರಮಾಪ್ರಮೇಯರಹಿತಸ್ತರ್ಕದೂರೋಽಹಮೇವ ಹಿ ।
ಅಹಂ ಜಾನಾಮಿ ಸರ್ವಂ ಹಿ ನ ಮಾಂ ಜಾನಾತಿ ಕಶ್ಚನ ॥೩೦॥

ಪರಾಂಚಿ ಖಾನ್ಯಕೃಣವಂ ತಸ್ಮಾನ್ಮಾಂ ಚ ನ ಪಶ್ಯತಿ ।
ಮತ್ಪ್ರಸಾದಯುತಃ ಕಶ್ಚಿಜ್ಜ್ಞಾನಾತ್ಯೇವ ಹಿ ವಾ ನ ವಾ ॥೩೧॥

ದ್ರಷ್ಟಾಹಂ ದೃಶ್ಯರಹಿತೋ ದರ್ಶನಂ ಚಾಹಮೇವ ಹಿ ।
ಷೋಡಶೋಽಹಂ ಸುರಶ್ರೇಷ್ಠಾ ಶ್ರೋತಾ ಘ್ರಾತಾಹಮೇವ ಹಿ ॥೩೨॥

ಬುದ್ಧೇ ಬೋಧದ್ಧಾ ಮನಶ್ಚಾಪಿ ಪ್ರಾಣಪ್ರಾಣೋಽಹಮೀಶ್ವರಃ ।
ಸರ್ವಾ ಏವ ಕಲಾ ದೇಹೇ ಚೇಂದ್ರಿಯಾಣ್ಯಹಮೇವ ಹಿ ॥೩೩॥

ಸರ್ವೇ ಮಯ್ಯೇವ ಲೀಯಂತೇ ನಾಹಂ ತೇಷು ವ್ಯವಸ್ಥಿತಃ ।
ಏಕ ಏವಾಹಮದ್ವೈತಶ್ಚತುರ್ಥಶ್ಶಿವ ಏವ ಹಿ ॥೩೪॥

ಇದು ಪ್ರಮಾಣ, ಇದು ಪ್ರಮಾ, ಇದು ಪ್ರಮೇಯ, ಎಂದು ವಾದಮಾಡುವುದರಿಂದ ನನ್ನ ಸ್ವರೂಪವು ತಿಳಿಯುವಂತಿಲ್ಲ. ಒಟ್ಟಿನಲ್ಲಿ ಈ ಸಕಲ ಜಗತ್ತನ್ನೂ ನಾನು ನೋಡುವೆನು. ನನ್ನನ್ನು ಮಾತ್ರ ಸರಿಯಾಗಿ ಯಾರೂ ತಿಳಿಯಲಾರರು. ॥೩೦॥

ಅಖಂಡಾಕಾಶ ಸ್ವರೂಪನಾಗಿ ವ್ಯಾಪಕನಾಗಿರುವ ನನ್ನನ್ನು ಯಾವನು ತಾನೇ ನೋಡಬಲ್ಲನು ? ನನ್ನ ಅನುಗ್ರಹಕ್ಕೆ ಪಾತ್ರನಾದ ನನ್ನ ಭಕ್ತನೊಬ್ಬನು ನನ್ನ ಸ್ವರೂಪವನ್ನು ತಿಳಿಯುವನೋ, ತಿಳಿಯನೋ, ಹೇಳಲಾಗುವುದಿಲ್ಲ. ॥೩೧॥

ಲೋಕದಲ್ಲಿ ನೋಡುವವನೂ, ನೋಟ, ನೋಡುವ ವಸ್ತು, ಎಲ್ಲವೂ ನಾನೇ. ಎಲೈ ದೇವತೆಗಳಿರಾ ! ಷೋಡಶಕಲಾಪರಿಪೂರ್ಣನೆನಿಸಿ, ಸಕಲ ಕಲಾಶ್ರಯನಾಗಿ, ಹಾಗೆಯೇ ಕೇಳುವವನೂ, ಘ್ರಾಣಮಾಡುವವನೂ, ತದ್ವಿಷಯಕವಾದ ವಸ್ತುಗಳೂ ನಾನೇ ಆಗಿರುವೆನು. ॥೩೨॥

ಬುದ್ಧಿ, ಬೋಧಕ, ಮನಸ್ಸು, ಅಂತಃಕರಣ, ಪ್ರಾಣ, ಈಶ್ವರ, ಇವೆಲ್ಲವೂ ನಾನೇ. ದೇಹದಲ್ಲಿ ಕಂಡುಬರುವ ಸಕಲ ಇಂದ್ರಿಯಗಳೂ, ಸಕಲ ಕಲೆಗಳೂ ನಾನೇ ಆಗಿರುವೆನು. ॥೩೩॥

ಎಲೈ ದೇವತೆಗಳಿರಾ, ಈ ಚರಾಚರಾತ್ಮಕವಾದ ಜಗತ್ತೆಲ್ಲವೂ ನನ್ನಲ್ಲಿಯೇ

ಮಜ್ಞಂ ಮಲ್ಲಂ ಚ ಮಧನಂ ಜಗದ್ವಿದ್ಧಿ ಸುರಾಸ್ಸದಾ ।
ಭೂಮಾಹಂ ಪರಮಾನಂದೋ ಮಾಂ ನ ಜಾನಾತಿ ಕಶ್ಚನ ॥೫೫॥

ಏಕೋಽಹಂ ಭುವನೇ ಜಡಾಜಡಗತಿಸ್ಸ್ವೈರಂ ಹಿ ನಾನಾಜಗ ।
ನ್ಮಾಸ್ತ್ಯೇವ ಪ್ರತಿಭಾತಿ ಕಿಂಚಿದಪಿ ವೈ ತನ್ಮಾರ್ಗತೃಷ್ಣೋಪಮಮ್ ।
ತೇನಾದ್ರ್ರೋ ನ ಭವೇತ್ ಕ್ಷಮಾ ಸುರಗಣಾ ನಾಸ್ತ್ಯೇವ ಕಿಂಚಿಜ್ಜಗ ।
ತ್ಸರ್ವಂ ಶಂಭುತಯಾ ವಿಭಾತಿ ಸಕಲಂ ಕಸ್ಯ ಸ್ವಿದೇತತ್ಸುರಾಃ ॥೫೬॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಶ್ರುತಿಸಾರನಿರೂಪಣಂ ನಾಮ
ಏಕಪಂಚಾಶೋಽಧ್ಯಾಯಃ

---

ಲೀನವಾಗಿಹೋಗುವುದು. ನಾನು ಮಾತ್ರ ಎಲ್ಲಿಯೂ ಅಡಗುವವನಲ್ಲ. ಜೀವ ಬ್ರಹ್ಮಾಭೇದವನ್ನು ಪ್ರತಿಪಾದಿಸುವ ಅದ್ವೈತತತ್ತ್ವಪ್ರತಿಪಾದನೆಯಂತೆ ನಾನು ಒಬ್ಬನೇ ಪರಬ್ರಹ್ಮವಸ್ತುವು. ಸೂಕ್ಷ್ಮಾದಿ ಶರೀರತ್ರಯಗಳಿಗೆ ಅತಿರಿಕ್ತನಾಗಿರುವ, ಬ್ರಹ್ಮವಸ್ತುವೇ ನಾನು. ||೫೪||

ಹೇ ಸುರರೇ, ಈ ಜಗತ್ತೆಲ್ಲವೂ ನನ್ನಿಂದಲೇ ಹುಟ್ಟುವುದು. ನನ್ನಿಂದಲೇ ಪುಷ್ಟವಾಗಿ ಕೊನೆಗೆ ನನ್ನಲ್ಲಿಯೇ ಲಯವಾಗುವುದು. ಸರ್ವವ್ಯಾಪಿಯಾಗಿ ಆನಂದ ಮಯನಾಗಿರುವವನು ನಾನು. ಅಂತಹ ನನ್ನನ್ನು ಯಾರೂ ಸರಿಯಾಗಿ ಅರಿತವ ರಾಗಿಲ್ಲ. ||೫೫||

ದೇವಶ್ರೇಷ್ಠರೇ, ಈ ಪ್ರಪಂಚದಲ್ಲಿ ಜಡ ಮತ್ತು ಅಜಡಗತಿಯಿಂದ ವರ್ತಿ ಸುವ ನಾನೊಬ್ಬನೇ ಸ್ಥಿರವಾದ ವಸ್ತು. ಉಳಿದ ಈ ಚಿತ್ರವಿಚಿತ್ರವಾದ ಜಗತ್ತೆ ಲ್ಲವೂ ಮೃಗತೃಷ್ಣೆಗೆ ಅಂದರೆ ಬಿಸಿಲ್ಗುದುರೆಗೆ ಸರಿಸಮವಾದದ್ದು. ನೀರಿನಂತೆ ಕಾಣುವ ಬಿಸಿಲ್ಗುದುರೆಯು ಯಾವ ಪದಾರ್ಥವನ್ನೂ ನೀರಿನಂತೆ ನೆನೆಸಲಾರದು. ಮತ್ತು ಪ್ರಮಾತ್ಮಕವಲ್ಲ, ಭ್ರಮಾತ್ಮಕವಾದದ್ದು. ಅದರಂತೆ ಈ ನಿಖಿಲ ಜಗತ್ತು ಕಾರ್ಯಕಾರಿಯಾಗದೆ ಕೇವಲ ಭ್ರಾಂತಿಯಿಂದ ಸ್ಥಿರವಾದದ್ದೆಂದು ತಿಳಿದು ಬರುವುದು. ಎಲೈ ದೇವತೆಗಳಿರಾ, ಒಟ್ಟಿನಲ್ಲಿ ಹೇಳುವುದಾದರೆ, ಈ ಪ್ರಪಂಚವೆಲ್ಲಾ ಶಂಭು ಮಯವಾದದ್ದು ಎಂಬುದೇ ನಿಶ್ಚಿತವಾದ ವಿಷಯ ಎಂದು ಮಹೇಶ್ವರನು ಸಕಲ

ದೇವತೆಗಳಿಗೂ ಶ್ರುತಿಸಾರವನ್ನು ನಿರೂಪಿಸಿದನೆಂದು ಕುಮಾರಸ್ವಾಮಿಯು ಷಣ್ಮಾದಿ ಮಹರ್ಷಿಗಳಿಗೆ ಹೇಳಿದನು. ||೫೬||

ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಶ್ರುತಿಸಾರನಿರೂಪಣವೆಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿಪಂಚಾಶೋಽಧ್ಯಾಯಃ

### ದೇವಾನಾಂಶೋಧನಂ

|| ಈಶ್ವರ ಉವಾಚ ||

**ಸೋಹಂ ನಿತ್ಯೋಪ್ಯನಿತ್ಯಶ್ಚ ಬ್ರಹ್ಮಾ ಬ್ರಹ್ಮಾಹನೋವ ಹಿ ।**
**ಪ್ರಾಂಚೋಽಹಂ ಚೈವ ಪಶ್ಚಾಚ್ಚ ದಕ್ಷಿಣೋದೀಚ ಏವ ಹಿ ॥೧॥**

**ಅಧಶ್ಚೋರ್ಧ್ವಮಹಂ ಲೋಕಾ ದಿಶಶ್ಚ ವಿದಿಶೋಪ್ಯಹಂ ।**
**ಪುಮಾನ್ನಪುಂಸಕಶ್ಚಾಹಂ ಸ್ತ್ರೀಚಾಹಂ ಸರ್ವದೇವತಾಃ ॥೨॥**

**ನೈವ ಸ್ತ್ರೀ ನ ಪುಮಾಂಶ್ಚಾಹಂ ನೈವ ಚಾಹಂ ಸನಾತನಃ ।**
**ಅಶರೀರಶ್ಶರೀರೇಷು ಹ್ಯಶೀರ್ಣಶ್ಶೀರ್ಯಕೇಷ್ವಹಂ ॥೩॥**

---

### ಶ್ರೀಶಿವರಹಸ್ಯದಲ್ಲಿ ಐವತ್ತೆರಡನೆಯ ಅಧ್ಯಾಯ

ಮತ್ತೆ ಶಂಕರನು ದೇವತೆಗಳಿಗೆ ಹೀಗೆ ಉಪದೇಶಿಸಿದನು. " ದೇವತೆಗಳಿರಾ, ಹಿಂದೆ ನಾನು ವಿವರಿಸಿದಂತೆ, ಪರಬ್ರಹ್ಮವಸ್ತುವಾದ ನಾನು ನಿತ್ಯನು. ಆದರೆ ಜಗದ್ರೂಪನಾಗಿ ಪರಿಣಮಿಸಿ ಅನಿತ್ಯವಸ್ತುವೂ ಆಗುವೆನು. ಬ್ರಹ್ಮವಸ್ತುವೂ ನಾನೇ. ಬ್ರಹ್ಮಾತಿರಿಕ್ತವಸ್ತುವಿನಂತೆ ತೋರುವವನೂ ನಾನೇ. ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಈ ಎಲ್ಲಾ ದಿಕ್ಕುಗಳಲ್ಲಿಯೂ ಪ್ರಕಾಶಿಸುವವನೂ ನಾನೇ. ||೧||

ಊರ್ಧ್ವಾಧೋದಿಗ್ಭಾಗಗಳೂ, ಸಕಲ ಲೋಕಗಳೂ, ದಿಕ್ಕುವಿದಿಕ್ಕುಗಳೂ ನಾನೇ. ಸ್ತ್ರೀ, ಪುಮಾನ್, ನಪುಂಸಕ ಭೇದದಿಂದ ವರ್ತಿಸುವವನೂ ನಾನೇ. ||೨||

ವಸ್ತುತಃ ನಾನು ಸ್ತ್ರೀಯೂ ಅಲ್ಲ. ಪುರುಷನೂ ಅಲ್ಲ. ಆದ್ಯಂತರಹಿತನಾದ ಸನಾತನ ವ್ಯಕ್ತಿಯು ನಾನು. ಶರೀರಗಳಲ್ಲಿ ಶರೀರರಹಿತನಾಗಿಯೂ, ನಾಶವಾಗುವ ವಸ್ತುಗಳಲ್ಲಿ ನಾಶರಹಿತನಾಗಿಯೂ ಇರುವೆನು. ||೩||

ಜ್ಯೋತಿಷಾಮಹಮೇವಾಸ್ಮಿ ಚಾತ್ಮಜ್ಯೋತಿಸ್ಸದಾವ್ಯಯಃ ।
ಅನಲಾನಿಲಸೂರ್ಯೇಂದುಭೂತಾನಾಮಂತರಾಸ್ಮ್ಯಹಂ ॥೪॥

ಮಾಂ ನ ಜಾನಂತಿ ಭೂತಾನಿ ಭೂತಾದಿಶ್ಚಾಹಮೇವ ಹಿ ।
ಛಂದಸಾಮಹಮೇವಾದಿರ್ಗಾರ್ಹಪತ್ಯೋಽಹಮೇವ ಹಿ ॥೫॥

ದಕ್ಷಿಣಾಗ್ನ್ಯಾಹವನೀಯಸ್ಸತ್ಯೋಽಹಂ ಗೌರಹಂ ಸುರಾಃ ।
ಗೌರ್ಯಹಂ ವರಿಷ್ಠೋಽಹಂ ಕನಿಷ್ಠೋಽಹಂ ಸನಾತನಃ ॥೬॥

ಋಗ್ಯಜುಸ್ಸಾಮಾಥರ್ವಾಣಿ ಮದ್ಗಿರೋ ಹಿ ಸುರೇಶ್ವರಾಃ ।
ಅಕ್ಷರೋಽಹಂ ಕ್ಷರೋಽಹಂ ಚ ಗುಹ್ಯೋಽಹಂ ಪುಷ್ಕರಂ ತಥಾ ॥೭॥

ಅಣೋರಣೀಯೋಽಸ್ಮಿ ಸುರಾ ಮಹತೋಽಹಂ ಮಹಾಂಸ್ತಥಾ ।
ವಿಶ್ವತಶ್ಚಕ್ಷುರೇವಾಹಂ ವಿಶ್ವತೋ ಬಾಹುರೀಶ್ವರಃ ॥೮॥

---

ಲೋಕದಲ್ಲಿರುವ ಜ್ಯೋತಿಸ್ಸುಗಳಿಗೆಲ್ಲಾ ಆತ್ಮಜ್ಯೋತಿಯಾಗಿರುವೆನು. ಅಗ್ನಿ, ವಾಯು, ಸೂರ್ಯ, ಚಂದ್ರ, ಪಂಚಭೂತಗಳು ಇವುಗಳಲ್ಲೆಲ್ಲಾ ನಾನು ಅಡಗಿರುವೆನು. ||೪||

ಇಷ್ಟಾದರೂ ಯಾವ ಭೂತದ್ರವ್ಯಗಳಿಗೂ ನಾನು ಗೋಚರನಾಗಲಾರೆನು. ಸಕಲ ವಸ್ತುಜಾಲವೂ ನಾನೇ. ವೇದಗಳಿಗೆ ಆದಿಭೂತನೂ ನಾನೇ. ||೫||

ಅಗ್ನಿತ್ರಯಗಳಾದ, ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಇವುಗಳೂ ನಾನೇ. ಸತ್ಯ, ಭೂಮಿ, ಗೌರೀ ಇವರೆಲ್ಲರೂ ನಾನೇ. ಲೋಕದಲ್ಲಿ ಜ್ಯೇಷ್ಠ, ಕನಿಷ್ಠ, ಸನಾತನ, ಈ ಗುಣವಿಶಿಷ್ಟನಾದ ವಸ್ತುಗಳೆಲ್ಲವೂ ನಾನೇ. ||೬||

ದೇವಶ್ರೇಷ್ಠರಿರಾ, ಋಕ್ ಯಜುಸ್, ಸಾಮ, ಅಥರ್ವಣವೆಂಬ ವೇದಚತುಷ್ಟಯಗಳೂ ನನ್ನ ಮಾತುಗಳೇ. ನಾಶರಹಿತನೂ, ನಾಶವಿಶಿಷ್ಟವಸ್ತುವೂ, ಗುಹ್ಯಕರವಾದ ಅಂತರಿಕ್ಷವೂ, ನಾನೇ ಆಗಿರುವೆನು. ||೭||

ಅಣುವಸ್ತುಗಳಲ್ಲಿ ಅಣುರೂಪದಲ್ಲಿಯೂ, ಮಹಾವಸ್ತುಗಳಲ್ಲಿ ಮಹದ್ರೂಪದಿಂದಲೂ, ಸಕಲಲೋಕಗಳಿಗೂ ಚಕ್ಷೂರೂಪದಿಂದಲೂ, ವಿಶ್ವವನ್ನು ಆಕ್ರಮಿಸುವಂತಹ ಬಾಹುಗಳುಳ್ಳವನಾಗಿಯೂ ಇರುವೆನು. ||೮||

ವಿಶ್ವಮೌಲಿರ್ವಿಶ್ವಪಾದಸ್ಸಹಸ್ರಾಕ್ಷಸ್ಸಹಸ್ರಪಾತ್ ।
ದಶಾಂಗುಲಮಿದಂ ಸರ್ವಮತ್ಯತಿಷ್ಠಾಮಿ ಭೋ ಸುರಾಃ ॥೯॥

ಅಮೃತಸ್ಯಾಹಮೀಶಾನಸ್ಸರ್ವೇಷು ಪುರುಷೋಽಂತರಃ ।
ವ್ಯಪೋಹ್ಯ ಶೀರ್ಷಕಪಾಲಂ ಸರ್ವೇಷಾಂ ಸಂಸ್ಥಿತೋಽಸ್ಮ್ಯಹಂ॥೧೦॥

ಏಷೋಽಂತರಾಹಂ ಪುರುಷೋ ಹಿರಣ್ಯಶ್ಮಶ್ರುರೇವ ಹಿ ।
ಮನಸೋಽಹಂ ಜವೀಯಾಂಶ್ಚ ಮಯಾ ವ್ಯಾಪ್ತಮಿದಂ ಜಗತ್ ॥೧೧॥

ಮಯ್ಯೇವ ಲೀಯತೇ ಚಾಂತೇ ಮತ್ತೋಽನ್ಯಂ ನಾಸ್ತಿ ಕಿಂಚನ ।
ಅಪ್ರಾಣೋಽಸ್ಮ್ಯಮನಾಶ್ಶುಭ್ರೋ ನಿರ್ಗತಾಕ್ಷೋಽಹಮೇವ ಹಿ ॥೧೨॥

ವಿಶ್ವವೇ ನನ್ನ ಶಿರಸ್ಸು. ಅಖಂಡಪ್ರಪಂಚವೇ ನನ್ನ ಪಾದ. ಅನಂತವಾದ ಕಣ್ಣುಗಳಿಂದಲೂ, ಪಾದಗಳಿಂದದಲೂ ಕೂಡಿ, ದಶಾಂಗುಲಮಿತವಾದ, ಅಂದರೆ ಉಪಲಕ್ಷಣೆಯಿಂದ ಅಖಂಡ ಜಗನ್ಮಂಡಲವನ್ನೆಲ್ಲಾ ಆಕ್ರಮಿಸಿಕೊಂಡು ನಿಂತಿರುವೆನು. ॥೯॥

ಸರ್ವವಸ್ತುಗಳಲ್ಲಿಯೂ ನಾಶರಹಿತನಾಗಿ, ಲೋಕದೊಡೆಯನೆನಿಸಿರುವ ಪುರುಷಶ್ರೇಷ್ಠನೂ ನಾನೇ. ಆದರೆ ಪ್ರತ್ಯೇಕವಾದ ಶಿರಸ್ಸಾಗಲಿ, ಕಪೋಲಪ್ರದೇಶವಾಗಲಿ ನನಗಿರುವುದಿಲ್ಲ. ಸರ್ವಜಗದ್ವ್ಯಾಪಿಯಾಗಿ ವರ್ತಿಸುತ್ತಿರುವೆನು. ॥೧೦॥

ಹಿರಣ್ಯವರ್ಣದ ಶ್ಮಶ್ರುವನ್ನು (ಮೀಸೆಯನ್ನು) ಧರಿಸಿರುವ ಪುರುಷಶ್ರೇಷ್ಠನೆನಿಸಿ ಜಗತ್ತನ್ನೆಲ್ಲಾ ಆವರಿಸಿ ನಿಂತಿರುವೆನು. ನನ್ನ ವೇಗವು ಮನೋವೇಗಕ್ಕಿಂತ ಅತಿಶಯವಾದದ್ದು. ಈ ಜಗತ್ತೆಲ್ಲಾ ನನ್ನಿಂದ ಆವರಿಸಲ್ಪಟ್ಟಿದ್ದಾಗಿರುವುದು. ॥೧೧॥

ಈ ಜಗತ್ತೆಲ್ಲವೂ ಕೊನೆಯಲ್ಲಿ ನನ್ನಲ್ಲಿಯೇ ಅಡಗಿಹೋಗುವುದು. ಅಂತ್ಯದಲ್ಲಿ ಉಳಿಯುವ ವಸ್ತುವೆಂದರೆ ನಾನೊಬ್ಬನೇ. ಪ್ರಾಣ, ಮನಸ್ಸು, ಕಣ್ಣು ಈ ಅವಯವಗಳಾವುವೂ ನನಗೆ ಪ್ರಧಾನವಲ್ಲ. ಶುಭ್ರವಾದ ಆನಂದಾತ್ಮಕವಾದ ಪರಬ್ರಹ್ಮವಸ್ತುವು ನಾನೇ. ॥೧೨॥

ನ ಪ್ರಜ್ಞೋಽಹಂ ನ ಚಾಪ್ರಜ್ಞೋ ನೋಭಯಪ್ರಜ್ಞ ಏವ ಹಿ ।
ಅಹಂ ಭೂತೇಷು ಸುಪ್ತೇಷು ಜಾಗರ್ಮಿ ಸತತಂ ಸುರಾಃ ॥೧೩॥

ಅಹಮವ್ಯಕ್ತ ಏವೇಶೋ ವ್ಯಕ್ತೋ ಭೂತಹೃದಿ ಸ್ಥಿತಃ ।
ಸ್ಥಾಣುರ್ನಿರ್ಗುಣ ಏವಾಸ್ಮಿ ಕಾರ್ಯಕಾರಣವರ್ಜಿತಃ ॥೧೪॥

ಕ್ಷರಾಕ್ಷರಾದಿರಹಿತಃ ಪರಮಾತ್ಮಾಹಮೇವ ಹಿ ।
ಅಹಂ ಚ ನ ದಿವಾ ರಾತ್ರಿರ್ನ ಸನ್ನಾಸತ್ಸದಾಶಿವಃ ॥೧೫॥

ಆಕಾಶಕೋಶಸ್ಸಂವೇಷ್ಟುಂ ಸುಕರೋ ಯದಿ ಜಾಯತೇ ।
ತದಾ ಮಾಂ ತ್ವನವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥೧೬॥

ವೇದೈಸ್ಸರ್ವೈಶ್ಚ ವೇದ್ಯೋಽಹಂ ವೇದಾಂತೇಷ್ವಹಮಾಸ್ಥಿತಃ ।
ಸ್ವೇ ಮಹಿಮ್ನ್ಯಹಮೇವೈಕೋ ಹ್ಯಹಮೌಪನಿಷತ್ಪರಃ ॥೧೭॥

---

ನಾನು ಪ್ರಜ್ಞನೂ ಅಲ್ಲ. ಪ್ರಜ್ಞಾರಹಿತನೂ ಅಲ್ಲ. ಪ್ರಜ್ಞತ್ವ, ಅಪ್ರಜ್ಞತ್ವ, ಏತದುಭಯರಹಿತನೂ ಅಲ್ಲ. ಸ್ವಪ್ನಾವಸ್ಥೆಯಿಂದಿರುವ ಸಕಲ ವಸ್ತುಗಳಲ್ಲಿಯೂ ಜಾಗ್ರದವಸ್ಥೆಯಿಂದ ವಾಸಮಾಡುವೆನು. ॥೧೩॥

ಸ್ವಯಂ ಅವ್ಯಕ್ತರೂಪಿಯಾಗಿದ್ದರೂ, ಭೂತಗಳ ಹೃದಯದಲ್ಲಿ ಮಾತ್ರ ವ್ಯಕ್ತರೂಪದಿಂದಿರುವೆನು. ಸ್ಥಾಣುವೆನಿಸಿ, ನಿರ್ಗುಣರೂಪದಿಂದ, ಕಾರ್ಯಕಾರಣವಸ್ತುಗಳಾವುವೂ ಅಲ್ಲದೆ ಪ್ರಕಾಶಿಸುತ್ತಿರುವೆನು. ॥೧೪॥

ನಷ್ಟವಾಗುವ ಮತ್ತು ನಷ್ಟವಿಲ್ಲದ ವಸ್ತುರೂಪಿಯೂ ನಾನಲ್ಲ. ರಾತ್ರಿ, ಹಗಲುಗಳ ವ್ಯತ್ಯಾಸವಾಗಲಿ, ಸದಸದ್ವಸ್ತುವಿವೇಚನೆಯಾಗಲಿ ನನ್ನಲ್ಲಿಲ್ಲ. ನಿರ್ಗುಣನಾಗಿ ಸದಾಶಿವನೆಂಬ ಹೆಸರಿನಲ್ಲಿ ಸರ್ವತ್ರ ವ್ಯಾಪಿಸಿರುವೆನು. ॥೧೫॥

ನನ್ನ ಸ್ವರೂಪವನ್ನರಿಯದೆ ಸಂಸಾರ ದುಃಖಗಳನ್ನು ಕಳೆದುಕೊಳ್ಳಲು ಎಂದಿಗೂ ಸಾಧ್ಯವಿಲ್ಲ. ವಿಸ್ತಾರವಾಗಿರುವ ಆಕಾಶಕೋಶವನ್ನು ಒಂದುಕಡೆ ಕಟ್ಟಿ ಹಾಕುವುದು ಹೇಗೆ ಸುಲಭವಲ್ಲವೋ, ಹಾಗೇ ನನ್ನ ಅರಿವಿಲ್ಲದೆ, ಮುಕ್ತನಾಗುವುದು ಸಾಧ್ಯವಿಲ್ಲ. ॥೧೬॥

ಸಕಲ ವೇದಗಳಿಂದಲೂ, ನಾನು ತಿಳಿಯಲ್ಪಡುವವನು. ವೇದಾಂತಗಳಲ್ಲಿ ವಿಸ್ತಾರವಾಗಿ ವರ್ಣಿತವಾಗಿರುವವನು ನಾನು. ನನ್ನದೇ ಆದ ಒಂದು ಮಹಿಮೆ

ವೇದಾದಿಸ್ವರ ಏವಾಹಂ ಪ್ರಣವೋಽಹಂ ಸನಾತನಃ ।
ಪ್ರಣವಾದಿತ್ರಿಮಾತ್ರೋಽಹಂ ಸರ್ವಮಂತ್ರಾತ್ಮಕಸ್ತ್ವಹಂ ॥೧೮॥

ಪಂಚಾಕ್ಷರಮಯಶ್ಚಾಹಂ ಪಂಚಪಾತಕವರ್ಜಿತಃ ।
ನಾಸಂಗೋ ನೈವ ಮೇ ಸಂಗೋಽಪ್ಯಹಂ ಭುವನಮೇವ ಹಿ ॥೧೯॥

ವಿಶ್ವಾತೀತೋ ವಿಶ್ವಧಾಮಾ ವಿಶ್ವಾಧಿಕ ಉಮಾಪತಿಃ ।
ಭವಂತಃ ಪಶವಸ್ಸರ್ವೇ ಭವತಾಂಪತಿರಸ್ಮ್ಯಹಂ ॥೨೦॥

ಮತ್ಪ್ರಸಾದಾದ್ಭವಂತೋ ಹಿ ಮುಕ್ತ್ಯೆಯೇ ಯತತಾಧುನಾ ।
ಮಜ್ಞಾನಂ ವೇದವಾಕ್ಯೋತ್ಥಮನ್ಯಚ್ಛಿಲ್ಪಂ ಸುರೋತ್ತಮಾಃ ॥೨೧॥

ಯಲ್ಲಿ ಅಡಗಿರುವ ನಾನು ಸಕಲ ಉಪನಿಷತ್ತುಗಳಿಗೂ ಸಹ ಅಗೋಚರನೆನಿಸಿರುವೆನು. ॥೧೭॥

ವೇದಗಳಲ್ಲಿ ಕಂಡುಬರುವ ಸ್ವರಗಳಲ್ಲಿ ಆದಿಸ್ವರವೇ ನಾನು. ಸರ್ವಮಂತ್ರಾದಿಭೂತವಾದ ಪ್ರಣವವೇ ನಾನು. ಪ್ರಣವಮಂತ್ರದಲ್ಲಿ ತೋರಿಬರುವ ತ್ರಿಮಾತ್ರಾಕಾಲದ ಸ್ವರವೂ ನನ್ನದೇ. ॥೧೮॥

'ಓಂ ನಮಶ್ಶಿವಾಯ' ಎಂಬ ಪಂಚಾಕ್ಷರಮಂತ್ರಾತ್ಮಕವಾದ ಶಿವಶಕ್ತಿಯು ನನ್ನಲ್ಲಿರುವುದು. ಪಂಚಮಹಾಪಾಪಗಳು ನನ್ನಲ್ಲಿ ಎಂದೂ ಕಂಡುಬರಲಾರವು. ನಾನು ಮತ್ತೊಂದು ವಸ್ತುವಿನಲ್ಲಿ ಸೇರುವವನಲ್ಲ. ಹಾಗೆಯೇ ನನ್ನಲ್ಲಿ ಮತ್ತೊಂದು ವಸ್ತುವೂ ಸೇರಲಾರದು. ಹಾಗಾದರೂ ಈ ಭುವನವೆಲ್ಲಾ ನಾನೇ ಆಗಿರುವೆನು. ॥೧೯॥

ವಿಶ್ವವನ್ನು ಮೀರಿ, ವಿಶ್ವಕ್ಕೆ ಕಾಂತಿಯನ್ನು ಬಿಟ್ಟು, ಲೋಕಕ್ಕೆಲ್ಲಾ ಅಧಿಕನೆನಿಸಿರುವ ಉಮಾಪತಿಯಾದ ನಾನೇ ನಿಮ್ಮೆಲ್ಲರಿಗೂ ಒಡೆಯನಾಗಿರುವೆನು. ನೀವೆಲ್ಲರೂ ಅಜ್ಞಾನಿಗಳು, ಪಶುಸದೃಶರೆನಿಸಿರುವಿರಿ. ॥೨೦॥

ನನ್ನ ಅನುಗ್ರಹವನ್ನು ಪಡೆದು ನೀವೆಲ್ಲರೂ ಈಗ ಮುಕ್ತರಾಗಲು ಯತ್ನಿಸಿರಿ. ವೇದವಾಕ್ಯಗಳಿಂದ ಲಭಿಸಿದ ಜ್ಞಾನವೇ ನನ್ನ ಸಂಬಂಧವಾದ ತಿಳಿವಳಿಕೆ. ತದ್ಭಿನ್ನವಾದ ಜ್ಞಾನವೆಲ್ಲಾ ಕೃತ್ರಿಮವಾದದ್ದು. ॥೨೧॥

ಬ್ರಹ್ಮೈವಾಹಂ ಸಂಸರಾಮಿ ವಿದ್ಯಯಾಽವಿದ್ಯಯಾ ಸುರಾಃ ।
ನಿರ್ಮುಕ್ತೋ ಮೋಚಯಾಮ್ಯೇವ ಸರ್ವಂ ಸಾಸುರಮಾನುಷಂ ॥೨೨॥

ಶ್ರವಣಾಯಾಪಿ ಲಭ್ಯೋಽಹಂ ಕರ್ಮಭಿರ್ನ ಸುರಾಸುರಾಃ ।
ಶೃಣ್ವಂತೋಽಪಿ ಯತಿಶ್ರೇಷ್ಠಾ ನ ಮಾಂ ವಿಂದಂತಿ ಕೇಚನ ॥೨೩॥

ಅತೋಽನ್ಯದಾರ್ತಂ ವಿಬುಧಾಸ್ಸರ್ವಂ ಜಗದಿದಂ ಧ್ರುವಂ ।
ಕಥಂ ಭವಂತೋ ಮನ್ಯಂತೇ ತದ್ಬ್ರುವಂತು ಮಮಾಗ್ರತಃ ॥೨೪॥

ವಿಭೂತಿರ್ಮಮ ಯಾ ಪ್ರೋಕ್ತಾ ಶ್ರದ್ಧಯಾ ವೇದ ನಾನ್ಯಥಾ ।
ನಾವಿಶ್ವಸ್ತಚೇತಸೇ ದೇಯಂ ಜ್ಞಾನಂ ವೇದಾಂತವಾಕ್ಯಜಂ ॥೨೫॥

ದತ್ವಾ ನರಕಮಾಪ್ನೋತಿ ಸಹ ಪೂರ್ವಪಿತಾಮಹೈಃ ।
ಸರ್ವೋಪನಿಷದಾಂ ಸಾರಂ ಮಯೈತತ್ಸಮುದಾಹೃತಂ ॥೨೬॥

---

ವಿದ್ಯಾ (ಜ್ಞಾನ) ರೂಪಿಯಾದ ಬ್ರಹ್ಮನೇ ನಾನಾದರೂ, ಅವಿದ್ಯಾಸಂಬಂಧದಿಂದ ಸಂಸಾರಿಯಂತೆ ನಟಿಸುವೆನು. ಅವಿದ್ಯಾ ನಿವೃತ್ತಿಯಾದಮೇಲೆ, ಸಕಲ ದೇವ ರಾಕ್ಷಸರನ್ನೂ ಮುಕ್ತರನ್ನಾಗಿ ಮಾಡುವ ಶಕ್ತಿಯೂ ನನ್ನಲ್ಲಿರುವುದು. ||೨೨||

ನನ್ನ ವಿಷಯಕವಾದ ಮಹಿಮಾಶ್ರವಣಮಾತ್ರದಿಂದಲೇ, ನಾನು ಸುಲಭನಾಗಿ ಗೋಚರಿಸುವೆನು. ಆಗ ಯಾವ ಕರ್ಮಾದಿಗಳ ಆಚರಣೆಯೂ ಅನವಶ್ಯಕ. ಆದರೆ ಎಷ್ಟೋಜನ ಯತಿಗಳು ನನ್ನ ವಿಷಯಕವಾದ ಜ್ಞಾನವನ್ನು ಹೊಂದಿದ್ದರೂ, ಅವರು ನನ್ನ ನಿಜಸ್ವರೂಪವನ್ನು ಮಾತ್ರ ಇನ್ನೂ ಅರಿತಿಲ್ಲ. ||೨೩||

ಆದ್ದರಿಂದ ಎಲೈ ದೇವತೆಗಳಿರಾ, ಈ ಜಗತ್ತೆಲ್ಲವೂ ನನಗಿಂತ ಬೇರೆಯಾಗಿ, ದುಃಖವಿಶಿಷ್ಟವಾಗಿ ಸ್ಥಿರವಾಗಿರುವಂತೆ ತೋರಿಬರುತ್ತಿರುವುದು. ಇಷ್ಟು ಕೇಳಿದ ನೀವು ಈಗ ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ತಿಳಿಸುವವರಾಗಿರಿ. ||೨೪||

ಇಲ್ಲಿನವರೆಗೆ ನಾನು ವೇದಾಂತವಾಕ್ಯಜನ್ಯವಾದ ಸಕಲ ದಿವ್ಯರಹಸ್ಯವನ್ನು ನಿಮಗೆ ಉಪದೇಶಿಸಿರುವೆನು. ಇದನ್ನು ವಿಶ್ವಾಸವಿಲ್ಲದ ನಾಸ್ತಿಕರಿಗೆ ಎಂದೂ ಹೇಳಬಾರದು. ||೨೫||

ಹಾಗೆ ಅಪಾತ್ರರಿಗೆ ನನ್ನಿಂದ ಪ್ರೋಕ್ತವಾದ ಈ ಉಪನಿಷತ್ಸಾರವನ್ನು ಉಪದೇಶಿಸಿದ್ದೇ ಆದರೆ, ಅವರು ಅವರ ಪೂರ್ವಪಿತಾಮಹಾದಿಗಳೊಂದಿಗೆ ನರಕ ದುಃಖವನ್ನು ಅನುಭವಿಸುವರು. ||೨೬||

ಭವದ್ಭಿಸ್ಸಮ್ಯಗಧುನಾ ಹೃದಯಗ್ರಂಥಿಭೇದನಂ ।
ನಾಶಿಷ್ಯಾಯಾಪ್ಯಭಕ್ತಾಯ ನಾಪುತ್ರಾಯೇದಮೇವ ಹಿ ॥೨೭॥

ದದ್ಯಾದೇತಚ್ಛಾಂಭವೇಭ್ಯೋ ಯತಿಭ್ಯಸ್ಸುರಸತ್ತಮಾಃ ।
ದೇಯಮೇತತ್ಸುರಶ್ರೇಷ್ಠಾಸ್ತಸ್ಯ ಮುಕ್ತಿರಯತ್ನತಃ ॥೨೮॥

ಮತ್ಪ್ರಸಾದೇನ ಸರ್ವೇಷಾಂ ಮುಕ್ತಯಸ್ಸ್ಯುಃ ಕರೇ ಸ್ಥಿತಾಃ ।
ಶಿರೋವ್ರತಂ ಯೈಶ್ಚರಿತಂ ದೇಯಂ ತೇಷಾಮಿದಂ ಸುರಾಃ ॥೨೯॥

ಶಿರೋವ್ರತಮಿದಂ ದೇವಾಃ ಪುರಾ ಚೀರ್ಣಂ ಮಯೈವ ಹಿ ।
ಅಗ್ನಿರಿತ್ಯಾದಿಭಿರ್ಭಸ್ಮ ಗೃಹೀತ್ವಾಂಗಾನಿ ಸಂಸ್ಪೃಶೇತ್ ॥೩೦॥

ವ್ರತಮೇತದಿದಂ ದೇವಾಃ ಪಶುಪಾಶವಿಮೋಕ್ಷದಂ ।
ಶ್ರದ್ಧಯಾ ತಪಸಾ ದೇವಾ ಮಮ ಲಿಂಗಾರ್ಚನೇನ ಹಿ ॥೩೧॥

---

ಆದ್ದರಿಂದ, ಮನಸ್ಸಿನ ಅಜ್ಞಾನವನ್ನು ಕಿತ್ತೊಗೆಯುವ ಈ ರಹಸ್ಯವನ್ನು ನೀವು, ಸರಿಯಾದ ಶಿಷ್ಯವೃತ್ತಿಮಾಡದೆ, ಭಕ್ತನಲ್ಲದ ಮತ್ತು ಅಪುತ್ರವಂತನಿಗೆ ಎಂದೂ ವಿವರಿಸಬೇಡಿರಿ. ||೨೭||

ಇದನ್ನು ಶಂಭುಭಕ್ತರೂ, ಸಂನ್ಯಾಸಿಗಳೂ, ತಿಳಿಯಬೇಕು. ಆದ್ದರಿಂದ ಎಲೈ ದೇವತೆಗಳಿರಾ, ಅಂತಹವರಿಗೆ ಇದನ್ನು ಉಪದೇಶಮಾಡಿರಿ. ಅದರಿಂದ ನಿಮಗೂ ಮೋಕ್ಷಪ್ರಾಪ್ತಿಯಾಗುವುದು. ||೨೮||

ಅದನ್ನು ತಿಳಿದವರು ನಿಜವಾಗಿಯೂ ನನ್ನ ಪ್ರಸಾದದಿಂದ ಮುಕ್ತರಾಗುವರು. ಯಾರು ನಾನು ಹೇಳಿದಂತೆ ಶಿರೋವ್ರತವನ್ನು ಆಚರಿಸುವರೋ ಅವರಿಗೆ ಇದನ್ನು ಬೋಧಿಸಬೇಕು. ||೨೯||

ದೇವತೆಗಳಿರಾ, ಹಿಂದೆ ಈ ಶಿರೋವ್ರತವನ್ನು ನಾನೇ ಆಚರಿಸಿರುವೆನು. ಅಗ್ನಿರಿತಿಭಸ್ಮ ಎಂಬ ಮಂತ್ರಪುರಶ್ಚರಣೆಯಿಂದ ಭಸ್ಮವನ್ನು ತೆಗೆದುಕೊಂಡು ಲೇಪನ ಮಾಡಿಕೊಳ್ಳಬೇಕು. ||೩೦||

ದೇವತೆಗಳಿರಾ, ಪಶು, ಪಾಶ, ಇವುಗಳನ್ನು ಬಿಡಿಸತಕ್ಕದ್ದು ಈವ್ರತ. ಶೈವ ಧರ್ಮದಲ್ಲಿ ಲೋಕವು ಪತಿ, ಪಶು, ಪಾಶ, ಎಂದು ಸಾಮಾನ್ಯವಾಗಿ ಮೂರು ವಿಧ

ಭಸ್ಮತ್ರಿಪುಂಡ್ರಕಂಠ್ಯೈ(ಕೋಟ್ಯೈ)ಶ್ಚ ಪಾಪಾದ್ಭಿನ್ನೋ ಭವೇನ್ನರಃ ।
ಪಂಚಾಕ್ಷರಾವರ್ತನೈಶ್ಚ ಪಂಚಪಾಪಪ್ರಣಾಶನಂ ॥೩೨॥

ರುದ್ರಾಧ್ಯಾಯಜಪಶ್ಚೈವ ಬಿಲ್ವಮೂಲೇ ವಿಶೇಷತಃ ।
ಮಮ ಕ್ಷೇತ್ರೇಷು ನಿಯುತಂ ವಾಸಾಚ್ಚ ಸುರಸತ್ತಮಾಃ ॥೩೩॥

ಅವಿಮುಕ್ತನಿವಾಸಾಚ್ಚ ತತ್ರೈವಾಂತೇ ತನುಕ್ಷಯಾತ್ ।
ಉಮಾಸಹಾಯಮನ್ಮೂರ್ತಿಧ್ಯಾನೇನೈವ ಸುರಾಸ್ತಥಾ ॥೩೪॥

ಏತದೇವ ಪರಂ ಜ್ಞಾನಂ ಲಭ್ಯತೇ ಮತ್ಪ್ರಸಾದತಃ ।
ನಾನ್ಯಥಾ ಲಭ್ಯತೇ ಜ್ಞಾನಂ ಕರ್ಮೋಪಾಸನತಸ್ಸುರಾಃ ॥೩೫॥

ಅದರಲ್ಲಿ ಪಶುಗಳಿಗೆ (ಜೀವಿಗಳಿಗೆ) ಪಾಶವನ್ನು (ಬಂಧನವನ್ನು) ತಪ್ಪಿಸುವ ಶಕ್ತಿ ಪತಿಗೆ ಮಾತ್ರವಿರುವುದು. ಆದ್ದರಿಂದ, ಜನರು ತಮ್ಮ ಪಾಪಗಳನ್ನು ಕಳೆದು ಕೊಳ್ಳಲು, ಶ್ರದ್ಧೆ, ತಪಸ್ಸು, ಲಿಂಗಾರ್ಚನೆ ಇವುಗಳನ್ನು ಆಚರಿಸಬೇಕು. ॥೩೧॥

ಭಸ್ಮತ್ರಿಪುಂಡ್ರವನ್ನು ಹಣೆಯಲ್ಲಿಯೂ ಕಂಠದಲ್ಲಿಯೂ ಧರಿಸಿ, ಶಿವಪಂಚಾಕ್ಷರೀ ಮಂತ್ರವನ್ನು ಪುನರಾವೃತ್ತಿ ಮಾಡುತ್ತಿರುವುದರಿಂದ ಮನುಷ್ಯರು ಪಂಚ ಪ್ರಕಾರವಾದ ಮಹಾಪಾಪಗಳನ್ನೂ ಕಳೆದುಕೊಂಡು ಮುಕ್ತಿಗೆ ಅರ್ಹರಾಗುವರು. ॥೩೨॥

ಬಿಲ್ವವೃಕ್ಷದ ಮೂಲದಲ್ಲಿ ರುದ್ರಾಧ್ಯಾಯವನ್ನು ಜಪಿಸುತ್ತಾ, ಯಾರು ಸರ್ವದಾ ನನ್ನ ಕ್ಷೇತ್ರಗಳಲ್ಲಿ ವಾಸಮಾಡುವರೋ ಅವರು ಪುಣ್ಯಶಾಲಿಗಳೆನಿಸುವರು. ॥೩೩॥

ಮತ್ತು ಅವಿಮುಕ್ತಕ್ಷೇತ್ರವೆನಿಸಿದ ವಾರಾಣಸಿಯಲ್ಲಿ ವಾಸಮಾಡುತ್ತಾ, ಅಲ್ಲಿ ದೇಹತ್ಯಾಗ ಮಾಡಿದವರೂ, ಹಾಗೆಯೇ ಉಮಾಪತಿಯಾದ ನನ್ನ ಮೂರ್ತಿಯನ್ನು ಧ್ಯಾನಿಸುತ್ತಿರುವವರೂ ಮುಕ್ತರೆನಿಸುವರು. ॥೩೪॥

ದೇವತೆಗಳಿರಾ, ನಾನು ಇಲ್ಲಿನವರೆಗೆ ಉಪದೇಶಿಸಿದ ಜ್ಞಾನವೇ ದಿವ್ಯಜ್ಞಾನ. ಈ ಜ್ಞಾನವು ಪೂರ್ವಜನ್ಮದ ಸುಕೃತಫಲದಿಂದ ಲಭಿಸುವುದೇ ಹೊರತು ಅನ್ಯಥಾ ದೊರೆಯಲಾರದು. ॥೩೫॥

ಇದಮುಖಿಲರಹಸ್ಯಂ ವೇದಜಾಲೋತ್ಥಸಾರಂ
ಕಥಿತಮಿದಮಶೇಷಾಜ್ಞಾನನಾಶೈಕಹೇತುಂ ।
ಹೃದಿ ಸದಯಮುದಯಂ ಭೇದನಂ ಜ್ಞಾನಮಾದ್ಯಂ
ಜಗತಿ ನ ಹಿ ವಿಧೇಯಂ ಮೂಢಮರ್ತ್ಯೇಷು ದೇವಾಃ ॥೩೬॥

ಭವಶತಜನಿನಾಶಂ ಮೋಕ್ಷಮಾರ್ಗಪ್ರದೀಪಂ
ಹ್ಯಪಿ ದುರಿತಶತೋತ್ಥೈಃ ಪಾಪತಾಪೈರ್ವಿಹೀನಃ ।
ಮಮ ವರದಸುಪೂಜಾಧ್ಯಾನತಃ ಪ್ರಾಪ್ಯಮೇವಂ
ಗುರುಜನವರಬೋಧೈರ್ವೇದವಾಕ್ಯೈರ್ದುರಾಪಂ ॥೩೭॥

ಕಿಂ ವೀರ್ಯಂ ಭವತಾಂ ಸುರಾ ಹರಿಹರಾ ಪದ್ಮಾಸನಸ್ಸೇಂದ್ರಕಾ ।
ಸ್ಸೂರ್ಯೇಂದೂ ಹ್ಯನಿಲಾನಲಾಶ್ಚ ಮರುತೋ ವಿಶ್ವೇಽಶ್ವಿನೌ ಬ್ರೂತ ಮೇ ।
ವಸ್ವಾದಿತ್ಯಗಣಾ ಋಭೂಮರುಗಣಾ ಯೂಯಂ ಕುಬೇರಾದಯ ।
ಸ್ತತ್ಪಶ್ಯಾಮಿ ಬಲಾಬಲಂ ಮಮ ಪುರಸ್ಸಂದರ್ಶಯಂತ್ವಾದರಾತ್ ॥೩೮॥

---

ನಿರ್ಜರರೇ, ಇಲ್ಲಿಯವರೆಗೂ, ವೇದವಾಕ್ಯಗಳಲ್ಲಿ ತೋರಿಬರುವ ಅಜ್ಞಾನ ನಾಶಕವಾದ ರಹಸ್ಯಾಂಶವನ್ನೆಲ್ಲಾ ವಿವರಿಸಿ ಹೇಳಿರುವೆನು. ಇದು ಬಹು ಮುಖ್ಯವಾದ ಅಂಶವು. ಇದನ್ನು ನೀವು ಮನಸ್ಸಿನಲ್ಲಿ ಅನುಸಂಧಾನಮಾಡಿರಿ. ಅಲ್ಲದೆ ಅಜ್ಞಾನಿಗಳಾದ ಜನರಿಗೆ ಎಂದೂ ಇದನ್ನು ಬೋಧಿಸಬೇಡಿರಿ. ॥೩೬॥

ಮನುಷ್ಯನು ಎಷ್ಟೇ ಸತ್ಕರ್ಮಗಳನ್ನಾಚರಿಸಿ, ಅನೇಕ ಪಾಪಗಳನ್ನೆಲ್ಲಾ ಕಳೆದುಕೊಂಡಿದ್ದರೂ, ಈ ವಾಕ್ಯರಹಸ್ಯವನ್ನು ಕೇಳುವುದರಿಂದ ಆತನು ಮತ್ತೆ ಭೂಲೋಕದಲ್ಲಿ ಜನ್ಮವೆತ್ತಿ ಹುಟ್ಟುವುದನ್ನು ಕಳೆದುಕೊಳ್ಳುವನು. ಅಲ್ಲದೆ ಇದು ಮೋಕ್ಷಮಾರ್ಗಕ್ಕೆ ದಾರಿಯಂತಿರುವುದು. ಇದನ್ನು ಅರಿಯಲು ಮೊದಲು ನನ್ನನ್ನು ಸದ್ಭಕ್ತಿಯಿಂದಾರಾಧಿಸಿ, ಗುರುಜನರಿಂದ ಉಪದೇಶವನ್ನು ಪಡೆಯಬೇಕು. ॥೩೭॥

ಎಲೈ ದೇವತೆಗಳಿರಾ, ಹರಿಹರರೇ, ಬ್ರಹ್ಮೇಂದ್ರಾದಿಗಳೇ, ಸೂರ್ಯಚಂದ್ರರೇ, ವಾಯ್ವಗ್ನಿಗಳೇ, ಮರುದ್ಗಣಗಳೇ, ವಿಶ್ವೇದೇವತೆಗಳಿರಾ, ಅಶ್ವಿನೀ ದೇವತೆಯರಿರಾ, ವಸು, ಆದಿತ್ಯ, ಋಭು, ಮರುದ್ಗಣ, ಕುಬೇರ ಮುಂತಾದ ದೇವತಾಶ್ರೇಷ್ಠರಿರಾ, ಈಗ ನಿಮ್ಮ ನಿಮ್ಮ ಶಕ್ತಿಸಾಹಸಗಳನ್ನು ನನ್ನ ಎದುರಿನಲ್ಲಿ ಹೇಳಿರಿ. ಕೇಳುವೆನು. ಎಂದು ಪರಮೇಶ್ವರನು ಸರ್ವರಿಗೂ ಆಜ್ಞಾಪಿಸಿದನು. ॥೩೮॥

|| ಸ್ಕಂದ ಉವಾಚ ||

ಇತ್ಯುಕ್ತಂ ತ್ರಿದಶೇಶ್ವರಾ ಹರಿಹರಾಶ್ರುತ್ವಾ ವಚಶ್ಶಾಂಕರಂ ।
ದೇವಾಗ್ರೇ ಮಹಿಮಾನಮುತ್ತಮಮಹೋ ಪ್ರಾಕಟ್ಯಮಾಷುರ್ವೃತಾಃ ।
ಗರ್ವೋರೀಕೃತಮಾನಸಾಸ್ಸುರಗಣಾಃ ಪ್ರೋಚುರ್ಹಿ ನತ್ವಾ ಶಿವಂ ।
ಸ್ವಂ ಸ್ವಂ ಕಾರ್ಯಮಥಾಧಿಪತ್ಯಜನಕಂ ಶೃಣ್ವಂತು ತದ್ವಾಕ್ಯಜಂ ॥೩೯॥

|| ಬ್ರಹ್ಮಾ ಉವಾಚ ||

ಸೃಜಾಮಿ ವಿವಿಧಂ ಜಗತ್ಸುರನರಾದಿಗಂಧರ್ವಕಂ ।
ಸಮುದ್ರಗಿರಿಗಹ್ವರಂ ನದನದೀವನಂ ಚಾಪ್ಯಹಂ ।
ನ ಮತ್ಸಮಸುರಾದ್ಯಕಃ ಪ್ರತಿವದಾಮಿ ಶಂಭೋ ತವ ।
ಪ್ರಸಾದಸುಮುಖೇ ಮುಖೇ ವಿಹಿತವೇದಜಾಲೋಸ್ಮ್ಯಹಂ ॥೪೦॥

|| ವಿಷ್ಣುರುವಾಚ ||

ಅಹಂ ಹಿ ದೈತ್ಯಪ್ರವರಾನನೇಕಾನ್
ನಿಕೃತ್ತಚಕ್ರಾರವಿದಾರಿತಾಜೌ ।

ಹೀಗೆ ಅಪ್ಪಣೆಮಾಡಿದ ಶಂಕರನ ಮಾತುಗಳನ್ನು ಕೇಳಿ ಬ್ರಹ್ಮ, ವಿಷ್ಣುವೇ ಮೊದಲಾದ ಸಕಲ ದೇವತೆಗಳೂ, ಅಹಂಕಾರವಿಶಿಷ್ಟರಾಗಿ ತಮ್ಮ ತಮ್ಮ ಪರಾಕ್ರಮ ಗಳನ್ನೂ, ತಾವು ಮಾಡುವ ಲೋಕಸಂಬಂಧವಾದ ಕಾರ್ಯಗಳನ್ನೂ ಕ್ರಮವಾಗಿ ವಿವರಿಸುತ್ತಾ ಬಂದರು. ||೩೯||

ಶಂಕರನೇ, ನಾನು ಸಕಲ ಸುರ, ನರ ಗಂಧರ್ವ ಮುಂತಾದ ಪ್ರಾಣಿವರ್ಗ ವನ್ನೆಲ್ಲಾ ಸೃಷ್ಟಿಮಾಡುವೆನು. ಸಮುದ್ರ, ಗಿರಿ, ಕಾಡು, ನದೀ, ನದ, ವನ ಮುಂತಾದ ಪ್ರಜೋಪಯುಕ್ತವಾದ ಪ್ರದೇಶಗಳನ್ನೆಲ್ಲಾ ನಿರ್ಮಾಣಮಾಡುವೆನು. ಅಷ್ಟೂ ಅಲ್ಲದೆ ಪ್ರಸಾದಪೂರಿತವಾದ ವದನದಲ್ಲಿ ಸಕಲ ವೇದಗಳನ್ನೂ ಇಟ್ಟು ಕೊಂಡಿರುವೆನು. ಇಷ್ಟು ಶೌರ್ಯವುಳ್ಳವರು ನನ್ನಂತೆ ಮತ್ತಾರಿರುವರು? ಎಂದು ಬ್ರಹ್ಮನು ಹೇಳಿದನು. ||೪೦||

ಮಹೇಶ್ವರನೇ, ನಾನು ಯುದ್ಧದಲ್ಲಿ ಅನೇಕ ದುಷ್ಟರಾಕ್ಷಸರನ್ನೆಲ್ಲಾ ನನ್ನ ಚಕ್ರದ ಅಲುಗಿನಿಂದ ಕತ್ತರಿಸಿ ದೇವತೆಗಳನ್ನು ರಕ್ಷಿಸಿದೆನು. ಅಲ್ಲದೆ ಈ ಚರಾಚರಾ

ಚರಾಚರಂ ವಿಶ್ವಮಿದಂ ಹಿ ಪಾಲಯೇ
ನ ಮತ್ಸಮಃ ಕಶ್ಚಿದಿತಿ ಪ್ರಭೋರ್ಮತಃ ॥೪೧॥

॥ ರುದ್ರ ಉವಾಚ ॥

ಮಚ್ಛೂಲಮೂಲವರಕೋಟಿವಿಲಗ್ನಧಾರಾ ।
ಚ್ಛಿನ್ನಂ ತಥಾಂತೇ ಪ್ರಲಯಾಧಿಕೋಽಬ್ಧಿಃ ।
ಚರಾಚರಂ ವಿಶ್ವಮಿದಂ ಮಮಾಸ್ಯಗಂ ।
ಫಲಾಲಿವಚ್ಚರ್ವಯಾಮಿಾದಮಿಷ್ಟಂ ॥೪೨॥

॥ ಇಂದ್ರ ಉವಾಚ ॥

ತ್ರಿವಿಷ್ಟಪನಿವಿಷ್ಟಿತೋ ಮದಕರೀಂದ್ರಕುಂಭಸ್ಥಿತ ।
ಸ್ಸುರೇಂದ್ರವಲಯಾವೃತಃ ಪ್ರಕಟರತ್ನಮೌಲಿಸ್ಫುರನ್
ಪ್ರಪಾದತಲಪಂಕಜಃ ಕುಲಿಶಪಾಣಿರಿಂದ್ರೋಸ್ಮ್ಯಹಂ ॥೪೩॥

ಸವೃತ್ರಮುರಜಂಭಕಪ್ರಮುಖವೈರಿಮನ್ಯುಃ ಪ್ರಭುಃ ।
ಪ್ರತೀತವರಸೋಮಪಾ ನ ಹಿ ಕದಾಚಿದನ್ಯಸ್ಸುರಃ ॥೪೪॥

ತ್ಮಕವಾದ ಜಗತ್ತನ್ನೆಲ್ಲಾ ರಕ್ಷಿಸುತ್ತಿರುವೆನು. ಇಷ್ಟು ಸಾಮರ್ಥ್ಯವುಳ್ಳ ದೇವತೆಯು ನನ್ನನ್ನು ಬಿಟ್ಟು ಮತ್ತಾರಿರುವನು ? ಎಂದು ವಿಷ್ಣುವು ಹೇಳಿಕೊಂಡನು. ॥೪೧॥

ದೇವದೇವನೇ, ನನ್ನ ತ್ರಿಶೂಲದ ತುದಿಯ ಬಲದಿಂದ ಈ ಚರಾಚರಾತ್ಮಕವಾದ ವಿಶ್ವವನ್ನೆಲ್ಲಾ ಧ್ವಂಸಮಾಡಿಬಿಡುವೆನು. ನನ್ನ ಬಾಯಿಯಿಂದ ಈ ವಿಶ್ವವನ್ನೆಲ್ಲಾ ನುಂಗಿಬಿಡುವೆನು. ಫಲಗಳ ರಾಶಿಯನ್ನು ಭಕ್ಷಿಸಿದಂತೆ ಈ ಪ್ರಪಂಚವನ್ನೆಲ್ಲಾ ಕಬಳಿಸುವೆನು. ಎಂದು ರುದ್ರನು ಉದ್ಘೋಷಿಸಿದನು. ॥೪೨॥

ಅನಂತರ ಇಂದ್ರನು "ಮಹೇಶ್ವರನೇ, ನಾನು ಸ್ವರ್ಗದಲ್ಲಿ ವಾಸಿಸುತ್ತಾ ಐರಾವತದಮೇಲೆ ಕುಳಿತು ದೇವತೆಗಳಿಂದ ಸುತ್ತುವರಿಯಲ್ಪಟ್ಟು, ರತ್ನಮಯವಾದ ಕಿರೀಟವನ್ನು ಧರಿಸಿ, ಪದ್ಮರೇಖೆಯಿಂದೊಪ್ಪುವ ಪಾದವುಳ್ಳವನಾಗಿಯೂ, ವಜ್ರಾಯುಧದಿಂದ ರಂಜಿಸುವ ಹಸ್ತವುಳ್ಳವನಾಗಿಯೂ, ಇರುವೆನು. ವೃತ್ರಾಸುರ, ಜ್ಯಂಭಕಾಸುರ, ಮುರಾಸುರ ಮುಂತಾದ ರಾಕ್ಷಸಶ್ರೇಷ್ಠರನ್ನೆಲ್ಲಾ ನಾಶಮಾಡಿ, ಸೋಮಪಾನ

|| ವಾಯುರುವಾಚ ||

ಮಮಾನಿಲಚಲಾಚಲಾ ನದನದೀನಗಾಃ ಕಾಮಗಾ ।
ವಿಲೋಲತರಮರ್ಣವಾಃ ಪ್ರತಿಭವಂತಿ ಲೋಕಾಖಿಲಾಃ ।
ಮಹಾದ್ರುಮಕುಲಾವಲೀಪ್ರಪತನೋರುವಾಯುಸ್ಸದಾ ।
ಸದೇವಮರುತಾಂ ಸುರೈರ್ನರವರಾದಿದೇಹಸ್ಥಿತಃ ॥೪೫॥

|| ಸೂರ್ಯ ಉವಾಚ ||

ಪ್ರಚಂಡ(ಕ)ತರಮಂಡಲೋ ಮಮ ಮಯೂಖಜಾಲೈರ್ಜಗ ।
ತ್ಪಯೋಧರಪಯಃ ಕಣೈರತಿಸುವೃಷ್ಟವೃಷ್ಟ್ಯುತ್ಥಿತೈಃ ।
ದಿನೋದಯದಿನಾಂತಿಮೋ ಪ್ರಥಿತಬೀಜಧಾನ್ಯಾದಿಭಿ ।
ರ್ಜಗತ್ಪರಿಪುಷಾಮಿ ವೈ ಸಕಲಮರ್ಚಿರಾದೇಃ ಪಥಾ ॥೪೬॥

ಮಾಡುತ್ತಾ ವಿಹರಿಸುವೆನು. ನನ್ನಷ್ಟು ಶೂರನಾದ ದೇವತೆಯು ಮತ್ತಾರಿರುವನು" ಎಂದು ಹೇಳಿದನು. ||||೪೩-೪೪||

ಆನಂತರ ವಾಯುವು ಶಂಕರನೊಡನೆ, ತಾನು ತನ್ನ ವೇಗದಿಂದ, ಸಮಸ್ತ ಪರ್ವತಗಳನ್ನೂ ನದೀನದಗಳನ್ನೂ ಅಲ್ಲಾಡಿಸುವೆನೆಂದೂ, ಸಕಲ ಸಮುದ್ರಗಳನ್ನೂ ಅಲ್ಲೋಲಕಲ್ಲೋಲ ಮಾಡುವೆನೆಂದೂ, ದೊಡ್ಡದೊಡ್ಡ ಮರಗಳ ಗುಂಪುಗಳನ್ನೆಲ್ಲಾ ಉರುಳಿಸುವೆನೆಂದೂ, ನರಸುರಾಸುರಾದಿಯಾದ ಸಕಲ ಭೂತಗಳಲ್ಲಿಯೂ ಸಂಚರಿಸುತ್ತಾ ಅವರನ್ನು ಚೇತನಗೊಳಿಸುವೆನೆಂದೂ ತನ್ನ ಪರಾಕ್ರಮವನ್ನು ಬಹುವಾಗಿ ಹೊಗಳಿಕೊಂಡನು. ||೪೫||

ಸ್ವಾಮಿಯೇ, ನಾನು ಪ್ರಚಂಡಕರವಾದ ಕಿರಣಜಾಲಗಳಿಂದ, ಮೇಘವನ್ನುಂಟುಮಾಡಿ, ಅದರಿಂದ ಲೋಕಗಳಿಗೆ ದೃಷ್ಟಿಯನ್ನು ಕಲ್ಪಿಸಿ, ಅದರಿಂದ ಧಾನ್ಯಾದಿಗಳನ್ನು ಜನರಿಗೆ ಒದಗಿಸಿ, ತನ್ಮೂಲಕ ಲೋಕಗಳನ್ನೆಲ್ಲಾ ಕಲ್ಪಿಸುವೆನು. ಅಲ್ಲದೆ ಪ್ರಾತಃಸಂಧ್ಯಾಕಾಲಗಳನ್ನು ಕಲ್ಪಿಸಿ, ಕಾಲನಿಯಾಮಕನಾಗಿ ವ್ಯೋಮಮಾರ್ಗದಲ್ಲಿ ಸಂಚರಿಸುತ್ತಿರುವೆನು," ಎಂದು ಸೂರ್ಯದೇವನು ಶಂಭುವಿನಲ್ಲಿ ವಿಜ್ಞಾಪಿಸಿಕೊಂಡನು. ||೪೬||

|| ಅಗ್ನಿರುವಾಚ ||

**ಶಿಖಾಶತವಿದೀಪಿತಸ್ಸುರಗಣೇಷು ತೃಪ್ತಿಪ್ರದೋ ।**
**ಮುಖಾದಿಷು ಸುಸಂಸ್ಥಿತಃ ಪಿತೃಗಣೇಷು ಕವ್ಯಪ್ರದಃ ।**
**ಮಹಾರ್ಣವಮುಖೇ ಸ್ಥಿತೋ ಮಮ ಶಿಖಾಸುಪಕ್ವಂ ರಸಂ ।**
**ಪವಿತ್ರಿತಜಗತ್ತ್ರಯಸ್ತವ ಚ ಫಾಲನೇತ್ರೋಽಸ್ಮ್ಯಹಂ ॥೪೭॥**

|| ಯಮ ಉವಾಚ ||

**ಯಮೋ ಹ್ಯಘವತಾಮಹಂ ನರಕವರ್ಗಗರ್ವಾಪಹಃ ।**
**ಪ್ರಚಂಡತರದಂಡಧೃಕ್ ಸಮುದ್ಯಗಸ್ಮಿ ಸರ್ವತ್ರ ವೈ ।**
**ಮಮೋತ್ತಮಭಟಾರವೈರ್ಜಗತಿ ಜಾಗತಾಃ ಪಾತಕಾಃ ।**
**ನ ಸಂತಿ ಭಯಭೀತಿತಸ್ತವ ಶಿವಾಂಘ್ರಿದತ್ತೇಕ್ಷಣಃ ॥೪೮॥**

ದೇವತೆಗಳನ್ನುದ್ದೇಶಿಸಿ ಮಾಡುವ ಸತ್ರಾದಿಗಳಲ್ಲಿ ನಾನು ಶಿಖಾಶತಪರಿವೃತನಾಗಿ ಪ್ರಜ್ವಲಿಸಿ, ಅವರು ಕೊಟ್ಟ ಹವ್ಯಗಳನ್ನು ದೇವತೆಗಳಿಗೂ, ಕವ್ಯಗಳನ್ನು ಪಿತೃಗಳಿಗೂ, ಒದಗಿಸಿ ಅವರನ್ನು ತೃಪ್ತಿಪಡಿಸುವೆನು. ಅಲ್ಲದೆ ಸಮುದ್ರಮಧ್ಯದಲ್ಲಿ ಬಡಬಾಗ್ನಿ ರೂಪದಿಂದಿದ್ದು, ನನ್ನ ಜ್ವಾಲೆಯಿಂದ ರಸವನ್ನೆಲ್ಲಾ ಪಕ್ವವನ್ನಾಗಿ ಮಾಡಿ, ಜಗತ್ತ್ರಯವನ್ನೆಲ್ಲಾ ಪವಿತ್ರಗೊಳಿಸುವೆನು. ಮತ್ತು ಶಂಕರನೇ, ನಿನ್ನ ಹಣೆಯಲ್ಲಿ ನಾನು ನೇತ್ರರೂಪದಿಂದ ವಾಸಮಾಡುತ್ತಿರುವೆನು. ಇದೇ ನನ್ನ ಸ್ವಶಕ್ತಿ, ಎಂದು ಅಗ್ನಿಯು ತನ್ನ ಸಾಮರ್ಥ್ಯವನ್ನು ನಿರೂಪಿಸಿಕೊಂಡನು. ||೪೭||

ಹಾಗೆಯೇ ಯಮನು "ದೇವದೇವನೇ, ನಾನು ಭೂಲೋಕದಲ್ಲಿ ಪಾಪಿಷ್ಠರಾಗಿ ಪಾಪವನ್ನು ಗಳಿಸಿದವರಿಗೆ ಅವರವರ ಯೋಗ್ಯತಾನುಸಾರವಾದ ಶಿಕ್ಷೆಗಳನ್ನು ವಿಧಿಸಿ ಅವರ ಗರ್ವವನ್ನೆಲ್ಲಾ ಹೋಗಲಾಡಿಸುವೆನು. ಪ್ರಚಂಡವಾದ ಯಮದಂಡವನ್ನು ಧರಿಸಿ, ನಿಷ್ಪಕ್ಷಪಾತಬುದ್ಧಿಯಿಂದ ದಂಡವನ್ನು ವಿಧಿಸುವೆನು. ನನ್ನ ಶೂರರಾದ ಯಮಭಟರಿಂದ ಪಾಪಿಷ್ಠರನ್ನು ಹೆದರಿಸಿ, ಅವರನ್ನು ಮುಂದೆ ಪಾಪಕಾರ್ಯಗಳಿಗೆ ತೊಡಗದಂತೆ ಮಾಡುತ್ತಾ, ಸರ್ವದಾ ನಿನ್ನ ಪಾದಧ್ಯಾನದಿಂದಲೇ ಕಾಲಕಳೆಯುತ್ತಿರುವೆನು" ಎಂದು ತನ್ನ ಶಕ್ತಿಯನ್ನು ವಿವರಿಸಿ ಹೇಳಿದನು. ||೪೮||

ಧನೈಶ್ಚ ಧನವರ್ಜಿತಾನ್ ಪರಿಪುಷ್ಣಾಮಿ ತ್ವತ್ಪ್ರೇರಿತ ।
ಸ್ತ್ವಪಾಬ್ಜಪದಮಿತ್ರತಾಮುಪಗತೋಽಸ್ಮಿ ಯಕ್ಷಾಧಿಪಃ ।
ಸಮುಚ್ಛ್ವಲಿತವರ್ಣಕಃ ಪ್ರಥಿತಗೀತಕಾಷ್ಠಾಧಿಪಃ ।
ಕಿಮುತ್ತರಮಿದಂ ಮಮ ಪ್ರವಣಮೇತದೇವಂ ಮನಃ ॥೪೯॥

ಸೋಽಮೋಽಹಂ ಸರಸೀರುಹಾಲಿಮಲಿನೀಮುತ್ಫುಲ್ಲನೇ ಮಿತ್ರಕ ।
ಸ್ತ್ವನ್ಮೌಲಿಸ್ಫುರದಂಬರೇ ಮಧುರಿಮಾಕಾಂತಿರ್ಜಟಾಜೂಟಗಃ ।
ಪುಷ್ಣಾಮ್ಯೋಷಧಿಜಾಲಮೀಶ್ವರತವಾದ್ಯಾಹಂ ಪ್ರಕಾಶಾಸ್ಪದೋ ।
ನೇತ್ರಂ ತೇದ್ಯ ಚ ವಾಮಮೀಶ್ವರ ದಯಾಪಾತ್ರಂ ಪ್ರಶಾಧ್ಯದ್ಯ ಮಾಂ॥೫೦॥

ಸ್ವಾಮಿಯೇ, ನಾನು ಧನಾಧಿಪನಾಗಿ, ನಿನ್ನ ಆಜ್ಞೆಯನ್ನು ಪಡೆದು ದರಿದ್ರರನ್ನು ಧನಿಕರನ್ನಾಗಿ ಮಾಡುತ್ತಿರುವೆನು. ಯಕ್ಷರಿಗೆಲ್ಲಾ ರಾಜನೆನಿಸಿ, ಅತಿಶಯವಾದ ಕಾಂತಿಯಿಂದ ಶೋಭಿಸುತ್ತಾ, ಗೀತವಾದ್ಯಾದಿ ಅಷ್ಟವಿಧವಾದ ಗೀತಗಳಿಗೆ ಅಧಿಪನೆನಿಸಿ, ಪ್ರಶಸ್ತವಾದ ಈ ಉತ್ತರದಿಕ್ಕಿನಲ್ಲಿಯೇ ಸ್ಥಿರಮನಸ್ಸಿನಿಂದ ವಾಸಿಸುತ್ತಾ, ನಿನ್ನ ಪಾದಕಮಲಕ್ಕೆ ಸೂರ್ಯನಂತೆ ಹೊಳೆಯುತ್ತಾ, ನಿನ್ನನ್ನೇ ಧ್ಯಾನಿಸುತ್ತಿರುವೆನು" ಎಂದು ಕುಬೇರನು ಹೇಳಿಕೊಂಡನು. ||೪೯||

" ಪರಶಿವನೇ, ನಾನು ಸೂರ್ಯನಿಂದ ಅರಳಿಸಲ್ಪಟ್ಟ ಕಮಲಗಳಲ್ಲಿ ಹಾರಾಡುವ ಕಪ್ಪು ದುಂಬಿಗಳಿಂದ ಕೊಳಕಾಗಿರುವ ಪ್ರದೇಶಗಳನ್ನೆಲ್ಲಾ ಶುಭ್ರವಾದದ್ದನ್ನಾಗಿ ಮಾಡುವೆನು. ಅಂದರೆ ಕಮಲಗಳನ್ನು ಮುಚ್ಚಿಸಿ ಭ್ರಮರಗಳ ಓಡಾಟವನ್ನು ನಿಲ್ಲಿಸುವೆನು. ಅಲ್ಲದೆ ನಿನ್ನ ಮೌಲಿಪ್ರದೇಶದಲ್ಲಿಯೂ, ಅಂತರಿಕ್ಷಭಾಗದಲ್ಲಿಯೂ, ನನ್ನ ಮಧುರವಾದ ಕಾಂತಿಯನ್ನು ಹರಡಿ ಪ್ರಕಾಶಗೊಳಿಸುವೆನು ನಿನ್ನ ಜಟಾಜೂಟದಲ್ಲಿಯೇ ಸರ್ವದಾ ನೆಲಸಿರುವೆನು. ಓಷಧೀಶನೆನಿಸಿ, ಸಕಲ ವನಸ್ಪತಿಗಳಿಗೂ ಸಾರವನ್ನು ಕೊಟ್ಟು ಅದರಿಂದ ಲೋಕೋಪಕಾರಮಾಡುವೆನು. ಮತ್ತು ನಿನ್ನ ಎಡಗಣ್ಣಾಗಿ ನಿಂತು ಅತಿಶಯವಾದ ನಿನ್ನ ದಯೆಗೆ ಪಾತ್ರನೆನಿಸಿ ಕೊಂಡಿರುವೆನು. ಇಂತಹ ನನ್ನನ್ನು ಸರ್ವದಾ ರಕ್ಷಿಸು'' ಎಂದು ಚಂದ್ರನು ಪ್ರಾರ್ಥಿಸಿಕೊಂಡನು. ||೫೦||

|| ವರುಣ ಉವಾಚ ||

ಅಪಾಂ ಪತಿರ್ನದೀನದಪ್ರವರನೀರಪಾರಾಬ್ಧಿಕ ।
ಸ್ಸಮುಲ್ಲಸಿತಕೇತನಸ್ಸ್ಫುರದಪಾರಗಂಗಾಪತಿಃ ៖
ಅಪುಣ್ಯಜನಪಾಶಕೃದ್ಗಣವರೈಶ್ಚ ಸಂಸೇವಿತ ।
ಸ್ತವಪ್ರಪದಪೂಜಕೋ ಭವಹರಸ್ತದೇವಾಸ್ತು ನೋ ॥೫೦॥

|| ಸರ್ವದೇವಾ ಊಚುಃ ||

ವಿಶ್ವೇಽಶ್ವಿನೌ ಸಮರುತಸ್ಸರ್ವ ಏವ ।
ವಯಂ ಸಹೇಂದ್ರೇಣ ಪಿಬಾಮ ಸೋಮಂ ।
ತವಾಜ್ಞಯಾ ಜಗತಾಂ ಪಾಲನೇರತಾ ।
ವಿಭೋ ಪ್ರಮಥಾಧಿನಾಥ ॥೫೨॥

|| ಸ್ಕಂದ ಉವಾಚ ||

ಇತಿ ಸುರಗಣವಚನಂ ನಿಶಮ್ಯ ಶಂಭುಃ ।
ಪ್ರಣತಾಮರಭೂರುಹೋಽಭ್ಯುವಾಚ ದೇವಾನ್ ।

---

ವರುಣನು ತನ್ನ ವಿಷಯವನ್ನು ಹೀಗೆ ಹೇಳಿಕೊಂಡನು—"ಶಂಕರನೇ, ನಾನು ಲೋಕದಲ್ಲಿ ಪ್ರವಹಿಸುವ ನದೀನದಾದಿ ಜಲಕ್ಷೇತ್ರಗಳಿಗೆಲ್ಲಾ ನೀರನ್ನು ಒದಗಿಸುವ ಜಲನಿಧಿಯಾಗಿರುವೆನು. ಪ್ರಕಾಶಮಾನವಾದ ಧ್ವಜವುಳ್ಳವನಾಗಿ, ಗಂಗಾದಿ ಸಕಲನದಿಗಳಿಗೂ ಅಧಿಪನೆನಿಸಿ, ಪಾಪಿಷ್ಠರಿಗೆ ಉಪಯೋಗಿಸುವ ಪಾಶಾಯುಧಗಳನ್ನು ಕೈಯಲ್ಲಿ ಹಿಡಿದಿರುವ ಅನೇಕ ದೂತರಿಂದ ಆವೃತನಾಗಿರುವೆನು. ವಿಶೇಷವಾಗಿ ನಿನ್ನ ಪಾದಾಗ್ರವನ್ನೇ ಧ್ಯಾನಿಸುತ್ತಾ, ಭವದುಃಖಗಳನ್ನು ನಿವಾರಿಸುತ್ತಲಿರುವೆನು. ಇಂತಹ ನನ್ನನ್ನು ರಕ್ಷಿಸು." ||೫೦||

ಪ್ರಮಥಗಣಗಳಿಗೆ ಒಡೆಯನಾದ ಮಹೇಶ್ವರನೇ, ವಿಶ್ವದೇವತೆಗಳೇ ಮೊದಲಾದ ನಾವೆಲ್ಲರೂ ದೇವೇಂದ್ರನೊಡಗೂಡಿ, ಜನರು ಮಾಡುವ ಯಾಗಗಳಲ್ಲಿ ಪಾತ್ರವಹಿಸಿ ಸೋಮಪಾನಮಾಡುವೆವು. ನಿನ್ನ ಅಪ್ಪಣೆಯಂತೆ ಲೋಕರಕ್ಷಕರಾಗುವೆವು. ಸ್ವಾಮಿಯೇ, ಇದೇ ನಮ್ಮ ಉದ್ಯೋಗ, ಎಂದು ಸಕಲ ದೇವತೆಗಳೂ ಹೇಳಿಕೊಂಡರು. ||೫೨||

ಹೀಗೆ ಸಕಲ ದೇವತೆಗಳೂ ತಮ್ಮ ತಮ್ಮ ಶಕ್ತಿಸಾಮರ್ಥ್ಯಗಳನ್ನು ವಿವರಿಸಿ

ತದವಿನಯಜಾತವಾಕ್ಯಹರ್ಷಃ ।
ಪ್ರಸವಿಾಕ್ಷ್ಯೈವ ವಚೋಪ್ಯುದಾರರೂಪಂ ॥೫೩॥

ಏತನ್ಮೇ ತೃಣಕಾಕೃತಿಶ್ಚ ಪುರುಷಸ್ಸಂಕಲ್ಪಜಃ ಕಲ್ಪಿತ ।
ಸ್ತಸ್ಮಿನ್ ವೋ ಮಹಿಮಾರಸಂ ಸುರವರಾಸ್ಸಂಚೋದಯಂತು ದ್ರುತಂ ।
ತತ್ಪಶ್ಯಾಮಿ ಭವತ್ಪ್ರಸಾದಮಖಿಲಂ ದೇವಾಸ್ತರಂತು ದ್ರುತಂ ।
ಇತ್ಯುಕ್ತ್ವಾ ಜಗದೀಶ್ವರೋಯುಮಯಾ ಶೀಘ್ರಂ ತಿರೋಧತ್ತ ವೈ॥೫೪॥

ವಿಷ್ಣುಬ್ರಹ್ಮಹರಾಮರೇಶ್ವರಯಮಾ ವಾಯ್ವಗ್ನಯಃ ಸೂರ್ಯಕಾ ।
ಶ್ಚಂದ್ರೇಶಾನವಸುರ್ವರುಣಕಾ ವಿತ್ತೇಶದಿಕ್ಪಾಲಕಾಃ ।
ತಸ್ಮಿಂಸ್ತಾರ್ಣನರೇ ಸ್ವಕಾಯುಧವರೈಶ್ಶಕ್ತಿಭಿರೀಶಾಸ್ತದಾ ।
ನೋ ಕಿಂಚಿತ್ಪ್ರವಿಚಾಲಿತುಂ ತ್ವಥ ಭವನ್ನೀಶಾ ಅನೀಶಾಸ್ತದಾ ॥೫೫॥

ಪರಮೇಶ್ವರನಿಗೆ ವಂದಿಸಿ ನಿಂತುಕೊಂಡರು. ಅವರ ಗರ್ವವಿಶಿಷ್ಟವಾದ ಮಾತುಗಳನ್ನು ಕೇಳಿ ಶಂಕರನು ಮುಂದೆ ಹೇಳುವಂತೆ ಉದಾರವಾದ ಮಾತನ್ನಾಡಿದನು. ॥೫೩॥

ಎಲೈ ದೇವತೆಗಳಿರಾ, ನಾನು ಈಗ ತೃಣದಂತಿರುವ ಒಬ್ಬ ಪುರುಷನನ್ನು ಸಂಕಲ್ಪದಿಂದ ಸೃಷ್ಟಿಮಾಡಿ ನಿಲ್ಲಿಸುವೆನು. ಅವನಲ್ಲಿ ನೀವು ನಿಮ್ಮ ಸಾಮರ್ಥ್ಯವನ್ನೆಲ್ಲಾ ತೋರ್ಪಡಿಸಿ, ಅಲ್ಲಾಡಿಸಿರಿ. ನಿಮ್ಮ ಶಕ್ತಿಯನ್ನು ನಾನು ನೋಡುವೆನು, ಎಂದು ಹೇಳುತ್ತಾ ಪರಶಿವನು ಪಾರ್ವತಿಯೊಡನೆ ತತ್ಕ್ಷಣವೇ ಮಾಯವಾದನು.

ಆಗ ವಿಷ್ಣು, ಬ್ರಹ್ಮ, ಇಂದ್ರ, ಯಮ, ವಾಯು, ಅಗ್ನಿ, ಸೂರ್ಯ, ಚಂದ್ರ, ಈಶಾನ, ವಸು, ವರುಣ, ಕುಬೇರ, ದಿಕ್ಪಾಲಕರು ಮೊದಲಾದ ದೇವತೆಗಳೆಲ್ಲಾ ತಮ್ಮ ತಮ್ಮ ಆಯುಧಗಳಿಂದಲೂ, ಶಕ್ತಿಯಿಂದಲೂ ಆ ತೃಣಾತ್ಮಕನಾದ ಪುರುಷನನ್ನು ಅಲ್ಲಾಡಿಸಲು ಪ್ರಯತ್ನಿಸಿದರು. ಏನುಮಾಡಿದರೂ ಆ ತೃಣಪುರುಷನು ಅಲ್ಲಾಡಲಿಲ್ಲ. ಆ ಭಾಗದಲ್ಲಿ ದೇವತೆಗಳೆಲ್ಲರೂ ಅಸಮರ್ಥರೆನಿಸಿದರು. ॥೫೫॥

ದೇವ್ಯಾ ಚಾಪಿ ಸಮನ್ವಿತಂ ಗುಣಗಣೈರುದ್ದಂಡಭಕ್ತಿಪ್ರಭಾ ।
ಶ್ಚಾನನ್ರೋತ್ತಮಶೇಖರಾಸ್ಸುರಗಣಾ ಭಕ್ತ್ಯಾ ಪ್ರಪನ್ನಾ ಹರಂ ।
ಸನ್ಮ್ಯಕ್ತ್ತೌಷ್ಟುವುರಬ್ಧಿಜಾತತನಯಾನಾಥಾದಿಕಾಸ್ಸರ್ವಶೋ ।
ವಿಶ್ವೇಶಂ ಭುವನೇಶ್ವರಂ ತ್ರಿಜಗತಾರಾಧ್ಯಂ ಮಹೇಶಂ ಶಿವಂ ॥೫೬॥

ಸ್ರಷ್ಟುಂ ಪಾತುಮಥಾತ್ತುಮಪ್ಯತಿಬಲಾದ್ದಗ್ಧುಂ ಚ ಸಂಶೋಷಿತುಂ ।
ಬದ್ಧುಂ ಚಾಲಯಿತುಂ ಚ ದಂಡಮಖಿಲಂ ತತ್ಪ್ಲಾವಿತುಂ ವಾ ಜಲೇ ।
ಭಾಗ್ಯೈಃ ಪೂರಯಿತುಂ ಚ ಸೋಮಜಕರೈರ್ನೈಶಾಸ್ತತಸ್ತೇ ಸುರಾ ।
ಲಜ್ಜಾನಮ್ರಮುಖಾ ಮಹೇಶಚರಣಂ ಭಕ್ತ್ಯಾ ಪ್ರಪನ್ನಾಸ್ತದಾ ॥೫೭॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ದೇವಾನಾಂ ಶೋಧನಂ ನಾಮ
ದ್ವಿಪಂಚಾಶೋಽಧ್ಯಾಯಃ

---

ಒಡನೆಯೇ, ಲಕ್ಷ್ಮೀರಮಣನೇ ಮೊದಲಾದ ಸಕಲ ದೇವತೆಗಳೂ, ಶಿವಭಕ್ತಿ ಭರಿತರಾಗಿ, ತಮ್ಮ ಶಿರಸ್ಸುಗಳನ್ನು ಬಗ್ಗಿಸಿಕೊಂಡು, ವಿಶ್ವೇಶ್ವರನೂ, ಭುವನೇಶ್ವರನೂ, ತ್ರಿಜಗತ್ಪೂಜ್ಯನೂ, ಪಾರ್ವತೀಪತಿಯೂ ಆದ ಮಹೇಶ್ವರನನ್ನು ವಿಧವಿಧವಾಗಿ ಸ್ತುತಿಸಿ ಶಂಕರನನ್ನು ತೃಪ್ತಿಗೊಳಿಸಿದರು. ||೫೬||

ಸೃಷ್ಟಿಮಾಡುವುದು, ರಕ್ಷಿಸುವುದು, ನಾಶಮಾಡುವುದು, ಲೋಕವನ್ನು ಸುಡುವುದು, ಒಣಗಿಸುವುದು, ಬಂಧಿಸುವುದು, ಚಲಿಸುವುದು, ಶಿಕ್ಷೆಮಾಡುವುದು, ನೀರಿನಲ್ಲಿ ಮುಳುಗಿಸುವುದು, ಭಕ್ತರನ್ನು ಐಶ್ವರ್ಯದಿಂದ ಉದ್ಧರಿಸುವುದು, ಈ ಕಾರ್ಯಗಳೆಲ್ಲವೂ ನಮ್ಮಿಂದ ಸಾಧ್ಯವಾಗಲಾರವು. ನಮ್ಮ ಅಸಾಮರ್ಥ್ಯಕ್ಕೆ ನಾವೇ ಲಜ್ಜಿತರಾಗುವೆವು ಎಂದು ಹೇಳುತ್ತಾ ಸಕಲ ದೇವತೆಗಳೂ ಮಹೇಶ್ವರನ ಪಾದವನ್ನೇ ಧ್ಯಾನಿಸುತ್ತಾ ಪ್ರಯಾಣಮಾಡಿದರು. ||೫೭||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಪ್ರಥಮಾಂಶಾಂತರ್ಗತವಾದ ದೇವತಾಪರೀಕ್ಷೆಯೆಂಬ
ಐವತ್ತೆರಡನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಶ್ರೀಶಿವರಹಸ್ಯೇ

## ತ್ರಿಪಂಚಾಶೋಽಧ್ಯಾಯಃ

### ದೇವಕೃತದೇವೀಸ್ತುತಿಃ

॥ ಜೈಗೀಷವ್ಯ ಉವಾಚ ॥

ಅತ್ಯದ್ಭುತಕಥಾಶ್ರಾವಿ ಚರಿತಂ ಶಂಕರಸ್ಯ ಚ ।
ತಿರೋಧಾನಂ ಗತೇ ದೇವೇ ಕಿಂ ಚಕ್ರುಸ್ಸುರಸತ್ತಮಾಃ ॥೧॥

ಶಿಖಿಧ್ವಜ ನಮಸ್ತೇಽಸ್ತು ತನ್ಮೇ ವಿಸ್ತರತೋ ವದ ।
ನ ಹಿ ತೃಪ್ಯಾಮಿ ತ್ವದ್ವಕ್ತ್ರಸುಧಾನಿಷ್ಯಂದಧಾರಯಾ ॥೨॥

ಪುನಃ ಪುನಶ್ಚ ಶ್ರವಣೇ ಭೂಯಸೀಚ್ಛಾ ಪ್ರವರ್ತತೇ ॥೩॥

---

## ಶ್ರೀಶಿವರಹಸ್ಯದಲ್ಲಿ ಐವತ್ತುಮೂರನೆಯ ಅಧ್ಯಾಯ

ಶಂಕರಕಥಾಕುತೂಹಲಿಗಳಾದ ಜೈಗೀಷವ್ಯಾದಿಮಹರ್ಷಿಗಳು, ಮತ್ತೆ ಕುಮಾರಸ್ವಾಮಿಯನ್ನು ಕುರಿತು—"ಸ್ವಾಮಿ, ತಾವು ಇಲ್ಲಿನವರೆಗೂ ಆಶ್ಚರ್ಯಪರಿಪೂರ್ಣವಾದ ಶಂಕರಕಥೆಯನ್ನು ವಿಸ್ತಾರವಾಗಿ ಹೇಳಿರುವಿರಿ. ಮಹೇಶ್ವರನು ಮಾಯವಾದ ಮೇಲೆ ಮುಂದೆ ದೇವತೆಗಳು ಮಾಡಿದುದೇನು ? ॥೧॥

ಕುಮಾರಸ್ವಾಮಿಯೇ, ನಿನ್ನ ಮುಖಕಮಲದಿಂದ ಹೊರಟ ಶಿವಕಥಾಮೃತ ಪ್ರವಾಹಪಾನದಿಂದ ನಮಗೆ ಇನ್ನೂ ತೃಪ್ತಿಯಾಗಿಲ್ಲ. ಮತ್ತೂ ಮತ್ತೂ ಕೇಳಬೇಕೆಂಬ ಕುತೂಹಲವು ಅಧಿಕವಾಗಿರುವುದು. ಶಿಖಿಧ್ವಜನೇ, ದಯೆಯಿಂದ ವಿಸ್ತರಿಸಿ ಹೇಳು" ಎಂದು ಪ್ರಾರ್ಥಿಸಲು, ॥೨-೩॥

|| ಸೂತ ಉವಾಚ ||

ಇತ್ಯೇತದ್ವಚನಂತ ಶ್ರುತ್ವಾ ಶಾಂಭವಸ್ಯ ಸ ಷಣ್ಮುಖಃ ।
ಶೃಣ್ವತಾಂ ಗಣವೃಂದಾನಾಂ ದೇವಾನಾಂ ತು ಮುನೀಶ್ವರಂ ||೪||

ಸಂಬೋಧ್ಯ ಪ್ರಾಹ ತಾನ್ವಿಪ್ರಾನ್ ದೇವಸ್ಯ ಚರಿತಂ ತದಾ ||೫||

|| ಕುಮಾರ ಉವಾಚ ||

ಶೃಣುಷ್ವ ಚರಿತೋದಾರಂ ಪರಮಂ ಧೂರ್ಜಟೇರ್ಮುನೇ ।
ತತಸ್ತೇ ಬ್ರಹ್ಮವಿಷ್ಣ್ವಾದ್ಯಾಸ್ಸೇಂದ್ರಾಸ್ಸರ್ವೇ ಮರುದ್ಗಣಾಃ ||೬||

|| ದೇವಾ ಊಚುಃ ||

ಸೂರ್ಯಚಂದ್ರಾಸ್ಸವರುಣಾಃ ಕರುಣಾಸಾರವಿಗ್ರಹಾಂ ।
ತುಷ್ಟುವುರ್ಜಗದಂಬಾಂ ತಾಮುಮಾಂ ಶೋಭಿತಭೂಷಣಾಂ ।
ಕೃತಾಂಜಲಿಪುಟಾಸ್ಸರ್ವೇ ಧ್ಯಾಯಂತಸ್ತೇ ಶಿವಾಂ ತದಾ ||೮||

ಅಯಿ ಗಿರಿನಂದಿನಿ ನಂದಿತನೋದಿನಿ ।
ವಿಶ್ವವಿನೋದಿನಿ ನಂದಿನುತೇ ।

---

ಶಂಭುಭಕ್ತನಾದ ಜೈಗೀಷವ್ಯಮಹಾಮುನಿಯ ಮಾತುಗಳನ್ನು ಕೇಳಿದ ಷಣ್ಮುಖಸ್ವಾಮಿಯು ಶಿವಕಥಾಶ್ರವಣಾಸಕ್ತರಾಗಿ ಕುಳಿತಿದ್ದ ಸಕಲ ಗಣದೇವತೆಗಳಿಗೂ ತಿಳಿಯುವಂತೆ ಜೈಗೀಷವ್ಯಮಹಾಮುನಿಯನ್ನು ಕುರಿತು ಮುಂದಿನ ಕಥೆಯನ್ನು ಹೇಳಲಾರಂಭಿಸಿದನು. ||೪-೫||

"ಎಲೈ ಮಹರ್ಷಿಶ್ರೇಷ್ಠನೇ, ಮಹೇಶ್ವರನು ಮಾಯವಾದ ಮೇಲೆ ಬ್ರಹ್ಮ, ವಿಷ್ಣುವೇ ಮೊದಲಾದ ಇಂದ್ರಾದಿ ಸಕಲದೇವತೆಗಳೂ, ಕರುಣಾರಸಭರಿತಳೂ, ಲೋಕಮಾತೆಯೂ, ಭೂಷಣಭೂಷಿತಳೂ, ಆದ ಉಮಾದೇವಿಯನ್ನು ಧ್ಯಾನ ಮಾಡುತ್ತಾ, ಅಂಜಲಿಬದ್ಧರಾಗಿ ಈ ರೀತಿ ಪ್ರಾರ್ಥನೆಮಾಡಿದರು. ||೬-೮||

"ಎಲೌ ಗಿರಿರಾಜಪುತ್ರಿಯೇ, ನೀನು ಆನಂದಮಯಿಯಾಗಿ ಪ್ರಪಂಚವನ್ನೆಲ್ಲಾ ಆನಂದಗೊಳಿಸುತ್ತಿರುವೆ. ನಂದೀಶ್ವರನಿಂದ ಸ್ತುತಿಸಲ್ಪಟ್ಟ ವಿಂಧ್ಯಾದ್ರಿಯ

ಗಿರಿವರವಿಂಧ್ಯಶಿರೋಧಿನಿವಾಸಿನಿ ।
ಶಂಭುವಿಲಾಸಿನಿ ವಿಷ್ಣುನುತೇ ॥೯॥

ಜಯಜಯ ಹೇ ಮಹಿಷಾಸುರಮರ್ದಿನಿ ।
ರಮ್ಯಕಪರ್ದಿನಿ ಶೈಲಸುತೇ ।
ಭಗವತಿ ಹೇ ಶಿತಿಕಂಠಕುಟುಂಬಿನಿ ।
ಭಕ್ತಜನಾಮಿತಭೂತಿಕೃತೇ ॥೧೦॥

ಅಯಿ ನಿಜಹುಂಕೃತಿಮಾತ್ರನಿರಾಕೃತ ।
ಧೂಮ್ರವಿಲೋಚನಧೂಲಿಕೃತೇ ।
ಜಯ ಜಯ ಹೇ ಮಹಿಷಾಸುರಮರ್ದಿನಿ ।
ರಮ್ಯಕಪರ್ದಿನಿ ಶೈಲಸುತೇ ॥೧೧॥

ಸಮರವಿಶೋಷಿತಶೋಣಿತ ಬೀಜ ।
ಸಮುದ್ಭವಶೋಣಿತಬೀಜಲತೇ ।
ಶ್ರೀಯುತಶುಂಭನಿಶುಂಭಮಹಾಹವ ।
ತರ್ಪಿತಭೂತಪಿಶಾಚತತೇ ॥೧೨॥

ಶಿಖರಭಾಗದಲ್ಲಿ ನೆಲಸಿ, ವಿಷ್ಣುವಿನುತಳಾಗಿ ಹರನ ಮನಸ್ಸನ್ನು ಅಪಹರಿಸಿದಂತಹ ಮಹಿಷಾಸುರಮರ್ದಿನಿಯೇ, ಮನೋಹರವಾದ ಜಟಾಜೂಟವುಳ್ಳವಳೇ, ನೀನು ಸರ್ವೋತ್ಕೃಷ್ಟಳಾಗಿರು. ನಿನಗೆ ಜಯವಾಗಲಿ. ॥೯॥

ಪರಶಿವನರ್ಧಾಂಗಿಯೇ, ನೀನು ಭಕ್ತರಿಗೆ ಸಕಲ ವಿಧವಾದ ಐಶ್ವರ್ಯವನ್ನೂ ಒದಗಿಸುವವಳಾಗಿರುವೆ. ಮತ್ತು ಕೇವಲ ಹುಂಕಾರಮಾತ್ರದಿಂದ ಧೂಮ್ರಾಕ್ಷನೇ ಮೊದಲಾದ ದುಷ್ಟರಾಕ್ಷಸರನ್ನು ಧೂಳೀಪಟವನ್ನಾಗಿ ಮಾಡಿರುವೆ. ಇಂತಹ ಮಹಿಷಾಸುರಮರ್ದಿನಿಯೂ, ರಮ್ಯವಾದ ಜಟಾಜೂಟವುಳ್ಳ ಗಿರಿರಾಜಪುತ್ರಿಯೂ ಆದ ನಿನಗೆ ಜಯವಾಗಲಿ. ॥೧೦-೧೧॥

ರಕ್ತಬೀಜಾಸುರನ ನಾಶಕಾಲದಲ್ಲಿ, ಅವನ ದೇಹದಿಂದ ಸುರಿಯುವ ರಕ್ತವನ್ನೆಲ್ಲ ತನ್ನ ನಾಲಿಗೆಯಿಂದ ಒರಸಿ ಅವನ ರಕ್ತವು ಭೂಸ್ಪರ್ಶಮಾಡದಂತೆಯೂ, ಅದರಿಂದ ಮುಂದೆ ಅವನ ಗಣವು ಹೆಚ್ಚದಂತೆಯೂ ಮಾಡಿ, ಹಾಗೆಯೇ ಅವ

ಜಯಜಯರಮ್ಯಕಪರ್ದಿನಿ ಶೈಲಸುತೇ ।
ಅಯಿ ಜಗದಂಬ ಕದಂಬವನಪ್ರಿಯ ।
ವಾಸನಿವಾಸಿನಿ ಸೌಧರತೇ ॥೧೩॥

ಶಿಖರಿಶಿರೋಮಣಿತುಂಗಹಿಮಾಲಯ
ಸೌಧನಿಜಾಲಯಮಧ್ಯಗತೇ ।
ಮಧುಮಧುರೇ ಮಧುಕೈಟಭತರ್ಜನ
ಜಾತಸಸಂಭ್ರಮ ಬ್ರಹ್ಮನುತೇ ॥೧೪॥

ಜಯ ಜಯ ಹೇ ಮಹಿಷಾಸುರಮರ್ದಿನಿ ರಮ್ಯಕಪರ್ದಿನಿ ಶೈಲಸುತೇ ।

ಸುರಘನಘೋಷಿಣಿ ದುರ್ಧರಘೋಷಿಣಿ
ದುರ್ಮುಖಹರ್ಷಿಣಿ ಘೋಷರತೇ
ತ್ರಿಭುವನಪೋಷಿಣಿ ಶಂಕರತೋಷಿಣಿ
ಕಲ್ಮಷದೂಷಿಣಿ ಘೋಷರತೇ ।
ದನುಜನಿಶೋಷಿಣಿ ದುರ್ಮದದೋಷಿಣಿ
ಸಮ್ಮುಖಪೋಷಿಣಿ ಸಿಂಹವಹೇ ॥೧೬॥

---

ನನ್ನು ನಾಶಮಾಡಿದೆಯಲ್ಲವೆ! ಅದೂ ಅಲ್ಲದೆ ಶುಂಭ, ನಿಶುಂಭ ಮುಂತಾದ ಸಕಲ ರಾಕ್ಷಸರನ್ನೆಲ್ಲಾ ನಾಶಮಾಡಿ ಸಕಲ ಭೂತಪ್ರೇತಾದಿಗಳಿಗೆಲ್ಲಾ ಅವರ ರಕ್ತಮಾಂಸ ಗಳಿಂದ ತೃಪ್ತಿಯನ್ನುಂಟುಮಾಡಿರುವೆಯಲ್ಲವೇ. ದೇವಿಯೇ! ಮಹಿಷಾಸುರ ಮರ್ದಿನಿಯೇ ನಿನಗೆ ನಮಸ್ಕಾರ. ||೧೨||

ಜಗನ್ಮಾತೆಯೇ, ಕದಂಬವನವಾಸಪ್ರಿಯಳೇ, ಅಮೃತಪಾನಾಸಕ್ತಳೇ, ಗಿರಿ ಶ್ರೇಷ್ಠವಾದ ಹಿಮಾಲಯದ ಮಧ್ಯಭಾಗದಲ್ಲಿರುವ ತನ್ನ ಸೌಧದಲ್ಲಿ ವಾಸ ಮಾಡುವ ಆಸಕ್ತಿಯುಳ್ಳವಳೇ, ಮಧುರ ವಾಣಿಯಿಂದ ಸಕಲರಿಗೂ ಮಧುರ ಪ್ರಾಯಳಾಗಿ ಕಾಣುವವಳೇ, ಮಧು, ಕೈಟಭರೆಂಬ ರಾಕ್ಷಸರ ಗರ್ಜನೆಯಿಂದ ಹೆದ ರಿದ ಬ್ರಹ್ಮನಿಂದ ಸ್ತುತಳಾದವಳೇ, ದೇವಿಯೇ, ಮಹಿಷಾಸುರಮರ್ದಿನಿಯೇ, ನಿನಗೆ ವಂದನೆ. ||೧೩-೧೪||

ದೇವತೆಗಳೆಂಬ ಮೇಘಗಳಿಂದ ಘೋಷಿಸಲ್ಪಡುವವಳೇ! ದುಷ್ಟರನ್ನು ಅರೆಯುವವಳೇ! ದುರ್ಮುಖರೇ ಮೊದಲಾದ ರಾಕ್ಷಸರ ತಪಸ್ಸಿಗೆ ಮೆಚ್ಚಿದವಳೇ,

ಜಯಜಯ ಹೇ ಮಹಿಷಾಸುರಮರ್ದಿನಿ ರಮ್ಯಕಪರ್ದಿನಿ ಶೈಲಸುತೇ ।
ಧನುರನುಷಂಗಮನುಕ್ಷಣಸಂಗ
ಪರಿಸ್ಫುಟವಂಕಿನಟತ್ಕಟಕೇ ॥೧೭॥

ಕನಕಪಿಶಂಗನಿಷಂಗಪೃಷತ್ಕರಭಟಸಂಘಹತೇ ।
ಸುರಸಂಘವಚ್ಚತುರಂಗಬಲಕ್ಷಿತಿ
ರಂಗಘಟದ್ರಣರಂಗತಟೇ ॥೧೮॥

ಜಯಜಯ ಹೇ ಮಹಿಷಾಸುರಮರ್ದಿನಿ ರಮ್ಯಕಪರ್ದಿನಿ ಶೈಲಸುತೇ ।
ಅಯಿ ಶಿಖಂಡವಿಖಂಡನತುಂಡ ।
ವಿತುಂಡಿತಶುಂಡಗಜಾಘಕೃತೇ ॥೧೯॥

---

ಭಕ್ತರನ್ನು ರಕ್ಷಿಸುವುದರಲ್ಲಿ ಆಸಕ್ತಳಾದ ದೇವಿಯೇ, ನೀನು ತ್ರಿಭುವನಗಳನ್ನು ರಕ್ಷಿಸುವುದರಲ್ಲಿಯೂ, ಶಂಕರನನ್ನು ಮೆಚ್ಚಿಸುವುದರಲ್ಲಿಯೂ ಆಸಕ್ತಳಾಗಿರುವೆ. ಸಕಲ ಪಾಪನಿವಾರಕಳಾಗಿ, ಸಕಲರಾಕ್ಷಸನಾಶಕಳಾಗಿ, ದುರಹಂಕಾರದಿಂದ ಕೊಬ್ಬಿರುವವರನ್ನು ದೂಷಣಮಾಡುವ ಸ್ವಭಾವವುಳ್ಳ ಶೈಲಸುತೆಯಾದ ಮತ್ತು ಸಿಂಹವಾಹಿನಿಯಾದ ಮಹಿಷಾಸುರಮರ್ದಿನಿಯೇ, ನಿನಗೆರಗುವೆ. ನೀನು ಜಯಶೀಲಳಾಗು. ||೧೬||

ಧನುಸ್ಸನ್ನು ಸದಾ ಕೈಯ್ಯಲ್ಲಿ ಧರಿಸಿರುವುದರಿಂದ, ದೇವಿಯೇ! ನಿನ್ನ ತೋಳುಬಳೆಯೂ, ಮತ್ತೂ ಕೈಬಳೆಯೂ ಧನುಸ್ಸಿನ ಸಂಬಂಧದಿಂದ ಸರ್ವದಾ ಧ್ವನಿಗೈಯುತ್ತಿರುವುವು. ಸುವರ್ಣನಿರ್ಮಿತವಾಗಿ ಪ್ರಕಾಶಿಸುತ್ತಿರುವ ಬತ್ತಳಿಕೆಯನ್ನು ಧರಿಸಿ ವೀರಭಟರೊಟನೆ ಯುದ್ಧಮಾಡುವ ಸ್ವಭಾವವುಳ್ಳವಳೇ, ದೇವತೆಗಳ ಚತುರಂಗಸೈನ್ಯದಿಂದ ಕೂಡಿ, ದೊಡ್ಡ ರಣರಂಗದಲ್ಲಿ ಯುದ್ಧಮಾಡುವ ಸ್ವಭಾವವುಳ್ಳ ಮಹಿಷಾಸುರಮರ್ದಿನಿಯಾದ ಶೈಲಸುತೆಯೇ, ನೀನು ಜಯಶೀಲಳಾಗು. ||೧೭-೧೮||

ಎಲೌ ದೇವಿಯೇ, ನೀನು ರಣರಂಗದಲ್ಲಿ ತಲೆಯನ್ನು ಕೆದರಿಕೊಂಡು ಛಿನ್ನವಾಗಿ ಕೆಳಗೆ ಬಿದ್ದು ಒದ್ದಾಡುತ್ತಿರುವ ರಾಕ್ಷಸರ ರುಂಡಗಳನ್ನು ಆನೆಯಂತೆ ಕಾಲಿನಲ್ಲಿ ತುಳಿಯುತ್ತಿದ್ದೆಯಲ್ಲವೆ? ಶತ್ರುಗಳೆಂಬ ಮದ್ದಾನೆಗಳ ಕುಂಭಸ್ಥಳವನ್ನು

ರಿಪುಗಜಗಂಡಗತೋದ್ಭಟಭಂಡ
ವಿದಾರಣಚಂಡಪರಾಕ್ರಮಶೌಂಡಮೃಗಾಧಿಪತೇ ।
ನಿಜಭುಜದಂಡವಿಪಾಟಿತಮುಂಡ
ನಿಪಾತಿತಚಂಡಭಟಾಧಿಪತೇ ॥೨೦॥

ಜಯಜಯ ಹೇ ಮಹಿಷಾಸುರಮರ್ದಿನಿ ರಮ್ಯಕಪರ್ದಿನಿ ಶೈಲಸುತೇ॥೨೧॥

ಜಯ ಜಯ ದೇವಿ ನಗರಾಜಕುಲೋತ್ತಾರಿಣಿ
ಕಚಕುಚಗಮನಜಘನವದನಕಂಠೋದರಕಟೀ ।
ತಟೋರುದ್ವಯಕರಬಾಹುಭೂಷಣವಿರಾಜಿತೇ
ಸಜಲಜಲದನಗಮಾತಂಗಪುಲಿನೇಂದುಶಂಖಕರ ।
ತಲಸಿಂಹರಂಭಾಸ್ತಂಭಾರಕ್ತನೀರಜಮೃಣಾಲ
ನಿಭೇ ತಾರಾಮುಲಮೌಕ್ತಿಕಸರಕೀಲಿತಕಂಧರೇ ।
ಬಿಂಬಾಧರೇ ಮಧ್ಯಾಷ್ಟಮೀಚಂದ್ರಸಮಾನಭ್ರೂ
ಕೃತೇ ತಪನೋಡುಪಮಂಡಲಾಯಿತತಾಟಂಕೇ ।
ಉದ್ಯತ್ಕವಿಮಂಡಲನಿಭನಾಸಾಮುಕ್ತಾಮಣಿದ್ಯೋತಿತೇ
ಸರ್ವಾಭರಣಭೂಷಿತೇ ತ್ವನ್ಮಾಯಾಮೋಹಿತಾನ್ ರಕ್ಷ ರಕ್ಷ

---

ಭಯಂಕರಾಕಾರದಲ್ಲಿ ಸೀಳುವ ಶಕ್ತಿದೇವತೆಯೇ, ನಿನ್ನ ಬಾಹುದಂಡದಿಂದಲೇ ನೀನು ಚಂಡಾಸುರನೇ ಮೊದಲಾದ ಶತ್ರುರಾಕ್ಷಸರನ್ನೆಲ್ಲಾ ನಿರ್ಮೂಲಗೊಳಿಸಿರುವೆಯಲ್ಲವೆ? ಅಂತಹ ಮಹಿಷಾಸುರಮರ್ದಿನಿಯೂ, ಶೈಲಸುತೆಯೂ ಆದ ದೇವಿಯೇ! ಜಯಶೀಲಳಾಗಿ, ನಮ್ಮನ್ನುದ್ಧರಿಸು. ॥೧೯-೨೦-೨೧॥

ಎಲೌ ದೇವಿಯೇ, ನೀನು ಪರ್ವತರಾಜನ ಕುಲವನ್ನು ನಿನ್ನ ಜನನಮಾತ್ರದಿಂದ ಉದ್ಧರಿಸಿದವಳು. ನೀನು, ಶಿರಸ್ಸು, ಸ್ತನ, ಪಾದ, ಜಘನ, ಮುಖ, ಕಂಠ, ಉದರ, ಸೊಂಟ, ತೊಡೆಗಳು, ಕೈ, ತೋಳು ಮುಂತಾದ ಸಕಲ ಅವಯವಗಳಲ್ಲಿಯೂ, ಒಪ್ಪಾದ ಆಭರಣಗಳನ್ನು ಧರಿಸಿ ಪ್ರಕಾಶಿಸುತ್ತಿರುವೆ. ನೀಲಮೇಘದಂತೆ, ಹಿಮಾಚಲದಂತೆ, ಐರಾವತದಂತೆ, ಮರಳುರಾಶಿಯಂತೆ, ಚಂದ್ರಮಂಡಲದಂತೆ, ಶಂಖ ಸಮುದಾಯದಂತೆ, ಕೈಯ್ಯಲ್ಲಿ ಹಿಡಿದಿರುವ ಸಿಂಹದಂತೆ,

ಇತಿ ಸಂಸ್ತುತ್ಯ ತೇ ಸರ್ವೇ ಪ್ರಣಮ್ಯ ಭುವಿ ದಂಡವತ್ ।
ಬದ್ಧಾಂಜಲಿಕರಾ ಮೌಲೌ ತದೋಚುಸ್ತೇ ಸುರಾ ಇತಿ ॥೨೩॥

॥ ದೇವಾ ಊಚುಃ ॥

ತ್ವಯಾ ಸಮ್ಮೋಹಿತಾಸ್ಸರ್ವೇ ನ ಜಾನೀಮೋ ಮಹೇಶ್ವರಂ ।
ಸರ್ವದೇವಸಮಂ ಜ್ಞಾತ್ವಾ ಕಾರಣಾನಾಂ ಚ ಕಾರಣಂ ॥೨೪॥

ಪತೀನಾಂ ಪತಿಮೀಶಾನಂ ಚೇತನಾನಾಂ ಚ ಚೇತನಂ ।
ತಸ್ಯೈವ ವಿರಹಾತ್ಸರ್ವೇ ತೃಣಮೇತತ್ಪುರೋಗತಂ ॥೨೫॥

ಬಾಳೆಯಕಂಬದಂತೆ, ರಕ್ತಕಮಲದ ದಂಟಿನಂತೆ, ಹೊಳೆಯುವ ದೇಹವುಳ್ಳ ದೇವಿಯೇ, ನಿನ್ನ ಕಂಠಪ್ರದೇಶದಲ್ಲಿ ತಾರಾಗಣಗಳಂತೆ ಹೊಳೆಯುವ ಮುತ್ತಿನ ಸರವು ವಿರಾಜಿಸುತ್ತಿರುವುದು. ನಿನ್ನ ತುಟಿಯಾದರೋ ತೊಂಡೆಹಣ್ಣಿನಂತೆ ಸುಂದರವಾಗಿರುವುದು. ನಿನ್ನ ಹುಬ್ಬುಗಳು ಅಷ್ಟಮೀತಿಥಿಯ ಚಂದ್ರನಂತೆ ವಕ್ರವಾಗಿರುವುವು. ಕಿವಿಯಲ್ಲಿರುವ ಎರಡು ಓಲೆಗಳು ಸೂರ್ಯಚಂದ್ರಕುಂಡಲಗಳಂತೆ ಹೊಳಪನ್ನು ಕೊಡುತ್ತಿರುವುವು. ಮೂಗುಬೊಟ್ಟಿನಲ್ಲಿ ಕಂಡುಬರುವ ಶುದ್ಧ ಮುತ್ತು ಉದಯಿಸುವ ಶುಕ್ರಗ್ರಹದಂತೆ ಪ್ರಕಾಶಿಸುತ್ತಿರುವುದು. ಎಲೌ ಜಗನ್ಮಾತೆಯೇ, ನೀನು ಸರ್ವಾಭರಣಭೂಷಿತಳು. ಇಂತಹ ನೀನು ಮಾಯಾಮೋಹಿತರಾಗಿ ಅಜ್ಞಾನಿಗಳೆನಿಸಿರುವ ನಮ್ಮನ್ನುದ್ಧರಿಸು. ನಮಗೆ ಜ್ಞಾನಪ್ರದಾನಮಾಡು.

ಹೀಗೆ ಅಲ್ಲಿ ನೆರೆದಿದ್ದ ಸಕಲ ದೇವತೆಗಳೂ. ದೇವಿಯನ್ನು ಬಹುವಾಗಿ ಸ್ತುತಿಸಿ, ದಂಡಪ್ರಣಾಮಮಾಡಿ, ಕೈಜೋಡಿಸಿ, ತಲೆ ಬಗ್ಗಿನಿಂತು ಹೀಗೆ ಕೇಳಿಕೊಂಡರು. ॥೨೩॥

ತಾಯಿಯೇ, ನಾವೆಲ್ಲರೂ ಮೂಢರಾದುದರಿಂದಲೇ ಪರಮೇಶ್ವರನ ನಿಜಸ್ವರೂಪವನ್ನು ನಾವು ಇನ್ನೂ ಅರಿತವರಾಗಿಲ್ಲ. ಸೃಷ್ಟಿಕಾರಣವಾದ ವಸ್ತುಗಳಿಗೆ ಮೂಲಕಾರಣನಾಗಿರುವ ಮತ್ತು ಮಹಾಮಹಿಮನಾದ ಶಂಕರನನ್ನು ಇತರ ದೇವತೆಗಳಂತೆ, ಸಾಮಾನ್ಯನೆಂದೂ ತಿಳಿದಿರುವೆವು. ॥೨೪॥

ಲೋಕದೊಡೆಯರಿಗೆಲ್ಲಾ ಒಡೆಯನಾಗಿಯೂ, ಚೈತನ್ಯವಿಶಿಷ್ಟ ವಸ್ತುಗಳಿಗೆಲ್ಲಾ ಚೇತನಸ್ವರೂಪನಾಗಿಯೂ ಇರುವ ಆ ಮಹೇಶ್ವರನನ್ನು ನಾವು ಸರಿಯಾಗಿ

ಜಗತ್ಸೃಷ್ಟ್ಯಂತಕಾರ್ಯೇಷು ಸ್ಥಿತಾವಪಿ ಮಹೇಶ್ವರಿ ।
ಕಿಂಚಿತ್ಕರ್ತುಮನೀಶಾ ಹಿ ತ್ವಾಂ ಪ್ರಪನ್ನಾಸ್ತದಾಂಬಿಕೇ ॥೨೬॥

ನಮಸ್ತೇಽಸ್ತು ಜಗನ್ಮಾತಃ ಪ್ರಸನ್ನಾ ಭವ ನಸ್ಸದಾ ।
ತ್ವಯಾವೃತಮಿದಂ ಸರ್ವಂ ತ್ವಯಾ ಸಂಪಾಲ್ಯತೇ ಜಗತ್ ॥೨೭॥

ತ್ವಯ್ಯೇವಾಂತೇ ಲಯಂ ಯಾತಿ ಸದೇವಾಸುರಮಾನುಷಂ ।
ತ್ವಂ ಶಕ್ತಿಃ ಪರಮಾ ದೇವಿ ಮಹೇಶಾರ್ಧಾಂಗಭಾಗಿನೀ ॥೨೮॥

ತ್ವತ್ಪ್ರಸಾದೇನ ಸರ್ವೇಷಾಂ ಮೋಹನಾಶೋ ಭವೇಚ್ಛಿವೇ ।
ಸರ್ವತ್ರ ರೂಢಾ ಶಕ್ತಿಸ್ತ್ವಂ ಮಾಯಾ ಮಾಯೀ ಮಹೇಶ್ವರಃ॥೨೯॥

---

ಅರಿತವರಾಗಿಲ್ಲ. ಈಗ ಅವನಿಲ್ಲದೆ ಇರೋಣದರಿಂದಲೇ, ಈ ತೃಣಪುರುಷನನ್ನು ಅಲ್ಲಾಡಿಸಲು ಶಕ್ತಿಸಾಲದುದಾಗಿದೆ. ||೨೫||

ತಾಯಿಯೇ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯಕಾರ್ಯಗಳಲ್ಲಿ ನಾವು ತೊಡಗಿರುವೆವಾದರೂ, ಈಗ ಈ ತೃಣಪುರುಷನ ವಿಷಯದಲ್ಲಿ ಏನುಮಾಡುವುದಕ್ಕೂ ಅಶಕ್ತರಾಗಿರುವೆವು. ಅದಕ್ಕಾಗಿಯೇ ಈಗ ನಿನ್ನನ್ನು ನಾವು ಮೊರೆಹೊಕ್ಕಿರುವೆವು. ||೨೬||

ಲೋಕಮಾತೆಯೇ, ಈಗ ನೀನು ನಮಗೆ ಪ್ರಸನ್ನಳಾಗು. ಈ ಜಗತ್ತೆಲ್ಲಾ ನಿನ್ನಿಂದಲೇ ವ್ಯಾಪ್ತವಾಗಿದೆ. ನೀನೇ ಈ ಜಗತ್ತಿನ ರಕ್ಷಕಳು. ನಿನಗೆ ವಂದನೆಯು. ||೨೭||

ಈ ದೇವಾಸುರನರರೆಲ್ಲರೂ, ಕೊನೆಯಲ್ಲಿ ನಿನ್ನಲ್ಲಿಯೇ ಲಯವಾಗುವರು. ಮಹೇಶ್ವರಾರ್ಧಾಂಗಿಯೇ, ನೀನೇ ಪೂಜ್ಯದೇವತೆಯು, ಪರಾಶಕ್ತಿಯು. ||೨೮||

ಅಜ್ಞಾನವನ್ನು ಯಾರು ಕಳೆದುಕೊಳ್ಳಬೇಕಾದರೂ, ಅವರು ಮೊದಲು ನಿನ್ನ ಅನುಗ್ರಹವನ್ನು ಸಂಪಾದಿಸಬೇಕು. ನೀನೇ ಸರ್ವಶಕ್ತಿಸಂಪನ್ನೆಯು. ಸೃಷ್ಟಿಕಾರಣಳಾದ ಮಾಯೆಯೇ ನೀನು. ಮಾಯಾವಿಶಿಷ್ಟನಾದ ಪರಬ್ರಹ್ಮವಸ್ತುವೇ ಈ ಮಹೇಶ್ವರನು. ||೨೯||

ತ್ವಾಂ ಪ್ರಪನ್ನಾ ವಯಂ ಸರ್ವೇ ಮೋಹಿತಾಸ್ತವ ಮಾಯಯಾ ।
ಇತ್ಯುಕ್ತ್ವಾ ಬ್ರಹ್ಮವಿಷ್ಣ್ವಾದ್ಯಾಃ ಪ್ರಣಮ್ಯ ಭುವಿ ದಂಡವತ್ ॥೩೦॥

ಅಥೋತ್ಥಾಯ ನಭೋಮಧ್ಯಂ ದದೃಶುಸ್ಸರ್ವ ಏವ ತೇ ।
ನೀಲತೋಯದಮಧ್ಯಸ್ಥವಿದ್ಯುಲ್ಲೇಖೇವ ಭಾಸುರಾಂ ॥೩೧॥

ನಿಷ್ಟಪ್ತಕನಕಾಭಾಸಾಂ ಸರ್ವಾಭರಣಭೂಷಿತಾಂ ।
ಬಾಲೇಂದುಬದ್ಧಮುಕುಟಾಂ ಸೋಮಧಾಮಸಮಾನನಾಂ ॥೩೨॥

ನೀಲೇಂದೀವರನೇತ್ರಾಂತಾಂ ಪವಿತ್ರಾಕೃತಿಸುಂದರಾಂ ।
ದೃಷ್ಟ್ವಾ ಪುನಃ ಪ್ರಣಮ್ಯೇಶೀಂ ರಕ್ಷರಕ್ಷೇತಿ ಚಾಬ್ರುವನ್ ॥೩೩॥

ದೇವಾನಾಂ ವಚನಂ ಶ್ರುತ್ವಾ ಹ್ಯುವಾಚ ಸುರಾಂಸ್ತದಾ ।
ಪ್ರಗಲ್ಭಧೀರಮಧುರಂ ದೇವಾಜ್ಞಾನವಿನಾಶನಂ ॥೩೪॥

---

ನಿನ್ನ ಮಾಯಾಮೋಹಿತರಾಗಿ, ಅಜ್ಞಾನಿಗಳೆನಿಸಿರುವ ನಾವು ಈಗ ನಿನ್ನನ್ನು ಆಶ್ರಯಿಸಿರುವೆವು. ನಮ್ಮನ್ನು ಜ್ಞಾನಿಗಳನ್ನಾಗಿ ಮಾಡು" ಎಂದು ಬ್ರಹ್ಮವಿಷ್ಣ್ವಾದಿಗಳು ದೀರ್ಘಪ್ರಣಾಮಮಾಡಿ ನಿಂತುಕೊಂಡರು. ॥೩೦॥

ಹಾಗೆಯೇ ಮೇಲೆ ನೋಡಲಾಗಿ ಅಂತರಿಕ್ಷಮಧ್ಯದಲ್ಲಿ, ನೀಲಮೇಘದ ಮಧ್ಯೆ ಹೊಳೆಯುವ ಮಿಂಚಿನ ಬಳ್ಳಿಯಂತೆ ಒಂದು ಹೊಳಪು ಗೋಚರವಾಯಿತು. ॥೩೧॥

ಆ ತೇಜಸ್ಸು ಕಾಯಿಸಿದ ಸುವರ್ಣದಂತೆ ಪ್ರಕಾಶಿಸುತ್ತಾ, ಸರ್ವಾಭರಣ ಭೂಷಿತವಾಗಿತ್ತು. ಆ ಶಕ್ತಿದೇವತೆಯ ಕಿರೀಟದಲ್ಲಿ ಬಾಲಚಂದ್ರನು ಶೋಭಿಸುತ್ತಿತ್ತು ಪೂರ್ಣಚಂದ್ರನಂತೆ ಕಾಂತಿವಿಶಿಷ್ಟವಾದ ಮುಖವು ಪ್ರಕಾಶಿಸುತ್ತಿದ್ದಿತು. ॥೩೨॥

ಆ ದೇವತೆಯ ಕಟಾಕ್ಷವು ನೀಲೋತ್ಪಲದಂತಿತ್ತು. ಇಂತಹ ಪವಿತ್ರಾಕೃತಿಯುಳ್ಳ ದೇವಿಯ ಆಕಾರವನ್ನು ನೋಡಿ ಸಕಲ ದೇವತೆಗಳೂ, ದೇವಿಯೇ! ನಮ್ಮನ್ನು ರಕ್ಷಿಸು, ರಕ್ಷಿಸು ಎಂದು ಮೊರೆಯಿಟ್ಟರು. ॥೩೩॥

ಹೀಗೆ ಪ್ರಾರ್ಥನೆ ಮಾಡುತ್ತಲಿರುವ ಸಕಲ ದೇವತೆಗಳನ್ನೂ ನೋಡಿ ದೇವಿಯು, ಅವರ ಅಜ್ಞಾನನಾಶವಾಗುವಂತೆ ಮೃದುಮಧುರ ಗಂಭೀರವಾದ ಕೆಲವು ಹಿತೋಕ್ತಿಗಳನ್ನಾಡಿದಳು. ॥೩೪॥

|| ದೇವ್ಯುವಾಚ ||

ಏಷ ಬ್ರಹ್ಮೈಷ ಆತ್ಮಾ ಪ್ರಣವಪದಗತೋ ಮಾತೃಮಾತ್ರಾದಿಹೀನೋ
ಮಾಯೀ ಮಾಯಾತ್ವಹಂ ವೈ ಶಕ್ತಿರಸ್ಮೀಹ ದೇವಾಃ ।
ಸರ್ವೇಶಶ್ಶಕ್ತಿಮಾಂಶ್ಚ ಪ್ರಕೃತಿಪರವಶೋ ವಿಶ್ವಮೇತದ್ವಿಚಿತ್ರಂ
ವಿಶ್ವೋದ್ಭೂತಾ ಭವಂತಸ್ಸಕಲಭವಹರಂ ತಂ ಭಜಧ್ವಂ ಮಹೇಶಂ ||೩೫||

ಯತೋ ವೈ ಹರಿಬ್ರಹ್ಮರುದ್ರೇಂದ್ರಪೂರ್ವಾಃ
ಪ್ರಜಾತಾಸ್ಸ್ಥ ಯಸ್ಮಿಂಸ್ಥಿತಾ ಏವ ನೂನಂ ।
ಭವದ್ಭಿಸ್ತತಂ ಲೋಕಜಾಲಂ ಕಿಲೇದಂ
ಪ್ರಪದ್ಯಧ್ವಮೀಶಂ ಭಜಧ್ವಂ ಮಹೇಶಂ ||೩೬||

ಶಕ್ತಿಸ್ತ್ವಹಂ ಯಸ್ಯ ಜಗತ್ಸಮಗ್ರಂ
ಕರೋಮಿ ಲೀಲಾಮಿಷತಾಂ ಭವದ್ಭಿಃ ।
ಭವಪ್ರಸಾದೇನ ಭವೈಕಮೋಚನಂ
ಮಮೈವ ಶಕ್ತಿಂ ಶರಣಂ ಪ್ರಯಾತ ||೩೭||

---

ಎಲೈ ಮೋಹಿತರಾದ ದೇವತೆಗಳಿರಾ, ಈಗ ಮಹೇಶ್ವರನ ಸ್ವರೂಪವನ್ನು ಹೇಳುವೆನು ಕೇಳಿರಿ. ಪ್ರಣವಪದಗತನಾಗಿ, ಸಕಲ ಮಾತೃಕೆಗಳಿಗೂ, ಪಂಚತನ್ಮಾತ್ರ ಭೂತಾದಿಗಳಿಗೂ ಸಿಲುಕದಿರುವ ಪರಬ್ರಹ್ಮವಸ್ತುವೇ ಈ ಮಹೇಶ್ವರನು. ಶಕ್ತಿಮಯಿಯಾದ ಮಾಯೆಯೇ ನಾನು. ನನ್ನಿಂದ ಪ್ರತಿಫಲಿಸುವ ಈ ಪರಮೇಶ್ವರನೇ ಈ ನಿಖಿಲ ಜಗತ್ತು. ಏತಾದೃಶಶಕ್ತಿವಿಶಿಷ್ಟನೂ, ಪ್ರಕೃತಿಪರವಶನೂ, ವಿಶ್ವರೂಪಿಯೂ ಆದ ಪರಮೇಶ್ವರನನ್ನು ತಪ್ಪದೆ ಭಜನೆ ಮಾಡಿರಿ. ಜಗತ್ತಿನ ಸೃಷ್ಟಿಯಲ್ಲಿ ಸಿಕ್ಕಿರುವ ನೀವೆಲ್ಲರೂ ಅದರಿಂದ ಜ್ಞಾನಿಗಳಾಗುವಿರಿ. ||೩೫||

ಏಕೆಂದರೆ, ವಿಷ್ಣು ಬ್ರಹ್ಮೇಂದ್ರರೇ ಮೊದಲಾದ ನೀವೆಲ್ಲರೂ ಈ ಶಂಕರನ ಅನುಗ್ರಹವಶದಿಂದ ಜನಿಸಿರುವಿರಿ. ಕೊನೆಗೆ ಅಲ್ಲಿಯೇ ಐಕ್ಯರಾಗುವಿರಿ. ನಿಮ್ಮಿಂದಲೇ ಈ ಲೋಕವೆಲ್ಲಾ ಪೂರ್ಣವಾಗಿರುವುದು. ನಿಮ್ಮ ಉತ್ಪತ್ತಿಗೆ ಮೂಲಕಾರಣನಾದ ಮಹೇಶ್ವರನನ್ನು ನೀವೆಲ್ಲರೂ ಸೇವೆಮಾಡಿರಿ. ||೩೬||

ಎಲೈ ನಿರ್ಜರರೇ, ಶಕ್ತಿದೇವತೆಯಾದ ನಾನು ಈ ಜಗತ್ತನ್ನೂ, ಅದರಲ್ಲಿರುವ ನಿಮ್ಮನ್ನೂ ಸುಲಭವಾಗಿ ಲಯಮಾಡುವೆನು. ಹಾಗೆಯೇ ಈಶ್ವರಾನುಗ್ರಹ

ನ ತಸ್ಯ ಕಾರ್ಯಂ ಕರಣಂ ಶಿವಸ್ಯ
ಸನಾತನೋ ನಿತ್ಯಶುದ್ಧಃ ಪುರಾಣಃ ।
ಯನ್ಮಾಯಯಾ ಮೋಹಿತಾಸ್ಸ್ಥ ಪ್ರಜೇಶಾ
ಸ್ತಸ್ಯೈವೇತದ್ವಿರಹಾತ್ಸರ್ವಮೇವಂ ॥೩೮॥

ವ್ಯರ್ಥಂ ಭೂಯಾತ್ತಾರ್ಣಕಸ್ಯೋಪಮಾನಾತ್
ಸರ್ವೇ ದೇವಾ ರುದ್ರಮೀಶಾನಮಾರಾತ್ ।
ದ್ಯುತಂ ತಮಿಷ್ಟಂ ಗಗನಾಂತರಸ್ಥಂ
ಸರ್ವೇಂದ್ರಿಯೇಣೋಪರತಂ ಭಜಧ್ವಂ ॥೩೯॥

॥ ಸ್ಕಂದ ಉವಾಚ ॥

ಇತ್ಯುಕ್ತ್ವಾ ಸಾ ಜಗನ್ಮಾತಾ ತಿರೋಧತ್ತ ಸುರಾನ್ ಪ್ರತಿ ।
ದೇವಾ ದೇವ್ಯುದಿತಂ ಶ್ರುತ್ವಾ ಸರ್ವೇ ಪ್ರಾಂಜಲಯಸ್ತದಾ ॥೪೦॥

ಬಲದಿಂದ ನಿಮ್ಮ ಭವಬಂಧನಗಳನ್ನೂ ತೊಡೆದುಹಾಕುವೆನು. ಆದ್ದರಿಂದ ನನ್ನ ಶಕ್ತಿಯನ್ನು ನೀವು ಅನುಸರಿಸಿರಿ. ॥೩೭॥

ಶಿವನಿಗೆ ಮಾತ್ರ ಉತ್ಪತ್ತ್ಯಾದಿಗಳಿಲ್ಲ. ಅವನಿಗೆ ಕಾರಣವಸ್ತುವಾಗಲಿ, ಸಾಧಕದ್ರವ್ಯವಾಗಲಿ ಮತ್ತೊಂದಿಲ್ಲ. ಅವನ ಮಾಯೆಗೆ ಮೋಹಿತರಾಗಿಯೇ ಈಗ ನೀವು ಹೀಗೆ ತೃಣಪುರುಷನ ವಿಷಯದಲ್ಲಿ ಭಂಗಪಡೆದಿರುವಿರಿ. ಅವನ ಸನ್ನಿಧಿಯೇ ಈಗ ನಿಮಗೆ ಅಜ್ಞಾನದಾಯಕವಾಗಿದೆ. ॥೩೮॥

ಭವತಾರಕನಾದ ಆ ಮಹೇಶ್ವರನನ್ನು ಬಿಟ್ಟು ಮಾಡಿದ ಕೆಲಸವೆಲ್ಲವೂ ವ್ಯರ್ಥವೆನಿಸುವುದು. ಆದ್ದರಿಂದ ಎಲೈ ಇಂದ್ರಾದಿದೇವತೆಗಳಿರಾ, ರುದ್ರನೂ, ಈಶಾನನೂ, ಇಂದ್ರಿಯಾದಿಗಳಿಂದ ವಿವರ್ಜಿತನೂ, ಗಗನವ್ಯಾಪಿಯೂ ಆದ ಮಹೇಶ್ವರನನ್ನು ಸೇವಿಸಿರಿ." ॥೩೯॥

ಹೀಗೆ ಹೇಳಿ ಸಕಲ ಲೋಕಮಾತೆಯಾದ ಪಾರ್ವತಿಯು ಅಂತರ್ಧಾನಳಾದಳು. ಒಡನೆಯೇ ದೇವತೆಗಳೆಲ್ಲರೂ ಅಂಜಲಿಬದ್ಧರಾಗಿ ನಿಂತು, ॥೪೦॥

ವಿಭೂತಿಭೂಷಿತೈರ್ಗಾತ್ರೈಃ ತ್ರಿಪುಂಡ್ರಪರಿಶೋಭಿತಾಃ ।
ಕೃತ್ವಾ ವ್ರತಂ ಪಾಶುಪತಂ ಕೃತಲಿಂಗಾರ್ಚನಾಸ್ಸುರಾಃ ॥೪೦॥

ರುದ್ರಾಧ್ಯಾಯಜಪೇನೈವ ಪಂಚಾಕ್ಷರಪರಾಸ್ಸದಾ ।
ಪಂಚಾಸ್ಯಧ್ಯಾನಸಂಸಕ್ತಾಸ್ಸಂವತ್ಸರಮತಂದ್ರಿತಾಃ ॥೪೨॥

ಅದೃಷ್ಟ್ವೈವ ಮಹಾದೇವಂ ಜಗತಾಂ ಜನನೀಮಪಿ ।
ಊರ್ಧ್ವಬಾಹವ ಈಶಾನಂ ತುಷ್ಟುವುಃ ಪರಮೇಶ್ವರಂ ॥೪೩॥

ಭಕ್ತ್ಯಾತ್ವನನ್ಯಯಾ ದೇವಾಃ ಪ್ರಬದ್ಧಕರಸಂಪುಟಾಃ ।
ರೌದ್ರೈಃ ಋಕ್ಸಾಮಸಂಭೂತೈಸ್ತಥಾಥರ್ವಶಿರೋಗತೈಃ ॥೪೪॥

ಪ್ರಣವಪ್ರವಣೇಷು ತೇ ಕೃಪಾಣಾ
ಭೀತಿರ್ವಿನಾಸ್ಯ ಸುಕೃತೈಕರಸಾರ್ಣವೇಷು ।
ನಿರ್ವಾಣಕಾರಣಭವಾರ್ಣವಕರ್ಣಧಾರ
ತ್ವದ್ವಾಚ್ಯಶಬ್ದಮಭಿಧಾತೃಗಣಾಶ್ರಯಾಮಃ ॥೪೫॥

---

ತಮ್ಮ ದೇಹವನ್ನೆಲ್ಲಾ ಭಸ್ಮದಿಂದ ಬಳಿದುಕೊಂಡು, ತ್ರಿಪುಂಡ್ರಧಾರಿಗಳಾಗಿ, ಲಿಂಗಾರ್ಚನೆಮಾಡುತ್ತಾ ಪಾಶುಪತವ್ರತಾಚರಣೆಗೆ ಆರಂಭಿಸಿದರು. ॥೪೧॥

ಸಕಲರೂ ರುದ್ರಾಧ್ಯಾಯವನ್ನು ಪಾರಾಯಣಮಾಡಲಾರಂಭಿಸಿದರು. ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಿದರು. ಅಹೋರಾತ್ರಿಯೂ ಈಶ್ವರಧ್ಯಾನ ಮಾಡುತ್ತಾ ಹೀಗೆ ಒಂದು ಸಂವತ್ಸರ ಪರ್ಯಂತ ವ್ರತಮಾಡಿದರು. ॥೪೨॥

ಹಾಗಾದರೂ, ಪಾರ್ವತೀಪರಮೇಶ್ವರರನ್ನು ಕಾಣದೆ, ತೋಳುಗಳನ್ನು ಮೇಲೆತ್ತಿಕೊಂಡು ಪರಶಿವನನ್ನು ಬಹುವಾಗಿ ಸ್ತುತಿಸಿದರು. ॥೪೩॥

ಅನಂತರ ದೇವತೆಗಳು ಏಕಮನಸ್ಸಿನಿಂದ ದೃಢಭಕ್ತಿಯುಳ್ಳವರಾಗಿ, ಋಕ್, ಸಾಮ, ಅಥರ್ವಶೀರ್ಷೋಪನಿಷತ್ ಇವುಗಳ ಮಂತ್ರಭಾಗದಿಂದ, ಭಗವಂತನನ್ನು ಬಹಳವಾಗಿ ಸ್ತುತಿಸಿದರು. ॥೪೪॥

ಎಲೈ ದೇವದೇವನೇ, ಪ್ರಣವಮಂತ್ರೋಪದೇಶವನ್ನು ಪಡೆದು, ಅದರ ಜಪದಲ್ಲಿಯೇ ಆಸಕ್ತರಾದವರಿಗೆ ನಿನ್ನ ಕತ್ತಿಯ ಭಯಲೇಶವೂ ಇರುವುದಿಲ್ಲ.

ತ್ವಾಮಗ್ನಿಮೀಲ ಇತಿ ಮೌಲಿಮುಚಾಭಿಧತ್ತೇ
ವೇದೋದಿತಸ್ತದಿತರಸ್ತ್ವಿಷಮೂರ್ಜಮಾಹ ।
ತ್ವಾಮಂಧಸಾಂ ಪತಿಮನುತ್ತಮಮೀಶಿತಾರಂ
ಸಾಮ್ನಾದಿಮೋಽಪ್ಯವನಹೇತುಮಥಾಗ್ನಿಮಾಹ ॥೪೬॥

ತ್ವಾಂ ಶಂಭುಮಂಜಲಮಯಂ ತನುಮಂ ತವೇಶ
ಸಾಕ್ಷಾದಥರ್ವಣಗಿರಾ ಪ್ರಕಟಾಷ್ಟಮೂರ್ತೇ ।
ನೀರೂಪವರ್ಣಕಥನೇ ತವ ತೇ ನಿವೃತ್ತಾ
ವೇದಾಶ್ಶತಪ್ರಕಮಹಾಶಿಖಶಾಖಭೇದಾಃ ॥೪೭॥

ವಾಚಾ ಮನಸ್ತ್ವತಿಗತಂ ಭಗವಂತಮೇವ ।
ಭಕ್ತ್ಯಾ ತವಾಷ್ಟಗಣಿತೈಸ್ತನುಭಿಸ್ಸ್ತುವಂತಿ ॥೪೮॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ದೇವಕೃತದೇವೀಸ್ತುತಿರ್ನಾಮ
ತ್ರಿಪಂಚಾಶೋಽಧ್ಯಾಯಃ

---

ಪುಣ್ಯರಾಶಿಯೆಂಬ ಸಮುದ್ರದಲ್ಲಿ ಸಂಚರಿಸುವವರಂತೂ, ನಿನ್ನ ಅನುಗ್ರಹಕ್ಕೆ ಸಂಪೂರ್ಣ ಪಾತ್ರರಾದವರೇ. ವೈರಾಗ್ಯಪ್ರಾಪ್ತಿಗೆ ಮುಖ್ಯ ಪ್ರತಿಬಂಧಕವಾದ ಸಂಸಾರಸಾಗರವನ್ನು ದಾಟಿಸುವುದರಲ್ಲಿ ನೀನು ನಾವಿಕನಂತಿರುವೆ. ನಿನ್ನ ನಾಮಾವಳಿಗಳನ್ನು ನಂಬಿ, ಸಮಸ್ತ ದೇವಗಣಗಳೂ ಕೃತಾರ್ಥರಾಗಿರುವುವು. ||೪೫||

ಮಹಾದೇವನೇ, ಋಗ್ವೇದವು ಅಗ್ನಿಮೀಳೆಪುರೋಹಿತಂ, ಎಂಬ ವಾಕ್ಯವನ್ನಾರಂಭಿಸಿ ನಿನ್ನನ್ನು ಸ್ತುತಿಸುತ್ತಿರುವುದು. ಯಜುರ್ವೇದವು, ಇಷೇತ್ವೋರ್ಜೇತ್ವಾ, ಎಂದು ಆರಂಭಿಸಿ ನಿನ್ನನ್ನು ಹೊಗಳುತ್ತಿರುವುದು. ಸಾಮವೇದವು ಅಗ್ನಆಯಾಹಿ ಎಂದು ಪ್ರಾರಂಭಮಾಡಿ, ಸರ್ವರಕ್ಷಕನಾದ ನಿನ್ನನ್ನು ಸ್ತುತಿಸುತ್ತಿರುವುದು. ಹೀಗೆ ವೇದತ್ರಯಗಳು ಸರ್ವದಾ ದಯಾಶಾಲಿಯಾದ ನಿನ್ನನ್ನು ಧ್ಯಾನಿಸುತ್ತಿರುವುವು. ||೪೬||

ಮಹೇಶ್ವರನೇ, ಸಕಲ ಕಲ್ಮಶರಹಿತನಾದ ನಿನ್ನನ್ನು ಈಗ ಅಥರ್ವಶೀರ್ಷೋಪನಿಷನ್ಮಂತ್ರದಿಂದ ಧ್ಯಾನಿಸುವೆವು. ಒಟ್ಟಿನಲ್ಲಿ ನಾಲ್ಕು ವೇದಗಳೂ, ಪ್ರತ್ಯೇ

ಕವಾಗಿ ಕಂಡುಬಂದರೂ, ನಿನ್ನಲ್ಲಿ ನಿರ್ಗುಣತ್ವವನ್ನು ಉಪಪಾದಿಸುವುದರಲ್ಲಿ ಸಮರ್ಥವಾಗಿವೆ. ಮಾತಿನಿಂದಲೂ, ಮನಸ್ಸಿನಿಂದಲೂ ವರ್ಣಿಸಲಾಗದ ನಿನ್ನನ್ನು ಸಕಲ ವೇದಗಳೂ, ·ಅಷ್ಟಮೂರ್ತಿಯೆಂದು ಹೊಗಳುತ್ತಾ ಸ್ತುತಿಸುತ್ತಿರುವುವು. ಇಂತಹ ಮಹಾಮಹಿಮನಾದ ಮಹೇಶ್ವರನೇ, ನಿನ್ನನ್ನು ನಾವು ಸರ್ವದಾ ಧ್ಯಾನ ಮಾಡುವೆವು" ಎಂದು ಎಲ್ಲಾ ದೇವತೆಗಳೂ ಶಂಕರನನ್ನು ಬಹುವಾಗಿ ಸ್ತೋತ್ರ ಮಾಡಿದರು. ||೯೭-೪೮||

ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ದೇವತೆಗಳು ಮಾಡಿದ ದೇವೀಸ್ತುತಿಯನ್ನು ವಿವರಿಸುವಂತಹ ಐವತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಚತುಃಪಂಚಾಶೋಽಧ್ಯಾಯಃ

—ಂಂ—

### ದೇವಕೃತೋಪನಿಷತ್ಸ್ತುತಿಃ

|| ದೇವಾ ಊಚುಃ ||

ಯೋ ವೈ ರುದ್ರಸ್ಸ ಭಗವಾನ್ ಯಶ್ಚ ಬ್ರಹ್ಮಾ ತಸ್ಮೈ ವೈ ನಮೋನಮಃ ।
ಯೋ ವೈ ರುದ್ರಸ್ಸ ಭಗವಾನ್ ಯಶ್ಚ ವಿಷ್ಣುಸ್ತಸ್ಮೈ ವೈ ನಮೋ ನಮಃ ||೧||

ಯೋ ವೈ ರುದ್ರಸ್ಸಭಗವಾನ್ ಯಶ್ಚ ರುದ್ರಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಾ ಚೋಮಾ ತಸ್ಮೈ ವೈ ನಮೋ ನಮಃ ||೨||

ಯೋ ವೈ ರುದ್ರಸ್ಸಭಗವಾನ್ ಯಶ್ಚ ವಿನಾಯಕಸ್ತಸ್ಮೈ ವೈ ನಮೋ ನಮಃ
ಯೋ ವೈ ರುದ್ರಸ್ಸಭಗವಾನ್ ಯಶ್ಚ ಸ್ಕಂದಸ್ತಸ್ಮೈ ವೈ ನಮೋ ನಮಃ||೩||

ಯೋ ವೈ ರುದ್ರಸ್ಸಭಗವಾನ್ ಯಶ್ಚೇಂದ್ರಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚಾಗ್ನಿಸ್ತಸ್ಮೈ ವೈ ನಮೋ ನಮಃ ||೪||

ಯೋ ವೈ ರುದ್ರಸ್ಸಭಗವಾನ್ ಯಶ್ಚ ವಾಯುಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಸೂರ್ಯಸ್ತಸ್ಮೈ ವೈ ನಮೋ ನಮಃ||೫||

---

### ಶ್ರೀಶಿವರಹಸ್ಯದಲ್ಲಿ ಐವತ್ತುನಾಲ್ಕನೆಯ ಅಧ್ಯಾಯ

ಸಕಲ ದೇವತೆಗಳೂ ಅಂಜಲಿ ಬದ್ಧರಾಗಿ ನಿಂತು ಮಹೇಶ್ವರನನ್ನು ಈ ರೀತಿಯಾಗಿ ಧ್ಯಾನಮಾಡತೊಡಗಿದರು. " ಓ ಮಹೇಶ್ವರನೇ, ಲೋಕದಲ್ಲಿ ರುದ್ರನೆಂದೂ, ಭಗವಂತನಾದ ಮಹೇಶ್ವರನೆಂದೂ ಪ್ರಸಿದ್ಧಿಗೊಂಡಿರುವ ನೀನೇ, ಬ್ರಹ್ಮನು. ನೀನೇ ವಿಷ್ಣುವು. ರುದ್ರನಾಮಕನಾಗಿರುವವನೂ ನೀನೇ. ಪಾರ್ವತಿ, ವಿನಾಯಕ, ಸ್ಕಂದ, ಇಂದ್ರ, ಅಗ್ನಿ, ವಾಯು, ಸೂರ್ಯ, ವರುಣ, ಯಮ, ನಿರ್ಋತಿ,

ಯೋ ವೈ ರುದ್ರಸ್ಸಭಗವಾನ್ ಯಶ್ಚ ವರುಣಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಯಮುಸ್ತಸ್ಮೈ ವೈ ನಮೋ ನಮಃ॥೬॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ನಿರೃತಿಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಈಶಾನಸ್ತಸ್ಮೈ ವೈ ನಮೋ ನಮಃ ॥೭॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ಕುಬೇರಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ನಕ್ಷತ್ರಾಣಿ ತಸ್ಮೈ ವೈ ನಮೋ ನಮಃ ॥೮॥
ಯೋ ವೈ ರುದ್ರಸ್ಸಭಗವಾನ್ ಯಶ್ಚಾಷ್ಟೌ ಗ್ರಹಾಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಋಷಯಸ್ತಸ್ಮೈ ವೈ ನಮೋ ನಮಃ ॥೯॥

ಯೋ ವೈ ರುದ್ರಸ್ಸಭಗವಾನ್ಯಶ್ಚಾಷ್ಟೌ ವಸವಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ದ್ವಾದಶಾದಿತ್ಯಾಸ್ತಸ್ಮೈ ವೈ ನಮೋ ನಮಃ ॥೧೦॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಏಕಾದಶರುದ್ರಾಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚಾಪಸ್ತಸ್ಮೈ ವೈ ನಮೋ ನಮಃ ॥೧೧॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಪೃಥಿವೀ ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ತೇಜಸ್ತಸ್ಮೈ ವೈ ನಮೋ ನಮಃ ॥೧೨॥

ಯೋ ವೈ ರುದ್ರಸ್ಸಭಗವಾನ್ಯಶ್ಚ ವಾಯುಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚಾಕಾಶಸ್ತಸ್ಮೈ ವೈ ನಮೋ ನಮಃ ॥೧೩॥

ಈಶಾನ, ಕುಬೇರ, ನಕ್ಷತ್ರಗಳು, ಗ್ರಹಗಳು, ಸಕಲ ಋಷಿಗಳೂ, ಅಷ್ಟವಸುಗಳು, ದ್ವಾದಶಾದಿತ್ಯರು, ಏಕಾದಶರುದ್ರರು, ಎಲ್ಲರೂ ನೀನೇ. ನಿನ್ನ ರೂಪಾಂತರವೇ, ಪೃಥವೀ, ಅಪ್, ತೇಜಸ್ಸು, ವಾಯು, ಆಕಾಶ ಇವುಗಳು. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯ

ಯೋ ವೈ ರುದ್ರಸ್ಸಭಗವಾನ್ಯಶ್ಚ ಭೂಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ಭುವಸ್ತಸ್ಮೈ ವೈ ನಮೋ ನಮಃ ॥೧೪॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಸುವಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ಮಹಸ್ತಸ್ಮೈ ವೈ ನಮೋ ನಮಃ ॥೧೫॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಜನಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ತಪಸ್ತಸ್ಮೈ ವೈ ನಮೋ ನಮಃ ॥೧೬॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಸತ್ಯಂ ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ಪ್ರಾಣಾಸ್ತಸ್ಮೈ ವೈ ನಮೋ ನಮಃ ॥೧೭॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಮನಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ಸರ್ವಂ ತಸ್ಮೈ ವೈ ನಮೋ ನಮಃ ॥೧೮॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಕಾಲಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ಮೃತ್ಯುಸ್ತಸ್ಮೈ ವೈ ನಮೋ ನಮಃ ॥೧೯॥

ಯೋ ವೈ ರುದ್ರಸ್ಸಭಗವಾನ್ಯಶ್ಚ ಭೂತಂ ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ಯಶ್ಚ ಭವಿಷ್ಯತ್ತಸ್ಮೈ ವೈ ನಮೋ ನಮಃ ॥೨೦॥

ಯೋ ವೈ ರುದ್ರಸ್ಸಭಗವಾನ್ಯಶ್ಚ ವರ್ತಮಾನಂ ತಸ್ಮೈ ವೈ ನಮೋ ನಮಃ ।
ಓಮಾದಾವಂತೇ ಚ ಭೂರ್ಭುವಸ್ಸ್ವಸ್ತ್ರಿರೋಂಕೃತಿಃ ॥೨೧॥

ಲೋಕಗಳೆಂಬ ಎಲ್ಲಾ ಲೋಕಗಳೂ ನೀನೇ ಆಗಿರುವೆ. ಕಾಲ, ಮೃತ್ಯು, ಇವುಗಳೂ ನೀನೇ. ಭೂತಭವಿಷ್ಯದ್ವರ್ತಮಾನಗಳೂ ನೀನೇ. ಇಂತಹ ಸಕಲ ಚರಾಚರವಸ್ತುರೂಪಿಯಾದ ಮಹೇಶ್ವರನಿಗೆ ನಮಸ್ಕಾರವು. ಈ ಸ್ತೋತ್ರಪಠನಕಾಲದಲ್ಲಿ ವಾಕ್ಯಗಳ ಆದಿ, ಮತ್ತು ಅಂತ್ಯದಲ್ಲಿಯೂ, ವ್ಯಾಹೃತಿ ಮಂತ್ರದ ಸಂಬಂಧವಾಗಿಯೂ, ಓಂಕಾರವನ್ನು ಪಠಿಸಬೇಕು. ಹೀಗೆ ತ್ರಿರಾವೃತ್ತಿ ಓಂಕಾರಪಠನವು ಶಿವತೃಪ್ತಿಕರವಾದದ್ದು. ||೧-೨-೩-೪-೫-೬-೭-೮-೯-೧೦-೧೧-೧೨-೧೩-೧೪-೧೫-೧೬-೧೭-೧೮-೧೯-೨೦-೨೧||

ಬ್ರಹ್ಮೈವ ತ್ವಂ ತ್ರಿಧೋರ್ಧ್ವಸ್ತ್ವಂ ಗತಿಃ ಪುಷ್ಟಿರ್ಮಹೇಶ್ವರಃ ।
ವಿಶ್ವಂ ಚ ವಿಶ್ವಾತೀತಸ್ತ್ವಂ ಹುತಂ ಪ್ರಹುತಮೇವ ಚ ॥೨೨॥

ಕೃತಂ ಚಾಕೃತಮೇತೇ ಚ ಪರಮಂ ಚ ಪರಾಯಣಂ ।
ನಾರಾಯಣಾದಿಜನಕೋ ಹ್ಯರ್ಯಮ್ಣೋ ವರುಣಸ್ಯ ಹಿ ॥೨೩॥

ಜನಿತಾ ತ್ವಂ ತಥಾ ವಾಯೋ ದ್ಯಾವಾ ಭೂಮ್ಯೋ ರ್ಮಹೇಶ್ವರಃ ।
ಸರ್ವೇಶಸ್ಸರ್ವಸಾಕ್ಷೀ ಚ ಸರ್ವ ಏವ ತ್ವಮೇವ ಹಿ ॥೨೪॥

ಅಗ್ರಾಹ್ಯಸ್ಸರ್ವಭೂತೇಷು ಸರ್ವೇಂದ್ರಿಯಗುಣಾತಿಗಃ ।
ಅಲಿಂಗೋಽಸ್ಯಶರೀರಸ್ತ್ವಂ ವ್ಯಾಪಕಶ್ಚ ಸನಾತನಃ ॥೨೫॥

ವಾಮನಂ ತ್ವಾಂ ಮಹಾದೇವಂ ಸರ್ವೇ ದೇವಾ ಉಪಾಸತೇ ।
ತ್ವತ್ತೋ ಜಾತಂ ಜಗಚ್ಛಂಭೋ ಸ್ಥಿತಂ ತ್ವಯ್ಯೇವ ಲೀಯತೇ॥೨೬॥

ಪರಬ್ರಹ್ಮವಸ್ತುವೇ ನೀನು. ಮೂರ್ತಿತ್ರಯಾತ್ಮಕನಾಗಿ ಕಾಣುವವನೂ ನೀನೇ. ಸ್ವರ್ಗ, ಮರ್ತ್ಯ, ಪಾತಾಳಾದಿ ಮೂರುಲೋಕಗಳನ್ನೂ ಮೀರಿ ನಡೆಯುವವನು ನೀನು. ಸಕಲರಿಗೂ ಗತಿಯೂ, ಪುಷ್ಟಿಯೂ ಒಡೆಯನೂ ನೀನೇ ಆಗಿರುವೆ. ಲೋಕರೂಪಿಯಾಗಿಯೂ, ಲೋಕಾತೀತನಾಗಿಯೂ, ಯಜಮಾನನಾಗಿಯೂ, ಯಾಗದ್ರವ್ಯವಾಗಿಯೂ ಕಂಡುಬರುವವನು ನೀನು. ||೨೨||

ಕೃತವಾದ ಮತ್ತು ಅಕೃತವಾದ ವಸ್ತುಜಾಲವೆಲ್ಲವೂ ನೀನೇ. ಶ್ರೇಷ್ಠನಾದವನೂ, ಕಾರ್ಯಾಸಕ್ತನಾದವನೂ, ನಾರಾಯಣ, ಸೂರ್ಯ, ವರುಣ, ವಾಯು, ಅಂತರಿಕ್ಷ, ಭೂಮಿ ಇವುಗಳಿಗೆಲ್ಲಾ ಉತ್ಪತ್ತಿಸ್ಥಾನನು ನೀನಲ್ಲವೆ! ಸರ್ವೇಶ್ವರನೆನಿಸಿ, ಸರ್ವಸಾಕ್ಷಿಯಾಗಿ, ಸಕಲ ವಸ್ತುರೂಪದಿಂದ ಭಾಸಮಾನವಾಗುತ್ತಿರುವವನೇ ಸರ್ವಶಕ್ತನಾದ ಮಹೇಶ್ವರನು. ||೨೩-೨೪||

ಪಂಚಭೂತಗಳೇ ನೀನಾಗಿದ್ದರೂ, ಅವುಗಳಿಗೆ ಸಿಕ್ಕದಿರುವವನು ನೀನು. ಯಾವ ಇಂದ್ರಿಯಗಳೂ ನಿನಗಿಲ್ಲ. ನಿನಗೆ ಒಂದು ಚಿಹ್ನೆಯಿಲ್ಲ. ಒಂದು ಆಕಾರದ ಶರೀರವಿಲ್ಲ. ಸರ್ವವ್ಯಾಪಕನೂ, ಅನಾದಿಪುರುಷನೂ ನೀನೇ ಆಗಿರುವೆ. ||೨೫||

ಸಕಲ ದೇವತೆಗಳೂ ನಿನ್ನನ್ನು ವಾಮನನೆಂದೂ, ಮಹಾದೇವನೆಂದೂ ಉಪಾಸನಮಾಡುವರು. ಶಂಕರನೇ! ಈ ಲೋಕವೆಲ್ಲವೂ, ನಿನ್ನಿಂದಲೇ ಜನಿಸಿರು

ತ್ವತ್ತೋ ನಾಸ್ತಿ ಪೃಥಕ್ಕಿಂಚಿನ್ನಭಿನ್ನಂ ಪರಮಾರ್ಥತಃ ॥೨೭॥

ಅಜಾಂ ಮಾಯಾಂ ರೋಹಿತಶುಕ್ಲಕೃಷ್ಣಾಂ
ಬಹೂನಸ್ಮಾನ್ ಜನಯಂತೀಂ ಸರೂಪಾಂ ।
ಅಜಸ್ತ್ವಮೇಕೋ ಜುಷಮಾಣೋಽನುಶೇಷೇ
ಜಹಾತ್ಯೇನಾಂ ಭುಕ್ತಭೋಗಾಮಜಸ್ತ್ವಂ ॥೨೮॥

ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ।
ತವಾವಯವಸಂಭೂತೈರ್ವ್ಯಾಪ್ತಂ ಸರ್ವಮಿದಂ ಜಗತ್ ॥೨೯॥

ನೇಹ ನಾನಾಸ್ತಿ ಕಿಂಚಿದ್ವೈ ತ್ವದಧಿಷ್ಠಿತಮೇವ ವಾ ।
ತ್ವಾಮವಜ್ಞಾಯ ದುರ್ಮೇಧಾಃ ಕೃತಕೃತ್ಯೋಽಭಿಮನ್ಯತೇ ॥೩೦॥

---

ವುದು. ನಿನ್ನಲ್ಲಿಯೇ ಲಯವಾಗುವುದು. ಪರಮಾರ್ಥವಾಗಿ ನಿನಗಿಂತ ಬೇರೆಯಾದ ವಸ್ತುವು ಜಗತ್ತಿನಲ್ಲಿ ಯಾವುದೂ ಇರಲಾರದು. ||೨೬-೨೭||

ಮಾಯಾ ಎಂಬ ಶಕ್ತಿಯೊಂದು ನಿನ್ನಂತೆಯೇ ಉತ್ಪತ್ತಿರಹಿತವಾದದ್ದು. ಆದರೆ ಕೆಂಪು, ಕಪ್ಪು, ಬಿಳುಪು ಎಂಬ ವರ್ಣಭೇದವನ್ನು ಹೊಂದಿಸತಕ್ಕದ್ದು. ಲೋಕದ ಸೃಷ್ಟಿಗೆ ಆಶಕ್ತಿಸಂಬಂಧವೇ ಮುಖ್ಯಕಾರಣ. ಆ ಮಾಯಾಸಂಬಂಧದಿಂದ ನೀನು ಜಗದ್ರೂಪಿಯಾಗಿ ತೋರಿ, ಜಗತ್ತಿನ ಭೋಗಾದಿಗಳನ್ನು ಅನುಭವಿಸಿ, ಕೊನೆಯಲ್ಲಿ ಮಾಯಾವಿಹೀನನಾಗಿ, ಏಕರೂಪದಿಂದ ಉಳಿಯುವನಾಗುವೆ. ಇದೇ ನಿನ್ನ ಸ್ವಸ್ವರೂಪವಲ್ಲವೇ ! ||೨೮||

ಬೇರೆ ಬೇರೆ ಮತಾನುಯಾಯಿಗಳು (ಸಾಂಖ್ಯರು) ಮಾಯೆಯನ್ನೇ ಪ್ರಕೃತಿಯೆನ್ನುವರು. ತತ್ಸಂಬಂಧಿಯಾದವನನ್ನೇ ಪುರುಷನೆನ್ನುವರು. ಈ ನಿಮ್ಮಿಬ್ಬರ ಸಂಬಂಧದಿಂದಲೇ ಈ ನಿಖಿಲ ಜಗತ್ತೂ ಉತ್ಪನ್ನವಾಗಿರುವುದು. ||೨೯||

ನಿನ್ನಿಂದ ಆಕ್ರಮಿಸಲ್ಪಟ್ಟ ಈ ಜಗತ್ತಿನಲ್ಲಿ ನಿನ್ನ ಹೊರತು ಬೇರೆಯಾದ ಮತ್ತೊಂದು ವಸ್ತುವಿಲ್ಲ. ಇಂತಹ ನಿನ್ನ ಸ್ವರೂಪವನ್ನರಿಯದೆ ಅಜ್ಞಾನಿಗಳು ತಾವು ಧನ್ಯರಾದೆವೆಂದು ತಿಳಿಯುವರು. ||೩೦||

ನ ಸಾಂಪರಾಯಂ ಪ್ರವಿದಾಮ ಬಾಲಾ
ಮೂಢಾ ವಯಂ ಕೇವಲಂ ತ್ವದ್ವಿಹೀನಾಃ ।
ಕಿಂಚಿತ್ತೃಣಂ ಚಾಲಯಿತುಂ ಚ ನೇಶಾ
ಸ್ತ್ವಂ ನೋ ಗತಿಃ ಪರಮಂ ಚಾಸಿ ಶಂಭೋ ॥೩೧॥

ತ್ವಯಾವೃತಂ ಲೋಕಮಿದಂ ಸಮಗ್ರಂ
ಕೋ ವಾ ಹೀನಂ ಚೇತತೇ ತ್ವದ್ವಿಹೀನಃ ।
ಏಕೋ ರುದ್ರಸ್ತ್ವಂ ಹಿ ಸರ್ವಸ್ಯ ಕರ್ತಾ
ವಿಶ್ವಾತೀತಃ ಪರಮಶ್ಚೇತಕೋಽಸಿ ॥೩೨॥

ಸರ್ವಭೂತಾತಿಗಶ್ಚಾತ್ಮಾ ಕೋಶಾತೀತಃ ಪರಾತ್ಪರಃ ।
ಮಹಾಗ್ರಾಸಸ್ತ್ವಮೇವೇಶ ಮೃತ್ಯುಸ್ತ್ವದುಪಸೇಚನಃ ॥೩೩॥

ಓದನಂ ತವ ಭೂತೇಶ ಬ್ರಹ್ಮಕ್ಷತ್ರಂ ಜಗತ್ತಥಾ ।
ಬ್ರಹ್ಮಪುಚ್ಛಂ ಪ್ರತಿಷ್ಠಾ ತ್ವಂ ಶಾಂತಿರಕ್ಷರಮೇವ ಚ ॥೩೪॥

---

ದೇವದೇವನೇ, ನಿನ್ನನ್ನು ಬಿಟ್ಟು ನಾವು ಮುಂದಿನವಿಷಯವಾವುದನ್ನೂ ಸರಿಯಾಗಿ ತಿಳಿಯಲಾರೆವು. ಕೇವಲ ಬಾಲಕರಂತೆ ನಾವು ಅಜ್ಞಾನಿಗಳು. ಅದರಿಂದಲೇ ನಿನ್ನ ಪರೋಕ್ಷದಲ್ಲಿ ನಿನ್ನಿಂದ ಏರ್ಪಡಿಸಲ್ಪಟ್ಟ ಒಂದು ಹುಲ್ಲುಕಡ್ಡಿಯನ್ನೂ ಅಲ್ಲಾಡಿಸಲಾರದೇ ಹೋದೆವು. ಶಂಭುವೇ, ಶಂಕರನೇ, ನಮಗೆ ನೀನೇ ಗತಿಯು. ನಿನ್ನನ್ನು ಬಿಟ್ಟು ನಾವು ಮತ್ತಾರನ್ನು ಶರಣುಹೊಂದೋಣ. ||೩ .||

ಈ ಸಂಪೂರ್ಣ ಜಗತ್ತೆಲ್ಲಾ ನಿನ್ನಿಂದ ಆವೃತವಾಗಿರುವಾಗ, ನಿನ್ನನ್ನು ಬಿಟ್ಟು ಯಾವನು ತಾನೇ ಚೈತನ್ಯವಿಶಿಷ್ಟನಾಗುವನು. ಸಕಲ ಲೋಕಕರ್ತನೂ, ಪ್ರಪಂಚವನ್ನು ಮೀರಿದವನೂ, ದಿವ್ಯಶಕ್ತಿಯುಳ್ಳವನೂ ಆದ ನೀನೊಬ್ಬನೇ ಸ್ಥಿರವಾದ ವಸ್ತುವಲ್ಲವೇ ? ಸಕಲಕ್ಕು ಚೈತನ್ಯದಾಯಕನೇ ನೀನಲ್ಲವೆ ! ||೩೨||

ಸಕಲ ಭೂತಗಳಿಗೂ ಒಳಪಡದೆ, ಅನ್ನಮಯಾದಿ ಪಂಚಕೋಶಗಳಿಂದ ದೂರನಾಗಿ, ಪರಾತ್ಪರವಸ್ತುವೆನಿಸಿ, ಲೋಕವನ್ನೆಲ್ಲಾ ಕಬಳಿಸುವ ಮೃತ್ಯುರೂಪಿಯಾದ ಮಹಾಮಹಿಮನು ನೀನಾಗಿರುವೆ. ||೩೩||

ಬ್ರಹ್ಮ, ಕ್ಷತ್ರಾದಿ ಜಾತಿವಿಶಿಷ್ಟವಾದ ಈ ಜಗತ್ತೆಲ್ಲವೂ ನಿನಗೆ ಓದನಪ್ರಾಯ

ಹೃದಿಸ್ಥಾ ದೇವತಾಸ್ಸರ್ವಾ ಹೃದಿ ಪ್ರಾಣಾಃ ಪ್ರತಿಷ್ಠಿತಾಃ ।
ಹೃದಯಂ ಪುರುಷೋಽಸಿ ತ್ವಂ ತಿಸ್ರೋ ಮಾತ್ರಾಃ ಪರಶ್ಚ ಸಃ ॥೩೫॥

ಓಂಕಾರಃ ಪ್ರಣವೋ ವ್ಯಾಪೀ ಹ್ಯನಂತೋಽನಂತವಿಕ್ರಮಃ ।
ತಾರಂ ಸೂಕ್ಷ್ಮಂ ವೈದ್ಯುತಸ್ತ್ವಂ ಶುಕ್ಲಂ ಸರ್ವಶರೀರಗಂ ॥೩೬॥

ಈಶಾನೋ ಭಗವಾನ್ ರುದ್ರೋ ಮಹಾದೇವಸ್ತ್ವಮೀಶ್ವರಃ ।
ಪರಂ ಬ್ರಹ್ಮ ಪರಂ ಧಾಮ ಪರಃ ಪಾರಃ ಪರಾಯಣಃ ॥೩೭॥

ಶೂರೋ ವೀರಃ ಪುರುಷೋ ಭೂತಸಂಸ್ಥೋ
ವಿಶ್ವೋ ವಿಶ್ವೇಶಃ ಪ್ರಾಣದಶ್ಚಾವ್ಯಯಾತ್ಮಾ ।
ಚಕ್ಷುಷಶ್ಚಕ್ಷುಶ್ಶ್ರೋತ್ರ ಏವ ತ್ವಮೀಶ
ಮನಸೋ ಮನೋ ಬುದ್ಧೇ ರ್ಬೋದ್ಧಾ ತ್ವಮೇವ ॥೩೮॥

ವಾಗಿದೆ. ಆದರೆ ಶಾಂತಕಾಲದಲ್ಲಿ ಶಾಂತಿರೂಪದಿಂದ ನಾಶರಹಿತನಾಗಿ, ಬ್ರಹ್ಮ ಪದವಾಚ್ಯನಾಗಿ ಉಳಿಯುವ ವ್ಯಕ್ತಿಯೆಂದರೆ ನೀನೊಬ್ಬನೇ. ॥೩೪॥

ನಿನ್ನ ಹೃದಯದಲ್ಲಿ ಸಮಸ್ತ ದೇವತೆಗಳೂ ನೆಲಸಿರುವರು. ಸಕಲ ಪ್ರಾಣ ವಾಯುಗಳೂ ನಿನ್ನಲ್ಲಿಯೇ ಇರುವುವು. ನೀನೇ ಸಕಲ ಲೋಕಕ್ಕೂ ಹೃದಯ ಸ್ಥಾನನೂ, ಪುರುಷನೂ ಆಗಿರುವೆ. ತ್ರಿಮಾತ್ರಾಕಾಲವಿಶಿಷ್ಟವಾದ ಪ್ರಣವವೇ ನೀನು. ॥೩೫॥

ಓಂಕಾರರೂಪವಾದ ಪ್ರಣವಾಕಾರನೂ, ಸರ್ವವ್ಯಾಪಕನೂ, ಅನಂತಗುಣ ಪರಿಪೂರ್ಣನೂ, ಅಣುಮಹದ್ವಸ್ತುರೂಪಿಯೂ, ವಿದ್ಯುತ್ತೇ ಮೊದಲಾದ ತೇಜೋ ದೇಹಿಯೂ, ಸರ್ವಶರೀರವ್ಯಾಪಿಯೂ ಆದವನೇ ನೀನು. ॥೩೬॥

ಈಶಾನನೂ, ರುದ್ರನೂ, ಮಹಾದೇವನೂ, ಪರಮೇಶ್ವರನೂ ನೀನೇ ಆಗಿ ರುವೆ. ತೇಜೋನಿಧಿಯಾಗಿ, ಅಂತ್ಯವಿಲ್ಲದೆ ಸಮಸ್ತರಿಗೂ ಭಜಕನಾಗಿರುವ ಪರ ಬ್ರಹ್ಮವಸ್ತುವೇ ನೀನು. ॥೩೭॥

ಶೂರನೂ, ವೀರನೂ, ಪುರುಷನೂ, ಸರ್ವಭೂತಾಂತರ್ವರ್ತಿಯೂ ನೀನೇ. ಪ್ರಪಂಚವೇ ನೀನು. ನೀನೇ ಪ್ರಪಂಚಕ್ಕೆ ಒಡೆಯನು. ಲೋಕಕ್ಕೆಲ್ಲಾ ಪ್ರಾಣ ದಾತೃವಾಗಿ ನಾಶರಹಿತನಾಗಿರುವೆ. ಚಕ್ಷುರಿಂದ್ರಿಯವೂ, ಶ್ರೋತ್ರೇಂದ್ರಿಯವೂ,

ಪತಿಃ ಪತೀನಾಂ ಪಶವೋ ವಯಂ ಚಾ
ಪ್ಯಸ್ಮಾನಹೋ ಪಾಸಿ ತಥಾತ್ಸಿ ದೇವಃ ।
ತ್ವದುದ್ಭವಂ ಸರ್ವಮೀಶಸ್ತ್ವಮೇಕೋ
ನಾನೇವ ಭಾಸಿ ಪುರುಷಸ್ಯ ಮಾಯಯಾ ॥೩೯॥

ತಿಲೇಷು ತೈಲಂ ದಧಿನೀವ ಸರ್ಪಿ
ರಾಪಸ್ಸ್ರೋತಸ್ಸ್ವರಣೀಷು ವಹ್ನಿಃ ।
ಏವಂ ಪ್ರೋತಂ ತ್ವಯ್ಯದ್ವಿತೀಯೋ ಮಹೇಶ
ತ್ವಜ್ಜಂ ತ್ವಲ್ಲಂ ತ್ವದನಂ ಚೈತದೇವ ॥೪೦॥

ನ ವಿದ್ಯತೇ ಗುಣಕರ್ಮಾದಿನಾಮ
ರೂಪಾದಿಶಕ್ತಿಜ್ಞಾನಶಕ್ತ್ಯಾ ವಿಭಿನ್ನಃ ।
ಹೃದಯಸ್ತ್ವಂ ಭೂತಭವ್ಯಃ ಪುರಾಣೋ
ಹ್ಯೇಕೋ ವೀರೋ ವೇದಗುಹ್ಯೈಕವೇದ್ಯಃ ॥೪೧॥

ಮನಇಂದ್ರಿಯವೂ ನೀನೇ ಆಗಿದ್ದೀಯೆ. ಆ ಇಂದ್ರಿಯಗಳಿಗೆ ವಿಷಯನೂ ನೀನೇ. ಬುದ್ಧಿರೂಪಿಯೂ, ಬುದ್ಧಿಯುಳ್ಳವನೂ, ಬುದ್ಧಿಗೆ ವಿಷಯನೂ ನೀನೇ ಆಗಿರುವೆಯಲ್ಲವೇ. ||೩೮||

ಶೈವದರ್ಶನದ ಕ್ರಮದಂತೆ ನಾವೆಲ್ಲರೂ ಪಶುಗಳು. ಸಂಸಾರಬಂಧನವೇ ಪಾಶ. ನೀನೇ ನಮಗೆಲ್ಲಾ ಪತಿಯು. ಅದರಿಂದಲೇ ನೀನು ನಮ್ಮನ್ನು ರಕ್ಷಿಸುವೆ. ಹಾಗೆಯೇ ನಾಶಗೊಳಿಸುವೆ. ನಿನ್ನಿಂದಲೇ ಹುಟ್ಟಿದ ಜಗತ್ತಿನಲ್ಲಿ ನೀನೇ ಮಾಯಾ ಸಂಬಂಧದಿಂದ ನಾನಾವಸ್ತುಗಳಾಗಿ ಭಾಸಮಾನವಾಗುತ್ತಿರುವೆ. ||೩೯||

ಎಳ್ಳಿನಲ್ಲಿ ಎಣ್ಣೆಯೂ, ಮೊಸರಿನಲ್ಲಿ ತುಪ್ಪವೂ, ಪ್ರವಾಹದಲ್ಲಿ ನೀರೂ, ಬನ್ನಿಮರದಲ್ಲಿ ಅಗ್ನಿಯೂ ಅಡಗಿರುವಂತೆ ಮಹೇಶ್ವರನೇ, ನಿನ್ನಲ್ಲಿ ಈ ಜಗತ್ತೆಲ್ಲವೂ ಲೀನವಾಗಿ ನಿಂತಿರುವುದು. ನಿನ್ನಿಂದಲೇ ಈ ಪ್ರಪಂಚವು ಉತ್ಪತ್ತಿಯಾಗುವುದು. ನಿನ್ನಲ್ಲಿಯೇ ಅಡಗುವುದು. ನಿನ್ನಿಂದಲೇ ರಕ್ಷಿತವಾಗುವುದು. ||೪೦||

ಗುಣ, ಕರ್ಮ, ನಾಮ, ರೂಪ ಇತ್ಯಾದಿ ಯಾವ ಗುರುತುಗಳೂ ನಿನ್ನಲ್ಲಿ ಕಂಡುಬರುವುದಿಲ್ಲ. ಕೇವಲ ಜ್ಞಾನಶಕ್ತಿಯೂ ನೀನಲ್ಲ. ಒಟ್ಟಿನಲ್ಲಿ ಸಕಲ ಪ್ರಪಂಚಕ್ಕೂ ಹೃದಯರೂಪಿಯೇ ನೀನು. ಭೂತ ಮತ್ತು ಭವಿಷ್ಯತ್ಕಾಲದ ರೂಪನೂ

ಓಂಕಾರಾದಿಸ್ವರರೂಪೋ ಮಹೇಶ
ವಿಧಾಮಾ ತ್ವಂ ವರಣೀಯಸ್ತಥಾಣುಃ ।
ಮಹಾನ್ ಜೇತಾ ಜಿಗ್ಯಶ್ಚಾಪರಾಜಿತೋ
ಹ್ಯಭ್ರಾವಕಾಶಃ ಖಂ ಚ ಕಂ ಚ ತ್ವಮೇವ ॥೪೨॥

ವಿಭ್ರಾಟ್ ಸಮ್ರಾಟ್ ಭೂಮಧಾಮಾ ತ್ವಮೇವ
ಪಿತಾಸಿ ಮಾತಾ ಭ್ರಾತೃಕಶ್ಚಾದಿವೇದ್ಯಃ ।
ರುಜಾಂ ಹರಸ್ತ್ವಂ ಭಿಷಕ್ಪಾಪಹೀನೋ
ಹ್ಯಪಾಣಿಪಾದೋ ನಿರ್ವಿಕಾರಸ್ತ್ವಮಾತ್ಮಾ ॥೪೩॥

ಸ್ವಯಂ ಭಾನಃ ಪರ ಏಕೋ ಜ್ಯೋತಿರೇವ
ತ್ವತ್ತೋ ನ ಓಜಸ್ವಿಷ್ಟತಮೋಽಸ್ತಿ ದೇವಃ ।
ತ್ವಂ ನ ದಿವಾ ನೈವ ರಾತ್ರಿಸ್ತ್ವಮೀಶ
ಸ್ತ್ವಂ ಸೀಮಾ ವಿಶ್ವತಶ್ಚಕ್ಷುರೀಶಃ ॥೪೪॥

ನೀನೇ. ವೇದದಲ್ಲಿ ಉಕ್ತವಾದ ಸಕಲ ಗುಣಗಳಿಂದಲೂ ನಿನ್ನನ್ನು ನಾವು ತಿಳಿಯ ಬಹುದಾಗಿದೆ. ಏಕರೂಪಿಯಾಗಿ ವೀರನೆನಿಸಿರುವವನೂ ನೀನಲ್ಲವೆ. ॥೪೧॥

ಮಹೇಶ್ವರನೇ, ಓಂಕಾರಾದಿಗಳಿಗೆ ಸ್ವರರೂಪದಲ್ಲಿರುವವನೂ, ತೇಜಶ್ಶಾಲಿಯೂ, ಪೂಜ್ಯನೂ, ಅಣುಮಹದ್ರೂಪಧಾರಿಯೂ, ಜಯಿಸುವವನೂ, ಜಯಿಸಲ್ಪಡುವವನೂ, ಮತ್ತೊಬ್ಬರಿಂದ ಜಯಿಸಲಾಗದವನೂ, ಸಕಲಾಕಾಶದಂತೆ ವ್ಯಾಪಕನೂ, ಅಂತರಿಕ್ಷವೂ, ಜಲರಾಶಿಯೂ ನೀನೇ ಆಗಿರುವೆ. ॥೪೨॥

ಪ್ರಪಂಚದಲ್ಲಿ ವಿಶೇಷವಾಗಿ ಪ್ರಕಾಶಿಸುವವನೂ, ಲೋಕೈಕಪ್ರಭುವೂ, ತೇಜೋನಿಧಿಯೂ, ಲೋಕಕ್ಕೆ ಮಾತಾಪಿತೃರೂಪದಿಂದಲೂ, ಭ್ರಾತೃಸ್ಥಾನದಿಂದಲೂ, ತೋರಿಬರುವವನೂ ನೀನೇ ಆಗಿರುವೆ. ಸಕಲರೋಗಗಳಿಗೂ ನೀನೇ ಔಷಧಿಪ್ರಾಯನು. ಪಾಪರಹಿತನೂ, ಪಾಣಿಪಾದಾದಿ ಅವಯವನಿರ್ಮುಕ್ತನೂ, ನಿರ್ವಿಕಾರಸ್ವರೂಪನೂ ಆದ ಪರಮಾತ್ಮರೂಪಿಯೂ ನೀನೇ ಅಲ್ಲವೇ. ॥೪೩॥

ಸ್ವಯಂಪ್ರಕಾಶಕನೂ, ಏಕರೂಪಿಯೂ, ಜ್ಯೋತೀರೂಪನೂ, ಆಗಿರುವೆ. ನಿನಗಿಂತ ತೇಜಸ್ವಿಯಾದ ಮತ್ತೊಬ್ಬ ದೇವನು ಎಲ್ಲೂ ಇರಲಾರನು. ನಿನಗೆ

ನ ವೇದಾಂತಾ ನಾಪಿ ವೇದಾಶ್ಚ ತೇ ವೈ
ತವ ಜ್ಞಾನಂ ಮನಸೈವಾದ್ಯ ವೃತ್ತಂ ।
ಆಕಾಶಃ ಪೃಥಿವೀ ಸಲಿಲಂ ಚ ವಾಯು
ಸ್ತೇಜಶ್ಚಾಸಿ ಪ್ರಥಿತಂ ತೇ ಜಗಚ್ಚ ॥೫೫॥

ವಿಶ್ವಸ್ಯ ನೇತಾ ವಿಶ್ವಭರ್ತಾ ತ್ವಮೀಶ
ಸ್ತವ ಜ್ಞಾನಾತ್ಸರ್ವಮೇವೇಹ ವಿಂದೇತ್ ।
ತವಾಜ್ಞಾನಾನ್ಮೋಹಿತಾಸ್ಸರ್ವ ಏವ
ತವ ಪ್ರಸಾದಾದಂಬಯಾ ಬೋಧಿತಾಸ್ಸ್ಮಃ ॥೫೬॥

ಅವಸ್ಥಾತೀತಃ ಪರ ಆತ್ಮಾ ತ್ವಮೇವ
ಬ್ರಹ್ಮೈವ ತಂ ಸಂಸರಸ್ಯಾದಿರೂಪಃ ।
ವಿಶೋಕೋ ವಿಮೃತ್ಯುರಜಿಘ್ತ್ಸೋ
ಪಿಪಾಸಶ್ಶರೀರಹೀನೋಽಸ್ಯಜರಃ ಪುರಾಣಃ ॥೫೭॥

ರಾತ್ರಿಯೂ, ಹಗಲೂ, ಪ್ರತ್ಯೇಕವಾಗಿ ತೋರುವುದಿಲ್ಲ. ನೀನೇ ಪ್ರಪಂಚಕ್ಕೆ ಎಲ್ಲೆಯಂತಾಗಿರುವೆ. ನೀನೇ ಜಗಚ್ಚಕ್ಷುವು. ॥೫೪॥

ವೇದಾಂತಗಳಾದ ಉಪನಿಷತ್ತುಗಳಾಗಲಿ, ವೇದಗಳಾಗಲಿ ನಿನ್ನ ವಿಷಯವನ್ನು ಸ್ಪಷ್ಟೀಕರಿಸಲು ಸಾಧ್ಯವಾಗಲಾರವು. ಪೃಥಿವೀ, ಅಪ್ ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಾತ್ಮಕವಾದ ಈ ಜಗತ್ತೇ ನೀನಾಗಿರುವೆ. ॥೫೫॥

ಲೋಕನಾಯಕನೂ, ಲೋಕರಕ್ಷಕನೂ, ಜಗದೊಡೆಯನೂ ನೀನೇ ಆಗಿರುವೆ. ನಿನ್ನ ಸ್ವರೂಪವನ್ನರಿತವನೇ ಎಲ್ಲವನ್ನೂ ಅರಿತವನಾಗುವನು. ನಿನ್ನನ್ನು ಸರಿಯಾಗಿ ಅರಿಯದೆ ನಾವು ಮೋಹವಿಶಿಷ್ಟರಾಗಿ ಹೋಗಿರುವೆವು. ನಿನ್ನ ಅನುಗ್ರಹ ಬಲದಿಂದಲೇ ನಾವು ದೇವಿಯಿಂದ ಈಗ ಉಪದಿಷ್ಟರಾಗಿರುವೆವು. ॥೫೬॥

ಜಾಗ್ರದಾದಿ ಅವಸ್ಥಾತ್ರಯರಹಿತನಾಗಿ, ಪರಬ್ರಹ್ಮರೂಪಿಯಾಗಿ, ಮಾಯಾ ಸಂಬಂಧದಿಂದ ಸಂಸಾರಿಯಾಗಿ ತೋರಿಬರುವೆ. ನಿನಗೆ ಶೋಕವಾಗಲಿ, ಮರಣವಾಗಲಿ, ಹಸಿವು ಬಾಯಾರಿಕೆಗಳಾಗಲಿ, ಶರೀರಾದಿಗಳಾಗಲಿ ಕಂಡುಬರುತ್ತಿಲ್ಲ. ॥೫೭॥

ಋತಂ ಸತ್ಯಂ ನಾಮರೂಪಾತಿಗಸ್ತ್ವಂ
ತವಾಮೇಯರೂಪಂ ಕೋ ಹಿ ವೇದೇದನೇವ ।
ಋಚೋ ಅಕ್ಷರೇ ಪರಮಸ್ತ್ವಂ ಮಹೇಶ
ನಾನ್ಯತ್ತ್ವತ್ತೋ ಯದ್ಭವೇದೇದಮಾರ್ತಂ ॥೪೮॥

ನಾನ್ಯದ್ದೃಕ್ಪಶ್ಯತಿ ಪಶ್ಯಕಸ್ತ್ವಂ
ದೃಷ್ಟೇರ್ದ್ರಷ್ಟಾ ವಾಚ್ಯವಾಚಾದಿಹೀನಃ ।
ವಿದ್ಯಾಧೀಶಸ್ಸ್ವರ ಏಕೋ ಮಹೇಶ
ಸ್ತ್ವಮೇವ ತ್ವಂ ವೇದ ಯೋಽಸೀಶ ಏವ ॥೪೯॥

ನಮಸ್ತೇ ಹರಸೇ ಶೋಚಿಷೇ ತೇ ನಮಸ್ತೇ
ಅಸ್ತ್ವರ್ಚಿಷೇ ದೇವದೇವ ವಿಶ್ವಾಧೀಶಶ್ಶಂಕರೋ ವೇದವೇದ್ಯಃ ।
ಅನ್ಯತ್ತ್ರಪಂತು ಹೇತಯೋ ಘೋರರೂಪಾ
ಭಕ್ತೇಷು ತ್ವಂ ಶಿವೋ ಭವ ಶತ್ರೂನಸ್ಮಾಕಂ ಜಹಿ ಶೂಲೇನ ಶಂಭೋ॥೫೦॥

---

ಮಿಥ್ಯಾಸಂಬಂಧವಿಲ್ಲದ ಸತ್ಯರೂಪಿಯು ನೀನು. ನಿನಗೆ ನಾಮರೂಪಗಳಿರುವುದಿಲ್ಲ. ಅಥವಾ ನೀನು ಹೊಂದುವ ರೂಪವನ್ನು ಊಹಿಸಿ ತಿಳಿಯಲಾಗುವುದಿಲ್ಲ. ಮಹೇಶ್ವರನೇ, ನೀನು ಸತ್ಯ, ಸ್ಥಿರತ್ವ, ಇವುಗಳಲ್ಲಿ ಅತ್ಯಂತ ಪರಮನೆನಿಸಿಕೊಂಡಿರುವೆ. ತ್ವದ್ಭಿನ್ನನಾಗಿ ತ್ವತ್ಸದೃಶನಾಗಿರುವ ಬೇರೊಂದು ವಸ್ತುವು ಮತ್ತಾವುದೂ ಇರಲಾರದು. ||೪೮||

ಚಕ್ಷುರಿಂದ್ರಿಯವು ಯಾರನ್ನೂ ನೋಡಲಾರದು. ನಿಜವಾಗಿ ನೋಡುವ ವಸ್ತುವು ತದಂತರ್ಗತವಾಗಿ ನೀನೇ ಆಗಿರುವೆ. ದೃಷ್ಟಿಗೆ ದರ್ಶನಶಕ್ತಿಯನ್ನು ಕೊಡುವವನು ನೀನು ವಾಚ್ಯವಾಗಾದಿಗಳಿಗೆ ಸಿಕ್ಕದವನಾಗಿಯೂ ಇರುವೆ. ವಿದ್ಯಾಧೀಶನಾಗಿ ಸ್ವರರೂಪಿಯಾಗಿ, ಮಹೇಶ್ವರನಾಗಿ, ಈಶ್ವರನೆನಿಸಿರುವವನು ನೀನೇ ಆಗಿದ್ದೀಯಲ್ಲವೆ ? ||೪೯||

ಸಮಸ್ತ ಪಾಪನಿವಾರಕನೂ, ದುಃಖನಾಶಕನೂ, ತೇಜೋರೂಪಿಯೂ, ಜ್ವಾಲಾಕಾರನೂ ಆದ ದೇವದೇವನೇ ನಿನಗೆ ವಂದನೆ. ನೀನು ವಿಶ್ವಾಧೀಶನು, ಶಂಕರನು, ವೇದಪ್ರತಿಪಾದ್ಯನು. ನಿನ್ನ ಆಯುಧಗಳಾದರೋ ಬಹಳ ಕ್ರೂರವಾದವುಗಳು. ಅಂತಹ ಘೋರಾಯುಧಗಳನ್ನು ನಿನ್ನ ಭಕ್ತರಲ್ಲದವರಮೇಲೆ ಪ್ರಯೋಗಿಸು,

ಯ ಇಮಂ ವಿಶ್ವಂ ಭುವನಂ ಯಾಸಿ ಜುಹ್ವತ್ ।
ದೃಷ್ಟಿಃ ಪ್ರಥಮೋ ವೋ ಮನಃಪದ್ಮಸಂಸ್ಥಃ
ತ್ವಮಾಶಿಷಂ ದ್ರವಿಣಂ ಧೇಹಿ ಶಂಭೋ ।
ವಿಶ್ವಕರ್ತಾ ಮನಸಾ ಸಂಪ್ರದೃಶ್ಯೋ
ಧಾತಾ ವಿಧಾತಾ ಪರಮೋಽಪ್ಯಸಂದೃಕ್ ॥೫೧॥

ತೇಷಾಮಿಷ್ಟಾನಿ ತವ ಪಾದಪೂಜಯಾ
ಸರ್ವಂ ಲಭತ್ಯೇವ ನ ಹಿ ಸಂಶಯೋಽತ್ರ ।
ತ್ವಂ ನೋ ಮಾತಾ ತ್ವಂ ಪಿತಾ ಚೋಪನೇತಾ
ಮಾತಾ ಬಂಧುಃ ಪರಮೋ ನೈ ಗುರುಸ್ತ್ವಂ ॥೫೨॥

ತ್ವಂ ದೇವೇಷು ಪ್ರಥಿತೋ ನಾಮತಸ್ತ್ವೇಕ
ಏವೇದಂ ರುದ್ರಸ್ತ್ವಾಮನಾಕ್ಪೂರ್ವಸೂರಾಃ ।

---

ಭಕ್ತರ ವಿಷಯದಲ್ಲಿ ಮಂಗಳಕರನಾಗು. ನಮ್ಮ ಶತ್ರುಗಳ ತಂಡವನ್ನು ನಿನ್ನ ತ್ರಿಶೂಲಾಯುಧದಿಂದ ಧ್ವಂಸಮಾಡು. ॥೫೦॥

ಕಣ್ಣಿಗೆ ಕಾಣುವ ಈ ಜಗತ್ತನ್ನೆಲ್ಲಾ ಪ್ರಾರಂಭದಲ್ಲಿಯೇ ನಿನ್ನ ತೇಜಸ್ಸಿಗೆ ಆಹುತಿಯನ್ನಾಗಿ ಮಾಡುವೆ. ಮನಸ್ಸೆಂಬ ಕಮಲದಲ್ಲಿ ನಿನ್ನನ್ನು ಧ್ಯಾನಿಸುವುದೇ ನಿನ್ನ ಕೃಪಾದೃಷ್ಟಿಗೆ ಪ್ರಾರಂಭ ಕಾರಣ. ನಮ್ಮನ್ನು ಆಶೀರ್ವದಿಸಿ ನಮಗೆ ಸುಖ ಸಂಪತ್ತುಗಳನ್ನು ಅನುಗ್ರಹಿಸು. ನಾವು ಮನಸ್ಸಿನಲ್ಲಿ ನಿನ್ನನ್ನು ವಿಶ್ವಕರ್ತನೆಂದೂ, ಧಾತೃವೆಂದೂ, ವಿಧಾತೃವೆಂದೂ, ದೊಡ್ಡವಸ್ತುವಾದರೂ ದೃಗ್ಗೋಚರನಲ್ಲದವನೆಂದೂ ಭಾವಿಸಿರುವೆವು. ॥೫೧॥

ಭಕ್ತರ ಇಷ್ಟಾರ್ಥಗಳೆಲ್ಲವೂ ನಿನ್ನ ಪಾದಪೂಜೆಯಿಂದಲೇ ಸಿದ್ಧಿಸುವುದು. ಅದರಲ್ಲಿ ಯಾವ ಸಂಶಯವೂ ಇಲ್ಲ. ನಿನ್ನ ಭಕ್ತರಿಗೆ ನೀನೇ ತಾಯಿ, ನೀನೇ ತಂದೆ. ಜ್ಞಾನದಾತೃವೂ, ಬಂಧು ಪ್ರಾಯನೂ, ಪರಮಗುರುಸದೃಶನೂ ನೀನೇ ಆಗಿರುವೆ. ॥೫೨॥

ಪರಶಿವನೇ, ನೀನೇ ಸಕಲ ದೇವತೆಗಳಲ್ಲಿಯೂ ಶ್ರೇಷ್ಠನಾದವನು. ಅಂತಹ ದೇವದೇವನು ನೀನೊಬ್ಬನೇ. ಹಿಂದಿನ ಜ್ಞಾನಿಗಳೂ, ಇಂದಿನ ವಿದ್ವಾಂಸರೂ ಸಹ

ನೇತ್ತುಂ ಚ ತ್ವಾಂ ನೂತನಾಶ್ಚಾಪಿ ಶಂಭೋ
ಹ್ಯಪ್ರೂತಪೂರ್ತಂ ಜಗದೇಕಂ ತ್ವಯಾರ್ತಂ ॥೫೩॥

ಯದ್ಭೂತಜಾಲಂ ನಿಖಿಲಂ ನ್ಯೈ ವಿಸೃಷ್ಟ ।
ನೇತಾದೃಶಂ ತ್ವಾಂ ನ ವಿದಂತಿ ಕೇಚಿದ್ದ್ವ
ಷ್ಟ್ಯಂತರೇಣ ಪರಿಪಶ್ಯಂತಿ ಮೂಢಾಃ ।
ಮಾಯಾನೀಹಾರಪ್ರಾವೃತಾಶಾಸ್ತ್ರಜನ್ಯಾಃ
ಅಸೂಸ್ತೃಪ್ಯಾ ಭೋಗಭಾಜೋ ಭುವಃ ಕೇ ॥೫೪॥

ಯಜ್ಞೈರ್ದಾನೈಃ ಕಾಮುಕಾನ್ಯೈಶ್ಚ ಬಾಲಾ
ದಿವಃ ಪರಃ ಪೃಥಿವ್ಯಾಸ್ತ್ವಂ ಪರಶ್ಚ ।
ದೇವಾಸುರೈಸ್ತ್ವಂ ಪುರೋ ಮೂಢಗರ್ಭೋ
ಭೂತಾನಾಂ ತ್ವಂ ಮಹಿಮಾ ಗರ್ಭರೂಪಃ ॥೫೫॥

ನಿ ನ್ನು ಸರಿಯಾಗಿ ತಿಳಿಯಲು, ಅಸಮರ್ಥರಾಗಿರುವರು. ನಿನ್ನನ್ನು ಬಿಟ್ಟು ಅ ಮಗ್ರವಾದ ಈ ಜಗತ್ತು ಎಂದೂ ಸಮಗ್ರವೆನಿಸಲಾರದು. ॥೫೩॥

ನಿಖಿಲ ಭೂತಸಂಘಗಳಿಂದಲೂ ಪ್ರತ್ಯೇಕನಾಗಿರುವ ನಿನ್ನನ್ನು ಕೆಲವರು ಮೂಢರು ಆ ರೀತಿಯಾಗಿ ತಿಳಿಯುವುದೇ ಇಲ್ಲ. ಕಾರಣವೇನೆಂದರೆ, ಅಂತಹವರು ಮಾಯಾ ಮೋಹಿತರಾಗಿ, ಶಾಸ್ತ್ರಜನ್ಯಜ್ಞಾನವನ್ನು ಅನ್ಯಥಾ ಭಾವಿಸುವರು. ಪ್ರಪಂಚದಲ್ಲಿ ಜ್ಞಾನಿಗಳಾಗಿ, ನಿಶ್ಚಯಜ್ಞಾನಾರ್ಜನೆಮಾಡಿ ಸುಖಿಸುವವರು ಯಾರಿರುವರು ? ಮಾಯಾವರಣದಿಂದ ಅಜ್ಞಾನಿಗಳಾಗಿ ಯಾವುದೋ ಸುಖಾಭಾಸಗಳನ್ನು ನಿಜವಾದ ಸೌಖ್ಯವೆಂದು ತಿಳಿಯುವರು. ॥೫೪॥

ಕರ್ಮದಿಂದ ಫಲವನ್ನಪೇಕ್ಷಿಸುವ ಕಾಮುಕಾಮಿಗಳು ಕೇವಲ ಬಾಲಕರಂತೆ ಯಜ್ಞಯಾಗಾದಿಗಳಿಂದ ನಿನ್ನನ್ನು ಅರಸುವರು. ಆದರೆ ಭೂಮಿ, ಸ್ವರ್ಗ ಮುಂತಾದ ಯಾವ ಲೋಕದಲ್ಲಿಯೂ ನೆಲೆಯಾಗಿ ನಿಲ್ಲದ ನೀನು ಯಾರಿಗೆತಾನೆ ಸುಲಭವಾಗಿ ಸಿಕ್ಕುವೆ? ಅದಕ್ಕಾಗಿಯೇ ದೇವತೆಗಳೂ, ರಾಕ್ಷಸರೂ, ಸರ್ವತ್ರ ವ್ಯಾಪಿಯಾಗಿ, ಸರ್ವಭೂತಗಳಲ್ಲಿಯೂ ಅಡಗಿರುವ ನಿನ್ನನ್ನು ಕಾಣದೆ ಹಿಂದೆ ಹೋರಾಡಿದರು.

ಕಸ್ತ್ವಾಂ ವೇದ ಭೂತವರ್ಗೈರ್ವಿಹೀನಂ
ವೇದ್ಯೈರ್ವಿಶ್ವಂ ಯತ್ರ ಲೀನಂ ತ್ವಯೀಶೇ ।
ಅಜ ತ್ವನ್ನಾಭೌ ಜಗದೇತದ್ವಿಚಿತ್ರಂ
ಮಧ್ಯೇಽಪಿ ತಂ ಯಸ್ಮಿನ್ ವಿಶ್ವಂ ಭುವನಂ ಚ ತ್ವಮೇವ ॥೫೬॥

ತತೋ ಗಂಧರ್ವಾ ಓಷಧೀಶೋಽಪಿ ಶಂಭೋ
ಸರ್ವೇಂದ್ರಿಯಾಣಿ ಮನಸಾ ತ್ವಾಂ ನಮಾಮಃ ।
ಹೃದಾ ಪಶ್ಯಂತಿ ಮನಸಾ ಮನೀಷಿಣೋ
ಯೇ ಬ್ರಹ್ಮಮನ್ವಾನ ಉಪಾಸತೇ ತ್ವಾಂ ॥೫೭॥

ತ್ವಾಮೀದೃಶಂ ಗೂಢಮನುಪ್ರವಿಷ್ಟಂ
ಸಹೈವ ಸಂತಂ ನ ವಿಜಾನಂತಿ ದೇವಾಃ ।
ವಿಶ್ವಸ್ಯ ಚಕ್ಷುರ್ವಿಶ್ವವಕ್ತ್ರೋರುಬಾಹು
ರ್ವಿಶ್ವಸ್ಪತಿರ್ಭುವನಸ್ಯಾಸ್ಯ ಗೋಪ್ತಾ ॥೫೮॥

---

ಪಂಚಭೂತ ಸಂಬಂಧವಿಲ್ಲದೆ, ವೇದಗಳಿಗೂ ದೊರೆಯದಂತಹ ನಿನ್ನನ್ನು ತಿಳಿದಿರುವವನು ಯಾರು ಎಂಬುದೇ ನಮಗರಿಯದು. ಪರಾಪರನೇ, ಉತ್ಪತ್ತಿರಹಿತನೇ, ಈ ಜಗತ್ತೆಲ್ಲವೂ ನಿನ್ನ ನಾಭಿಯಲ್ಲಿ ಅಡಗಿಹೋಗುವುದು. ಅದೇ ಜಗತ್ತೇ ನಿನ್ನ ಉದರ ಮಧ್ಯದಲ್ಲಿ ಪುನಃ ಭಾಸಮಾನವಾಗುವುದು. ಒಟ್ಟಿನಲ್ಲಿ ಈ ನಿಖಿಲ ಜಗತ್ತೇ ನೀನಾಗಿ ತೋರಿಬರುವೆ. ॥೫೬॥

ಗಂಧರ್ವರಾಗಿಯೂ, ಓಷಧೀಶನಾದ ಚಂದ್ರನಾಗಿಯೂ, ಸಕಲೇಂದ್ರಿಯ ವಿಶಿಷ್ಟರಾದ ಭೂತವರ್ಗಗಳಾಗಿಯೂ ಇರುವವನು ನೀನೇ ಎಂದು ನಾವು ತಿಳಿದು ನಿನ್ನನ್ನು ಮನಃಪೂರ್ವಕವಾಗಿ ನಮಸ್ಕರಿಸುವೆವು. ವಿದ್ವಾಂಸರೂ, ಬ್ರಹ್ಮಜ್ಞಾನಿಗಳೂ ಆದ ಮಹಾಮಹಿಮರು ನಿನ್ನನ್ನು ಸರಿಯಾಗಿ ಅರಿತು, ಈಗ ನಿನ್ನನ್ನೇ ಶುದ್ಧಮನಸ್ಸಿನಿಂದ ಉಪಾಸನೆಮಾಡುತ್ತಿರುವರು. ॥೫೭॥

ಗೂಢಾಕಾರನೂ, ಅಂತಃಪ್ರವಿಷ್ಟನೂ, ಸತ್ಸ್ವರೂಪಿಯೂ ಆದ ನಿನ್ನನ್ನು ಸರಿಯಾಗಿ ಯಾವ ದೇವತೆಗಳೂ ಅರಿತವರಾಗಿಲ್ಲ. ಲೋಕಕ್ಕೆ ಕಣ್ಣಾಗಿ, ಲೋಕವೇ ಮುಖ, ಬಾಹು, ಎದೆ ಇವುಗಳಂತಾಗಿರುವ ಲೋಕದೊಡೆಯನೇ, ನಿಜವಾಗಿಯೂ ಲೋಕರಕ್ಷಕನು ನೀನೇ ಅಲ್ಲವೇ ? ॥೫೮॥

ದ್ಯಾವಾಭೂಮೀ ತ್ವತ್ತ ಏವೇದ್ಧರಶ್ಮಿ
ಸ್ಸೂರ್ಯೋ ಭ್ರಾಜತಿ ಖೇ ಸೋಮತಾರೈರ್ಗ್ರಹೈಶ್ಚ ।
ನಾನ್ಯೇ ಜಾನಂತಿ ತವ ಭಕ್ತ್ಯಾ ವಿಹೀನಾ
ಹ್ಯಜಾತಂ ತ್ವಾಮೀಶಂ ಶರಣಂ ಪ್ರಪನ್ನಾಃ ॥೫೯॥

॥ ಸೂತ ಉವಾಚ ॥

ಇತ್ಥಂ ಸಂಸ್ತುತ್ಯ ತೇ ಸರ್ವೇ ದಂಡವತ್ಸುರಸತ್ತಮಾಃ ।
ಪ್ರಣೇಮುಃ ಪರಮಾತ್ಮಾನಂ ದದೃಶುರ್ದೇವತಾಗಣಾಃ ॥೬೦॥

ತೇಜೋರಾಶಿಂ ಮಹಾದೇವಂ ಗಗನಸ್ಥಂ ಸನಾತನಂ ॥೬೧॥

ಬಡಬಾನಲಬಾಡಬೇಂದ್ರಮುಖ್ಯೈಃ
ಬಡಬಾಜಾನಿಬಿಡೌಜಸಾರ್ಚಿತಾಂಘ್ರಿಂ ।
ಬಲಿನಂದನಪೂಜ್ಯಬಾಣಲಿಂಗಲೋಲಂ
ಬಲಮಾನರ್ಚ್ಯ ಸುಬಿಲ್ವಪಲ್ಲವೈಃ ॥೬೨॥

---

ಭೂಮ್ಯಂತರಿಕ್ಷಗಳು ನಿನ್ನಿಂದಲೇ ಹುಟ್ಟಿರುವುವು. ಸೂರ್ಯನು ರಶ್ಮಿಯುಕ್ತನಾಗಿ ಚಂದ್ರನಕ್ಷತ್ರಗಳೊಡನೆಯೂ, ಗ್ರಹಗಳೊಡನೆಯೂ ಅಂತರಿಕ್ಷದಲ್ಲಿ ಸಂಚರಿಸುವುದೂ ನಿನ್ನ ಮಹಿಮೆಯಿಂದಲೇ. ಈ ವಿಷಯವನ್ನು ನಿನ್ನ ಭಕ್ತರಲ್ಲದವರು ಎಂದೂ ತಿಳಿಯಲಾರರು. ಉತ್ಪತ್ತಿರಹಿತನೂ, ಸರ್ವಜಗದ್ರಕ್ಷಕನೂ ಆದ ನಿನ್ನನ್ನೇ ನಾವು ರಕ್ಷಕನನ್ನಾಗಿ ನಂಬಿ ಮೊರೆಹೊಕ್ಕಿರುವೆವು. ॥೫೯॥

ಹೀಗೆ ಸಕಲ ದೇವತೆಗಳೂ ಸ್ವಾಮಿಗೆ ಸಾಷ್ಟಾಂಗನಮಸ್ಕಾರಮಾಡಿ, ಮೇಲೆ ನೋಡುತ್ತಾ ನಿಂತುಬಿಟ್ಟರು. ಒಡನೆಯೇ ಅಂತರಿಕ್ಷದಲ್ಲಿ ತೇಜೋರಾಶಿಯೂ, ಸನಾತನನೂ ಆದ ಮಹಾದೇವನು ದೇವತೆಗಳಿಗೆ ಪುನಃ ಪ್ರತ್ಯಕ್ಷನಾದನು.॥೬೦-೬೧॥

ಬಡಬಾಗ್ನಿ, ದೇವೇಂದ್ರ, ಬ್ರಹ್ಮ ಮೊದಲಾದ ದೇವಗಣಗಳಿಂದ ಅರ್ಚಿತವಾದ ಪಾದಪದ್ಮವುಳ್ಳ ಮತ್ತು ಬಲಿಚಕ್ರವರ್ತಿಪುತ್ರನಾದ ಬಾಣಾಸುರನಿಂದ ಆಚರಿಸಲ್ಪಟ್ಟ ಲಿಂಗಾರ್ಚನೆಗೆ ಅತ್ಯಂತತೃಪ್ತನಾದ ಪರಮೇಶ್ವರನನ್ನು ಬಿಲ್ವದಳಗಳಿಂದ ಸಕಲರೂ ಅರ್ಚನೆಮಾಡಿದರು. ॥೬೨॥

ಬಲಪ್ರಮಥನಂ ಶಿವಂ ಬಲಿಬಲಾರಿಬಾಣಾರ್ಚಿತಂ
ಬಿಲೇಶಯಫಣಾಮಣೀವಿಧೃತಪಾಣಿಪದ್ಮಾಂಕಿತಂ ।
ಬಲೋತ್ಕಟಸುರಾಸುರೈರ್ನಮಿತಬಾಲಚಂದ್ರಾರ್ಧಧೃಕ್
ಧೃತಾಬಲವರಾಂಗಕಂ ಹರಿಸುಬಾಣಮೈಕ್ಷನ್ ಸುರಾಃ ॥೬೩॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ದೇವಕೃತೋಪನಿಷತ್ಸ್ತುತಿರ್ನಾಮ ಚತುಃಪಂಚಾಶೋಽಧ್ಯಾಯಃ

---

ಶತ್ರುಶಕ್ತಿಯನ್ನೆಲ್ಲಾ ನಾಶಗೊಳಿಸಿ, ಬಲಿಚಕ್ರವರ್ತಿ, ಇಂದ್ರ, ಬಾಣಾಸುರ ಇವರೇ ಮೊದಲಾದವರಿಂದ ಅರ್ಚಿತನೂ, ನಾಗರತ್ನಾಭರಣಗಳಿಂದ ಅಲಂಕೃತವಾದ ಪಾಣಿಪದ್ಮವುಳ್ಳವನೂ, ಬಲಿಷ್ಠರಾದ ದೇವರಾಕ್ಷಸರಿಂದ ವಂದಿತನಾದ ಚಂದ್ರಶೇಖರನೂ, ಅರ್ಧನಾರೀಶ್ವರನೂ, ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡಿದ್ದವನೂ ಆದ ಮಹಾದೇವನನ್ನು ಸಕಲ ದೇವತೆಗಳೂ ಭಕ್ತಿಯಿಂದ ದರ್ಶನ ಮಾಡಿದರು. ॥೬೩॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಪ್ರಥಮಾಂಶದಲ್ಲಿ ದೇವಕೃತವಾದ ಉಪನಿಷತ್ಸ್ತುತಿಯೆಂಬ ಐವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಪಂಚಪಂಚಾಶೋಽಧ್ಯಾಯಃ

### ದೇವ್ಯುಪನಿಷತ್ಪ್ರತಿಪಾದನಂ

|| ಸ್ಕಂದ ಉವಾಚ ||

ತದಾ ದೇವಾ ಮಹಾದೇವಂ ಗಗನಸ್ಥಂ ಸನಾತನಂ ।
ಉಮಯಾ ವರದಂ ದೇವಂ ಮಂದಸ್ಮಿತಮನೋಹರಂ ||೧||

ಉತ್ಫುಲ್ಲಹಲ್ಲಕಲಸನ್ಮಾಲಾಶೋಭಿತಕಂಧರಂ ।
ಸುಧಾಂಶೂಗ್ರಾಂಶುಕೀಲಾಭಿರ್ನಿಕಾಸಿತದಿಶಾಮುಖಂ ||೨||

ಕುಂದಾಚ್ಛಶಾರದಾಭ್ರಾಭಘನಕಾಂತಿಶರೀರಕಂ ।
ತ್ರಿಣೇತ್ರಶೋಭಿವಕ್ತ್ರೋದ್ಯನ್ನಾಗಕುಂಡಲಮಂಡಿತಂ ||೩||

### ಶ್ರೀಶಿವರಹಸ್ಯದಲ್ಲಿ ಐವತ್ತೈದನೆಯ ಅಧ್ಯಾಯ

ಅನಂತರ, ಸಕಲದೇವತೆಗಳೂ ಅಂತರಿಕ್ಷದಲ್ಲಿ ಪಾರ್ವತೀಸಮೇತನಾಗಿ ಮುಗುಳ್ನಗೆಯಿಂದ ಕೂಡಿ, ವರದನೂ, ಅನಾದಿಪುರುಷನೂ ಆಗಿರುವ ಮಹಾದೇವನನ್ನು ನೋಡಿದರು. ||೧||

ಮಹಾದೇವನ ಕಂಠಪ್ರದೇಶದಲ್ಲಿ ಸೌಗಂಧಿಕಪುಷ್ಪಗಳ ಮಾಲೆಯು ಶೋಭಿಸುತ್ತಿದ್ದಿತು. ನೇತ್ರರೂಪರಾಗಿರುವ ಸೂರ್ಯಚಂದ್ರರ ಕಾಂತಿಯು ಪರಶಿವನ ಮುಖದಿಂದ ಹೊರಟು ದಿಕ್ಕುಗಳನ್ನೆಲ್ಲಾ ಬೆಳಗಿಸುತ್ತಿದ್ದಿತು. ||೨||

ಕುಂದಪುಷ್ಪದಂತೆಯೂ, ಶರತ್ಕಾಲದ ಮೇಘದಂತೆಯೂ, ಪರಶಿವನ ದೇಹವು ಪ್ರಕಾಶಿಸುತ್ತಿದ್ದಿತು. ಮುಖವಾದರೋ ತ್ರಿನೇತ್ರಗಳಿಂದಲೂ, ನಾಗಕುಂಡಲಗಳಿಂದಲೂ ಸುಂದರವಾಗಿ ಕಾಣುತ್ತಿದ್ದಿತು. ||೩||

ಕುಂಡಲೀಶಫಣಾಭ್ರಾಜತ್ಕುಂಡಲಾನನಮಂಡಿತಂ ।
ಕಪರ್ದತಟಬದ್ಧೇಂದುಗಂಗಾಪ್ಲಾವಿತಮೌಲಿಕಂ ॥೪॥

ಶೂಲಾಮಲಲಸದ್ಬಾಲಮೃಗಪಾಣಿಮನೋಹರಂ ।
ಆಶಾವಸಂ ಮಹಾತ್ಮಾನಂ ರತ್ನಕಂಕಣಮಂಡಿತಂ ॥೫॥

ಕರಟಿತ್ವಕ್ಕಟಿತಟಬದ್ಧಖಡ್ಗವಿರಾಜಿತಂ ।
ದೇವ್ಯಾ ಚ ಸಂಯುತಂ ಚಾರುವದನಸ್ಮೇರಕಾಂತಯಾ ॥೬॥

ಧಮ್ಮಿಲ್ಲಮಲ್ಲಿಕಾಮೋದಪಂಕಜೋತ್ತಮಗಂಧಯಾ ।
ಸಿಂಧೂರತಿಲಕಾಶೋಭಿಭಾಲಯಾಚ್ಛಮಣಿತ್ವಿಷಾ ॥೭॥

ನಾನಾಲಂಕಾರಸಂಕ್ಲೃಪ್ತತತ್ತದಂಕೈಕಶೋಭಯಾ ।
ಕೋಟಿಕಂದರ್ಪದರ್ಪಘ್ನಃ ಕೋಟಿಸೂರ್ಯಶತಾಧಿಕಃ ॥೮॥

---

ಆದಿಶೇಷನ ಫಣಾಮಣಿಯಿಂದ ಕೂಡಿದ ಕುಂಡಲಗಳು ಶಂಕರನ ಮುಖವನ್ನು ಅಲಂಕರಿಸುತ್ತಿದ್ದುವು. ಶಿರಸ್ಸಿನಲ್ಲಿ ಜಟಾಜೂಟವೂ, ಗಂಗಾನದಿಯೂ, ಪೂರ್ಣಚಂದ್ರನೂ ನೆಲಸಿ ದೇಹದ ಕಾಂತಿಯನ್ನು ಮಿತಿಮೀರಿಸಿದ್ದಿತು. ||೪||

ಒಂದು ಕೈಯಲ್ಲಿ ತ್ರಿಶೂಲವೂ, ಮತ್ತೊಂದರಲ್ಲಿ ಬಾಲಮೃಗವೂ ರಂಜಿಸುತ್ತಿದ್ದುವು. ದಿಗಂಬರನಾಗಿ, ಮಹಾತ್ಮನೆನಿಸಿ ರತ್ನಕಂಕಣಗಳಿಂದ ಶಂಭುವು ವಿರಾಜಿಸುತ್ತಿದ್ದನು. ||೫||

ಸೊಂಟದಲ್ಲಿ ಗಜಚರ್ಮವೂ, ಹೊಳೆಯುವ ಖಡ್ಗವೂ ಶೋಭಿಸುತ್ತಿರುವುದು. ಮನೋಹರವಾದ ಮುಖಕಾಂತಿಯುಳ್ಳ ಪಾರ್ವತಿಯು ಪಕ್ಕದಲ್ಲಿ ಶೋಭಿಸುತ್ತಿರುವಳು. ||೬||

ದೇವಿಯ ಕೇಶಪಾಶದಲ್ಲಿರುವ ಮಲ್ಲಿಗೆ ಮತ್ತು ಕಮಲ ಇವುಗಳ ಸುವಾಸನೆಯು ಸರ್ವತ್ರ ಹರಡಿದ್ದಾಗಿರುವುದು. ಸಿಂಧೂರದಿಂದಲೂ, ರತ್ನದಿಂದಲೂ, ದೇವಿಯ ಹಣೆಯು ರಂಜಿಸುತ್ತಿತ್ತು. ||೭||

ದೇವಿಯ ಸ್ವಭಾವಸೌಂದರ್ಯವು ನಾನಾಲಂಕಾರದ್ರವ್ಯಗಳ ಸೊಬಗಿನಿಂದ ಕೂಡಿ, ಕೋಟಿಜನ ಮನ್ಮಥರ ಕಾಂತಿಯನ್ನೂ, ಕೋಟಿಸೂರ್ಯರ ತೇಜಸ್ಸನ್ನೂ ಮಂಕುಗೊಳಿಸುತ್ತಿದ್ದಿತು. ||೮||

ಕೋಟಿಚಂದ್ರಾಧಿಕತನುಸ್ತನುಹೀನೋಽಪಿ ಶಂಕರಃ ।
ಘನಘೋಷೇಣ ದೇವಾಂಸ್ತಾನುಚ್ಚೈರ್ಘೋರ್ಘೋಷೋ ಮಹೇಶ್ವರಃ॥೯॥

ಗಂಭೀರಯಾ ಮಧುರಯಾ ವಾಚಾ ಸಂಹ್ಲಾದಯಂಸ್ತದಾ ।
ಪ್ರಾಹ ತಾನ್ ಪ್ರಮಥಾಧೀಶಸ್ಸುರಾಧೀಶಾನ್ ಶಿವಾಸಖಃ ॥೧೦॥

॥ ಈಶ್ವರ ಉವಾಚ ॥

ಭೋ ಭೋ ಸುರೋತ್ತಮಾಸ್ಸರ್ವೇ ಬ್ರಹ್ಮವಿಷ್ಣುಮಹೇಶ್ವರಾಃ ।
ಯಮಾನಿಲಾನಲಬ್ರಧ್ನಮರುತೋ ವಾಸವೋಽಶ್ವಿನಃ ॥೧೧॥

ಸೂರ್ಯಚಂದ್ರೇಂದ್ರವರುಣಧನಾಧೀಶಾ ನಿಶಾಧಿಪಾಃ ।
ಶೃಣ್ವಂತು ಪರಮಂ ಮೇಽದ್ಯ ವಚನಂ ಸುಂದರಂ ಸುರಾಃ ॥೧೨॥

ಕೃತಯತ್ನಾ ಭವಂತೋ ಹಿ ಚಾಸ್ಮಿಂಸ್ತಾರ್ಣಕಕಲ್ಪಿತೇ ।
ಪುರುಷೇ ಸರ್ವಶಕ್ತ್ಯಾಪಿ ಭವದ್ಭಿರುರುವಿಕ್ರಮೈಃ ॥೧೩॥

---

ಹಾಗೆಯೇ ಪರಶಿವನು ವಸ್ತುತಃ ಶರೀರರಹಿತನಾಗಿದ್ದರೂ, ವ್ಯವಹಾರದ ದೃಷ್ಟಿಯಿಂದ, ಕೋಟಿಚಂದ್ರರ ಕಾಂತಿಗಿಂತ ಮಿಗಿಲಾದ ವರ್ಚಸ್ವಿಯಾಗಿ, ಎದುರಿನಲ್ಲಿ ನಿಂತಿದ್ದ ದೇವತೆಗಳನ್ನು ಕುರಿತು ಮೇಘಗಂಭೀರಧ್ವನಿಯಿಂದ ಹೀಗೆ ಹೇಳತೊಡಗಿದನು. ॥೯॥

ಪಾರ್ವತೀಪ್ರಿಯನೂ, ಪ್ರಮಥಾಧಿಪತಿಯೂ, ಆದ ಮಹೇಶ್ವರನು ದೇವತೆಗಳನ್ನು ಗಂಭೀರವಾಗಿಯೂ, ಮಧುರವಾಗಿಯೂ ಇರುವ ಮಾತುಗಳಿಂದ ಸಂತೋಷಪಡಿಸುತ್ತಾ ಹೀಗೆಂದನು. ॥೧೦॥

" ದೇವಶ್ರೇಷ್ಠರೆನಿಸಿದ ಬ್ರಹ್ಮ, ವಿಷ್ಣು, ರುದ್ರರಿರಾ, ಯಮ, ಅಗ್ನಿ, ವಾಯು, ದ್ವಾದಶಾದಿತ್ಯರು, ಮರುತ್ತು, ವಸುಗಳು, ಅಶ್ವಿನೀದೇವತೆಗಳು, ಸೂರ್ಯ, ಚಂದ್ರ, ಇಂದ್ರ, ವರುಣ, ಕುಬೇರ, ಉಳಿದ ದಿಕ್ಪತಿಗಳೇ ಮೊದಲಾದ ದೇವತೆಗಳಿರಾ, ನಾನು ಈಗ ಹೇಳಿರುವ, ಹಿತಮಿತವಾದ ಮಾತುಗಳನ್ನು ಕೇಳಿರಿ. ॥೧೧-೧೨॥

ದೇವತೆಗಳಿರಾ, ನನ್ನಿಂದ ನಿರ್ಮಿತವಾದ ತೃಣಪುರುಷನನ್ನು ಭಂಗಗೊಳಿಸುವ ವಿಷಯದಲ್ಲಿ ನಿಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿರುವಿರಿ. ॥೧೩॥

ಜಗತ್ಪಾಲನದಕ್ಷೈಶ್ಚ ನ ಕಿಂಚಿದುದಭೂತ್ಸುರಾಃ ।
ದಗ್ಧುಂ ಸ್ರಷ್ಟುಂ ತಥಾ ದಾತುಮುತ್ತಂ ನಾಶಯಿತುಂ ದ್ರುತಂ ॥೧೪॥

ಮಮ ತೇಜೋವಿಹೀನಾಶ್ಚ ಜಡಾಹಂಕಾರಮಾಶ್ರಿತಾಃ ।
ಮಚ್ಛಕ್ತಿಕರುಣಾಹೀನಾಶ್ಶಕ್ತಿಹೀನಾಶ್ಚ ಸಾಂಪ್ರತಂ ॥೧೫॥

ಇಯಂ ಮಮಾಂಕಸಂಸ್ಥಾಯಾ ಹ್ಯುಮಾಖ್ಯಾ ಶಕ್ತಿರುತ್ತಮಾ ।
ವಿಶ್ವನಿರ್ಮಾಣಭರಣಶಿಕ್ಷಣೇಯಂ ವಿಚಕ್ಷಣಾ ॥೧೬॥

ದಕ್ಷಶೈಲೇಂದ್ರದುಹಿತಾ ಕಾರಣೈಶ್ಚ ಸುರೈಸ್ಸ್ತುತಾ ।
ನ ತಸ್ಯಾಃ ಕಾರಣಂ ಕಾರ್ಯಮುಚ್ಚೈರೇಷಾ ಸನಾತನೀ ॥೧೭॥

ಏತಸ್ಯಾಃ ಶಕ್ತಿವೈಚಿತ್ರ್ಯಂ ಭವಂತಸ್ಸರ್ವ ಏವ ಹಿ ।
ಮನ್ಯೈಷಾ ಪರಮಾ ಮೂರ್ತಿರೇತಸ್ಯಾ ವಿರಹೇ ಮಮ ॥೧೮॥

---

ನೀವು ಈ ಜಗತ್ತನ್ನು ರಕ್ಷಿಸುವ ಶಕ್ತಿಯುಳ್ಳವರು. ಹಾಗೆಯೇ ಪ್ರಪಂಚವನ್ನೆಲ್ಲಾ ಸುಡುವುದಕ್ಕೂ, ಸೃಷ್ಟಿಮಾಡುವುದಕ್ಕೂ, ವರಪ್ರದಾನಮಾಡುವುದಕ್ಕೂ, ಹಾಗೆಯೇ ಲಯಗೊಳಿಸುವುದಕ್ಕೂ ನಿಮಗೆ ಶಕ್ತಿಯಿದೆ. ॥೧೪॥

ಆದರೆ ನನ್ನ ಶಕ್ತಿಯಿಂದ ವರ್ಜಿತರಾಗಿ, ಕೇವಲ ಅಹಂಕಾರವಿಶಿಷ್ಟರಾಗಿರುವಿರಿ. ಅದರಿಂದಲೇ ಈಗ ನೀವು ನನ್ನ ಅನುಗ್ರಹಕ್ಕೆ ಪಾತ್ರರಾಗದೇ, ನಿರ್ವೀರ್ಯರಾಗಿರುವಿರಿ. ॥೧೫॥

ನನ್ನ ಅಂಕದಲ್ಲಿ ಕುಳಿತಿರುವ ಈ ಉಮಾದೇವಿಯು ಕೇವಲ ಶಕ್ತಿದೇವತೆಯು. ಈಕೆಯಲ್ಲಿ ಪ್ರಪಂಚವನ್ನು ಸೃಷ್ಟಿಸುವ ಮತ್ತು ರಕ್ಷಿಸುವ ಸಾಮರ್ಥ್ಯವಿರುವುದು. ॥೧೬॥

ನಿಮ್ಮ ಉತ್ಪತ್ತಿಗೆ ಈಕೆಯೇ ಕಾರಣಳಾಗಿರುವಳು. ದಕ್ಷಬ್ರಹ್ಮನ ಮಗಳಾಗಿ, ಅನಂತರ ಗಿರಿರಾಜಪುತ್ರಿಯಾಗಿ ಜನಿಸಿದರೂ, ವಾಸ್ತವಿಕವಾಗಿ ಈಕೆಯು ಉತ್ಪತ್ತಿರಹಿತಳು. ಸನಾತನ ವ್ಯಕ್ತಿಯು. ಈಕೆಯ ಉತ್ಪತ್ತಿಗೆ ಕಾರಣವಸ್ತುವಾವುದೂ ಇರುವುದಿಲ್ಲ. ॥೧೭॥

ಈ ದೇವಿಯ ಶಕ್ತಿ ಚಮತ್ಕಾರದಿಂದಲೇ ನೀವೆಲ್ಲಾ ಇಂದು ಭಿನ್ನಭಿನ್ನ ಕಾರ್ಯಗಳಲ್ಲಿ ತೊಡಗಿರುವಿರಿ. ನಾನು ಲೋಕದಲ್ಲಿ ಮೂರ್ತಿಮತ್ತಾಗಿ ಕಾಣುವುದು

ನ ಕಿಂಚಿದಿಹ ಕರ್ತವ್ಯಮಕರ್ತಾ ಸಂಗ ಏವ ಹಿ ।
ಅಹಮೇಕೋ ನಿರಾಧಾರೋ ಮದಾಧಾರಾತ್ವಿಯಂ ಸುರಾಃ ॥೧೯॥

ಭವತಾಂ ಕಾರಣಂ ದೇವಾತ್ಸ್ವೇಯಂ ಚಿತ್ರಕಾರಿಣೀ ।
ಏತಸ್ಯಾಃ ಶಕ್ತಿಯೋಗೇನ ಶಕ್ತಿಮಾನಸ್ಮಿ ಸರ್ವಥಾ ॥೨೦॥

ಪರಾ ಮೇ ಪರಮಾಶಕ್ತಿಸ್ಸ್ವಭಾವಾದೇವ ವರ್ತತೇ ।
ಕಾಲಂ ಸ್ವಭಾವಂ ನಿಯತಿಂ ಇಚ್ಛಾಮೇಕೇ ವದಂತ್ಯಪಿ ॥೨೧॥

ಭೂತಸಂಘಂ ತಥೈವಾನ್ಯೇ ಚರ್ಷಯಃ ಪರಿಮೋಹಿತಾಃ ।
ಏತಸ್ಯಾಃ ಶಕ್ತಿವೈಚಿತ್ರ್ಯಂ ಜಗದೇತಚ್ಚರಾಚರಂ ॥೨೨॥

ಏನಾಂ ಪ್ರಣಮತ ಕ್ಷಿಪ್ರಮೇತಸ್ಯಾಃ ಕೃಪಯಾ ಸುರಾಃ ।
ವಿಕ್ಷೇಪಾವರಣಾಭ್ಯಾಂ ಚ ಶಕ್ತಿಭ್ಯಾಂ ವರ್ಜಿತಾ ಯದಿ ॥೨೩॥

ಈಕೆಯ ಬಲದಿಂದ. ನಾನು ಪ್ರಪಂಚರೂಪಿಯಾಗಿ ಜಗತ್ತನ್ನು ನಡೆಸುವುದು ಈಕೆಯ ಸಂಸರ್ಗದಿಂದ. ಈ ಶಕ್ತಿ ಸಂಬಂಧವಿಲ್ಲದಿದ್ದರೆ, ನಾನು ಕರ್ತನೂ ಅಲ್ಲ. ನಿಸ್ಸಂಗನೂ ಅಹುದು. ನಾನು ಏಕರೂಪಿಯಾಗಿ ಆಧಾರರಹಿತನಾಗಿದ್ದರೂ, ನನ್ನನ್ನು ಮಾತ್ರ ಆಶ್ರಯಿಸಿ ಜಗಚ್ಚಾಲಕಳಾಗಿರುವವಳು ಈ ಉಮಾದೇವಿಯು. ॥೧೮-೧೯॥

ಅಷ್ಟಲ್ಲದೆ ನಿಮ್ಮೆಲ್ಲರ ಉತ್ಪತ್ತಿಗೂ ವಿಚಿತ್ರಶಕ್ತಿಯುಳ್ಳ ಈ ದೇವಿಯೇ ಮುಖ್ಯಕಾರಣಳು. ಈಕೆಯ ಸಂಬಂಧದಿಂದಲೇ ನಾನು ಸರ್ವದಾ ಶಕ್ತಿಸಂಪನ್ನನೆನಿಸಿ ಕೊಂಡಿರುವೆನು. ॥೨೦॥

ಈ ದೇವಿಯೇ ನನ್ನ ಪರಾಶಕ್ತಿಯು. ಈ ಶಕ್ತಿಸಂಸರ್ಗವು ನನಗೆ ಸ್ವಾಭಾವಿಕವಾದದ್ದು. ಈ ಶಕ್ತಿಯನ್ನೇ, ಕಾಲ, ಸ್ವಭಾವ, ನಿಯತಿ, ಇಚ್ಛಾ ಎಂದು ಕೆಲವರು ಹೇಳುತ್ತಿರುವರು. ॥೨೧॥

ಅದೇರೀತಿ, ಈ ಶಕ್ತಿಯ ಮಹಿಮೆಯಿಂದ, ಸಕಲ ಪ್ರಾಣಿವರ್ಗವೂ, ಅನೇಕ ಮಹರ್ಷಿಗಳೂ ಕೂಡ ಅಜ್ಞಾನಿಗಳಾಗುವರು. ಈ ದೇವಿಯ ವಿಚಿತ್ರಶಕ್ತಿವರ್ತನೆಯೇ ಈ ಚರಾಚರಾತ್ಮಕವಾದ ಜಗತ್ತು. ॥೨೨॥

ಈ ಮಾಯಾಶಕ್ತಿಯಲ್ಲಿ, ವಿಕ್ಷೇಪಶಕ್ತಿ, ಆವರಣಶಕ್ತಿಯೆಂಬ ಎರಡು ಸ್ವಭಾವಗಳಿರುವುವು. ವಿಕ್ಷೇಪಶಕ್ತಿಯಿಂದ ವಸ್ತುಗಳು ವಿಚಿತ್ರಗಳಾಗಿ ಕಾಣುವುವು.

ತಾವದೇವ ಚಿರಂ ದೇವಾ ಯಾವದ್ವಿಕ್ಷೇಪಶಕ್ತಿತಃ ।
ನ ಮುಕ್ತಾ ಮೇ ಪರಂ ಜ್ಞಾನಂ ಪ್ರಾಪ್ಸ್ಯಾಪಿ ಸುರಸತ್ತಮಾಃ ॥೨೪॥

ಕಿಂತ್ವಾವರಣನಿರ್ಮುಕ್ತಾ ಭವಿಷ್ಯಧ್ವಂ ಕೃಪಾಧಿಕಾಃ ।
ಭವತಾಂ ಸರ್ವಥಾ ಜ್ಞಾನಂ ಮತ್ಪ್ರಸಾದೇನ ಸತ್ತಮಾಃ ॥೨೫॥

ಯಾವದಾವರ್ತನಂ ದೇವಾಸ್ಸಜ್ಞಾನಾಶ್ಚಾಧಿಕಾರಿಣಃ ।
ಪ್ರಾಪ್ನುವಂತು ಭವಂತೋ ಹಿ ವೇದವೇದಾಂತಸಂಭವಂ ॥೨೬॥

ಜ್ಞಾನಂ ಮೇ ಪಾರಮ್ಯೈಶ್ವರ್ಯಂ ದೇವ್ಯಾಶ್ಚ ಕೃಪಯಾ ಸುರಾಃ ।
ತದಾ ದೇವಾಶ್ಶಂಭುವಚೋ ನಿಶಮ್ಯ ಪರಮಾರ್ಥತಃ ॥೨೭॥

ಆವರಣಶಕ್ತಿಯಿಂದ ವಸ್ತುವಿನ ನಿಜವಾದ ಸ್ವರೂಪವು ಮುಚ್ಚಲ್ಪಡುವುದು. ಈ ಎರಡು ಶಕ್ತಿಗಳಿಂದ ನೀವು ಬಿಡಲ್ಪಟ್ಟವರಾದರೆ, ॥೨೩॥

ಆಗ ನೀವು ಜ್ಞಾನಿಗಳೆನಿಸುವಿರಿ. ವಿಕ್ಷೇಪ ಶಕ್ತಿಯಿಂದ ಬಿಡಲ್ಪಟ್ಟವರಿಗೆ ವಸ್ತುಗಳು ನಾನಾರೀತಿಯಾಗಿ ಕಾಣದಿದ್ದರೂ, ನಿಜವಾದ ವಸ್ತುಸ್ವರೂಪವು (ಬ್ರಹ್ಮ ಜ್ಞಾನವು) ಲಭಿಸಲಾರದು. ॥೨೪॥

ಆವರಣಶಕ್ತಿಯಿಂದ ನೀವು ನಿರ್ಮುಕ್ತರಾದಾಗ ನಿಜವಾದ ನನ್ನ ಸ್ವರೂಪವು ನಿಮಗೆ ಗೋಚರವಾಗುವುದು. ಅದೇ ನನ್ನ ಕೃಪಾತಿಶಯ. ಆಗಲೇ ನೀವು ಜ್ಞಾನಿಗಳು, ನೀವು ಮುಕ್ತರು. ॥೨೫॥

ಹೀಗೆ ನೀವು ಅವಿದ್ಯಾ ನಿವೃತ್ತಿಮಾಡಿಕೊಂಡು, ಶುದ್ಧಾಂತಃಕರಣವುಳ್ಳವರಾದರೆ, ಆಗ ವೇದವೇದಾಂತಾದಿಗಳಿಂದ ಹುಟ್ಟತಕ್ಕ ಶಾಬ್ದಬೋಧವೆಂಬ ವಾಕ್ಯಾರ್ಥ ಜ್ಞಾನವು ಸಾಧಕವಾಗಿ ಆ ಮೂಲಕ ಬ್ರಹ್ಮಸಾಕ್ಷಾತ್ಕಾರ ಪಡೆಯಲು ನೀವು ಅಧಿಕಾರಿಗಳಾಗುವಿರಿ. ॥೨೬॥

ಆಗ ನಿಮಗೆ ನನ್ನ ಅನುಗ್ರಹದಿಂದ ನಿಜವಾದ ಪರಮೇಶ್ವರಜ್ಞಾನವೊದಗುವುದು" ಎಂದು ಹೇಳಿದ ಶಂಕರನ ಮಾತುಗಳನ್ನು ಕೇಳಿ ಸಕಲ ದೇವತೆಗಳೂ॥೨೭॥,

ಜಾನುಭ್ಯಾಮವನಿಂ ಗತ್ವಾ ತುಷ್ಟುವುರ್ಜಗದಂಬಿಕಾಂ ।
ದೇವದೇವಪ್ರಸಾದಾಯ ಭಕ್ತ್ಯಾ ಬದ್ಧಕರಾಸ್ಸುರಾಃ ॥೨೮॥

॥ ದೇವಾ ಊಚುಃ ॥

ಶರಚ್ಛಶಿಸಮಾನನೇ ಜಿತಗಜೇಂದ್ರಯಾತೇ ಶಿವೇ
ಸುನೀಲಜಲದೋಪಮೋಜ್ಜ್ವಲಕಚೇ ಸುಬಿಂಬಾಧರೇ ।
ಸುನೀಲನಯನಾಂಚಲೋತ್ಪಲಸಮಾನನೇತ್ರಾಂಚಲೇ
ದಯಾರಸಘನೇ ಶಿವೇ ಸದಯಮದ್ಯ ನಃ ಪಾಲಯ ॥೨೯॥

ಸುರಾಸುರಮುನಿವ್ರಜೈರ್ನತಪದಾಂಬುಜೇ ಶಂಕರಿ
ಮಹೇಶ್ವರಮಹಾಂಕಗೇ ವಿಕಚಮಲ್ಲಿಧಮ್ಮಿಲ್ಲಗೇ ।
ಭವಾನಿ ಭವನಾಶಿನಿ ಹರಿತಭಕ್ತಪಾಪವ್ರಜೇ
ನಮಾಮ ಪದಪಂಕಜಂ ತವ ವಿಮುಕ್ತಿದಂ ಕೇವಲಂ ॥೩೦॥

---

ಭೂಮಿಗೆ ಮೊಳಕಾಲನ್ನೂರಿ ಕುಳಿತುಕೊಂಡು ದೇವದೇವನ ಅನುಗ್ರಹ ಪ್ರಾಪ್ತಿಗಾಗಿ ಅಂಜಲಿಬದ್ಧರಾಗಿ ಲೋಕಮಾತೆಯಾದ ದೇವಿಯನ್ನು ಹೀಗೆ ಪ್ರಾರ್ಥಿಸತೊಡಗಿದರು. ॥೨೮॥

ದೇವಿಯೇ, ಶರಚ್ಚಂದ್ರನಂತೆ ಹೊಳೆಯುವ ಮುಖವುಳ್ಳವಳೇ, ಮದಗಜ ಗಮನೆಯೇ, ಕೃಷ್ಣಮೇಘದಂತೆ ಕಪ್ಪಾಗಿ ಹೊಳೆಯುವ ಕೇಶಪಾಶವುಳ್ಳವಳೇ, ತೊಂಡೆಹಣ್ಣಿನಂತಿರುವ ಅಧರವುಳ್ಳವಳೇ, ಕಪ್ಪಾದ ಕಣ್ಣುಗಳ ತುದಿಯಲ್ಲಿ ನೀಲೋತ್ಪಲದಂತೆ ರಂಜಿಸುವ ಕಟಾಕ್ಷದಿಂದ ದಯಾರಸಪರಿಪೂರ್ಣಳಾದ ಪಾರ್ವತಿಯೇ, ದಯೆಯಿಂದ ನಮ್ಮನ್ನು ಕಾಪಾಡು. ॥೨೯॥

ಮಹೇಶ್ವರಿಯೇ, ದೇವಾಸುರರಿಂದಲೂ, ಋಷಿಜನರಿಂದಲೂ ನಮಸ್ಕರಿಸಲ್ಪಡುವ ಪಾದಪದ್ಮವುಳ್ಳವಳೇ, ನೀನು ಮಹೇಶ್ವರನ ತೊಡೆಯಮೇಲೆ ಮಂಡಿಸಿರುವವಳಲ್ಲವೆ? ಅರಳಿರುವ ಮಲ್ಲಿಕಾಪುಷ್ಪಗಳಿಂದ ನಿನ್ನ ಕೇಶಪಾಶವು ಶುಭ್ರವಾಗಿರುವುದು. ಭವಾನಿಯೇ, ಭವನಾಶಿನಿಯೇ, ಭಕ್ತರ ಪಾಪರಾಶಿಯನ್ನೆಲ್ಲಾ ನಾಶಮಾಡುವವಳೇ, ಮೋಕ್ಷಪ್ರದವಾದ ನಿನ್ನ ಪಾದಕಮಲವನ್ನು ನಾವು ಭಕ್ತಿಯಿಂದ ನಮಸ್ಕರಿಸುವೆವು. ॥೩೦॥

ಕದಂಬವನಸಂಸ್ಥಿತೇ ಮಣಿಕದಂಬಕಾಂತಿಪ್ರಿಯೇ
ಶರಚ್ಛಶಿಸುಬಿಂಬವತ್ಪ್ರಥಿತವಕ್ತ್ರಬಿಂಬಾಧರೇ।
ಸುಗಂಧತರಬಂಧುರಾಯಿತಸುಗಾತ್ರಿತಾಂಭೋರುಹೋ
ಜ್ವಲನ್ನಯನಕೋಟಿಕೇ ನತಗುಹಾದಿಹೇರಂಬಕೇ ॥೩೧॥

ನಗೇಂದ್ರಕುಲಕನ್ಯಕೇ ವಿಧೃತಸೌರಿಸೋಮಾಲಕೇ
ಮಹೇಶ್ವರಿ ಸುಯಲ್ಲಕೇ ಹ್ಯಸುರಜಾಲಸಂಭಲ್ಲಕೇ।
ನಮಾಮ ಪದಪಲ್ಲವಂ ತವ ಸುಗಲ್ಲಮೌಲಿಸ್ಫುರ
ತ್ಸುರೋತ್ತಮಕಿರೀಟಕಜ್ಜ್ವಲಿತಪಾಪಮಲ್ಲಾಪಹಂ ॥೩೨॥

ಕುಲಾಚಲಕುಲಂ ತ್ವಯಾ ತಿಲಕಕಾಂತಮೀಶೇ ಕೃತಂ
ಕುಲಾಚಲಭ (ಶ)ಯಾಶ್ರಯಾತ್ಕುಲಿಶಿತಾಘಸಂಘೇ ಶಿವೇ।
ಕುಲೀನಜನಮಾನಸಾಶ್ರಯಣಪಾದಪದ್ಮೋಜ್ಜ್ವಲೇ
ಪ್ರಸೀದ ಪವನಾನಲೈರ್ನತಪದಾಂಬುಜೇ ಶಂಕರಿ ॥೩೩॥

---

ಕದಂಬ ವನವಾಸದಲ್ಲಿ ಆಸಕ್ತಿಯುಳ್ಳ ಮಹೇಶ್ವರಿಯೇ, ನಿನ್ನ ಮುಖವು ಶರಚ್ಚಂದ್ರನಂತೆಯೂ, ಅಧರಪ್ರದೇಶವು ಬಿಂಬಫಲದಂತೆಯೂ ಶೋಭಿಸುತ್ತಿರುವುದು. ನಿನ್ನ ದೇಹವೆಂಬ ಕಮಲವು ಸುಗಂಧವನ್ನು ದಿಕ್ಕುಗಳಿಗೆಲ್ಲಾ ಬೀರುತ್ತಾ ನಯನ ಮನೋಹರವಾಗಿ ಕಾಣುತ್ತಿರುವುದು. ಪ್ರಕಾಶಮಾನವಾದ ಕಟಾಕ್ಷದಿಂದ ಕೂಡಿ, ಗಣಪತಿ, ಸ್ಕಂದ ಇವರಿಂದ ವಂದಿತಳಾಗಿರುವ ಜಗನ್ಮಾತೆಯೇ, ನಿನಗೆ ವಂದನೆ. ||೩೧||

ಪರ್ವತರಾಜಪುತ್ರಿಯೇ, ಮುಂಗುರುಳಿನಲ್ಲಿ ಸೂರ್ಯಚಂದ್ರರ ಆಕಾರವನ್ನು ಪಡೆದಿರುವವಳೇ, ಮಹೇಶ್ವರಿಯೇ, ನೀನು ಸಕಲ ರಾಕ್ಷಸರ ಗುಂಪಿಗೂ ಭಲ್ಲಾಯುಧದಂತಿರುವೆಯಲ್ಲಾ! ನಿನ್ನ ಪಾದಕಮಲದಮೇಲೆ ನಿಖಿಲ ದೇವತೆಗಳ ಕಿರೀಟಗಳ ರತ್ನಕಾಂತಿಯು ಪ್ರಸರಿಸಿ, ಅವರ ಸಕಲ ಪಾಪರಾಶಿಯೂ ನಾಶವಾಗಿರುವುದು. ಇಂತಹ ಮಹಾಮಹಿಮಳಾದ ನಿನ್ನನ್ನು ವಂದಿಸುವೆವು. ||೩೨||

ದೇವಿಯೇ, ನೀನು ಪರ್ವತರಾಜನಾದ ಹಿಮವಂತನ ವಂಶದಲ್ಲಿ ಉದ್ಭವಿಸಿದುದರಿಂದ ಕುಲಾಚಲಗಳಿಗೆಲ್ಲಾ ಪ್ರಪಂಚದಲ್ಲಿ ತಿಲಕದಂತಿರುವ ಸ್ಥಾನವು ದೊರಕಿತು. ಅಂತಹ ಕುಲಾಚಲಗಳ ಆಶ್ರಯದಿಂದ ತಪಸ್ಸುಮಾಡಿದವರ ಪಾಪರಾಶಿ

**ದೇವಾನಾಂ ಸಂಸ್ತವಂ ಶ್ರುತ್ವಾ ಪ್ರಹೃಷ್ಟಾ ಪರಮೇಶ್ವರೀ ।**
**ಪ್ರಾಹ ಪ್ರಸನ್ನಾ ಗಂಭೀರಂ ದೇವಾನ್ ಸುಮಧುರಂ ಗಿರಂ ॥೩೪॥**

॥ ದೇವ್ಯುವಾಚ ॥

**ಸ್ತುತ್ಯಾ ಚ ಭವತಾಂ ದೇವಾಃ ಪ್ರಸಾದಸುಮುಖಾ ತ್ವಹಂ ।**
**ದದಾಮಿ ವಾಂಛಿತಂ ಸರ್ವಂ ಶಿವಜ್ಞಾನಮಿದಂ ಸುರಾಃ ॥೩೫॥**

**ಮಜ್ಞಾನೇನ ಪರಾಂ ಶಾಂತಿಮಧಿಗಚ್ಛತ ಸುವ್ರತಾಃ ।**
**ಅಹಂ ಮಾನಂ ಪರಿತ್ಯಜ್ಯ ಶಿವಸಾರ್ವಾತ್ಮ್ಯವೇದಿನಃ ॥೩೬॥**

**ವಿಮುಕ್ತಾಃ ಪಶವೋ ಯೂಯಂ ಮನ್ಮಾಯಾಶಕ್ತಿವೈಭವಾತ್ ।**
**ಅಹಮೇವಾಖಿಲಾರಾಧ್ಯಾ ಹ್ಯಹಂ ಧ್ಯೇಯಾಖಿಲೈರಪಿ ॥೩೭॥**

---

ಯನ್ನೆಲ್ಲಾ ವಜ್ರಾಯುಧದಂತೆ ಧ್ವಂಸಮಾಡಿದೆಯಲ್ಲವೇ! ದೇವಿಯೇ, ನೀನು ಯಾವಾಗಲೂ ಸತ್ಕುಲಪ್ರಸೂತರಾಗಿ ಸಚ್ಚಾರಿತ್ರದಿಂದಿರುವವರ ಹೃದಯಾಂತರಾಳದಲ್ಲಿ ಪಾಪಪದ್ಮವನ್ನಿಟ್ಟು ನಿಲ್ಲುವೆ. ವಾಯ್ವಗ್ನಿಗಳಿಂದ ಸರ್ವದಾ ಸೇವಿತಳಾದ ತಾಯಿಯೇ ನಮಗೆ ಪ್ರಸನ್ನಳಾಗು." ॥೩೩॥

ಎಂದು ವಿಧವಿಧವಾಗಿ ಪ್ರಾರ್ಥಿಸಿದ ದೇವತೆಗಳ ಸ್ತೋತ್ರವನ್ನು ಕೇಳಿ ದೇವಿಯು, ಮೃದುಮಧುರಗಂಭೀರವಾಗಿ ಮುಂದೆ ಹೇಳುವಂತೆ ದೇವತೆಗಳೊಡನೆ ಮಾತನಾಡಲಾರಂಭಿಸಿದಳು. ॥೩೪॥

"ಎಲೈ ದೇವತೆಗಳಿರಾ, ನಿಮ್ಮ ಸ್ತುತಿಗೆ ಮೆಚ್ಚಿರುವೆನು, ಮತ್ತು ಪ್ರಸನ್ನಳಾಗಿರುವೆನು. ನೀವು ಅಪೇಕ್ಷಿಸುತ್ತಿರುವ ಶಿವಜ್ಞಾನವನ್ನು ನಿಮಗೆ ಈಗಲೇ ಉಪದೇಶಿಸುವೆನು. ॥೩೫॥

ವ್ರತಾಚರಣೆಯಿಂದ ಶುದ್ಧರಾದ ದೇವತೆಗಳಿರಾ, ನಾನು ಈಗ ಹೇಳಿರುವ ನನ್ನ ಸ್ವರೂಪವನ್ನೂ, ನನ್ನ ಮಹಿಮೆಯನ್ನೂ ಸರಿಯಾಗಿ ಅರಿತವರಾಗಿ, ಅದರಿಂದ ಶಿವಪಾರಮ್ಯವನ್ನರಿತು, ಶಿವನು ಸರ್ವವ್ಯಾಪಕನೆಂಬುದನ್ನು ತಿಳಿದು ಅಹಂಕಾರ ವಿವರ್ಜಿತರಾಗಿ ಜ್ಞಾನಿಗಳೆನಿಸಿರಿ. ॥೩೬॥

ನನ್ನ ಮಾಯಾಶಕ್ತಿಯಿಂದ ನೀವು ಪಶುಗಳಾಗಿರುವಿರಿ. ಆದರಿಂದಲೇ ನನ್ನ ಸ್ವರೂಪವು ನಿಮಗೆ ಗೋಚರವಾಗಿಲ್ಲ. ನಾನೇ ಸಕಲರಿಂದಲೂ ಪೂಜಿಸಲ್ಪಡುವವಳು ಮತ್ತು ಸಕಲರಿಗೂ ಧ್ಯೇಯಳಾಗಿರುವೆನು. ॥೩೭॥

ಸಂವಿಜ್ಞ ಸದಸಚ್ಚಾಪಿ ಚಾಹಂ ವಿಶ್ವಮಿದಂ ಧ್ರುವಂ
ಮನ್ಮಾಯಯಾ ಮೋಹಿತಾಸ್ಸ್ಥ ಹ್ಯಹಮೇತದ್ಭವಾಭವಂ ।
ಅಹಮೇವ ಸ್ವಯಮಿದಂ ದದಾಮಿ ಜ್ಞಾನಮೈಶ್ವರಂ ||೩೯||

ಅಹಂ ವಿಶ್ವಂ ಭುವನಂ ಚೇತಯಾಮಿ ।
ಹ್ಯಹಂ ವಿಶ್ವೇಭಿರ್ವಸುಭಿಶ್ಚರಾಮ್ಯ
ಹಮಾದಿತ್ಯೈರುತ ವಿಶ್ವದೇವೈಃ ।
ಅಹಮೇವ ವಾತ ಇವ ಪ್ರವಾಮ್ಯಾ
ರಭಮಾಣಾ ಭುವನಾನಿ ವಿಶ್ವಾ ||೪೦||

ಅಹಂ ದಧಾಮಿ ದ್ರವಿಣಂ ಹವಿಷ್ಮತೇ
ಸುವೀರ್ಯಾಯ ಯಜಮಾನಾಯ ಸುನ್ವತೇ ।
ಪರೋ ದಿವಾಹಂ ಪರಯೇನಾಪೃಥಿವ್ಯಾಂ.
ಪರಂ ಪರಾ ಹಿ ಪ್ರಥಮಾ ಪೃಥಿವ್ಯಾಂ ||೪೧||

ಜ್ಞಾನರೂಪಿಣಿಯಾಗಿಯೂ, ಸದಸದ್ರೂಪವಿಶಿಷ್ಟಳಾಗಿಯೂ ಇರುವವಳಾಗಿ, ಈ ಪ್ರಪಂಚವನ್ನು ನಡೆಸುವವಳೇ ನಾನು. ನನ್ನ ಮಾಯೆಯಿಂದಲೇ ಈ ಜಗತ್ತೆಲ್ಲವೂ ಮೋಹಿತವಾಗಿರುವುದು. ನಾನೇ ನನ್ನ ಭಕ್ತರಿಗೆ ಈಶ್ವರಜ್ಞಾನವನ್ನು ಉಪದೇಶಿಸುವವಳು. ||೩೯||

ನಾನೇ ಜಡಾತ್ಮಕವಾದ ಈ ಜಗತ್ತನ್ನು ಚೇತನಗೊಳಿಸುವವಳು. ವಿಶ್ವೇದೇವತೆಗಳು, ವಸುಗಳು, ಆದಿತ್ಯರು, ಸಕಲ ದೇವತೆಗಳು ಇವರ ರೂಪಗಳಿಂದ ಸಂಚರಿಸುವ ವ್ಯಕ್ತಿಯೇ ನಾನು. ನಾನು ಸಕಲ ಪ್ರಪಂಚವನ್ನೂ ವ್ಯಾಪಿಸಿ, ವಾಯುವಿನಂತೆ ಸರ್ವತ್ರ ಚಲಿಸುತ್ತಿರುವೆನು. ||೪೦||

ನಾನೇ ಹವಿಷ್ಮಂತನಾಗಿರುವ ಅಗ್ನಿದೇವನಿಗೆ ಸಕಲ ಭೋಗಭಾಗ್ಯಗಳನ್ನೂ ಕೊಡುತ್ತಿರುವೆನು. ಯಾಗವಮಾಡುವಂತಹ ಯಜಮಾನನಿಗೆ ವೀರ್ಯಾದಿ ಸಕಲ ಗುಣಗಳನ್ನೂ ಕೊಡುವೆನು. ಶ್ರೇಷ್ಠವಾದ ದಿವಾರೂಪದಲ್ಲಿದ್ದು, ಈ ಪೃಥಿವಿಯಲ್ಲಿ ನಿಂತು ಎಲ್ಲಕ್ಕೂ ಆದಿಭೂತಳೆನಿಸಿರುವೆನು. ||೪೧||

ಏಷೋಽಂತರ್ಯಾಮ್ಯಮೃತಃ ಪುರಾಣ
ಸ್ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
ಏನಮಾತ್ಮಾನಂ ಗೂಢಮನುಪ್ರವಿಷ್ಟಂ
ಹೃದಾ ಪಶ್ಯಂತಿ ಮನಸಾ ಮನೀಷಿಣಃ ॥೪೨॥

ಏಷ ಭೂತಪತಿರೇಷಸೇತುರ್ವಿಧರಣೋ
ಲೋಕಾನಾಮಸಂಭೇದಾಯ ।
ಏಷ ಸುಪ್ತೇಷು ಜಾಗರ್ತಿ ಭೂತಂ
ಭೂತಂ ಪುರುಷೋ ನಿರ್ಮಿಮಾಣಃ ॥೪೩॥

ಏಷೋಽಂತರಾದಿತ್ಯೇ ಹ್ಯಮೃತೋ ಹಿರಣ್ಮಯಃ
ಪುರುಷೋ ದೃಶ್ಯತೇ ಶಿವಃ ।
ಏಷ ಧಾತಾ ವಿಧಾತಾ ಚ
ಸ್ವರಾಟ್ ಸಮ್ರಾಟ್ ಪ್ರಜಾಪತಿಃ ॥೪೪॥

ಏಷ ದಿವ್ಯೋ ದೇವ ಏಕಃ ।
ಪುರಾಣೋ ಸಂಗಿಷ್ವಸಂಗೋ ಗುಣಾನಾಮುಕರ್ಮಭಿಃ ॥೪೫॥

ಈ ಪರಶಿವನೇ, ಸರ್ವಭೂತಾಂತರ್ಯಾಮಿಯು. ಅನಾದಿಯಾಗಿ ಅಂತ ವಿಲ್ಲದೆ ಎಲ್ಲರ ಹೃದಯದಲ್ಲಿಯೂ ಗೂಢವಾಗಿ ನೆಲಸಿರುವನು. ವಿದ್ವಾಂಸರಾದವರು ಹೀಗೆ ಅಂತರ್ಯಾಮಿಯಾಗಿರುವ ಇವನನ್ನೇ ಪರಮಾತ್ಮರೂಪದಿಂದ ತಿಳಿಯು ವರು. ॥೪೨॥

ಸಮಸ್ತ ಭೂತ (ಪ್ರಾಣಿವರ್ಗಕ್ಕೂ) ಗಳಿಗೂ ಶಂಭುವೇ ಒಡೆಯನು. ಸಂಸಾರಸಾಗರದಿಂದ ದಾಟಿಸುವ ಸೇತುವೇ ಇವನು. ಲೋಕಗಳ ಸೃಷ್ಟಿಗಾಗಿ ಈತನು ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥೆಗಳನ್ನು ಪ್ರಾಣಿಗಳಿಗೆ ಕಲ್ಪಿಸಿ ತನ್ಮೂಲಕ ಸೃಷ್ಟಿ ಕಾರ್ಯವನ್ನು ಹೆಚ್ಚಿಸುವನು. ॥೪೩॥

ಸೂರ್ಯಬಿಂಬದಲ್ಲಿ ಅಮೃತರೂಪದಿಂದಲೂ, ಹಿರಣ್ಮಯನಾಗಿಯೂ ಆದಿ ಪುರುಷನೆನಿಸಿರುವವನೇ ಈ ಶಂಕರನು. ಲೋಕದ ಸೃಷ್ಟಿಕರ್ತನೂ, ಸಂರಕ್ಷಕನೂ, ರಾಜಾಧಿರಾಜನೂ, ಪ್ರಜೆಗಳಿಗೆ ಒಡೆಯನೂ, ದಿವ್ಯಪುರುಷನೂ, ದ್ವಿತೀಯರಹಿತನೂ,

ಏಷ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥೪೬॥

ಜಲಸ್ಯ ಚಲನಾದೇವ ಯಥಾ ಚಲತಿ ಭಾಸ್ಕರಃ ।
ತಥೈಷ ಸರ್ವಭೂತೇಷು ತದ್ಧರ್ಮೈರ್ನೈವ ಲಿಪ್ಯತೇ ॥೪೭॥

ಅಲಿಂಗ ಆಕಾಶಸಧರ್ಮಾ ಏಷೋ
ನಾಂತೋ ನ ಚಾದಿರ್ನಚ ಮಧ್ಯಮೇಷಃ ।
ಜಗದ್ಗತೋಽಯಂ ನ ಜಗದ್ವಿಚಿತ್ರ
ಮೇಷೋಽಖಿಲಾಧಾರ ಉರುಕ್ರಮಸ್ಸದಾ ॥೪೮॥

ಗುಣ, ನಾಮ, ಕ್ರಿಯೆಗಳಿಂದ ಇತರ ಪ್ರಾಣಿವರ್ಗದಲ್ಲಿ ವ್ಯವಹಾರಮಾರ್ಗದಿಂದ ಸಂಸಕ್ತನಾಗಿದ್ದರೂ, ವಾಸ್ತವಿಕವಾಗಿ ಅಸಂಗಿಯಾದವನೂ, ಈ ಮಹಾನುಭಾವನಾದ ಶಂಭುವೇ. ||೪೪-೪೫||

ಈ ಪರಶಿವನೊಬ್ಬನೇ ಸಕಲ ಪ್ರಾಣಿಗಳಲ್ಲಿಯೂ ಆತ್ಮರೂಪದಲ್ಲಿ ಪ್ರತಿಫಲಿಸುತ್ತಿರುವನು. ಚಂದ್ರನು ಒಬ್ಬನೇ ಆದರೂ ಕೆರೆ, ಕೊಳ ಮುಂತಾದ ಜಲಸ್ಥಾನಗಳಲ್ಲಿ ಅಲೆಅಲೆಯಲ್ಲಿಯೂ ಬೇರೆಬೇರೆ ಚಂದ್ರರು ಪ್ರತಿಫಲಿಸುವಂತೆ ಪರಬ್ರಹ್ಮರೂಪಿಯಾದ ಶಿವನು ಭಿನ್ನಭಿನ್ನಾಕಾರಗಳಲ್ಲಿ ಪ್ರತಿಫಲಿಸುತ್ತಿರುವರು. ||೪೬||

ನೀರಿನಲ್ಲಿ ಪ್ರತಿಫಲಿಸುವ ಸೂರ್ಯಬಿಂಬವು ನೀರಿನ ಓಟದಿಂದ ತಾನೂ ಓಡುತ್ತಿರುವಂತೆ ಕಾಣುವುದು. ಆದರೆ ನಿಜವಾಗಿ ಓಡುವುದು ಸೂರ್ಯನಲ್ಲ. ಹಾಗೆಯೇ ಸಕಲ ಪ್ರಾಣಿಗಳಲ್ಲಿಯೂ ಪ್ರತಿಫಲಿಸುತ್ತಿರುವ ಪರಬ್ರಹ್ಮವಸ್ತುವಿಗೆ ಯಾವ ನಾಮರೂಪಕ್ರಿಯಾದಿಗಳ ಸಂಸರ್ಗವೂ ಇರುವುದಿಲ್ಲ. ||೪೭||

ಈ ಪುರಾಣಪುರುಷನಿಗೆ ಯಾವ ವಿಧವಾದ ಚಿಹ್ನಾದಿಗಳೂ ಇರುವುದಿಲ್ಲ. ಆಕಾಶವತ್ ಸರ್ವವ್ಯಾಪಿಯು. ಈತನಿಗೆ ಆದ್ಯಂತಗಳಿರುವುದಿಲ್ಲ. ಮಧ್ಯಗತಿಯಿಲ್ಲ. ಸರ್ವಜಗದ್ಗತನಾಗಿ ವಿಚಿತ್ರವ್ಯಕ್ತಿಯೆನಿಸಿ ಲೋಕಗಳಿಗೆಲ್ಲಾ ಆಧಾರಭೂತನಾಗಿ ಮಹಾಪರಾಕ್ರಮಿಯೆನಿಸಿರುವವನೇ ಈ ಮಹಾನುಭಾವನು. ||೪೮||

ವಿಶೇಷಹೀನಶ್ಚ ಕವಿಃ ಪುರಾಣ
ಏಷ ಸ್ವತಂತ್ರಃ ಪುರುಷಃ ಪುರಾಣಃ ।
ಗೂಢೇಷು ಗೂಢಃ ಪರಪಾರಪಾರ
ಸ್ಸದುರ್ದಶೋ ಯೋಗಯುಕ್ತ್ಯೈಶ್ಚ ಭೂಯಾನ್ ॥೪೯॥

ಸಹೈವ ಸಂಸ್ಥೋ ಭವತಾಂ ವೈ ನಿಲಿಂಪಾಃ
ನ ಜಾನಂತಿ ಸರ್ವೇ ಹೃದಾ ಭಾಸಮಾನಂ ।
ಸದಾ ಭಾಸ್ಯಭಾಸಂ ಮಹೋಕ್ಷಾದ್ವಿಹೀನಂ ॥೫೦॥

ಅಸ್ಯೈವ ಹಿ ಪ್ರಕೃತಿಶ್ಚಾಸ್ಮಿ ದೇವಾ
ನ ಮಾಂ ಜಾನತೇ ಯೇ ಸದಾ ದುಃಖಭಾಜಃ ।
ಪ್ರಭಾಸ್ಮೀಹ ದೇವೀ ಶಶೀ ಸೂರ್ಯಋಕ್ಷೇ
ಋಷೌ ಗ್ರಹಾಣಾಂ ಪರಮಾ ಸ್ಥಿತಿಶ್ಚ ॥೫೧॥

ವಿಶೇಷಗುಣರಹಿತನಾಗಿ, ಆದಿಕವಿಯೆನಿಸಿ, ಪುರಾಣಪುರುಷನಾದ ಈ ಶಂಕರನು ಸ್ವತಂತ್ರನು. ಗೂಢವಸ್ತುಗಳಲ್ಲೆಲ್ಲಾ ಅತ್ಯಂತ ಗೂಢವಾಗಿರುವವನು. ಶ್ರೇಷ್ಠವಾದ ಪಾರವುಳ್ಳ ಆ ಮಹಾನುಭಾವನನ್ನು ಯೋಗಿಗಳು ಅನೇಕ ಯುಕ್ತಿಗಳಿಂದಲೂ ಸುಲಭವಾಗಿ ತಿಳಿಯಲಾರರು. ||೪೯||

ಎಲೈ ದೇವತೆಗಳಿರಾ, ಈ ಮಹಾದೇವನು ನಿಮ್ಮ ಜೊತೆಯಲ್ಲಿಯೇ ಇರುವನು. ನಿಮ್ಮ ಹೃದಯದಲ್ಲಿಯೇ ಭಾಸಮಾನವಾಗುತ್ತಿರುವನು. ಆದರೆ ನೀವು ಮಾತ್ರ ಆತನನ್ನು ನೋಡಲಾರಿರಿ. ಸದಾ ಭಾಸಮಾನವಾಗುತ್ತಿದ್ದರೂ, ಭಾಸ್ಯಮಾನವಾದ ವಸ್ತುರೂಪವು ನಿಮಗೆ ಭಿನ್ನಭಿನ್ನವಾಗಿ ಕಾಣುತ್ತಾ, ವ್ಯವಹಾರದಲ್ಲಿ ವೃಷಭವಾಹನನಾದರೂ, ವಸ್ತುತಃ ವೃಷಭಹೀನನಾದ ಶಂಕರನೇ ಸರ್ವತ್ರ ಪೂಜ್ಯನು.||೫೦||

ದೇವತೆಗಳಿರಾ, ಈ ಪರಮಾತ್ಮನಿಗೆ ನಾನು ಪ್ರಕೃತಿಯಾಗಿರುವೆನು. ದುಃಖಿಗಳಾದ ಜನರು ನನ್ನ ಸ್ವರೂಪವನ್ನು ಸರಿಯಾಗಿ ಅರಿಯಲಾರರು. ದೇವಿಯೆನಿಸಿ, ಸೂರ್ಯ, ಚಂದ್ರ, ನಕ್ಷತ್ರ, ಗ್ರಹಗಳು ಈ ತೇಜೋಮಯವಾದ ವಸ್ತುಗಳಲ್ಲಿ ತೇಜೋರೂಪದಿಂದಿರುವವಳು ನಾನೇ. ||೫೧||

ನ ಚಾವಯೋರ್ಭೇದಜಾಲಂ ಕದಾಚಿತ್
ಮಾಯಾ ಚಾಹಂ ಹ್ಯೇಷ ಮಾಯೀ ಮಹೇಶಃ ।
ಭಾವಗ್ರಾಹ್ಯೋ ಹ್ಯನೀಡಾತ್ಮಾ
ಭಾವಾಭಾವಕರಶ್ಶಿವಃ ॥೫೨॥

ಕಲಾವಿದಂ ಪುರುಷಂ ದೇವಮೀಡ್ಯಂ
ನಿಚಾಯ್ಯೈನಂ ಶಾಂತಿಮತ್ಯಂತಮೇತಿ ।
ಏಷ ಆತ್ಮಾ ತಪಸಾಲೋಕನೀಯೋ
ನಾನ್ಯೈರ್ಧರ್ಮೈರಸ್ಯ ಲಿಂಗಂ ನ ಚೈವ ॥೫೩॥

ಯಸ್ಯೈಷ ಆತ್ಮಾ ವೃಣುತೇ ತನೂಂ ಸ್ವಾಂ
ತಸ್ಯ ಪ್ರಸಾದೇನ ಹಿತಸ್ಯ ಲಾಭಃ ।
ಯಸ್ಯೈವ ಲಾಭಾನ್ನ ಪರಂ ಲಾಭಮೀಷ್ಟೆ
ಜನಸ್ಸುರಾ ಜ್ಞಾನಮೇತಸ್ಯ ದುರ್ಜ್ಞಂ ॥೫೪॥

---

ಯಾವಾಗಲೂ ನನಗೂ ಮಹೇಶ್ವರನಿಗೂ ಭೇದವಿರುವುದಿಲ್ಲ. ನಾನು ಮಾಯೆ. ಮಾಯಾವಿಶಿಷ್ಟನೇ ಈ ಮಹೇಶ್ವರನು. ಭಾವದಿಂದ ತಿಳಿಯುವವನೂ, ಆಶ್ರಯರಹಿತನಾದವನೂ, ಭಾವಾಭಾವರೂಪದಿಂದ ಪ್ರಕಾಶಿಸುವವನೂ ಆದ ಶಂಕರನೇ ಈತನು. ॥೫೨॥

ಈ ಅನಾದಿಪುರುಷನು ಸಮಸ್ತ ಕಲೆಗಳನ್ನೂ ಅರಿತವನು. ದೇವಪೂಜ್ಯನು. ಇಂತಹವನನ್ನು ಯಾವನು ಭಕ್ತಿಯಿಂದಾರಾಧಿಸುವನೋ, ಅಂತಹವನಿಗೆ ನಿಜವಾದ ಶಾಂತಿಯು ಒದಗುವುದು. ಕೇವಲ ಈಶ್ವರವಿಷಯಕವಾದ ಜ್ಞಾನದಿಂದ, ಪರಮೇಶ್ವರನನ್ನು ಕುರಿತು ತಪಸ್ಸುಮಾಡುವುದರಿಂದ ಈತನನ್ನು ಕಾಣಬಹುದು. ಮತ್ತಾವ ಧರ್ಮಗಳಿಂದಲೂ ಶಂಭುವನ್ನು ನೋಡಲು ಸಾಧ್ಯವಾಗಲಾರದು. ॥೫೩॥

ಅಶರೀರಿಯಾದ ಈ ಪರಮಾತ್ಮನು, ತನ್ನ ಇಷ್ಟದಂತೆ ಶರೀರಿಯಾಗಿ ಕಂಡು ಬಂದರೂ, ಆ ಅನುಗ್ರಹದಿಂದಲೇ ಲೋಕಕ್ಕೆ ಹಿತವುಂಟಾಗುವುದು. ಈ ಪರಮಾತ್ಮನ ಅನುಗ್ರಹಪ್ರಾಪ್ತಿಯುಮುಂದೆ ಮತ್ತಾವ ಲಾಭವೂ ಜನರಿಗೆ ಬೇಕಾಗುವುದಿಲ್ಲ. ಈ ಶಿವವಿಷಯಕವಾದ ತಿಳಿವಳಿಕೆಯು ಜನರಿಗಾಗಲಿ, ದೇವತೆಗಳಿಗಾಗಲಿ, ಅತ್ಯಂತ ಸುಲಭವಲ್ಲ. ॥೫೪॥

ಪುರಾವಿದಃ ಕವಯೋ ಯೇ ಮನೀಷಿಣೋ
ಜ್ಞಾತ್ವಾಪ್ಯೇನಂ ನಿಷ್ಪ್ರಕಂಪಾ ಮಹೇಶಂ।
ತರಂತಿ ಶೋಕಂ ಚ ಪೃಥಕ್ಪೃಥಕ್ಷ್ನಾ
ನ ಜಾಯತೇ ನಿತ್ಯಯುಕ್ತಾ ಗುಣೇಷು ॥೫೫॥

ತಥೇಂದ್ರಿಯಾಧಾರಮನಂತರೂಪಂ
ನೀರೂಪರೂಪಂ ಪರಮಾಕಾಶಮೇನಂ।
ವಿಷ್ವಕ್ಪ್ರಪಂಚೇಷು ಪುರೀಶಯಂ ಸ್ಥಿತಂ
ವೇದಾಂತಸಂಘೈರಪಿ ಷ್ಟುಡ್ಯಮಾಣಃ ॥೫೬॥

ರಸಂ ರಸಾನಾಂ ಪರಮಾಸ್ವಾದನೀಯಂ
ಅನಾಸ್ವಾದಂ ರಸವರ್ಜಂ ಸುಗುಪ್ತಂ।
ತುರೀಯಮಿಂದ್ರಂ ಸತತೋದಿತಂ ಗುಣೈ
ರ್ಗುಣಾತೀತಂ ವಿಪ್ರುಷಂ ದಿವ್ಯಧಾಮ ॥೫೭॥

---

ಹಿಂದೆ ವಿದ್ವಾಂಸರೂ, ಕವಿಗಳೂ ಆದ ಎಷ್ಟೋ ಜನರು ಮಹೇಶ್ವರ ವಿಷಯಕವಾದ ಜ್ಞಾನಸ್ವರೂಪವನ್ನು ಅರಿತವರಾಗಿದ್ದರೂ ಲೌಕಿಕವಾದ ಭಿನ್ನ ಭಿನ್ನ ದುಃಖಪರಂಪರೆಗಳಿಂದ ಅವರು ಪಾರಾಗಲಿಲ್ಲ. ಏಕೆಂದರೆ ಅವರು ಸಗುಣೋಪಾಸಕರಾಗಿ, ಗುಣವಿಶಿಷ್ಟವಸ್ತುವಿನಲ್ಲಿ ನಿತ್ಯತ್ವವನ್ನು ಕಲ್ಪಿಸಿಕೊಂಡು ಅಜ್ಞಾನಿಗಳೆನಿಸಿದರು. ॥೫೫॥

ಸಕಲೇಂದ್ರಿಯಗಳಿಗೂ ಆಧಾರಭೂತನೆನಿಸಿ ಅನಂತರೂಪಿಯಾಗಿದ್ದರೂ, ರೂಪರಹಿತನಾಗಿ, ಆಕಾಶದಂತೆ ಸರ್ವವ್ಯಾಪಿಯಾಗಿರುವ ಪರಮಾತ್ಮನು ಸಕಲ ಪ್ರಪಂಚಾಂತರ್ವರ್ತಿಯಾಗಿ ಸ್ಥೂಲಸೂಕ್ಷ್ಮಶರೀರಗಳಲ್ಲಿ ಪ್ರತಿಫಲಿಸುತ್ತಿರುವನು. ಇಂತಹ ಪರಶಿವನನ್ನು ಸಕಲ ವೇದಾಂತರಾಶಿಯೂ ಸರ್ವದಾ ಸ್ತುತಿಸುತ್ತಿರುವುದು. ॥೫೬॥

ರಸದ್ರವ್ಯಗಳಲ್ಲಿ ಅಡಗಿರುವ ರುಚಿಕರವಾದ ರಸವೂ ಈ ಪರಮಾತ್ಮನೇ. ಆದರೆ ರಸರಹಿತನಾಗಿ, ಆಸ್ವಾದನೆಗೆ ಸುಲಭನಲ್ಲದ ಗುಪ್ತವಾದ ಪರಬ್ರಹ್ಮವಸ್ತುವೂ ಈತನೇ. ಹಾಗೆಯೇ ಸಂತತವಾದ ಗುಣಗಳಿಂದ ಗುಣಿಯೆನಿಸಿ ಲೋಕದೊಡೆಯ

ಏಷೋಽನಂತೋ ಮಹಿಮಾಧಾರ ಈಶೋ
ಭೂಮಾ ಸೀಮಾ ಸಾರ ಏಕೋಽದ್ವಿತೀಯಃ ।
ನಾನ್ಯೈವಾಸ್ತಿ ಮಹಿಮಾಯಂ ಪ್ರತಿಷ್ಠಾ
ಕವಿಃ ಪ್ರಧಾನೋ ರಸವರ್ಜೋಽಯಮಾತ್ಮಾ ॥೫೮॥

ಏಷ ಬ್ರಹ್ಮೈಷ ಏವೇಂದ್ರ ಏಷ ಸರ್ವಂ ಚರಾಚರಂ
ಏಷ ಆತ್ಮಾಪಹತಪಾಪ್ಮಾವಿರಜೋ ।
ವಿಶೋಕೋ ವಿಮೃತ್ಯು
ರಜಿಘತ್ಸೋಽಪಿಪಾಸುಃ ॥೫೯॥

ಸತ್ಯಕಾಮೋಽಗುಣೋಽಹ್ಯೇಷ
ಬೃಹದ್ಧಾಮಾಯಮೀಶ್ವರಃ ।
ಏಷೋಽಶರೀರೋ ವಿಶ್ವಕರ್ತಾ ಗುಣೇಶ
ಏಷ ದೇವಶ್ಶೀರ್ಯಮಾಣೈರ್ನ ಶೀರ್ಣಃ ॥೬೦॥

---

ನಾಗಿರುವವನಾದರೂ ವಸ್ತುತಃ ಈತನು ಗುಣಾತೀತನು ; ಮತ್ತು ನಾಶರಹಿತನಾದ ದಿವ್ಯಜ್ಯೋತಿಯು. ॥೫೭॥

ಈತನೇ ಅನಂತನು. ಸಕಲ ಮಹಿಮಾಧಾರನೂ ಸರ್ವವ್ಯಾಪಿಯೆನಿಸಿ, ಸಕಲ ಪ್ರಪಂಚಕ್ಕೆ ಮೇರೆಯಾಗಿ, ಸಜಾತೀಯ ದ್ವಿತೀಯರಹಿತನಾಗಿ ಏಕರೂಪದಿಂದಿರುವವನೂ ಈತನೇ. ರಸಾದಿಗುಣರಹಿತನಾದ ಈ ಪರಶಿವನೇ ಆತ್ಮಸ್ವರೂಪನು, ಅನಾದಿಕವಿಯಂತಿರುವವನು. ॥೫೮॥

ಪರಶಿವನೇ ಬ್ರಹ್ಮನು. ಈತನೇ ಇಂದ್ರನು. ಸಕಲ ಚರಾಚರಾತ್ಮಕವಾದ ಜಗತ್ತೇ ಇವನು. ಈತನಿಗೆ ಪಾಪಲೇಶದ ಸಂಬಂಧವೂ ಇಲ್ಲ. ಶೋಕ, ಮರಣ, ಕ್ಷುತ್ಪಿಪಾಸಾದಿಗಳು, ಪರಾಧೀನತೆ ಇತ್ಯಾದಿ ಯಾವ ದೋಷಗಳೂ ಪರಶಿವನಲ್ಲಿ ಕಂಡು ಬರಲಾರವು. ॥೫೯॥

ಸತ್ಯದಲ್ಲಿ ಆಸೆಯುಳ್ಳವನೂ, ಗುಣರಹಿತನೂ, ಅತಿಶಯತೇಜಸ್ಸುಳ್ಳವನೂ ಈತನೇ. ಸ್ವಯಂ ಶರೀರರಹಿತನಾಗಿದ್ದರೂ ವಿಶ್ವಕರ್ತನು. ಗುಣಗಣಭರಿತನು. ನಷ್ಟವಾಗುವ ವಸ್ತುಗಳ ಸಂಸರ್ಗವಿದ್ದರೂ ಈತನು ಮಾತ್ರ ಎಂದೂ ನಾಶವಾಗುವುದಿಲ್ಲ. ॥೬೦॥

ಅರಜೋಽಯಮಮೃತೋ ವೈ ವಿಶೋಕ
ಶ್ಶೋಕಾತಿಗೋ ಜಾತಿಧರ್ಮೈರ್ವಿಹೀನಃ ।
ಏಷ ದೇವೈರ್ವೇದಸಂಘೈಶ್ಚ ವಿಪ್ರೈಃ
ಅಭಿಷ್ಟುತೋಽಪ್ರತರ್ಕ್ಯೋ ಹೀಂದ್ರಿಯೈಶ್ಚ ॥೬೧॥

ಏಷೋಽನಂತಶ್ಚೇಷ್ಟತೇ ದೇಹಜಾಲೈ
ರ್ಯಥೋರ್ಣನಾಭಿಸ್ಸೃಜತೇ ತಂತುಜಾಲಂ ।
ಏಷ ಆದಿತ್ಯೇ ತಪತಿ ತೇಜಸೇದ್ಧಃ
ಏಷ ವಿಪ್ರೈರ್ಮಖಜಾಲೈಶ್ಚ ತುಷ್ಟಃ ॥೬೨॥

ಯಃ ಪಾತಿ ಸೋಮಮಮೃತಸ್ಯ ನಾಭಿಂ
ಕಾಲಾತಿಗಃ ಪಾತಿ ವಿಶ್ವಂ ಸದೈವ ।
ಅಸ್ಮಾದ್ಭಿನ್ನಂ ನಾಣುರಸ್ತೀಹ ಕಿಂಚಿತ್
ಸ ಏಷ ಭರ್ತಾ ಮಮ ದೇವಃ ಪುರಾಣಃ ॥೬೩॥

ರಜೋಗುಣರಹಿತನಾಗಿ, ಶೋಕಮರಣಾದಿಗಳಿಗೆ ಸಿಕ್ಕದೆ, ಜಾತಿಕರ್ಮಾದಿಗಳಿಗೆ ಒಳಪಡದೆ, ದೇವತೆಗಳಿಂದಲೂ, ವಿಪ್ರಸಮೂಹದಿಂದಲೂ, ಸ್ತುತಿಸಲ್ಪಡುವ ಪರಶಿವನನ್ನು, ಊಹೆಗಳಿಂದಲೂ ಇಂದ್ರಿಯಾದಿಗಳ ಚೇಷ್ಟಾದಿಗಳಿಂದಲೂ, ತಿಳಿಯಲು ನಿಜವಾಗಿಯೂ ಸಾಧ್ಯವಾಗಲಾರದು. ॥೬೧॥

ಜೇಡರ ಹುಳುವು ತನ್ನ ಹೃದಯದಿಂದಲೇ ದಾರವನ್ನೆಳೆದು ಗೂಡುಕಟ್ಟಿ ಅಲ್ಲಿಯೇ ವಾಸಮಾಡಿ ಕೊನೆಗೆ ತನ್ನಲ್ಲಿಯೇ ಅದನ್ನು ಲಯಹೊಂದಿಸುವಂತೆ ಸ್ವಯಂಪ್ರಕಾಶಕನೂ, ಗುಣರಹಿತನೂ ಆದ ಶಂಕರನು ಒಬ್ಬನೇ ಆದರೂ ಲೋಕದಲ್ಲಿ ಬೇರೆ ಬೇರೆ ಆಕಾರಗಳಿಂದ ತೋರಿ ತನ್ನಲ್ಲಿಯೇ ಎಲ್ಲವನ್ನೂ ಕೊನೆಗೆ ಅಡಗಿಸಿಕೊಳ್ಳುವನು. ಸೂರ್ಯನಲ್ಲಿ ತೇಜೋರೂಪದಲ್ಲಿದ್ದು, ವಿಪ್ರರ ಸ್ತುತಿಗಳಿಂದಲೂ, ಯಜ್ಞಯಾಗಾದಿ ಕರ್ಮಗಳಿಂದಲೂ ತುಷ್ಟನೆನಿಸಿಕೊಂಡಿರುವನು. ॥೬೨॥

ನಾಶರಹಿತವಾಗಿ ಅಮೃತರೂಪವಾಗಿರುವ ಸೋಮಯಾಗವನ್ನೂ ತತ್ಫಲವನ್ನೂ ರಕ್ಷಿಸುವ, ಕಾಲಾತೀತನೂ, ವಿಶ್ವರಕ್ಷಕನೂ ಆದವನೇ ಪರಶಿವನು. ಲೋಕದಲ್ಲಿ ಪರಶಿವನನ್ನು ಬಿಟ್ಟು ಪ್ರತ್ಯೇಕವಾಗಿ ಒಂದಣುವೂ ಇಲ್ಲ. ಆದಿದೇವನೂ, ದೇವದೇವನೂ ಆದ ಪುರುಷನೇ ನನ್ನ ಪತಿಯು. ॥೬೩॥

ನೀರೂಪರೂಪೋಽಪ್ಯಯಮಾತ್ಮಾ ಮಹೇಶೋ
ನೀಲಗ್ರೀವಶ್ಶಿಪಿವಿಷ್ಟಶ್ಶಾಶ್ವತೋಽಯಂ ।
ನ ಹನ್ಯತೇ ಹನ್ಯಮಾನೇ ಶರೀರೇ
ದಿವ್ಯೋಽ ದೇವೋಽಹ್ಯೇಷ ದೇವಃ ಪುರಾಣಃ ॥೬೪॥

ತಂ ಬ್ರಹ್ಮಮನ್ವಾನ ಉಪಾಸತೇ ಪರಂ
ಬುದ್ಧೀಂದ್ರಿಯಾತೀತಮನೌಪಮಂ ಶಿವಂ ।
ನಾಂತಃ ಪ್ರಜ್ಞಂ ನ ಬಹಿಃ ಪ್ರಜ್ಞಮಿಾಶಂ
ನೋಽಭಯತಃ ಪ್ರಜ್ಞಮರ್ಹತ್ತಮಂ ಚ ॥೬೫॥

ವಿಶ್ವಸ್ಯ ಸ್ರಷ್ಟಾರಮನೇಕರೂಪಂ ವಿಶ್ವಸ್ಯೈಕಂ ಪರಿವೇಷ್ಟಿತಾರಂ ।
ಗುಹಾಹಿತಂ ಗಹ್ವರೇಷ್ಟಂ ಪುರಾಣಂ ।
ತ್ರ್ಯವಸ್ಥಾತೀತಂ ಪ್ರಣವಂ ಚಾದಿಮೇಕಂ ॥೬೬॥

---

ಆತ್ಮಸ್ವರೂಪಿಯಾದ ಈ ಪರಮಾತ್ಮನು ರೂಪರಹಿತನಾದವನು. ನೀಲಗ್ರೀವನು. ಸಕಲಕಿರಣಗಳಲ್ಲಿಯೂ ಪ್ರವೇಶಿಸುವವನು. ಸ್ಥಿರನಾದವನು. ಶರೀರನಾಶದಿಂದ ಈ ಆತ್ಮರೂಪಿಯಾದ ಶಂಕರನು ನಷ್ಟನಾಗುವುದಿಲ್ಲ. ದಿವ್ಯನಾದ ಮತ್ತು ಅನಾದಿಯಾದ ಭಗವತ್ಸ್ವರೂಪನು ಈತನೊಬ್ಬನೇ. ||೬೪||

ಬ್ರಹ್ಮಜ್ಞಾನಿಗಳು ಈ ಪರಶಿವನನ್ನು ಬುದ್ಧೀಂದ್ರಿಯಾದಿಗಳಿಗೆ ಅತೀತನಾದವನೆಂದೂ, ಅವನಿಗೆ ಸರಿಸಮನಾದ ದೇವದೇವನು ಮತ್ತಾರಿಲ್ಲವೆಂದೂ, ತಿಳಿಯುವರು. ನಿಜವಾಗಿಯೂ ಶಂಕರನು ಅಂತಃಪ್ರಜ್ಞನೂ ಅಲ್ಲ. ಬಹಿಃಪ್ರಜ್ಞನೂ ಅಲ್ಲ. ಉಭಯಪ್ರಜ್ಞನೂ ಅಲ್ಲ. ||೬೫||

(ಅಂತಃಪ್ರಜ್ಞ=ವಿಷಯವಾಸನೆಯಿಂದ ಕೂಡಿ ಒಳಗಿರುವ ಮನ ಇಂದ್ರಿಯದಿಂದ ಸ್ವಾಪ್ನಿಕಪದಾರ್ಥಗಳನ್ನು ಅನುಭವಿಸುವವನು.

ಬಹಿಃಪ್ರಜ್ಞ=ಇಂದ್ರಿಯಾದಿಗಳ ಸಹಾಯದಿಂದ ಬಾಹ್ಯವಿಷಯಗಳನ್ನು ಅರಿಯುವವನು.

ಉಭಯಪ್ರಜ್ಞ=ಈ ಎರಡು ವಿಷಯಕವಾದ ತಿಳಿವಳಿಕೆಯನ್ನೂ ಹೊಂದಿರುವವನು ಉಭಯಪ್ರಜ್ಞ.)

ಪರಶಿವನು ವಿಶ್ವಸೃಷ್ಟಿಕರ್ತನಾಗಿಯೂ, ರೂಪಾಂತರಧಾರಿಯಾಗಿಯೂ,

ಮಹಂ ಮಹಾಂತಂ ಪರಮಾತ್ಮಾನಮೀಶಂ
ಅಣೋರಣೀಯಾಂಸಮಿದಂ ತತಂ ಚ ।
ವಿಭ್ರಾಜಮಾನಂ ಭೂತವರ್ಗೇಷ್ವಸಂಗಂ
ನೇಲಾತಿಗಂ ಸ್ವಪ್ರಭಾಭಾಸಮಾನಂ ॥೬೭॥

ವಾಲಾಗ್ರಮಾತ್ರಂ ಹೃದಯೇ ಪ್ರವಿಷ್ಟಂ
ಜೀವಾಭಾಸಂ ಮನ್ಯಮಾನೈಶ್ಚ ಮೂಢೈಃ ।
ನ ತ್ವೇಷ ಜೀವೋ ನ ಶಿವಶ್ಚಾದಿಕರ್ತಾ
ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್ ॥೬೮॥

ಬೃಹತ್ ಬ್ರಹ್ಮ ಶುಕ್ಲಂ ಋತಂ ಸತ್ಯಮೀಶಂ
ಪ್ರಮೋದಂ ಮಹಜ್ಜ್ಞಾನಮಾನಂದಮೇಕಂ ।
ಯ ಏನಂ ವಿದುರಮೃತಾಸ್ತೇ ಭವಂತಿ
ಹ್ಯಥೇತರೇ ದುಃಖಮೇವಾವಿಶಂತಿ ॥೬೯॥

ಪ್ರಪಂಚವ್ಯಾಪಿಯಾಗಿಯೂ, ಸಕಲ ಭೂತಾತ್ಮಕವಾದ ಶರೀರವೆಂಬ ಗುಹೆಯಲ್ಲಿ ಅಡಗಿದವನಾಗಿಯೂ, ತತ್ಸಂಬಂಧವಾದ ಹೃದಯಕುಹರದಲ್ಲಿ ಸೇರಿದವನಾಗಿಯೂ, ಜಾಗ್ರದಾದಿ ಅವಸ್ಥಾತ್ರಯಗಳಿಗೆ ಸಿಲುಕದವನೂ, ಪ್ರಣವಸ್ವರೂಪಿಯೂ, ಏಕ ರೂಪಿಯೂ ಆಗಿರುವನು. ॥೬೬॥

ಮಹಾವಸ್ತುಗಳೆಲ್ಲಕ್ಕೂ ಮಹದ್ರೂಪದಿಂದಲೂ ಅಣುವಸ್ತುಗಳೆಲ್ಲಕ್ಕೂ ಅಣು ರೂಪದಿಂದಲೂ ಸರ್ವತ್ರ ವ್ಯಾಪಿಯಾಗಿರುವವನು ಪರಮಾತ್ಮನು. ಭೂತವರ್ಗಗಳಲ್ಲಿ ತಾನು ಸೇರದಿದ್ದರೂ ಪ್ರಕಾಶರೂಪದಿಂದ ಅತಿಶಯವಾಗಿ ಸರ್ವತ್ರ ಭಾಸವಾಗುತ್ತಿರುವ ಶಕ್ತಿಯು ಪರಮಾತ್ಮನಿಗೆ ಇರುವುದೆಂಬುದನ್ನು ಅರಿಯಬೇಕು. ॥೬೭॥

ಎಲ್ಲರ ಹೃದಯದಲ್ಲಿಯೂ ಸೂಕ್ಷ್ಮರೂಪದಲ್ಲಿ ಅಡಗಿರುವ ಈ ಪರಮಾತ್ಮನನ್ನು ಏನೂ ಅರಿಯದ ಮೂಢರು ಜೀವನೆಂದು ವ್ಯವಹರಿಸುವರು. ನಿಜವಾಗಿಯೂ ಈತನು ಜೀವನಲ್ಲ. ಶಿವನೂ ಅಲ್ಲ. ಪರಬ್ರಹ್ಮಾತಿರಿಕ್ತವಾದ ವಸ್ತುವೂ ಅಲ್ಲ. ಜಗದೇಕರೂಪಿಯಾದ ಪರಬ್ರಹ್ಮನೆಂದೇ ಅರಿಯಬೇಕು. ॥೬೮॥

ಯಾರು ಮಹೇಶ್ವರನನ್ನು ಬೃಹದ್ರೂಪಿಯಾಗಿಯೂ, ಪರಬ್ರಹ್ಮನೆಂದೂ, ಶುಕ್ಲವರ್ಣವಿಶಿಷ್ಟನೆಂದೂ, ಸತ್ಯಾತ್ಮಕನಾದ ಸರ್ವಶಕ್ತನೆಂದೂ, ನಿರ್ದುಷ್ಟವಾದ

ಸ ಏಷಪರಮಾನಂದೋ ಹ್ಯಾನಂದೋ ಬ್ರಹ್ಮ ತತ್ಪರಂ ।
ಅಸ್ಯೈವಾನಂದಮಾತ್ರಾ ಹಿ ಭವಂತಶ್ಚ ಸುರಾಸುರಾಃ ॥೭೦॥

ಅಯಮೇವ ಪರಾಕಾಷ್ಠಾ ಸ ಬ್ರಹ್ಮಾ ಸ ಶಿವಸ್ಸ್ವಯಂ ।
ವೇದಪರ್ವತಜಾಲೋತ್ಥಮಂತ್ರೈಃ ಕ್ಲುಪ್ತೋಽಯಮೇವ ಹಿ ॥೭೧॥

ಇತ್ಯುಕ್ತ್ವಾ ಸಾ ಜಗನ್ಮಾತಾ ದೇವಾನಾಂ ಪಶ್ಯತಾಂ ತದಾ ।
ಪ್ರಾಹ ದೇವಂ ಮಹಾದೇವಂ ಅನಾದಿಮಜಮವ್ಯಯಂ ॥೭೨॥

ಇತ್ಥಂಭಾವಚನೇನ ನಂದಿತಮನಾಸ್ಸ್ವಾಂತಾಸ್ಸುರಾಸ್ತೇ ತದಾ ।
ನಾನಾವೇದಶಿರೋಗತೈಶ್ಚ ವಿವಿಧೈರ್ವಾಕ್ಯೈಸ್ತದಾ ಹರ್ಷಿತಾಃ ।

---

ಬ್ರಹ್ಮಾನಂದಸ್ವರೂಪನೆಂದೂ ದ್ವಿತೀಯವಸ್ತುರಹಿತನೆಂದೂ ಅರಿಯುವರೋ ಅವರು ಮುಕ್ತರಾಗುವರು. ಇದಕ್ಕೆ ವಿರುದ್ಧವಾಗಿ ಪರಮಾತ್ಮಸ್ವರೂಪವನ್ನರಿತವರು ಭವ ಬಂಧನಗಳಿಗೆ ಸಿಕ್ಕಿ ದುಃಖಕ್ಕೆ ಈಡಾಗುವರು. ॥೬೯॥

ಎಲೈ ದೇವರಾಕ್ಷಸರೇ, ಈ ಪರಮೇಶ್ವರನೇ ಕೇವಲ ಆನಂದಮಯನಾದವನು. ಪರಮಾನಂದ, ಬ್ರಹ್ಮಾನಂದ ಶಬ್ದವಾಚ್ಯನೇ ಈತನು. ಇವನ ಆನಂದದ ಪರಿಣಾಮವೇ ನಿಮ್ಮ ಉತ್ಪತ್ತಿ ಎಂಬುದನ್ನು ತಿಳಿಯಿರಿ. ॥೭೦॥

ಈತನೇ ದೇವಾದಿಗಳಿಗೆಲ್ಲಾ ಮೇಲ್ಪಟ್ಟವನು. ಬ್ರಹ್ಮ, ಶಿವ ಎಂಬ ಹೆಸರಿಗೆ ವಿಷಯನಾದವನೂ ಈತನೇ. ಈತನ ನಿಜಸ್ವರೂಪವು ವೇದವೆಂಬ ಅಗಾಧವಾದ ಮತ್ತು ಮಂತ್ರಾತ್ಮಕವಾದ ಪರ್ವತರಾಶಿಯಿಂದ ತಿಳಿಯಲ್ಪಡಬೇಕು." ॥೭೧॥

ಹೀಗೆ ಜಗನ್ಮಾತೆಯಾದ ದೇವಿಯು ಭಕ್ತಿಯಿಂದ ತನ್ನನ್ನೇ ನೋಡುತ್ತಿರುವ ದೇವತೆಗಳ ಎದುರಿನಲ್ಲಿ ಗೋಚರಿಸುತ್ತಾ, ಮಹಾದೇವನೂ, ಆದ್ಯಂತವಿಲ್ಲದವನೂ, ನಾಶರಹಿತನಾದವನೂ ಆದ ಮಹೇಶ್ವರನ ವಿಷಯವನ್ನು ವಿವರವಾಗಿ ಅವರಿಗೆ ತಿಳಿಸಿದಳು. ॥೭೨॥

ಹಾಗೆ ತಿಳಿಸಿದ ದೇವಿಯ ಉಪದೇಶಶ್ರುತಿಯನ್ನು ಕೇಳಿ ಅಲ್ಲಿ ನೆರೆದಿದ್ದ ಸಕಲ ದೇವತೆಗಳೂ ಅತ್ಯಂತ ಹರ್ಷಗೊಂಡವರಾದರು. ಅನೇಕ ಉಪನಿಷದ್ವಾಕ್ಯಗಳ ಅರ್ಥವನ್ನೆಲ್ಲಾ ಸ್ಪಷ್ಟವಾಗಿ ತಿಳಿದುಕೊಂಡವರಾದರು. ಗಿರಿರಾಜಪುತ್ರಿಯೂ,

**ತಾಂ ದೇವೀಮಗಜಾಂ ಗಿರೀಶರಮಣೀಮಾನಂದಧಾರಾವೃತಾಃ ।**
**ಪಶ್ಯಂತಿ ಶ್ರುತಿಲೋಚನೈಃ ಪರಿವೃತಂ ದೇವಂ ನಭೋಮಧ್ಯಗಂ ॥೭೩॥**

**ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ದೇವ್ಯುಪನಿಷತ್ಪ್ರತಿಪಾದನಂ ನಾಮ ಪಂಚಪಂಚಾಶೋಽಧ್ಯಾಯಃ**

ಪರಶಿವನ ಪತ್ನಿಯೂ ಆದ ದೇವಿಯನ್ನು ಆನಂದಬಾಷ್ಪಸಹಿತರಾಗಿ ನೋಡಿ ಹರ್ಷಗೊಂಡರು. ತಮಗೆ ಆ ಕಾಲದಲ್ಲಿ ವೇದಾರ್ಥಜ್ಞಾನದಿಂದ ಈ ದೇವಿಯ ದರ್ಶನವಾಯಿತೆಂದು ಅರಿತು, ಶ್ರುತಿಯೆಂಬ ಕಣ್ಣುಗಳಿಂದ ಅಂತರಿಕ್ಷಮಧ್ಯಗತಳಾದ ದೇವಿಯ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದವರಾದರು. ||೭೩||

ಇಲ್ಲಿಗೆ ಶ್ರೀಶಿವರಹಸ್ಯದ ಮೊದಲನೆಯ ಅಂಶದಲ್ಲಿ ದೇವಿಯ ಉಪನಿಷದ್ವಾಕ್ಯಗಳ ಅರ್ಥವನ್ನು ವಿವರಿಸುವ ಐವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಷಟ್ಪಂಚಾಶೋಽಧ್ಯಾಯಃ

### ದೇವಕೃತಕ್ಷೇತ್ರಪೂಜನಂ

|| ಸೂತ ಉವಾಚ ||

ಕುಕ್ಷಿತ್ರಿಲೋಕಂ ದೇವೇಶಂ ಮಹೋಕ್ಷಸ್ಥಂ ಹಿ ಪಾರ್ಶ್ವಗಂ ।
ಪ್ರಾಂಜಲಿರ್ವಿನಯೋಪೇತಾ ನಯಾದಿಗುಣಸಂಯುತಾ ||೧||

ಪ್ರಾಹ ದೇವೀ ವಿರೂಪಾಕ್ಷಂ ವಿಶಾಲಾಕ್ಷೀ ಮಹೇಶ್ವರೀ ||೨||

|| ದೇವ್ಯುವಾಚ ||

ದೇವಾಃ ಕಿಲ್ವೈತದ್ಭಗವತ್ಪ್ರಸಾದತೋ
ಮನ್ಯೈವ ತೇ ಜ್ಞಾನಮಹೋ ಮಹಾರ್ಥದಂ ।
ತವಾದ್ಯ ತೋಷಾತ್ಸುಹೃದೋದ್ಯಭೇದನಂ
ಸಮಾಪ್ನುವನ್ ದೇವಸಂಘಾಃ ಕೃತಾರ್ಥಾಃ ||೩||

---

### ಶ್ರೀಶಿವರಹಸ್ಯದಲ್ಲಿ ಐವತ್ತಾರನೆಯ ಅಧ್ಯಾಯ

ವಿಶಾಲಾಕ್ಷಿಯಾದ ಪಾರ್ವತಿಯು, ಮೂರುಲೋಕಗಳನ್ನೂ ಹೊಟ್ಟೆಯಲ್ಲಿ ಅಡಗಿಸಿಕೊಂಡು ದೇವದೇವನೆನಿಸಿರುವ ವೃಷಭವಾಹನನಾದ ಮಹೇಶ್ವರನನ್ನು ಕುರಿತು, ಮತ್ತೆ ವಿನಯಪೂರ್ವಕವಾಗಿ ನಮಸ್ಕರಿಸಿ ಹೀಗೆ ಕೇಳಿಕೊಂಡಳು.||೧-೨||

ಪರಮೇಶ್ವರನೇ, ಈ ದೇವತೆಗಳೆಲ್ಲರೂ ನಿನ್ನನ್ನು ಬಹುವಾಗಿ ಮೆಚ್ಚಿಸಿ, ಹಾಗೆಯೇ ನನ್ನಿಂದಲೂ ನಿನ್ನ ವಿಷಯಕವಾದ ಅರಿವನ್ನು ಪಡೆದು ಈಗ ಧನ್ಯರೆನಿಸಿರುವರು. ಮತ್ತು ನಿನಗೆ ತೃಪ್ತಿಯನ್ನುಂಟುಮಾಡಿ ಹೃದಯಕಲ್ಮಷವನ್ನು ಕಳೆದುಕೊಂಡಿರುವರು. ||೩||

ಭವಾನನಾದಿಃ ಪುರುಷಃ ಪುರೀಶಂಬೋ
ಗುಹಾಹಿತೋ ಗಹ್ವರೇಷ್ಟಃ ಪುರಾಣಃ ।
ಗುಣಾತಿಗೋ ಗುಣಭೂತೇಷ್ವಸಂಗೋ
ಹೃಶೀರ್ಯ ಆತ್ಮಾ ಪರಮಃ ಪಾವನಸ್ತ್ವಂ ॥೪॥

ನಾನ್ಯತ್ತ್ವತ್ತೋ ಭೇದಭಾವಂ ಸ ಚಾಸ್ತಿ
ಕವಿರ್ಮನೀಷೀ ಪರಿಭೂಸ್ಸ್ವಯಂಭೂಃ ।
ತಥಾಪಿ ಲೋಕಾಯನ ಉತ್ತಮೋಽಸಿ
ಸ ಸರ್ಗಜೈರುದ್ವಹಸೀಹ ದೇಹಾನ್ ॥೫॥

ವಿಭುರ್ಮಹಾನ್ ದ್ಯಾಂ ದಿವಂ ರೋದಸೀ ಖಂ
ರೋದಸ್ಯತೋ ರುದ್ರ ಈಶೋಽದ್ವಿತೀಯಃ ।
ಅಕಾಮಕಾಮೋ ಮಹಿಮಾ ತ್ವಂ ಹಿ ಭೂಮಾ
ಸೀಮಾ ಸ ದಿವ್ಯೋ ದೇವ ಏಕೋ ಋಷಿಸ್ತ್ವಂ ॥೬॥

ನೀನು ಅನಾದಿಪುರುಷನು. ಪುರೀಶಬ್ದವಾಚ್ಯವಾಗಿರುವ ಅವಸ್ಥಾತ್ರಯ ಗಳಿಂದ ಕೂಡಿದ ಸಕಲ ದೇಹಗಳಲ್ಲಿಯೂ ಸಂಚರಿಸುವವನು. ಶರೀರಗಳ ಹೃದಯ ಕುಹರದಲ್ಲಿ ನೆಲಸತಕ್ಕವನು. ಗುಣಗಳಿಗೆ ಆಶ್ರಯನಾಗದೆ ಈ ಗುಣವದ್ವಸ್ತುಸಂಸರ್ಗ ವಿಲ್ಲದೆ ನಿರ್ಲಿಪ್ತನಾಗಿರುವವನು. ಪರಮಾತ್ಮನೂ, ಪರಾಪರವಸ್ತುವೂ ಎನಿಸಿ ನೀನು ಲೋಕೋತ್ತಮನಾಗಿರುವೆಯಲ್ಲವೆ? ॥೪॥

ನಿನಗಿಂತ ಭಿನ್ನವಾಗಿರುವ ವಸ್ತುವು ಮತ್ತೊಂದಿಲ್ಲ. ಕವಿಯೂ, ವಿದ್ವಾಂಸನೂ, ಸರ್ವವ್ಯಾಪಿಯೂ, ಸ್ವಯಮುತ್ಪತ್ತಿಯುಳ್ಳವನೂ ನೀನೇ ಆಗಿರುವೆ. ಸಕಲ ಲೋಕಗಳಲ್ಲಿಯೂ ನೀನು ವಿಹರಿಸುತ್ತಿರುವೆ. ಸ್ವಸ್ವಾರ್ಜಿತ ಸಕಲ ಕರ್ಮ ಗಳನ್ನು ಬೇರೆ ಬೇರೆ ದೇಹಗಳಿಂದ ನಡೆಸುತ್ತಾ ಏಕರೂಪಿಯಾಗಿರುವೆ. ॥೫॥

ಭೂಮಿ, ಸ್ವರ್ಗ, ಅಂತರಿಕ್ಷ, ಸಕಲದಿಗಂತಭೂಮಿ, ಇವೆಲ್ಲವನ್ನೂ ವ್ಯಾಪಿಸಿ ನಿಲ್ಲುವ ವಿಭುಸ್ವರೂಪನೇ ನೀನು. ರುದ್ರ, ಈಶ್ವರ, ದ್ವಿತೀಯರಹಿತ, ಕಾಮನಾ ವಾಸನೆಗಳಿಗೆ ಸಿಗದಿರುವವನು, ತೇಜೋವಸ್ತು, ಮಹಿಮಾಶಾಲಿ, ಎಂದೆನಿಸಿ ಏಕರೂಪಿಯಾದ ದೇವದೇವನೂ, ಮಹರ್ಷಿಯೂ ನೀನೇ ಆಗಿರುವೆ. ॥೬॥

ಅಜೋಽವ್ಯಯಸ್ತವ ವಕ್ತ್ರಂ ಮಹೇಶ
ಪ್ರಪನ್ನಾಸ್ಸರ್ವೇ ದಕ್ಷಿಣಂ ಘೋರರೂಪಂ ।
ಏತೇ ಸರ್ವೇ ಪಶವಃ ಕಾಮಕಾಮಾಸ್ತೇಷಾಂ
ತ್ವಂ ಪಾಶಂ ಛೇತ್ತುಮರ್ಹಸ್ಯತೋಽದ್ಯ ॥೭॥

ಪಯೋನಿಧಿತ್ಯಾಗ ಏಕೋ ಹಿ ನಿತ್ಯೋ
ನಿತ್ಯಾನಾಂ ಚೇಚ್ಚೇತನಾನಾಂ ಚ ಚೇತಾಃ ।
ಪತಿಃ ಪತೀನಾಂ ಪ್ರಥಮೋ ವಿದ್ಯುದೀಶ
ಸ್ತ್ವತ್ತೋ ಬಭೂವು ರ್ಭುವನಸ್ಯ ಗೋಪಾಃ ॥೮॥

ಮನೋವಾಚಾಮತಿಗಸ್ತ್ವಂ ಹಿ ಗೋಪ್ತಾ
ಸರ್ವಸ್ಸರ್ವೇಷಾಂ ಶರ್ವ ಸರ್ವಾದಕಖರ್ವಃ ।
ಬಭ್ರುರ್ಮಧುಃ ಪಿಂಗಲೋ ವಿಶ್ವನೇತಾ
ಸಹಸ್ರಭಾಃ ಸನಕಾಃ ಪ್ರೀತಿಮೀಯುಃ ॥೯॥

---

ಪರಮೇಶ್ವರನೇ, ನೀನು ವ್ಯಯರಹಿತನು. ನಿನ್ನ ದಕ್ಷಿಣದಿಗ್ಭಾಗದ ಘೋರ ರೂಪವನ್ನು ನೋಡಿ, ಸಕಲ ದೇವತೆಗಳೂ ನಿನಗೆ ಶರಣಾಗತರಾಗಿರುವರು. ಕಾಮ್ಯ ಕರ್ಮಗಳಿಗೆ ಸಿಕ್ಕಿರುವ ಈ ದೇವತೆಗಳೆಲ್ಲಾ ನಿನಗೆ ಪಶುಸದೃಶರು. ಅಂತಹವರ ಸಂಸಾರವೆಂಬ ಪಾಶಗಳನ್ನು ಕತ್ತರಿಸಲು ನೀನೇ ಈಗ ಸಮರ್ಥನಾಗಿರುವೆ. ॥೭॥

ಜಲಪ್ರಳಯದಿಂದ ಸಕಲವೂ ನಷ್ಟವಾದ ಮೇಲೆ ನಿತ್ಯವಸ್ತುವೆನಿಸಿ ಕಾಣುತ್ತಿರುವವನು ನೀನೊಬ್ಬನೇ ಅಲ್ಲವೇ ? ನಿತ್ಯವಸ್ತುಗಳೆಂದು ಭಾಸಮಾನವಾಗುತ್ತಿರುವ ವಸ್ತುಗಳಲ್ಲೆಲ್ಲಾ ನಿತ್ಯವಸ್ತುವು ನೀನೊಬ್ಬನೇ. ವಿದ್ಯುದ್ರೂಪದಿಂದಲೂ, ಒಡೆಯತನದಿಂದಲೂ, ನಿನಗಿಂತ ಅಧಿಕನಾದವನು ಯಾರೂ ಇರಲಾರರು. ಈಗ ಜಗದ್ರಕ್ಷಕರೆನಿಸಿರುವ ಸಕಲ ದೇವತೆಗಳೂ ನಿನ್ನಿಂದಲೇ ಜನಿಸಿರುವರಲ್ಲವೆ! ॥೮॥

ಮನಸ್ಸಿಗೂ, ಮಾತಿಗೂ ಮೀರಿದವನು ನೀನು. ಸರ್ವರಕ್ಷಕನೂ, ಸರ್ವಭಕ್ಷಕನೂ ಆಗಿ, ಪಿಂಗಳಾದಿ ವಿವಿಧ ವರ್ಣಗಳಿಂದ ಶೋಭಿಸುವವನಾಗಿ, ಲೋಕರಕ್ಷಕನೆನಿಸಿರುವೆ. ನಿನ್ನ ಧ್ಯಾನದಿಂದಲೇ ತೇಜಸ್ವಿಗಳಾದ ಸನಕಸನಂದನಾದಿ ಸಕಲ ಮುನಿವರ್ಗವೂ ತೃಪ್ತಿಯನ್ನು ಹೊಂದಿರುವುದು. ॥೯॥

ಏತೇ ಪ್ರಸಾದಾಭಿಮುಖಾಸ್ತ್ವಯಾತೋ
ಲೋಕೇಷು ಲೋಕ್ಯಾಃ ಪಾಲನೀಯಾ ಮಹೇಶ ।
ತವೈಶ್ವರ್ಯಾದಾಪ್ತಕಾಮಾ ಭವಂತು
ನಾನ್ಯತ್ರೇಷಾಂ ತ್ವತ್ತ ಏನಾಖಿಲೇಷು ॥೧೦॥

ಸಂಪ್ರಾಪ್ತಾಸ್ತೇ ಪಾರಮೈಶ್ವರ್ಯಯೋಗಂ ।
ಮುಚ್ಯಂತು ತೇ ಮಮ ಮಾಯಾದಿಪಾಶೈಃ ॥೧೧॥

॥ ಸ್ಕಂದ ಉವಾಚ ॥

ತದಾ ದೇವ್ಯಾ ವಚಶ್ಶ್ರುತ್ವಾ ಪ್ರಾಹ ದೇವೋ ಘೃಣಾನಿಧಿಃ ।
ಪ್ರಣತಾನಮರಾನ್ ಸರ್ವಾನ್ ವಿಷ್ಣುಬ್ರಹ್ಮೇಂದ್ರಪೂರ್ವಕಾನ್ ॥೧೨॥

ಹಸ್ತಮಸ್ತಕಸಂಯೋಗಂ ಕೃತ್ವಾ ದೇವ ಉಮಾಧವಃ ।
ಗಿರಾ ಪ್ರಾಹ ತತೋ ದೇವಾನ್ ಶಕ್ತಿಂ ವೈ ಪಾತಯಂಸ್ತದಾ ॥೧೩॥

ಮಹೇಶ್ವರನೇ, ಈಗಲೂ ದೇವತೆಗಳು ನಿನ್ನ ಅನುಗ್ರಹಸಂಪಾದನೆಯಲ್ಲಿ ಮನಸ್ಸುಳ್ಳವರಾಗಿ ನಿಂತಿರುವರು. ಇಂತಹವರನ್ನು ದಯೆಯಿಂದ ರಕ್ಷಿಸು. ನಿನ್ನ ಮಹಿಮೆಯಿಂದ ಇವರೆಲ್ಲರೂ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆಯಲಿ. ನಿನ್ನನ್ನು ಬಿಟ್ಟು ಅವರು ಮತ್ತೆಲ್ಲಿತಾನೇ ಹೋದಾರು ? ನನ್ನ ಮಾಯಾಜಾಲಕ್ಕೆ ಸಿಕ್ಕಿರುವ ಈ ದೇವತೆಗಳು ನಿನ್ನ ದಯೆಯಿಂದ ಪಾರಮೇಶ್ವರಜ್ಞಾನವನ್ನು ಪಡೆದು ಪಾಶಮುಕ್ತರಾಗಿ ಸುಖಿಸಲಿ.'' ||೧೦-೧೧||

ಎಂದು ಹೇಳಿದ ದೇವಿಯ ಮಾತುಗಳನ್ನು ಕೇಳಿ, ಪರಮೇಶ್ವರನು ವಿಷ್ಣು, ಬ್ರಹ್ಮರೇ ಮೊದಲಾದ ಸಕಲ ದೇವತೆಗಳೂ ನಮಸ್ಕರಿಸುತ್ತಾ ನಿಂತಿರುವುದನ್ನು ನೋಡಿ, ಅವರೊಡನೆ ಹೀಗೆಂದನು. ||೧೨||

ಅಲ್ಲದೆ ಅವರ ಶಿರಸ್ಸಿನ ಮೇಲೆ ತನ್ನ ಅಮೃತಹಸ್ತವನ್ನಿಟ್ಟು ದಯೆಯಿಂದ ಅವರನ್ನೆಲ್ಲಾ ಸಂತೈಸಿ, ಈಶ್ವರೀಶಕ್ತಿಯನ್ನು ಅವರಮೇಲೆ ಪ್ರಯೋಗಿಸುತ್ತಾ ಹೀಗೆ ಹೇಳಿದನು. ||೧೩||

ಈಶ್ವರ ಉವಾಚ

ದೇವ್ಯಾನಯಾ ಬೋಧಿತಾ ಯೂಯಮೇವಂ
ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ।
ಮದ್ಧ್ಯಾನಯೋಗೇನ ಸುರೋತ್ತಮಾಶ್ಚಿರಂ
ಸಂಪ್ರಾಪ್ಯಥ ಜ್ಞಾನಮಜ್ಞೈರ್ದುರಾಪಂ ॥೧೪॥

ನ ಚಕ್ಷುಷಾ ದೃಶ್ಯಮಿದಂ ಚ ಖೇ ಸದಾ
ನ ವೇದವಾದ್ಯೈರ್ನ ಚ ಶಾಸ್ತ್ರತರ್ಕೈಃ ।
ತಪಸೈವಾನುದೃಶ್ಯೋಽಹಮಾತ್ಮಾ
ಗುರುಪ್ರಸಾದೇನ ಶಿವಪ್ರಸಾದಾತ್ ॥೧೫॥

ಭಿದ್ಯಂತೇ ವೈ ವಿಪುಲಾ ಗ್ರಂಥಯೋ ವಃ
ಅನಾದಿಸಿದ್ಧಾಃ ಕೋ ಹಿ ವೇದೇದಮೇವಂ ।
ನ ಸಾಂಪರಾಯೋ ಭವತಾಂ ಬಾಲಕಾನಾಂ
ಅನಾದ್ಯವಿದ್ಯಾವಿಷಯೈಕವರ್ತ್ಮನಾಂ ॥೧೬॥

ಎಲೈ ದೇವತೆಗಳಿರಾ, ನೀವು ಇಲ್ಲಿನವರೆಗೂ ಈ ದೇವಿಯಿಂದ ಉಪದೇಶವನ್ನು ಪಡೆದಿರುವಿರಿ. ಉಪನಿಷತ್ತಿನ ಸಾರವನ್ನೆಲ್ಲಾ ಗ್ರಹಿಸಿ ನಿಶ್ಚಯಜ್ಞಾನವನ್ನು ಹೊಂದಿರುವಿರಿ. ಅದೇರೀತಿ ನನ್ನನ್ನು ಸರಿಯಾದ ಧ್ಯಾನಯೋಗದಿಂದ ಭಜಿಸಿ, ಅಜ್ಞರಿಗೆ ಸಿಗಲಾರದಂತಹ ಜ್ಞಾನವನ್ನು ಹೊಂದಿರಿ. ॥೧೪॥

ನನ್ನ ಸ್ವರೂಪವನ್ನು ಸಾಮಾನ್ಯಚಕ್ಷುಸ್ಸಿನಿಂದ ಯಾರೂ ನೋಡಲಾರರು. ವೇದವಾಕ್ಯಗಳಿಂದಾಗಲಿ, ಶಾಸ್ತ್ರಚರ್ಚೆಗಳಿಂದಾಗಲಿ ನನ್ನ ನಿಜತತ್ತ್ವವನ್ನು ತಿಳಿಯಲಾಗುವುದಿಲ್ಲ. ಗುರುಪ್ರಸಾದದಿಂದಲೂ, ಈಶ್ವರಾನುಗ್ರಹದಿಂದಲೂ, ತಪಶ್ಚರ್ಯೆಯಿಂದಲೂ, ನನ್ನ ವಿಷಯವನ್ನು ಜನರು ಅರಿಯಬಹುದು. ॥೧೫॥

ನಿಮಗೆ ನಾನಾಗ್ರಂಥಿಭೇದದಿಂದ ಸಾಂಸಾರಿಕ ತೊಂದರೆಗಳು ಸ್ಪಷ್ಟವಾಗಿ ಕಂಡುಬರುವುವು. ಈ ಕಷ್ಟವು ಜಗತ್ತಿನಲ್ಲಿ ಸಿಕ್ಕಿದವರಿಗೆ ಅನಾದಿಸಿದ್ಧವಾದದ್ದು. ಇದರ ಮರ್ಮವನ್ನರಿಯುವುದು ಸುಲಭಸಾಧ್ಯವಲ್ಲ. ಹೀಗೆ ಅನಾದಿಯಾಗಿ ಬಂದ ಅವಿದ್ಯಾಸಂಬಂಧವಾದ ವಿಷಯಸುಖಗಳಲ್ಲಿ ಮುಳುಗಿಹೋಗಿರುವ ನಿಮ್ಮಂತಹ ಅಜ್ಞರಿಗೆ ಮುಕ್ತಿಮಾರ್ಗವು ಸುಲಭವಾಗಿ ದೊರೆಯಲಾರದು. ॥೧೬॥

ಯೂಯಂ ಮಯಾ ಕಲ್ಪಿತೈನಾಸ್ಸ್ಥ ಲೋಕೇ
ಲೋಕಾಧೀಶಾ ಯಾವದಾವರ್ತನಂ ವಃ ।
ತಾವತ್ ಜ್ಞಾನಂ ಪ್ರಾಪ್ಯ ಮಧ್ಯೇ ಬಲೀನಾಂ
ಭವಿಷ್ಯಥ ಪ್ರತಿಕಲ್ಪಂ ಸುರೇಶಾಃ ॥೧೭॥

ಸ ಮಾಮನುಪ್ರತಿಪದ್ಯಧ್ವಮದ್ಯ
ಸುನಿರ್ವೃತಾಸ್ತಪಸಾ ಕೇವಲೇನ ।
ವಿಜಾನಂತೋಽನ್ಯಮನಸೋ ನೋ ರಮಂತೇ
ತಸ್ಮಾದ್ವೈರೀಡ್ಯ ಏಕೋ ಮಹೇಶಃ ॥೧೮॥

ಯಜ್ಞೈರ್ದಾನೈಸ್ತಪಸಾ ನಾಶಕೇನ
ಮತ್ಕ್ಷೇತ್ರವಾಸೈಃ ಪರಿಧೂಲನಾದರಾಃ ।
ಧೃತತ್ರಿಪುಂಡ್ರಾ ಭವಪಾಶಮುಕ್ತಾಃ
ಶಿರೋವ್ರತೈರಗ್ನಿರಿತ್ಯಾದಿ ಮಂತ್ರೈಃ ॥೧೯॥

ದೇವತೆಗಳಿರಾ, ನಿಮ್ಮನ್ನು ಲೋಕರಕ್ಷಣಾರ್ಥವಾಗಿ ನಾನೇ ಸೃಷ್ಟಿಮಾಡಿರುವೆನು. ಅಲ್ಲದೆ ಲೋಕಾಧಿಪತಿಗಳನ್ನಾಗಿ ಮಾಡಿರುವವನೂ ನಾನೇ. ಆದರೆ ನಿಮ್ಮ ಸ್ಥಾನಗಳಿಗೆ ಚ್ಯುತಿಯುಂಟು. ಪ್ರಳಯಗಳಿಂದ ಆವೃತ್ತಿಪಡೆಯುತ್ತಿರುವ ಈ ಜಗಚ್ಚಕ್ರಕ್ಕೆ ಸಿಕ್ಕಿ ಆವೃತ್ತಿಯಾಗುವುದರೊಳಗೆ ನೀವೂ ನನ್ನ ನಿಜತತ್ತ್ವವನ್ನರಿತು ಮುಂದೆ ದಿವ್ಯಜ್ಞಾನಿಗಳೆನಿಸಿರಿ. ಪ್ರತಿಕಲ್ಪದಲ್ಲಿಯೂ ನೀವು ದಿವ್ಯದೇವತೆಗಳೆನಿಸಿ ಖ್ಯಾತಿಗೊಳ್ಳುವಿರಿ. ॥೧೭॥

ಆದ್ದರಿಂದ, ದೇವತೆಗಳಿರಾ ನೀವು ಈಗಲೇ ನನ್ನನ್ನು ಶರಣುಹೊಂದಿರಿ. ನನ್ನ ಉಪದೇಶದಂತೆ ನೀವು ತಪಸ್ಸನ್ನಾಚರಿಸಿ, ಅನನ್ಯಭಕ್ತಿಯಿಂದ ನನ್ನನ್ನು ಸೇವಿಸಿರಿ. ಹಾಗೆ ಮಾಡದವರು ಎಂದೂ ತೃಪ್ತಿಯನ್ನು ಹೊಂದಲಾರರು. ವೇದ ಪ್ರತಿಪಾದ್ಯನೂ, ಏಕರೂಪಿಯೂ ಆದ ಮಹೇಶ್ವರನು ನಾನೇ ಆಗಿರುವೆ. ॥೧೮॥

ಯಜ್ಞ, ದಾನ, ತಪಸ್ಸು, ಉಪವಾಸ, ಶಿವಕ್ಷೇತ್ರವಾಸ ಇವುಗಳನ್ನಾಚರಿಸುತ್ತಾ, ಭಸ್ಮತ್ರಿಪುಂಡ್ರವನ್ನು ತಳೆದು, ಶಿರೋವ್ರತಾದಿಗಳನ್ನಾಚರಿಸಿ ಸಂಸಾರಪಾಶದಿಂದ ಮುಕ್ತರಾಗಬೇಕು. ಮತ್ತು "ಅಗ್ನಿರಿತಿಭಸ್ಮ" ಮುಂತಾದ ಮಂತ್ರಗಳಿಂದ ವಿಧಿವತ್ತಾಗಿ ಸಕಲಾವಯವಗಳಲ್ಲಿಯೂ ಭಸ್ಮಧಾರಣೆಮಾಡಿಕೊಳ್ಳಬೇಕು. ॥೧೯॥

ಉದ್ಧೂಳ್ಯ ಗಾತ್ರಾಣಿ ಪವಿತ್ರಭಸ್ಮನಾ ।
ರೌದ್ರಾಣಿ ಚಾವರ್ತಯತ ಪ್ರೀತಯೇ ಮೇ ।
ಪಂಚಾಕ್ಷರಾವರ್ತನಜಾತಹರ್ಷಾ
ಮಲ್ಲಿಂಗಸಂಪೂಜನಮಾತ್ರತುಷ್ಟಾಃ ॥೨೦॥

ಕಷ್ಟೈರ್ವಿಹೀನಾಶ್ಕಿಪಿವಿಷ್ಟಮಿಷ್ಟೈಃ
ಬಿಲ್ವೈಃ ಸಮಭ್ಯರ್ಚ್ಯ ದಿನೇ ದಿನೇ ಮಾಂ ।
ಪ್ರಕೃಷ್ಟಮುಕ್ತ್ಯೈವ ಭವೋತ್ಕಟೇ ರತಾಃ
ಪ್ರನಷ್ಟಮೋಹಾಃ ಪ್ರಕಟಾಷ್ಟಮೂರ್ತಿಂ ॥೨೧॥

ಸರ್ವಾರ್ತಿಘ್ನಂ ಹೃದಯೇ ಸಂಪ್ರವಿಷ್ಟಂ
ಧ್ಯಾಯಂತ ಮಾಮೇವ ಸದಾ ಹೃದಿ ಸ್ಥಿತಂ ।
ಸಂಪ್ರಾಪ್ಯಮಜ್ಞಾನಮಹೋ ದುರಾಪಂ
ಕೋಷ್ಠಂ ಕನಿಷ್ಠಂ ಪರಿತೋಷಪುಷ್ಟಂ ॥೨೨॥

ಭಸ್ಮಧಾರಣಾನಂತರ ರುದ್ರಾಧ್ಯಾಯಗಳನ್ನೂ, ರುದ್ರಸೂಕ್ತಗಳನ್ನು ಆವರ್ತನ ಮಾಡಬೇಕು. ಶಿವಪಂಚಾಕ್ಷರೀಮಂತ್ರಪುರಶ್ಚರಣೆಯಿಂದ ಚಿತ್ತಶುದ್ಧಿಯನ್ನು ಪಡೆದು, ಶಿವಲಿಂಗಾರಾಧನೆಯಿಂದ ತೃಪ್ತಿಗೊಳ್ಳಬೇಕು. ॥೨೦॥

ಸಂಸಾರದ ಕಷ್ಟಗಳನ್ನು ದೂರಮಾಡಿ, ಕಿರಣಗಳಲ್ಲಿಯೂ ಪ್ರವೇಶಿಸಿ ಪ್ರಸರಿಸುವಂತಹ ಪರಶಿವನಾದ ನನ್ನನ್ನು ಬಿಲ್ವಪತ್ರೆಗಳಿಂದ ಪ್ರತಿದಿನವೂ ಪೂಜಿಸಬೇಕು. ಅಷ್ಟಮೂರ್ತಿಸ್ವರೂಪನಾದ ನನ್ನಲ್ಲಿ ದೃಢಮನಸ್ಸಿಟ್ಟು, ಮೋಹವನ್ನು ದೂರಮಾಡಿ ಉತ್ತಮವಾದ ಮುಕ್ತಿಮಾರ್ಗವನ್ನು ಅನುಸರಿಸಬೇಕು. ॥೨೧॥

ನಾನು ಸಕಲ ಪೀಡಾಪರಿಹಾರಕನು. ಸರ್ವಾಂತರ್ಯಾಮಿಯು. ಸಕಲರ ಹೃದಯದಲ್ಲಿಯೂ ಅಡಗಿರುವವನು. ಯಾರಿಂದಲೂ ಹೊಂದಲಾಗದಂತಹ ಅಜ್ಞಾನ ನಾಶಕವಾದ ಜ್ಞಾನಸ್ವರೂಪನು. ಹೃದಯಕುಹರದಲ್ಲಿ ಸೂಕ್ಷ್ಮರೂಪದಿಂದಿದ್ದು, ಭಕ್ತರುಂಟುಮಾಡುವ ತೃಪ್ತಿಯಿಂದ ತೃಪ್ತನಾಗುವ ಸ್ವಭಾವದವನು. ಇಂತಹ ನನ್ನನ್ನು ನೀವೆಲ್ಲರೂ ಏಕಮನಸ್ಸಿನಿಂದ ಭಜಿಸಿರಿ. ॥೨೨॥

ಇಷ್ಟಂ ಚ ಯತ್ಕಿಂಚಿದಪಿ ತ್ರಿವಿಷ್ಟಪೇ
ನಿವೇದ್ಯ ತದ್ಯುಂಜತ ಪ್ರೀತಿಯುಕ್ತಾಃ ।
ತೇನೈವ ವೋ ಜ್ಞಾನಮಖಂಡಮಿಷ್ಟಂ
ಈಷ್ಟೇಧುನಾ ಸಂಸೃತಿಬಂಧನಾಶಂ ॥೨೩॥

ಕರೋಮಿ ಪಾಶಾನ್ ಭವತಾಪಸಂಭವಾನ್
ಸನಾತನಾಂಸ್ತೇ ದಧಾಮ್ಯದ್ಯ ಹೃಷ್ಟಃ ।
ಅಹೋ ಭವದ್ಭಿರಪಿ ಪೂರ್ಣಕಾಮಃ
ಕಿಂ ವಿಸ್ಮೃತೋ ಹೃದಯೇ ಸಂಪ್ರವಿಷ್ಟಃ ॥೨೪॥

ಮದಃ ಪೂರ್ಣೋಽಪೂರ್ಣವಿವಾಸ್ಮಿ ಪೂರ್ಣಃ
ಪೂರ್ಣಾತ್ಪೂರ್ಣೋ ನಾಸ್ತ್ಯಪೂರ್ಣಂ ಮಯಾ ಹಿ ।
ದೇವಾಃ ಪ್ರಸಾದೇನ ವಿಮುಕ್ತಕಾಮಾ
ಶ್ಚರಂತು ತುಷ್ಟಾಃ ಪರಿಪೂರ್ಣಸಿದ್ಧಯಃ ॥೨೫॥

ಎಲೈ ದೇವತೆಗಳಿರಾ, ನಿಮಗೇನಾದರೂ ಸ್ವರ್ಗಲೋಕದಲ್ಲಿ ಇಷ್ಟವಸ್ತುವು ಬೇಕಾದರೆ ಆಗ ನನ್ನನ್ನು ಧ್ಯಾನಿಸಿ ಒಡನೆಯೇ ಪಡೆಯಿರಿ. ಆಗಲೇ ನೀವು ಜ್ಞಾನಿಗಳಾದಿರೆಂಬುದನ್ನು ತಿಳಿಯಿರಿ. ಆ ಜ್ಞಾನರಾಶಿಯೇ ನಿಮ್ಮನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡುವುದು. ॥೨೩॥

ಸಂಸಾರತಾಪದಿಂದ ಹುಟ್ಟಿತಕ್ಕ, ಮತ್ತು ಅನಾದಿಸಿದ್ಧವಾಗಿ ಬರುತ್ತಲಿರುವ ಮಾಯಾಪಾಶಗಳನ್ನು ಈಗ ನಿಮಗಾಗಿ ನಾನು ಧರಿಸಿರುವೆನು. ನಿಮಗೆ ಅವುಗಳನ್ನು ತಪ್ಪಿಸುವೆನು. ನಿಮಗೆಲ್ಲಾ ಪೂರ್ಣಕಾಮನಾಗಿ ನಿನ್ನ ಹೃದಯಾಂತರಾಳದಲ್ಲಿ ಅಡಗಿರುವೆನು. ಇಂತಹ ನನ್ನನ್ನು ನೀವು ಮರೆಯುವುದು ಹೇಗೆ ? ॥೨೪॥

ನನ್ನಿಂದಲೇ ಈ ಜಗತ್ತು ಪೂರ್ಣವಾಗಿರುವುದು. ನಾನು ಮಾತ್ರ ಸರ್ವದಾ ಅಪೂರ್ಣನಾಗಿರುವೆನು. ಅಂದರೆ ನನ್ನ ಸರ್ವಸ್ಥಿತಿಯನ್ನು ಯಾರೂ ತಿಳಿಯಲಾರರು. ಪೂರ್ತಿಗೊಂಡಿರುವ ವಸ್ತುಗಳೆಲ್ಲಾ ನನ್ನಿಂದ ಪೂರ್ತಿಗೊಳ್ಳಬೇಕು. ಅಂದರೆ ನಾನಿಲ್ಲದೆ ಯಾವ ವಸ್ತುವೂ ಪೂರ್ಣ ವಸ್ತುವೆನಿಸಿಕೊಳ್ಳಲಾರದು. ಈ ವಿಷಯವೆಲ್ಲಾ ನಿಮಗೆ ದೇವಿಯ ಅನುಗ್ರಹದಿಂದ ತಿಳಿದಂತಾಗಿದೆ. ಆದ್ದರಿಂದ ಈಗ ನೀವು ಇಷ್ಟಾರ್ಥಸಿದ್ಧಿಯನ್ನು ಪಡೆದವರಾಗಿ, ತೃಪ್ತಿವಂತರಾಗಿ ಸರ್ವತ್ರ ಸಂಚರಿಸಿರಿ. ॥೨೫॥

ತಥಾಪಿ ಕಿಂಚಿತ್ಪ್ರವದಾಮಿ ವೈಭವಂ
ಕಷ್ಟಂ ತದವ್ಯಕ್ತಗತಂ ಮಮಾದ್ಯ ।
ಸರ್ವೇಷು ದೇಹೇಷು ಸದೈವ ಸರ್ವದಾ
ಲಿಂಗಾಕೃತಿರ್ಗಿರಿಮೌಲೌ ನಿವಿಷ್ಟಃ ॥೨೬॥

ಸ್ಥಾನೇಷು ಪೂಜ್ಯೋಽಹಮನಾದಿರೀಶೋ
ಮದ್ರೂಪಲೋಕ್ಯಂ ಭವತಾಂ ಸುದುರ್ಲಭಂ ।
ಅಹಂ ತ್ವಲಿಂಗಸಂಸ್ಥಸ್ಸನಾತನಃ
ಪೂಜನೀಯೋ ಭವದ್ಭಿಃ ॥೨೭॥

ತದೇವ ಲಿಂಗಂ ಮಮ ಲಿಂಗಮೇವಂ
ಜ್ಞಾತುಂ ನ ಶಕ್ಯಂ ಕ್ಷುರಧಾರಕಂ ತತ್ ।
ರೂಪದ್ವಯಂ ಮೇ ಪರಮಾರ್ಥತಸ್ಸುರಾಃ
ಸಾಕಾರನೀರೂಪಮಿದಂ ಹಿ ವಿಶ್ವಂ ॥೨೮॥

ಹೀಗಿದ್ದರೂ, ಅವ್ಯಕ್ತಗತನಾದ ನಾನು ಜಗದುದ್ಧಾರಕ್ಕಾಗಿ ಮಾಡಿರುವ ಈಶ್ವರೀಯ ವೈಭವವನ್ನು ಕೇಳಿರಿ. ಸರ್ವಕಾಲದಲ್ಲಿಯೂ, ಸಕಲ ದೇಹಗಳಲ್ಲಿಯೂ ವ್ಯಾಪಿಸಿರುವ ನಾನು, ವಿಶೇಷವಾಗಿ ಲಿಂಗಾಕಾರದಿಂದ ಕೈಲಾಸಪರ್ವತಾಗ್ರದಲ್ಲಿ ನೆಲಸಿರುವೆನು. ॥೨೬॥

ಅನಾದಿಯಾಗಿದ್ದು ಸರ್ವಕ್ಕೂ ಒಡೆಯನಾಗಿರುವ ನನ್ನನ್ನು ಯೋಗ್ಯರೀತಿಯಿಂದರ್ಚಿಸಬೇಕು. ನಿಮ್ಮಗಳಿಗೆ ನನ್ನ ನಿಜರೂಪವನ್ನರಿಯುವುದು ಸಾಮಾನ್ಯವಲ್ಲ. ನನಗೆ ವಿಶೇಷವಾದ ಯಾವ ಚಿಹ್ನೆಗಳಾಗಲಿ ಇರುವುದಿಲ್ಲ. ಆದ್ಯಂತರಹಿತನಾಗಿರುವ ನನ್ನನ್ನು ಒಂದು ಸದ್ಭಾವನೆಯಿಂದ ಪೂಜಿಸುವುದು ನಿಮ್ಮ ಕರ್ತವ್ಯವಾಗಿದೆ. ॥೨೭॥

ನನ್ನ ಮುಖ್ಯ ಚಿಹ್ನೆಯೆಂದರೆ ಈ ಶಿವಲಿಂಗಾಕಾರವೊಂದೇ. ಇದನ್ನು ಸರಿಯಾಗಿ ಅರಿಯಲು ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಈ ಚಿಹ್ನೆಯು ಕತ್ತಿಯ ಅಲುಗಿನಂತೆ ಅತಿಸೂಕ್ಷ್ಮವಾದದ್ದು ಮತ್ತು ತೀಕ್ಷ್ಣವಾದದ್ದು. ದೇವತೆಗಳಿರಾ, ಪರಮಾರ್ಥದೃಷ್ಟಿಯಿಂದ ನೋಡಿದರೆ ನನ್ನ ಈ ಸ್ವರೂಪವು, ಸಾಕಾರ, ನಿರಾಕಾರವೆಂಬ ಭೇದದಿಂದ ಎರಡು ರೀತಿಯಲ್ಲಿರುವುದು. ॥೨೮॥

ತ್ರಿಣೇತ್ರಮುದ್ಯಚ್ಛಶಿಮೌಲಿಸಂಯುತಂ
ಅಂಬಾಯುತಂ ನೀಲಕಂಠಂ ಮಮಾದ್ಯಂ ।
ತತೋಽಪಿ ನೀರೂಪಮಿದಂ ಹಿ ಲಿಂಗಂ
ಜಗತ್ಪವಿತ್ರಂ ಕುರುತೇಽರ್ಚನಾದಿಭಿಃ ॥೨೯॥

ತತೋ ಹಿ ತತ್ಕೇವಲಕಷ್ಟಲಭ್ಯಂ
ತಸ್ಮಾದ್ಭವಂತಶ್ಶರಣಂ ಪ್ರಯಾತ ।
ಕೈಲಾಸವಾಸೋ ಭವತಾಂ ಸುದುಸ್ತರ
ಸ್ತತ್ರ ಪ್ರವೇಶೋ ನ ಹಿ ಸದ್ಮ ಮೇ ಸದಾ ॥೩೦॥

ಸರ್ವಾವಭಾಸೋಽಪ್ಯಹಮೀಶ ಏಕ
ಸ್ತತ್ರಾಂಬಯಾ ಗಣಸಂಘೈಶ್ಚ ಯುಕ್ತಃ ।
ಮುಕ್ತೋ ವಿಜಹ್ರಾಮಿ ಸದಾಸ್ತಮಾಯಃ
ಕೈಲಾಸಲಿಂಗೇಷು ಸದಾ ನಿವಿಷ್ಟಃ ॥೩೧॥

ಮೊದಲನೆಯದಾದ ಸಾಕಾರರೂಪದಲ್ಲಿ, ನಾನು ತ್ರಿನಯನನಾಗಿಯೂ, ಚಂದ್ರಶೇಖರನಾಗಿಯೂ, ಪಾರ್ವತೀಯುತನಾಗಿಯೂ, ನೀಲಕಂಠನಾಗಿಯೂ ಗೋಚರಿಸುವೆನು. ನಿರಾಕಾರಾವಸ್ಥೆಯಲ್ಲಿ ನಾನು ಕೇವಲ ಶಿವಲಿಂಗರೂಪದಲ್ಲಿ ನಿಲ್ಲುವೆನು. ಅರ್ಚನಾದಿಗಳಿಂದ ಜಗತ್ತನ್ನು ಪವಿತ್ರಗೊಳಿಸಲು ಈ ಶಿವಲಿಂಗವೇ ಅತ್ಯಂತ ಸಮರ್ಥವಾದದ್ದು. ॥೨೯॥

ಇದಕ್ಕಿಂತ ಮೇಲಿರುವ ಯಾವ ಮಾರ್ಗವಾದರೂ ನಿಮಗೆ ಸುಲಭಸಾಧ್ಯವಾದುದಲ್ಲ. ಆದ್ದರಿಂದ ನೀವು ಈಗ ಶಿವಲಿಂಗಾರ್ಚನೆಯೊಂದನ್ನೇ ಅನುಸರಿಸಿರಿ. ನೀವು ಸಾಕ್ಷಾತ್ತಾಗಿ ಕೈಲಾಸದಲ್ಲಿ ನೆಲಸುವುದು ಸಾಧ್ಯವಲ್ಲದ ಕೆಲಸ. ಏಕೆಂದರೆ ನನಗೆ ಕೈಲಾಸವು ಯಾವಾಗಲೂ ಮನೆಯಂತಿರುವುದು. ॥೩೦॥

ನಾನೊಬ್ಬನೇ ಜಗತ್ತಿನಲ್ಲಿ ಸರ್ವವಸ್ತುಜಾಲದಂತೆ ಭಾಸಮಾನವಾಗುತ್ತಿರುವೆನು. ಪಾರ್ವತಿಯೊಡಗೂಡಿ ಪ್ರಮಥಗಣಗಳಿಂದ ಕೂಡಿ ವಿಹರಿಸುತ್ತಿರುವೆನು. ಮುಕ್ತಾವಸ್ಥೆಯಲ್ಲಿ ಈ ಎಲ್ಲ ವಸ್ತುಗಳೊಡನೆಯೂ ಸಂಬಂಧವನ್ನು ತ್ಯಜಿಸಿ ಕೈಲಾಸಲಿಂಗದಲ್ಲಿ ಸರ್ವದಾ ನೆಲಸುವೆನು. ॥೩೧॥

ಕೇದಾರ ಓಂಕಾರ ಅಥಾವಿಮುಕ್ತೇ
ಮಹಾಲಯೇ ರುದ್ರಕೋಟೌ ಪ್ರಭಾಸೇ ।
ಹಿಮಾಲಯೇ ಶ್ರೀನಗಮೌಲಿಸಂಸ್ಥೇ
ತಥಾನ್ಯದೇಶೇಷು ಸುಸಂಸ್ಥಲಿಂಗೇ ॥೩೨॥

ಸಂಪೂಜ್ಯ ಮುಕ್ತಾಶ್ಚ ಭವಂತು ವಿಜ್ವರಾ
ರಹಸ್ಯ ಮೇತತ್ಕಥಿತಂ ಸುರೋತ್ತಮಾಃ ॥೩೩॥

|| ಸ್ಕಂದ ಉವಾಚ ||

ಇತ್ಯುಕ್ತಂ ಗಿರಿಜಾಮನೋಹರವಚಶ್ಶ್ರುತ್ವಾ ವಿಧೀಂದ್ರಾದಯೋ
ವಿಷ್ಣ್ವೀಶಾನಮರುದ್ಗಣಾಸ್ಸವರುಣಾ ನತ್ವಾ ಮಹೇಶಂ ಶಿವಂ ।
ಜಗ್ಮುಸ್ಸ್ವಾಭಿಮತಪ್ರದೇಶಮಖಿಲಾ ದೇವಾ ಮುದಾ ಶಂಕರಾ
ತ್ಪ್ರಾಪ್ಯ ಜ್ಞಾನಮಹೋದಯಂ ಸುರುಚಿರಂ ಮುಕ್ತ್ಯೈವ ಲಿಂಗಾರ್ಚಕಾಃ
॥೩೪॥

ಹಾಗೆಯೇ, ಕೇದಾರೇಶ್ವರ, ಓಂಕಾರೇಶ್ವರ, ಅವಿಮುಕ್ತೇಶ್ವರ, ಮಹಾಬಲೇಶ್ವರ ಈ ಶಿವಲಿಂಗಗಳಲ್ಲಿಯೂ ರುದ್ರಕೋಟಿತೀರ್ಥ, ಪ್ರಭಾಸತೀರ್ಥ, ಹಿಮಾಲಯ, ಶ್ರೀಶೈಲ, ಇನ್ನೂ ಪ್ರಸಿದ್ಧ ಶಿವಕ್ಷೇತ್ರಗಳು ಇವುಗಳಲ್ಲಿ ಕಂಡುಬರುವ ಶಿವಲಿಂಗಗಳಲ್ಲಿಯೂ ನಾನು ನೆಲಸಿರುವೆನು. ಎಲೈ ದೇವತೆಗಳಿರಾ, ಇಂತಹ ಶಿವಲಿಂಗಗಳನ್ನು ಆರಾಧಿಸಿ ನೀವು ಭವಬಂಧನಗಳಿಂದ ಮುಕ್ತರಾಗಿರಿ. ಇದು ಅತ್ಯಂತ ರಹಸ್ಯವಾದದ್ದು. ||೩೨-೩೩||

ಹೀಗೆ ಹೇಳಿದ ಮಹೇಶ್ವರನ ಮಾತುಗಳನ್ನು ಕೇಳಿದ ಬ್ರಹ್ಮೇಂದ್ರಾದಿ ಮರುದ್ಗಣಗಳು, ಸಕಲ ದೇವತೆಗಳೊಡನೆ ಮಹೇಶ್ವರನನ್ನು ಭಕ್ತಿಯಿಂದ ವಂದಿಸಿ, ಅವನಿಂದ ಪಡೆದ ಸುಜ್ಞಾನರಾಶಿಯನ್ನು ತಮ್ಮ ಮುಕ್ತಿಪ್ರಾಪ್ತಿಗಾಗಿ ವಿನಿಯೋಗಿಸುತ್ತಾ, ಲಿಂಗಾರ್ಚಕರೆನಿಸಿ ತಮ್ಮ ತಮ್ಮ ಸ್ಥಾನಗಳಿಗೆ ಸಂತೋಷದಿಂದ ಹಿಂದಿರುಗಿದರು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ||೩೪||

॥ ಈಶ್ವರ ಉವಾಚ ॥

ಹಿಮಾಲಯನಗೋತ್ತಮೇ ಹಿಮಸುಧಾಮಮೌಲಿಸ್ಫುರ
ದ್ಧಿಮಾದ್ರಿವರಕನ್ಯಕಾಜಟಿಲಕಾಂತಿಕಾಂತಂ ಪ್ರಭುಂ ।
ಪಯೋಧಿಸುತಯಾ ಹರಿಃ ಪಯಸಿಜಾತಪುಷ್ಪಾರ್ಚನೈ
ರ್ನಿನಾಯ ದಿವಸಾನಮೇ ವರಸುರಂಗಕೇದಾರಗಃ ॥೩೫॥

ಓಂಕಾರಂ ಸಮವಾಪ್ಯ ಭಾರತೀಪತಿಸ್ಸನ್ನರ್ಮದಾತೀರಗಂ
ಪುಷ್ಪೈರ್ಬಿಲ್ವದಳಾರ್ಚನೈಶ್ಶ್ರುತಿಗತೈರ್ಮಂತ್ರೈಸ್ಸ್ತುವನ್ ಮಾಮಮೇ।
ತತ್ಯಾಜಾಖಿಲಪಾತಕಂ ಹೃದಿ ಗತಂ ಚಾಜ್ಞಾನಮಪ್ಯಂತತಃ
ಸೃಷ್ಟಿಂ ಪ್ರಷ್ಟುತಯಾ ಸ್ವಕೀಯವದನೈಸ್ತುಷ್ಟಾವ ಚಾಷ್ಟಾಕೃತಿಂ ॥೩೬॥

ರುದ್ರೋವಿಮುಕ್ತಪದವೀಮವಿಮುಕ್ತಮೇತ
ತ್ಸಂಪ್ರಾಪ್ಯ ಲಿಂಗನಿಲಯಂ ವರಗಂಗಯಾಪಿ ।

---

ಅಲ್ಲಿಂದ ಮುಂದೆ ಲಕ್ಷ್ಮೀಪತಿಯಾದ ನಾರಾಯಣನು ಪತ್ನಿಯೊಡನೆ ಹಿಮಾಲಯ ಪರ್ವತಭಾಗದಲ್ಲಿರುವ ಶ್ರೀ ಕೇದಾರಕ್ಷೇತ್ರಕ್ಕೆ ಹೋಗಿ ಅಲ್ಲಿ ಚಂದ್ರಶೇಖರನಾಗಿಯೂ, ಪಾರ್ವತೀರಮಣನಾಗಿಯೂ ಇರುವ ಮಹಾದೇವನನ್ನು ಕಮಲವೇ ಮೊದಲಾದ ಸುಗಂಧಮಯ ಪುಷ್ಪಗಳಿಂದ ಅರ್ಚಿಸುತ್ತಾ ಅನೇಕ ದಿನಗಳನ್ನು ಕಳೆದನು ಎಂದು ಶಂಕರನು ದೇವತೆಗಳು ಲಿಂಗಾರ್ಚನೆಮಾಡಿದ್ದನ್ನು ಪಾರ್ವತಿಗೆ ವಿವರಿಸಲಾರಂಭಿಸಿದನು. ॥೩೫॥

ಬ್ರಹ್ಮನು ಸರಸ್ವತಿಯೊಡಗೂಡಿ ನರ್ಮದಾನದೀತೀರದಲ್ಲಿರುವ ಓಂಕಾರೇಶ್ವರ ಲಿಂಗದ ಸಮೀಪವನ್ನೈದಿದನು. ಆ ಶಿವಲಿಂಗವನ್ನು ಪುಷ್ಪಗಳಿಂದಲೂ ಬಿಲ್ವದಳ ಗಳಿಂದಲೂ ಅರ್ಚಿಸಿ, ವೇದಮಂತ್ರಾದಿಗಳಿಂದ ಸ್ತುತಿಸಿ, ಹೃದಯಾಂತರ್ಗತವಾದ ಅಜ್ಞಾನವನ್ನೆಲ್ಲಾ ಕಳೆದುಕೊಂಡು ಆ ಮೂಲಕ ಪಾಪರಹಿತನಾದನು. ಮತ್ತು ತನ್ನ ಸೃಷ್ಟಿಕಾರ್ಯವು ವಿಘ್ನವಿಲ್ಲದೆ ಮುಂದುವರಿಯುವಂತೆ ಅಷ್ಟಮೂರ್ತಿಯಾದ ಪರಶಿವ ನನ್ನು ಏಕಮನಸ್ಸಿನಿಂದ ಸ್ತುತಿಸಲಾರಂಭಿಸಿದನು. ॥೩೬॥

ರುದ್ರನಾದರೋ ಗಂಗಾದೇವಿಯೊಡನೆ ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯನ್ನು ಹೊಂದಿ, ಅಲ್ಲಿರುವ ತ್ರಿಲೋಕೇಶ್ವರನಾದ ವಿಶ್ವೇಶ್ವರಲಿಂಗವನ್ನೂ, ಹಾಗೆಯೇ

ವಿಶ್ವೇಶ್ವರಂ ತ್ರಿಭುವನೇಶ್ವರಮಿಪ್ಸಿತಾರಂ
ತ್ವಾಮಂಬಿಕಾಮುಗಸುತಾಂ ಸುವಿಶಾಲನೇತ್ರಾಂ ॥೩೭॥

ಅಭ್ಯರ್ಚ್ಯ ಪುಷ್ಪನಿಕರೈಃ ಪಯಸೋ ರಸೈಶ್ಚ
ನೀರೈಶ್ಚ ಸೇಚ್ಯ ವರಬಿಲ್ವದಲೈಸ್ಸಮರ್ಚ್ಯ ।
ಲೇಭೇಪ್ಯಲಭ್ಯಮಪಿ ವೇದಶಿರಃ ಪ್ರತೀತಂ
ಜ್ಞಾನಂ ತದಾ ಸುವಿಮಲಂ ನಗರಾಜಕನ್ಯೇ ॥೩೮॥

ಇಂದ್ರೋಽಪ್ಯಥಾಮರಸುಕಂಠಕಮೇತದೇವ
ದೇವಂ ಮಹೇಶ್ವರಮುಮೇ ವರಬಿಲ್ವಪತ್ರೈಃ ।
ಸಂಪೂಜ್ಯ ತಚ್ಛ್ರುತಿಗತಂ ವಿಮಲಂ ಮದೀಯ
ಜ್ಞಾನಂ ಸರೋದಿತಮಖಂಡಮವಾಪ್ಯ ತುಷ್ಟಃ ॥೩೯॥

ಯಮೋಽಪಿ ವರಶೈಲಕೇ ವಿಮಲಗಂಧಮಾತ್ರಾ ಶಿವಂ
ಸಮರ್ಚ್ಯ ನಿಜಪಾತಕೈಶ್ಚ್ಯುತಿಗತಿಂ ಚ ಲೇಭೇ ಶಿವೇ ।
ವಿಮುಕ್ತಹೃದಯಸ್ತದಾ ತ್ರಿದಲಬಿಲ್ವಪತ್ರೈಶ್ಶಿವೇ
ಸ ಏವ ಸುಖಸಂಪದಾಂ ಪ್ರವರದಕ್ಷಿಣಾಶಾಧಿಪಃ ॥೪೦॥

---

ಜಗನ್ಮಾತೆಯೂ, ನಗರಾಜಪುತ್ರಿಯೂ ಆದ ನಿನ್ನನ್ನೂ ಭಕ್ತಿಯಿಂದ ಆರಾಧಿಸಲಾರಂಭಿಸಿದನು. ||೩೭||

ರುದ್ರನು ವಿಶ್ವೇಶ್ವರಲಿಂಗವನ್ನು ಪುಷ್ಪರಾಶಿಗಳಿಂದಲೂ, ಕ್ಷೀರ, ಫಲರಸಗಳು ಶುದ್ಧೋದಕ ಇವೇ ಮೊದಲಾದುವುಗಳಿಂದ ಅಭಿಷೇಕಮಾಡಿ, ಅನಂತರ ಬಿಲ್ವದಳಗಳಿಂದ ಅರ್ಚನೆಮಾಡಿದನು. ಅದರಿಂದ ಅವನಿಗೆ ಯಾರಿಗೂ ದೊರಕದಂತಹ ಉಪನಿಷತ್ಪ್ರತಿಪಾದ್ಯಮಾನವಾದ ಸುಜ್ಞಾನವು ಲಭಿಸಿತು. ||೩೮||

ದೇವೇಂದ್ರನಾದರೋ ಅಮರಕಂಟಕ ಕ್ಷೇತ್ರಕ್ಕೆ ಹೋಗಿ ಅಲ್ಲಿ ನೆಲಸಿರುವ ಮಹೇಶ್ವರಲಿಂಗವನ್ನು ವಿಧಿವತ್ತಾಗಿ ಪೂಜಿಸಿದನು. ಬಿಲ್ವಪತ್ರಾರ್ಚನೆಯೇ ಮೊದಲಾದವುಗಳನ್ನು ನಡೆಸಿ, ತನ್ಮೂಲಕ ಈಶ್ವರಾನುಗ್ರಹವನ್ನು ಸಂಪಾದಿಸಿ, ವೇದೋಕ್ತವಾದ ನಿರ್ಮಲಜ್ಞಾನವನ್ನು ಪಡೆದನು. ||೩೯||

ದೇವಿಯೇ, ಅದೇರೀತಿ ದಕ್ಷಿಣದಿಕ್ಪಾಲಕನಾದ ಯಮನು, ಗಂಧಮಾದನ ಪರ್ವತಕ್ಕೆ ಹೋದನು. ಅಲ್ಲಿರುವ ಶಿವಲಿಂಗವನ್ನು ಮೂರು ಎಸಳುಗಳಿಂದ ಕೂಡಿ

ಶ್ರೀಶೈಲನಾಯಕಮುಮೇ ಪ್ರಥಿತೇ ಪ್ರದೋಷೇ
ಶ್ರೀದಂ ಧನಾಧಿಪತಿರರ್ಚ್ಯ ವಿಮುಕ್ತಪಾಪಃ ।
ಜ್ಞಾನಂ ಚ ಯಕ್ಷಪತಿರಕ್ಷಮವಾಪ ವೀಕ್ಷ್ಯ
ಪಕ್ಷಾಶ್ರಯೇಣ ವಿಮಲಂ ಸ ಲಭೇತ್ಸ ಮೋಕ್ಷಂ ॥೪೧॥

ತಾ ವಶ್ವಿನೌ ಚ ಕರಹಟ್ಟಪುರಂ ತದಾಪ್ಯ
ನಾಗೇಶಮರ್ಚ್ಯ ವಿವಿಧೈರ್ಲಭತಾಂ ಸುಪುಷ್ಪೈಃ ।
ಮೋಕ್ಷಂ ತಥೈವ ಭಿಷಜಾಮಧಿಪೌ ತಥಾ ತೌ
ವೇದಂ ತಥಾಯುಷಮುಮೇ ಸಮವಾಪತುಸ್ತೌ ॥೪೨॥

ವಾಯುಃ ಕಾಮದವೈದ್ಯನಾಥವಿಪಿನಾಧೀಶಂ ಸಮಭ್ಯರ್ಚ್ಯ ಮಾಂ
ಬಿಲ್ವೈಃ ಕೋಮಲಪುಷ್ಪನೀರಜಲವೈಸ್ಸಂಪ್ರಾಪ್ಯ ಮೋಕ್ಷದ್ರುತಂ ।
ಅಗ್ನಿಃ ಪುಷ್ಕರಮೀಶ್ವರಂ ತ್ರಿಭುವನಾಧ್ಯಕ್ಷಂ ಸಮಭ್ಯರ್ಚ್ಯ ವೈ
ಸರ್ವಂ ಭಕ್ಷಸಮುದ್ಭವಂ ಪ್ರಥಿತಮಪ್ಯಂಹೋ ವಿಮುಕ್ತೋಽಂಬಿಕೇ ॥೪೩॥

ರುವ ಬಿಲ್ವಪತ್ರೆಗಳಿಂದರ್ಚಿಸಿ, ಆ ಮೂಲಕ ಶಿವಾನುಗ್ರಹಕ್ಕೆ ಪಾತ್ರನಾಗಿ, ಸುಖ ಸಂಪತ್ತುಗಳನ್ನು ಕೊಡುವಂತಹ ದಿವ್ಯಜ್ಞಾನವನ್ನಾರ್ಜಿಸಿದನು. ॥೪೦॥

ಹಾಗೆಯೇ ಕುಬೇರನೂ ಶ್ರೀಶೈಲಕ್ಕೆ ಪ್ರಯಾಣ ಬೆಳೆಸಿ, ಅಲ್ಲಿ ಪ್ರದೋಷ ಕಾಲದಲ್ಲಿ, ಸಂಪತ್ಪ್ರದನಾದ ಮಹೇಶ್ವರನನ್ನು ವಿಧಿವತ್ತಾಗಿ ಆರಾಧಿಸಿದನು. ಅದರ ಫಲವಾಗಿ ಕುಬೇರನಿಗೆ ಸಂಶಯವಿಲ್ಲದ, ಪರಿಶುದ್ಧವಾದ ಈಶ್ವರೀಯ ಜ್ಞಾನವು ದೊರಕಿ, ಅದರಿಂದ ದಿವ್ಯಮೋಕ್ಷ ಪ್ರಾಪ್ತವಾಯಿತು. ॥೪೧॥

[illegible]ಶ್ರೇಷ್ಠರಾದ ಅಶ್ವಿನೀ ದೇವತೆಗಳು ಕರಹಟ್ಟಪುರ (ಕರೋಟಿಪುರ) ವನ್ನು ಹೊಂದಿ, ಅಲ್ಲಿರುವ ನಾಗೇಶ್ವರನನ್ನು ಫಲಪುಷ್ಪಾದಿಗಳಿಂದ ಪೂಜಿಸಿ, ದಿವ್ಯ ವೈದ್ಯದಲ್ಲಿ ನಿಪುಣರೆನಿಸಿ, ವೇದೋಕ್ತವಾದ ದಿವ್ಯಾಯುಷ್ಮಂತರಾಗಿ ಮುಕ್ತಿಯನ್ನು ಪಡೆದವರಾದರು. ॥೪೨॥

ವಾಯುದೇವನು ಗಜಾರಣ್ಯಕ್ಷೇತ್ರಾಧಿಪತಿಯಾದ ವೈದ್ಯನಾಥೇಶ್ವರನನ್ನು ಬಿಲ್ವಪತ್ರೆಗಳಿಂದಲೂ, ಕೋಮಲವಾದ ಕಮಲವೇ ಮೊದಲಾದ ಪುಷ್ಪಗಳಿಂದಲೂ

ಗೋಕರ್ಣಂ ಸಮವಾಪ್ಯ ತೇ ಹಿ ಮರುತಃ ಪ್ರೋಜ್ಯೇಶ್ವರಂ ಮಾಂ ಶಿವೇ
ಬಿಲ್ವೈಃ ಕೋಮಲಪಲ್ಲವೈಶ್ಚ ವಸವೋಽದಿತ್ಯಾಸ್ಸ್ರೈಸ್ತುಷ್ಟುವುಃ ।
ಶ್ರೀಮತ್ತ್ರ್ಯಂಬಕಮಪ್ಯಗಸುತೇ ತೇ ದ್ವಾದಶಾರ್ಕಾ ಹಿ ಮಾಂ
ಹೋಮೈರ್ಹುತ್ವಾ ಮಹೇಶಿ ರುದ್ರಾಸ್ತ್ವಭಿಪೂಜ್ಯ ತ್ರಿದಲೈಶ್ಚ ಬಿಲ್ವಪತ್ರೈಃ
॥೪೪॥

ಪರಿಣತಹಿಮಧಾಮಮಂಡಲೋಽಪಿ ಶಂಭುಂ
ಹೃದಯಾಂಭೋಜಸುಪುಂಡರೀಕವಾಸಂ ।
ಗೋಪರ್ವತೇ ಸಮಭಿಪೂಜ್ಯ ತಥೈವ ಶಂಭುಂ
ಮಾರ್ತಾಂಡಕೋಽಪಿ ಗಿರಿಜೇ ಸಮವಾಪ ಮುಕ್ತಿಂ ॥೪೫॥

ಕಾಂಚೀಂ ಕಾಂಚಿತದಿಕ್ತಟಾಂ ದಿವಿಷದಸ್ತ್ವೇಕಾಮ್ರಮೂಲೇ ಹರಂ
ಕಾಮಾಕ್ಷೀಮಪಿ ಭೋಗಭೋಗ್ಯನಿಕರೈಸ್ಸಂಪೂಜ್ಯ ಮುಕ್ತಿಂ ಗತಾಃ ।

---

ಪೂಜಿಸಿ ಮುಕ್ತಿಯನ್ನು ಸಂಪಾದಿಸಿದನು. ಹಾಗೆಯೇ ಅಗ್ನಿಯೂ ಪುಷ್ಕರಕ್ಷೇತ್ರದಲ್ಲಿರುವ ಪರಮೇಶ್ವರನನ್ನು ಸೇವಿಸಿ ಸರ್ವಭಕ್ಷಣದಿಂದೊದಗಿದ, ಸಕಲ ಪಾಪರಾಶಿಯನ್ನೂ ಕಳೆದುಕೊಂಡವನಾದನು. ॥೪೩॥

ಮರುದ್ಗಣಗಳು, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಏಕಾದಶರುದ್ರರೂ ಗೋಕರ್ಣಕ್ಷೇತ್ರವನ್ನು ಹೊಂದಿ, ಅಲ್ಲಿರುವ ಈಶ್ವರಲಿಂಗವನ್ನು ಬಿಲ್ವಪತ್ರಾದಿ ಕೋಮಲಪತ್ರಗಳಿಂದಲೂ, ಪುಷ್ಪಾದಿಗಳಿಂದಲೂ, ರುದ್ರಮಂತ್ರಪೂರ್ವಕವಾಗಿ ಬಿಲ್ವಪತ್ರಗಳ ಆಹುತಿಯಿಂದಲೂ ತೃಪ್ತಿಪಡಿಸಿ, ಸಂಪೂರ್ಣವಾದ ಜ್ಞಾನವನ್ನು ಸಂಪಾದಿಸಿದರು. ॥೪೪॥

ಪೂರ್ಣಚಂದ್ರಮಂಡಲಧಾರಿಯಾಗಿದ್ದರೂ ಪರಶಿವನು ಭಕ್ತರ ಹೃದಯವೆಂಬ ವಿಕಸಿತಕಮಲದಲ್ಲಿ ವಾಸಮಾಡುವನು. ಇಂತಹ ಭಕ್ತಜನರಕ್ಷಕನಾದ ಶಂಕರನನ್ನು ಸೂರ್ಯದೇವನು ವೃಷಾಚಲದಲ್ಲಿ ಭಕ್ತಿಯಿಂದರ್ಚಿಸಿ, ಶಾಶ್ವತವಾದ ಮುಕ್ತಿಯನ್ನು ಸಂಪಾದಿಸಿದನು. ॥೪೫॥

ಇನ್ನುಳಿದ ಸಕಲ ದೇವತೆಗಳೂ, ನವಗ್ರಹಗಳೂ, ಅಸುರರೂ, ಮಾನವರೂ, ಋಷಿಗಳೂ, ಒಟ್ಟಾಗಿ ಸಕಲ ದಿಕ್ಕುಗಳ ಮಧ್ಯಭಾಗದಲ್ಲಿರುವ ಕಾಂಚೀಕ್ಷೇತ್ರಕ್ಕೆ ಪ್ರಯಾಣಮಾಡಿದರು. ಅಲ್ಲಿರುವ ಏಕಾಮ್ರೇಶ್ವರಲಿಂಗವನ್ನೂ, ಕಾಮಾಕ್ಷೀ

**ಅನ್ಯೇ ಚಾಪಿ ಗ್ರಹಾಸ್ತಥೈವ ಮುನಯೋ ದೇವಾಸುರಾ ಮಾನವಾ**
**ಗಂಧರ್ವೋರಗ ಯಕ್ಷರಾಕ್ಷಸಗಣಾ ಮುಕ್ತಾಸ್ಸಮಭ್ಯರ್ಚ್ಯ ಮಾಂ ॥೪೬॥**

**ಶ್ರೀಕಂಠೇ ತೃಣಶಂಕರೇ ಸುವಿಹಿತೇ ರತ್ನಾದ್ರಿಮೌಲಿಸ್ಥಿತೇ**
**ಶ್ರೀಮಾತೃಪ್ರಭವೇ ಗಿರೀಂದ್ರತನಯೋ ಶ್ರೀಕಾಲಹಸ್ತೀಗಿರೌ ।**
**ಜಂಬೂಲಿಂಗಕವೇರಜಾತಟಿಯುಗೇ ಜಪ್ಯೇ ತಥಾ ಕುಂಭಕೇ**
**ಪುಣ್ಯೇ ಶ್ರೀಧವಳಾರ್ಜುನೇ ವಿಧಿಪುರೇ ಶ್ರೀವೇದಕಾಞ್ಚೇ ಪುರೇ ॥೪೭॥**

**ಪುಣ್ಯೇ ಶ್ವೇತವನೇ ಮಯೂರವಿಪಿನೇ ಛಾಯಾವನೇ ಶಂಕರಿ**
**ಸಂಪೂಜ್ಯ ತ್ರಿದಶೇಶ್ವರಂ ಗಿರಿಜಯಾ ಮುಕ್ತಿಂ ಪರಾಂ ತೇ ಯಯುಃ॥೪೮॥**

**ಹಾಲಾಸ್ಯನಾಯಕಮುಮೇ ವರಶಾಲಿವಾಟೇ**
**ನಾಥಂ ಚ ಕಾಂತಿಮತಿಕಾಶಪುರಾಯತಾಕ್ಷೀಂ ।**
**ದೇವಾಂಗನಾ ಸಮಭಿಪೂಜ್ಯ ಹಲೀಸಲಾಸ್ಯೈಃ**
**ನೃತ್ಯಂತಿ ಹೇಮಸರಸೀಮವಗಾಹ್ಯ ಮಾಂ ತ್ವಾಂ ॥೪೯॥**

ದೇವಿಯನ್ನೂ ಸಕಲ ಪೂಜಾಸಂಭಾರಗಳಿಂದ ಅರ್ಚಿಸಿ, ಅವರನ್ನು ತೃಪ್ತಿಪಡಿಸಿ ಶಾಶ್ವತವಾದ ಮೋಕ್ಷವನ್ನು ಸಂಪಾದಿಸಿದರು. ಅದೇರೀತಿ ಸೇವೆಮಾಡಿ ಗಂಧರ್ವರೂ ರಾಕ್ಷಸರೂ, ಉರಗಗಳೂ, ಯಕ್ಷರೂ ದಿವ್ಯಮುಕ್ತಿಯನ್ನು ಹೊಂದಿದರು. ॥೪೬॥

ಶ್ರೀಕಂಠೇಶ್ವರ, ತೃಣೇಶ್ವರ, ರತ್ನಾದ್ರಿಯಲ್ಲಿ ಪ್ರಸಿದ್ಧವಾಗಿರುವ ಶಿವಲಿಂಗ, ಕಾಲಹಸ್ತೀಶ್ವರ, ಜಂಬುಕೇಶ್ವರ, ಕಾವೇರೀ ನದಿಯ ದಡದಲ್ಲಿ ಪ್ರಸಿದ್ಧವಾಗಿರುವ ಶಿವಲಿಂಗಗಳು, ಕುಂಭಕರ್ಣಕ್ಷೇತ್ರದಲ್ಲಿರುವ ಶಿವಲಿಂಗ ಮತ್ತು ಧವಳಾರ್ಜುನಕ್ಷೇತ್ರ, ಬ್ರಹ್ಮಪುರ, ವೇದಕಾಞ್ಚಪುರ, ಶ್ವೇತವನ, ಮಯೂರಾರಣ್ಯ, ಛಾಯಾವನ, ಮುಂತಾದ ಶಿವಕ್ಷೇತ್ರಗಳಲ್ಲಿರುವ ಈಶ್ವರಲಿಂಗಗಳನ್ನೂ, ದೇವಿಯ ಮೂರ್ತಿಗಳನ್ನೂ ಆರಾಧಿಸಿ, ಸಕಲ ದೇವತೆಗಳೂ ಮುಕ್ತಿಯನ್ನು ಪಡೆದವರಾದರು. ॥೪೮॥

ಹಾಗೆಯೇ ದೇವತಾಸ್ತ್ರೀಯರೆಲ್ಲರೂ, ಹಾಲಾಸ್ಯಕ್ಷೇತ್ರಕ್ಕೆ ಹೋಗಿ, ಅಲ್ಲಿರುವ ಕೇದಾರೇಶ್ವರ ಲಿಂಗವನ್ನೂ, ವಿಶಾಲಾಕ್ಷಿಯಾದ ಪಾರ್ವತಿಯನ್ನೂ ಅರ್ಚಿಸಿ, ಹೇಮ ಸರಸ್ಸಿನಲ್ಲಿ ಸ್ನಾನಮಾಡಿ, ಹಲೀಸನಾಟ್ಯವಿಶೇಷದಿಂದ ಪಾರ್ವತೀ ಪರಮೇಶ್ವರರನ್ನು ತೃಪ್ತಿಪಡಿಸಿ, ಸ್ಥಿರಮುಕ್ತಿಯನ್ನು ಸಂಪಾದಿಸಿದರು. ॥೪೯॥

ಮಾರ್ಕಂಡೇಯಘಟೋದ್ಭವೌ ಘಟಹರಂ ಸಂಪೂಜ್ಯ ಮೃತ್ಯುಂ ಕ್ಷಣಾ ।
ದ್ಯೋ ಜಿಗ್ಯೇ ಭುವನೇಶ್ವರಿ ತ್ರಿಭುವನೇ ಮತ್ಪಾದಶೂಲಾಹತಂ ।
ಸ್ಕಂದಸ್ಸ್ವಾಮಿಗಿರೌ ಸಮರ್ಚ್ಯ ಗಣಪಸ್ತದ್ದಕ್ಷಿಣಾವರ್ತಕೇ ।
ಮಾಮಾರಾಧ್ಯ ಗಣಾಶ್ಚ ಭೂಸುರಗಣಾಸ್ತತ್ರತ್ಯಲಿಂಗೇಷು ಮಾಂ ॥೫೦॥

ಕ್ಷಿಪ್ರಾತೀರನಿಕೇತನೇ ಮಯಿ ಸದಾ ನಾಮ್ನಾ ಮಹಾಕಾಲಜೇ ।
ಸಂಪ್ರಾಪ್ಯಾರ್ಚ್ಯ ಗಣತ್ವಮಾಪ ಸುಕೃತೈರ್ಮುಕ್ತೋಽಪ್ಯಭೂನ್ಮದ್ಗಣಃ ।
ಭೃಂಗೀನಂದಿಕಚಂಡಿಕೌ ಬಲಿಸುತಃ ಪೌಲಸ್ತ್ಯಹುಂಡಾದಯೋ ।
ಮಾಮಾರಾಧ್ಯ ಸದೈವ ತುಷ್ಟುವುರುಮೇ ತನ್ಮೇ ಸಮಾಕರ್ಣಯ ॥೫೧॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ದೇವಕೃತಕ್ಷೇತ್ರಪೂಜನಂನಾಮ
ಷಟ್ಪಂಚಾಶೋಽಧ್ಯಾಯಃ

---

ಮಾರ್ಕಂಡೇಯನೂ, ಅಗಸ್ತ್ಯಮಹರ್ಷಿಯೂ, ನನ್ನನ್ನು ಆರಾಧಿಸಿ, ನನ್ನ ಪಾದಾಘಾತದ ಸಹಾಯದಿಂದ ಲೋಕಭಯಂಕರನಾದ ಯಮನನ್ನು ನಿಗ್ರಹಿಸಿದರು. ಹಾಗೆಯೇ ಕುಮಾರಸ್ವಾಮಿಯು ಸ್ಕಂದಗಿರಿಯಲ್ಲಿಯೂ, ಗಣಪತಿಯು ದಕ್ಷಿಣಾವರ್ತಕ್ಷೇತ್ರದಲ್ಲಿಯೂ, ನನ್ನನ್ನು ಪೂಜಿಸಿ ಧನ್ಯರೆನಿಸಿಕೊಂಡರು. ಅದೇರೀತಿ ಸಕಲ ಭೂಸುರಜಾಲವೆಲ್ಲವೂ, ಶಿವಲಿಂಗಾಂತರ್ಗತನಾದ ನನ್ನನ್ನು ಸೇವಿಸಿ ಮುಕ್ತಿಭಾಗಿಗಳಾದರು. ॥೫೦॥

ಕ್ಷಿಪ್ರಾನದಿಯ ದಡದಲ್ಲಿ ಪ್ರಸಿದ್ಧ ಕ್ಷೇತ್ರವೆನಿಸಿರುವ ಮಹಾಕಾಲೇಶ್ವರ ಕ್ಷೇತ್ರದಲ್ಲಿ ನನ್ನ ಪ್ರಮಥಗಣವರ್ಗದವರೂ, ನಂದೀ, ಭೃಂಗೀ, ಚಂಡೀ, ಬಾಣಾಸುರ, ರಾವಣ, ಹುಂಡ, ಮುಂತಾದ ಗಣನಾಯಕರೂ, ಭಕ್ತಿಯಿಂದ ನನ್ನನ್ನು ಆರಾಧಿಸಿ, ಶಾಶ್ವತವಾದ ಮುಕ್ತಿಯನ್ನು ಪಡೆದವರಾದರು. ಈ ವಿಧವಾದ ಶಿವಲಿಂಗ ಪೂಜಾ ಮಹಿಮೆಯನ್ನು ಸಂಪೂರ್ಣವಾಗಿ ತಿಳಿಯುವವಳಾಗು ಎಂದು ಶಂಕರನು ಪಾರ್ವತಿಗೆ ಬೋಧಿಸಿದನು. ॥೫೧॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಪ್ರಥಮಾಂಶದಲ್ಲಿ ದೇವತೆಗಳು ಶಂಕರನನ್ನು ಆರಾಧಿಸಿದ ಶಿವಕ್ಷೇತ್ರಗಳನ್ನು ವಿವರಿಸುವ ಐವತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಸಪ್ತಪಂಚಾಶೋಽಧ್ಯಾಯಃ

—०:०—

### ಸರ್ವದೇವಸ್ತುತಿಃ

|| ಈಶ್ವರ ಉವಾಚ ||

ದೇವೈರ್ಗಣೇಂದ್ರೈರ್ಮುನಿಭಿಸ್ಸ್ತುತೋಽಹಂ ತತ್ರ ತತ್ರ ಹಿ ।
ತತ್ಸ್ತುತಿಂ ಸಾವಧಾನೇನ ಮತ್ತಶ್ಶೃಣು ನಗಾತ್ಮಜೇ ||೧||

ವಿಷ್ಣುಬ್ರಹ್ಮಾದಯೋ ದೇವಾಸ್ತಥೈವ ಗಣಪಾ ಮಮ ।
ಮಾಂ ತುಷ್ಟುವುರ್ಮಹಾದೇವಂ ಪದ್ಯೈರ್ಗದ್ಯೈರ್ಮನೋಹರೈಃ ||೨||

|| ವಿಷ್ಣುರುವಾಚ ||

ಕನಜ್ಜಟಾಕುಟೀರಗಾಂ ವಿಹಂಗಸಂಗಮಂಡಿತಾಂ ।
ಕರಿಪ್ರಿಯಾಂಗಸಂಗತಾಂ ಮುಖಾಬ್ಜಕಾಂತಿರಂಗಿತಾಂ ।

## ಶ್ರೀಶಿವರಹಸ್ಯದಲ್ಲಿ ಐವತ್ತೇಳನೆಯ ಅಧ್ಯಾಯ

ಮತ್ತೆ ಶಂಕರನು ಪಾರ್ವತಿಯೊಡನೆ, ಸಕಲ ದೇವತೆಗಳೂ, ಗಣನಾಯಕರೂ ಮುನಿಗಳೂ ತನ್ನನ್ನು ಸ್ತುತಿಸಿದ ಕ್ರಮವನ್ನು ವಿವರವಾಗಿ ಹೇಳಲಾರಂಭಿಸಿದನು. ||೧||

"ಎಲೌ ದೇವಿಯೇ, ವಿಷ್ಣು, ಬ್ರಹ್ಮ, ಮುಂತಾದ ಸಕಲ ದೇವತೆಗಳೂ, ಸಕಲ ಗಣಗಳೂ ನನ್ನನ್ನು ಪದ್ಯಗದ್ಯರೂಪದಲ್ಲಿ ವಿಶೇಷವಾಗಿ ಹೀಗೆ ಸ್ತುತಿಸಲಾರಂಭಿಸಿದರು. ||೨||

"ಪರಮೇಶ್ವರನ ಶಿರೋಭಾಗದಲ್ಲಿರುವ ಜಟಾಜೂಟದಲ್ಲಿ ಅಡಗಿರುವವಳೂ, ಪಕ್ಷಿಗಳ ಸಮೂಹದಿಂದ ಶೋಭಿಸುವವಳೂ, ಗಜೇಂದ್ರನಿಗೆ ಆಶ್ರಯವಿತ್ತವಳೂ,

ಕಪರ್ದಕೋಟಿಸಂಗತಾಂ ಕಥಾಸುಧಾತರಂಗಿಣೀಂ ।
ಭಜಾಮಿ ಶಂಭುಮೌಲಿಗಾಂ ಮಹೇಶ್ವರಂ ನತೋಽಸ್ಮ್ಯಹಂ ॥೩॥

ಖರಾದಿಖಡ್ಗಸಂಹತಿಪ್ರಪಂಚಬಂಧನಾಂತಗ
ಪ್ರಭಾಸಚಂದ್ರಹಾಸಧೃಕ್
ಅಖಂಡಖಂಡಪರ್ಶುಜಪ್ರಭಾವಿತರ್ದಿಕೇವ ।
ತತ್ಕ್ಷಣಜ್ಞಪಾರಣಸ್ಫುರತ್ಖರಾದಿದುಷ್ಟವರ್ಗಹೃತ್ ॥೪॥

ಮನೋಽತಿಗಂ ವಚೋಽತಿಗಂ ಗುಣಾತಿಗಂ ಗಣಾತಿಗಂ
ಭುಜಂಗರಾಜಭೋಗಗಾರ್ಚಿತಾಂಘ್ರಿಹೃತ್ಪಥೋಜಗಂ ।
ತರಂಗಿಣೀತರಂಗಜಪ್ರಫುಲ್ಲಪದ್ಮನಾಲಗಂ
ಭಜಾಮಿ ರತ್ನರಂಗಗಂ ಕುರಂಗಪಾಣಿಮೀಶ್ವರಂ ॥೫॥

---

ಮುಖವೆಂಬ ಕಮಲಗಳ ಕಾಂತಿಯಿಂದ ಪ್ರಕಾಶಿತಳೂ, ಅಮೃತೋಪಮವಾದ ಕಥಾಪರಂಪರೆಗೆ ಆಶ್ರಿತಳೂ ಆದ ದೇವಗಂಗೆಯನ್ನೂ, ತತ್ಪತಿಯಾದ ಮಹೇಶ್ವರನನ್ನು ದೃಢಮನಸ್ಸಿನಿಂದ ಸೇವಿಸುವೆನು. ||೩||

ಎಲೈ ಪರಮೇಶ್ವರನೇ, ನೀನು ಕ್ರೂರವಾದ ಆಯುಧಗಳ ಸಮೂಹದಿಂದ ಈ ಜಗತ್ತನ್ನೆಲ್ಲಾ ಕ್ಷಣಮಾತ್ರದಲ್ಲಿ ಧ್ವಂಸಮಾಡುವವನಾಗುವೆ. ಹಾಗೆಯೇ ಲೋಕಕ್ಕೆಲ್ಲಾ ಆನಂದವನ್ನುಂಟುಮಾಡುವ ಪೂರ್ಣಚಂದ್ರನನ್ನು ಶಿರಸ್ಸಿನಲ್ಲಿ ಧರಿಸುವವನಾಗುವೆ. ಅಖಂಡವಾಗಿ ಖಂಡವಾದ ಪರಶುವನ್ನು ಹಿಡಿದಿರುವುದರಿಂದ ಅದರ ಹೊಳಪು ಧಾರಾಕಾರವಾಗಿ ನಿನ್ನ ಕೈಯಿಂದ ಹೊರಸೂಸುತ್ತಿರುವುದು. ಕ್ಷಣಕಾಲದಲ್ಲಿ ಸರ್ವವನ್ನೂ ನಾಶಗೊಳಿಸುವ ಖರನೇ ಮೊದಲಾದ ದುಷ್ಟರಾಕ್ಷಸರ ಗರ್ವವನ್ನೆಲ್ಲಾ ನೀನು ನಾಶಮಾಡಿರುವೆ. ಇಂತಹ ಮಹಾಮಹಿಮನಾದ ಪರಶಿವನೇ ; ನಿನಗೆ ನಮಸ್ಕಾರ" ಎಂದು ಮಹಾವಿಷ್ಣುವು ಶಂಕರನನ್ನು ಧ್ಯಾನಿಸಿದನು. ||೪||

ಅನಂತರ ಬ್ರಹ್ಮದೇವನು ಪರಮೇಶ್ವರನನ್ನು ಹೀಗೆ ಸ್ತುತಿಸಲಾರಂಭಿಸಿದನು. ಶಂಕರನು ಮನಸ್ಸಿಗೂ, ಮಾತಿಗೂ ಸಿಕ್ಕದವನು. ಗಣಗಳಿಂದಲೂ ಗುಣಗಳಿಂದಲೂ ದೂರನಾದವನು. ಆದಿಶೇಷಶಾಯಿಯಾದ ಮಹಾವಿಷ್ಣುವಿನಿಂದ ಅರ್ಚಿಸಲ್ಪಟ್ಟ ಪಾದಪದ್ಮವುಳ್ಳವನು. ದೇವಗಂಗಾನದಿಯ ಅಲೆಗಳಿಗೆ ಸಿಕ್ಕಿ ಅಲ್ಲಾಡುತ್ತಿರುವ

ಹಿರಣ್ಯದಂ ಮಹೀಪ್ರದಂ ಪಶುಪ್ರದಂ ಹರಾಜ
ವಿಷ್ಣುಸರ್ವದಪ್ರಧಾನಭೋಗಮೋಕ್ಷದಂ ।
ಭಜಾಮಿ ದೇವದೈವತಂ ಗುಹಾಹಿತಂ ಜಗದ್ಗತಂ
ಪ್ರಭಾವಿತಂ ಸುಭಾಷಿತಂ ಮಹಾಶ್ರುತೀಡಿತಂ ಶಿವಂ ॥೬॥

ಮಹಾಹಿರಾಜಕಂಕಣಂ ಧರಾಧ್ರಗಾತ್ಮಜಾಸಖಂ
ಜ್ವಲತ್ತ್ರಿಶೂಲಧಾರಿಣಂ ಮುನೀಂದ್ರಬಾಲಪೋಷಣಂ ।
ತುರಂಗಬಾಲಧಾರಿಣಂ ಸಿತತ್ರಿಪುಂಡ್ರಧಾರಿಣಂ ।
ಭಜಾಮಿ ಸೋಮಧಾರಿಣಂ ಕರೀಂದ್ರಕೃತ್ತಿಧಾರಿಣಂ ॥೭॥

ರುದ್ರ ಉವಾಚ

ಪ್ರಕೃಷ್ಟಸಾಮಘೋಷಿಣಂ ಸುಧಾಂಶುಖಂಡದೀಧಿತಿ ।
ಪ್ರಚಂಡಮೌಲಿಮಂಡಲಂ ಸುಕುಂಡಲೀಕೃತಾಚ್ಛ
ಗಂಡಕುಂಡಲೀಶ್ವರಂ ಪ್ರಭುಂ ।
ಅಖಂಡದಿವ್ಯದೀಧಿಮತ್ಸ್ವಚಂದ್ರಖಂಡದೇಹಕಂ ।
ವಿಧಾತೃಮುಂಡಷಂಡಜಪ್ರಕಾಶಮಾಲಜಾಲಕಂ ॥೮॥

ಅರಳಿದ ಕಮಲಗಳಿಂದ ಅರ್ಚಿಸಲ್ಪಡುವವನು. ರತ್ನದಂತೆ ಹೊಳೆಯುವ ಮೈ ಬಣ್ಣವುಳ್ಳವನೂ, ಮೃಗಪಾಣಿಯೂ ಆದ ಈಶ್ವರನನ್ನು ಸೇವಿಸುವೆನು. ಅಲ್ಲದೆ ಲೋಕರಕ್ಷಕನಾದ ಮಹೇಶ್ವರನು ತನ್ನ ಭಕ್ತರಿಗೆ ಸುವರ್ಣ, ಭೂಮಿ, ಪಶುಗಳು ಮುಂತಾದ ಭೋಗಸಾಮಗ್ರಿಗಳನ್ನೆಲ್ಲಾ ಅನುಗ್ರಹಿಸುವನು. ಮತ್ತು ಬ್ರಹ್ಮ, ವಿಷ್ಣು, ರುದ್ರರಿಗೂ ಭೋಗವನ್ನೂ, ಮುಕ್ತಿಯನ್ನೂ ದಯಪಾಲಿಸುವ ಶಕ್ತಿಯುಳ್ಳವನು. ಗುಹಾರೂಪವಾದ ಶರೀರಾಂತರ್ಗತನಾಗಿದ್ದು ಜಗದ್ವ್ಯಾಪಿಯಾಗಿ, ಪ್ರಭಾವಶಾಲಿಯಾಗಿರುವ, ವೇದಪ್ರತಿಪಾದ್ಯನಾದ ಮಹೇಶ್ವರನನ್ನು ನಾನು ಸರ್ವದಾ ಸ್ತೋತ್ರ ಮಾಡುವೆನು. ॥೫-೬॥

"ಪರಶಿವನಿಗೆ ಆದಿಶೇಷನೇ ಕೈಬಳೆಯು. ಪರ್ವತರಾಜಪುತ್ರಿಯಾದ ಪಾರ್ವತಿಯೇ ಪ್ರಿಯಪತ್ನಿಯು. ಮಹೇಶ್ವರನೇ, ನೀನು ಉಗ್ರವಾಗಿರುವ ತ್ರಿಶೂಲವನ್ನು ಧರಿಸಿ ಮೃಕಂಡುಮುನಿಪುತ್ರನಾದ ಮಾರ್ಕಂಡೇಯನನ್ನು ಸಂರಕ್ಷಿಸಿದೆ

ಭಜಾಮಿ ಚಂಡತಾಂಡವಂ ಘನಾಂಡಜಾಂಡಜಪ್ರಿಯಂ
ತುಹಂಡಹುಂಡಕಪ್ರಿಯಂ ಮಹೋರುಬಾಹುದಂಡಕಂ ॥೯॥

॥ ಇಂದ್ರ ಉವಾಚ ॥

ಪುರಾಂತಕಂ ಸ್ಮರಾಂತಕಂ ಭಗಾಂತಕಂ ಮಖಾಂತಕಂ
ಗಜಾಂಧಕಾಂತಕಾಂತಕಂ ಶಿವಂ ಸದಾ ಹೃದಂಬುಜೇ ॥೧೦॥

---

ಯಲ್ಲವೇ ? ಜಿಂಕೆಮರಿಯನ್ನು ಕೈಯಲ್ಲಿ ಹಿಡಿದು, ಶುಭ್ರವಾದ ತ್ರಿಪುಂಡ್ರವನ್ನು ಧರಿಸಿ, ಚಂದ್ರಚೂಡನಾಗಿ ಗಜಚರ್ಮಾಂಬರಧಾರಿಯಾಗಿರುವ ಶಂಕರನೇ, ನಿನ್ನನ್ನೇ ನಾನು ಸರ್ವದಾ ಭಜಿಸುವೆನು. ಪರಶಿವನೇ ನೀನು ಸಾಮವೇದದಿಂದ ವಿಶೇಷವಾಗಿ ನುತಿಸಲ್ಪಡುವೆ. ಅಮೃತಕಿರಣಗಳಿಂದಕೂಡಿರುವ ಚಂದ್ರಮಂಡಲವನ್ನೇ ಶಿರಸ್ಸಿನಲ್ಲಿ ಕಟ್ಟಿಹಾಕಿರುವೆ. ನೀನು ಕಿವಿಯಲ್ಲಿ ಧರಿಸಿರುವ ಕರ್ಣಕುಂಡಲಗಳ ಕಾಂತಿಯು ನಿನ್ನ ಗಂಡಪ್ರದೇಶವನ್ನೆಲ್ಲಾ ಬೆಳಗಿಸುತ್ತಿರುವುದು. ಸಂಪೂರ್ಣವಾದ ತೇಜಸ್ಸಿನಿಂದ ಕೂಡಿ ನಿನ್ನ ದೇಹವು ಚಂದ್ರನಂತೆ ಜನರಿಗೆ ಆಹ್ಲಾದಕರವಾಗಿರುವುದು. ಬ್ರಹ್ಮ ಕಪಾಲವೇ ಮೊದಲಾದ ಇನ್ನೂ ಅನೇಕ ರಾಕ್ಷಸರ ಮುಂಡಗಳನ್ನೆಲ್ಲಾ ಮಾಲೆ ಯನ್ನಾಗಿ ಮಾಡಿಕೊಂಡು ಕಂಠದಲ್ಲಿ ಧರಿಸಿರುವೆ. ॥೭-೮॥

ನಿನ್ನ ನಾಟ್ಯವಾದರೋ ಬಹು ಭಯಂಕರವಾಗಿರುವುದು. ಬ್ರಹ್ಮಾಂಡಾಂತ ರ್ಗತವಾದ ಸಕಲ ವಸ್ತುಗಳಿಗೂ ನೀನು ಪ್ರಿಯನಾದವನು. ಹುಂಡ, ತುಹುಂಡ ಮುಂತಾದ ಪ್ರಮಥಗಣವೆಲ್ಲವೂ ನಿನ್ನನ್ನು ಸೇವಿಸುತ್ತಿರುವುದು. ನಿನ್ನ ಬಾಹುದಂಡ ವಾದರೋ ಮಹಾಬಲಿಷ್ಠವಾಗಿ ತೋರಿಬರುತ್ತಿರುವುದು. ಇಂತಹ ನಿನ್ನ ಸ್ವರೂಪ ವನ್ನು ನಾನು ಸರ್ವದಾ ಧ್ಯಾನಮಾಡುವೆನು '' ಎಂದು ಕಾಲರುದ್ರನು ಸ್ತುತಿಸಿದನು. ॥೯॥

ಅನಂತರ ಇಂದ್ರನು ಹೀಗೆ ಸ್ತೋತ್ರಮಾಡಿದನು '' ಮಹೇಶ್ವರನೇ, ನೀನು ತ್ರಿಪುರಗಳನ್ನೂ, ಮನ್ಮಥನನ್ನೂ, ಸಕಲ ಭೋಗಭಾಗ್ಯಗಳನ್ನೂ, ದಕ್ಷಬ್ರಹ್ಮನ ಯಾಗವನ್ನೂ ಧ್ವಂಸಮಾಡಿದವನಲ್ಲವೆ. ಅಲ್ಲದೆ ಗಜಾಸುರ, ಅಂಧಕಾಸುರ, ಯಮ ಮುಂತಾದವರನ್ನು ತುಳಿದು ಅವರ ಗರ್ವವನ್ನೆಲ್ಲಾ ಮುರಿದಿರುವೆ. ಇಂತಹ ಜಗನ್ಮಂಗಳಕರನಾದ ನಿನ್ನನ್ನು ನನ್ನ ಹೃದಯಕಮಲದಲ್ಲಿ ಸರ್ವದಾ ಧ್ಯಾನ ಮಾಡುವೆನು. '' ॥೧೦॥

|| ವಾಯುರುವಾಚ ||

ಸುದಕ್ಷದಕ್ಷಶಿಕ್ಷಕಂ ಮಹೋಕ್ಷವಾಹಕಕ್ಷಗಂ
ಸುಪಕ್ಷಿವಾಹನಪ್ರಿಯಂ ಮಯಸ್ಕರಂ ಯಶಸ್ಕರಂ ।
ತಿರಸ್ಕರಂ ಮಹೇನಸಾಂ ಮಹಸ್ಕರತತಿಪ್ರಭಂ
ತಿರಸ್ಕೃತಂ ದುರಾತ್ಮನಾಂ ।
ಸುಮಸ್ಕರೀಮನೋಗತಂ ಸುತಸ್ಕರಂ ಹವಿಷ್ಕರಂ
ಭಜಾಮಿ ಶಂಕರಂ ಸದಾ ಹೃದಂತರೇ ಸುವಿಸ್ತರಂ ||೧೧||

|| ಅಗ್ನಿರುವಾಚ ||

ಶುಭಾಂಗದಂ ಶುಭಾಸ್ಪದಂ ಸುರೇಷು ದತ್ತತತ್ಪದಂ
ಮಹಾವಿಭೂತಿಧಾರಿಣಂ ಸುಭೂತಿದಂ ಸುಮೋಕ್ಷದಂ ।
ಭವಾದಿಹೀನಬೋಧದಂ ಕರೀಂದ್ರಚರ್ಮವಸ್ತ್ರಕಂ
ಅಖಂಡಸೋಮಮಂಡಲಪ್ರದಂ ಭಜೇ ಶಿವಂ ಸದಾ ||೧೨||

ಅನಂತರ ವಾಯುವು "ಶಂಭುವೇ ನೀನು ಬಲಿಷ್ಠನಾದ ದಕ್ಷಬ್ರಹ್ಮನನ್ನು ಶಿಕ್ಷಿಸಿದವನಾಗಿರುವೆ. ವೃಷಭಾರೂಢನಾಗಿ, ಪಕ್ಷಿವಾಹನನಾದ ಮಹಾವಿಷ್ಣುವಿಗೆ ಸ್ನೇಹಿತನಾಗಿರುವೆ. ಕಾಂತಿ, ಕೀರ್ತಿ, ಸುಕೃತ, ಮುಂತಾದುವುಗಳನ್ನು ಭಕ್ತರಿಗೆ ಉದಾರವಾಗಿ ಅನುಗ್ರಹಿಸಿರುವೆ. ಪಾಪನಾಶಕನೂ, ಸೂರ್ಯನಂತೆ ತೇಜಸ್ವಿಯೂ ಆಗಿ ದುಷ್ಟರಿಗೆಲ್ಲಾ ಭಯಂಕರನಾಗಿರುವೆ. ನಿತ್ಯಜ್ಞಾನಿಗಳಾದ ಯತಿಗಳೆಲ್ಲರೂ ನಿನ್ನನ್ನೇ ಹೃದಯಕಮಲದಲ್ಲಿ ಬಚ್ಚಿಟ್ಟು ಧ್ಯಾನಿಸುತ್ತಿರುವರು. ಅಂತಹವರಿಗೂ ಸಿಕ್ಕದೆ ತಸ್ಕರನಂತೆ ನೀನು ಅಡಗುವೆ. ದೇವತೆಗಳಿಗೂ, ಹವಿಸ್ಸೇ ಮೊದಲಾದ ಆಹಾರವನ್ನು ಅನುಗ್ರಹಿಸುವವನು ನೀನೇ ಅಲ್ಲವೆ? ಇಂತಹ ನಿನ್ನ ಮೂರ್ತಿಯನ್ನೇ ನಾನು ಹೃದಯಾಂತರಾಳದಲ್ಲಿ ಸರ್ವದಾ ಧ್ಯಾನಮಾಡುವೆನು" ಎಂದು ಭಕ್ತಿಯಿಂದ ಸ್ತುತಿಸಿದನು. ||೧೧||

"ಮಂಗಳಕರವಾದ ತೋಳುಬಳೆಯುಳ್ಳವನೂ, ಮಂಗಳಪ್ರದನೂ, ದೇವತೆಗಳಿಗೆ ಸರಿಯಾದ ಸ್ಥಾನಮಾನಗಳನ್ನು ಕಲ್ಪಿಸಿರುವವನೂ, ಸಕಲೈಶ್ವರ್ಯಸಂಪನ್ನನಾಗಿ ಸಕಲರಿಗೂ ಇಷ್ಟಾರ್ಥಗಳನ್ನು ಕಲ್ಪಿಸುತ್ತಾ ಮುಕ್ತಿಪ್ರದನಾಗಿರುವವನೂ, ಆದ ಮಹೇಶ್ವರನನ್ನು ಪ್ರಾರ್ಥಿಸುವೆನು. ಮತ್ತು ಸಂಸಾರದುಃಖನಾಶಕವಾದ ಸುಜ್ಞಾನ

|| ಯಮ ಉವಾಚ ||

**ಹರಂ ಸುಭಕ್ತತತ್ಪರಂ ಗರಂಧರಂ ಜ್ವಲಂಧರಂ**
**ಪ್ರಬುದ್ಧಶತ್ರುಸಂಹರಂ ಮಯುಸ್ಕರಂ ಮಹೇಶ್ವರಂ ।**
**ಹರೀಶರಂ ಮಹೀಧರೋರುಕಾರ್ಮುಕಂ**
**ಭಜಾಮಿ ಭೂರಥಂ ಹರಂ** ||೧೩||

|| ಸೂರ್ಯ ಉವಾಚ ||

**ಶರೀರಭೋಗಸಂಹರಂ ಭಜಾಮಿ ದೇವ**
**ಭಾಸ್ಕರಂ ಹರಂ ಚ ಶಂಕರಂ ಸದಾ ।**
**ಪರಾತ್ಪರಂ ನಟೇಶ್ವರಂ ಜನಾರ್ದನಾರ್ದನಂ**
**ಫಣೀಂದ್ರರಾಜಹಾರಕಂ ಸುಮಾರಮಾರಕಾರಕಂ** ||೧೪||

---

ವನ್ನು ದಯಪಾಲಿಸುವುದರಲ್ಲಿ ನಿರತನಾಗಿ, ಗಜಚರ್ಮವನ್ನು ಹೊದ್ದು, ಪೂರ್ಣ ಚಂದ್ರಮಂಡಲದ ಕಾಂತಿಯನ್ನು ಜನರಿಗೆ ಒದಗಿಸುವ ಶಂಕರನನ್ನು ಸರ್ವದಾ ಧ್ಯಾನಮಾಡುವೆನು" ಎಂದು ಅಗ್ನಿದೇವನು ಸ್ತುತಿಸಿದನು. ||೧೨||

"ಪರಶಿವನು ಭಕ್ತರಕ್ಷಣಪರನು. ವಿಷವನ್ನು ಕಂಠದಲ್ಲಿಯೂ, ಅಗ್ನಿಯನ್ನು ಶಿರಸ್ಸಿನಲ್ಲಿಯೂ ಧರಿಸಿರುವವನು. ಕೊಬ್ಬಿದ ಶತ್ರುಗಳನ್ನೆಲ್ಲಾ ಸಂಹರಿಸಿ, ಕಾಂತಿಯಿಂದ ರಂಜಿತನಾಗಿ, ತ್ರಿಪುರಾಸುರದಹನಕಾಲದಲ್ಲಿ ವಿಷ್ಣುವನ್ನು ಬಾಣವನ್ನಾಗಿಯೂ, ಮೇರುಪರ್ವತವನ್ನು ಬಿಲ್ಲನ್ನಾಗಿಯೂ, ಭೂಮಿಯನ್ನೇ ರಥವನ್ನಾಗಿಯೂ ಮಾಡಿಕೊಂಡ ಹರನನ್ನು ನಾನು ಸರ್ವದಾ ಪ್ರಾರ್ಥನೆ ಮಾಡುವೆನು" ಎಂದು ಯಮದೇವನು ಶಂಕರನನ್ನು ಬಹುವಾಗಿ ಸ್ತೋತ್ರಮಾಡಿದನು. ||೧೩||

ಸೂರ್ಯದೇವನು ಹೀಗೆ ಸ್ತುತಿಸಿದನು "ಮಹೇಶ್ವರನು ಶಾರೀರಕವಾದ ಭೋಗಗಳನ್ನು ದೂರಮಾಡಿರುವವನು. ಸಕಲ ದೇವತೆಗಳಿಗೂ ಕಾಂತಿಯನ್ನು ಒದಗಿಸುವವನು. ಸಕಲ ಜನರಿಗೂ ಸುಖವನ್ನು ಅನುಗ್ರಹಿಸುವವನು. ಪೂಜ್ಯರಿಗೆ ಪೂಜ್ಯನಾಗಿ, ನಟರಾಜನೆನಿಸಿ, ನೃಸಿಂಹಾವತಾರಮಾಡಿದ ಮಹಾವಿಷ್ಣುವನ್ನೂ ಶರಭಾವತಾರದಿಂದ ಸೋಲಿಸಿರುವವನು. ಅಲ್ಲದೆ ಶಂಕರನಿಗೆ ಆದಿಶೇಷನೇ ಹಾರವಾಗಿರುವನು. ಬಲಿಷ್ಠನಾಗಿದ್ದ ಮನ್ಮಥನನ್ನು ಸುಟ್ಟು ಬೂದಿಮಾಡಿದಂತಹ ಶೂರನು.

|| ಕುಬೇರ ಉವಾಚ ||

ಧನಾಧಿಪಂ ಗಣಾದಿವೃಂದಪಾಧಿಪಂ
ಉಮಾಧಿಪಂ ವೃಷಾಧಿಪಂ ಜಗತ್ಸುಕಾರಣಾಧಿಪಂ ।
ಭಜಾಮಿ ಚಿತ್ಸುಖಾಧಿಪಂ ನಗಾಧಿಪಂ
ಹೃದಾಧಿಪಂ ||೧೫||

|| ಚಂದ್ರ ಉವಾಚ ||

ಶರಚ್ಛಶೀಸಮುಚ್ಛವಿಂ ಮಹೋಕ್ಷಪುಚ್ಛಚಾಮರಂ
ಮಹಾಚ್ಛತರುಕಲ್ಪಕಪ್ರಸೂನಗುಚ್ಛಮಸ್ತಕಂ ।
ನಿರಿಚ್ಛಜನವಲ್ಲಭಂ ತಟಿಚ್ಛವಿಕಪರ್ದಕಂ
ಹೃದಿಸ್ಥಶಿವಮವ್ಯಯಂ ಸುಕಚ್ಛಪಸ್ತವೇಡಿತಂ ||೧೬||

ಇಂತಹ ಮಹಾದೇವನನ್ನು ನಾನು ಸಾರ್ವಕಾಲದಲ್ಲಿಯೂ ಭಜಿಸುತ್ತಿರುವೆನು" ||೧೪||

"ಸಕಲ ನಿಧಿಗೂ ಒಡೆಯನೆನಿಸಿ, ಸಕಲ ಗಣಗಳಿಗೂ ಅಧಿಪತಿಯೆನಿಸಿ, ಪಾರ್ವತೀಪತಿಯಾಗಿ, ವೃಷಭಾರೂಢನಾಗಿರುವ ಮಹೇಶ್ವರನಿಗೆ ನಮಸ್ಕಾರ. ಮಹೇಶ್ವರನು, ಸಕಲ ಜಗತ್ತಿಗೂ ಮೂಲಕಾರಣನು. ಚಿತ್ಸುಖವೆಂಬ ಶಾಶ್ವತವಾದ ಸೌಖ್ಯವು ಪರಶಿವನಿಂದಲೇ ಎಲ್ಲರಿಗೂ ಲಭಿಸುವುದು. ಸಕಲ ಚರಾಚರವಸ್ತುಗಳಿಗೂ, ನಮ್ಮೆಲ್ಲರ ಹೃದಯಗಳಿಗೂ ಒಡೆಯನೆನಿಸಿರುವ ಮಹಾದೇವನನ್ನು ನಾನು ಭಕ್ತಿಯಿಂದ ಸೇವಿಸುವೆನು" ಎಂದು ಕುಬೇರನು ಪ್ರಾರ್ಥನೆಮಾಡಿದನು. ||೧೫||

"ಶರತ್ಕಾಲದ ಚಂದ್ರನಂತೆ ಹೊಳೆಯುತ್ತಾ, ದೊಡ್ಡ ವೃಷಭದ ಬಾಲವನ್ನೇ ಚಾಮರವನ್ನಾಗಿ ಮಾಡಿಕೊಂಡು, ಕಲ್ಪವೃಕ್ಷಗಳಲ್ಲಿ ಬಿಟ್ಟ ಪುಷ್ಪಗಳನ್ನೇ ಶಿರಸ್ಸಿನಲ್ಲಿ ಧರಿಸಿರುವ ಮಹೇಶ್ವರನು ವೈರಾಗ್ಯಶಾಲಿಗಳಾದ ಸಂನ್ಯಾಸಿಗಳಿಗೆ ಪ್ರಿಯನೆನಿಸಿರುವನು. ಅಲ್ಲದೆ ಶಂಕರನ ಜಟಾಜೂಟವು ಮಿಂಚಿನಂತೆ ಸರ್ವದಾ ಹೊಳೆಯುತ್ತಿರುವುದು. ಹೀಗೆ ಸರ್ವರ ಹೃದಯದಲ್ಲಿಯೂ ಶಾಶ್ವತವಾಗಿ ಅಡಗಿರುವ ಮಹೇಶ್ವರನನ್ನು ಕಚ್ಛಪರೇ ಮೊದಲಾದ ಸಕಲ ಮಹಾಮಹಿಮರೂ ಬಹುವಾಗಿ ಸ್ತುತಿಸಿರುವರು. ಇಂತಹ ಮಹಾದೇವನನ್ನು ನಾನು ಸರ್ವದಾ ಧ್ಯಾನಮಾಡುವೆನು" ಎಂದು ಚಂದ್ರನು ಪ್ರಾರ್ಥನೆಮಾಡಿದನು. ||೧೬||

|| ವರುಣ ಉವಾಚ ||

ನಿಶಿಷ್ಟಾದ್ವಿಶಿಷ್ಟಾದಿ ಶಿಷ್ಟೇಷ್ಟನಷ್ಟಂ
ಗಿರಿಷ್ಠಂ ಮಹಿಷ್ಠಂ ತಥಾ ಜ್ಯೇಷ್ಠಮೀಶಂ
ಭಜಾಮೀಷ್ಟಮಷ್ಟಾಕೃತಿಂ ಭಕ್ತಿತುಷ್ಟಂ
ಕನಿಷ್ಠಂ ಚ ಕಷ್ಟಾದಿಕಷ್ಟೈಕನಾಶಂ ||೧೭||

|| ಅಶ್ವಿನಾವೂಚತುಃ ||

ಕಟಿತಟಿಕರಟಿತ್ವಚಂ ಜಟಾಕುಟೀರಾತ್ ।
ಸುರಪಾಟೀರತಟೀತಟೋರುಗಂಗಾ
ತಟಬದ್ಧೇಂದುಕಲಾಸಟಿಂ ।
ವಟೋರುಧಾರಾನಿಕಟಾಟಂಕಟಿ
ಕೋಟಿಟಂಕಹಸ್ತಂ ||೧೮||

"ಚಕ್ಷುರಿಂದ್ರಿಯ ಪ್ರತ್ಯಕ್ಷವಾಗುವ ಸಕಲ ಜಗತ್ತಿಗಿಂತಲೂ ಭಿನ್ನನಾಗಿ ತೋರಿ, ಕೊನೆಯಲ್ಲಿ ಉಳಿದ ಜಗತ್ತೆಲ್ಲವನ್ನೂ ನಾಶಗೊಳಿಸಿ ಕೇವಲ ಏಕರೂಪಿಯಾಗಿ ನಿಲ್ಲುವವನು ಶಂಕರನೊಬ್ಬನೇ. ಆತನು ಸಕಲ ಪರ್ವತಗಳಲ್ಲಿಯೂ, ಅಖಂಡಭೂಮಂಡಲದಲ್ಲಿಯೂ ಸರ್ವಾಧಿಕನಾಗಿ ನಿಂತಿರುವನು. ಭಕ್ತಿಪ್ರಿಯನೂ, ಅಷ್ಟಮೂರ್ತಿಯೂ, ಭಕ್ತಜನರ ಸಕಲ ಕಷ್ಟಗಳನ್ನೂ ನಾಶಮಾಡುವವನೂ, ಸೂಕ್ಷ್ಮರೂಪಿಯೂ ಆದ ಮಹೇಶ್ವರನನ್ನು ನಾನು ಸರ್ವದಾ ಧ್ಯಾನಿಸುವೆನೆಂದು" ವರುಣನು ಬಹುವಾಗಿ ಪ್ರಾರ್ಥನೆಮಾಡಿದನು. ||೧೭||

"ಪರಮೇಶ್ವರನು ಗಜಚರ್ಮಾಂಬರಧಾರಿಯು. ಆತನ ಜಟಾಕುಹರದಿಂದ ಹೊರಟ ದೇವಗಂಗೆಯು ದೇವಲೋಕದ ಮಾರ್ಗವಾಗಿ ಹರಿಯುವುದು. ಇಂತಹ ದೇವಗಂಗೆಯನ್ನೂ ಚಂದ್ರಕಲೆಯನ್ನೂ ತನ್ನ ಜಟೆಯಲ್ಲಿ ಧರಿಸಿಕೊಂಡಿರುವ ಶಂಕರನು ಆಲದಮರದ ಕೆಳಗೆ ಜ್ಞಾನಮುದ್ರೆಯಿಂದ ಕುಳಿತು ಸಕಲ ಮುನಿಗಳಿಗೂ ಜ್ಞಾನೋಪದೇಶಮಾಡುವ ದಕ್ಷಿಣಾಮೂರ್ತಿಸ್ವರೂಪನಾಗಿರುವನು. ಇಷ್ಟು ಮಹಿಮಾಶಾಲಿಯಾದ ಪರಮೇಶ್ವರನನ್ನು ನಾನು ಸರ್ವದಾ ಧ್ಯಾನಮಾಡುವೆನು" ಎಂದು ಅಶ್ವಿನೀದೇವತೆಗಳು ಸ್ತೋತ್ರಮಾಡಿದರು. ||೧೮||

|| ವಸವ ಊಚುಃ ||

ಭುಜಂಗರಾಜಹಾರಕಂ ಮಹಾವಿಷಾಗ್ನಿಧಾರಕಂ
ಭವಾಂಬುಧೇಸ್ಸುತಾರಕಂ ಭಯಾನಕಂ ಮಹೇನಸಾಂ ।
ಭಜಾಮಹೇಂತಕಾಂತಕಂ ಮಹೇಶ್ವರತ್ವದಾಯಕಂ
ಸುರಾಸುರೇಂದ್ರನಾಯಕಂ ಜಟಾಂಗನಾರ್ಧಕಾಯಕಂ ॥೧೯॥

|| ಮರುತ ಊಚುಃ ||

ಮಹಾಶಿಖಂ ಭುಜಾಂಸುಖಾಂತರಂಗಮದ್ರಿಜಾಸಖಂ
ಸುಸಾಮಜಾತಸನ್ಮುಖಂ ತ್ರಿದದ್ವಯೋನ್ಮುಖೋನ್ಮುಖಂ ।
ಬಹಿರ್ಮುಖೈಸ್ಸದುರ್ಮುಖಂ ಹಸನ್ಮುಖಂ ಸಮಸ್ತ
ದುಃಖದುರ್ಮುಖಂ ಭಜೇ ಶಿವಂ ಹೃದಾ ಸದಾ ॥೨೦॥

ಶಿಖೀಸಖಾಸಖಂ ಜಲಾಸಖಂ ನಟತ್ವಶೇಷಸನ್ಮುಖಂ ಹೃದಿ ॥೨೧॥

ಅಷ್ಟವಸುಗಳು ಪ್ರಾರ್ಥಿಸಿದ ಕ್ರಮ “ ಪರಶಿವನೇ, ನೀನು ಆದಿಶೇಷನನ್ನೇ ಹಾರವನ್ನಾಗಿ ಮಾಡಿಕೊಂಡಿರುವೆ. ಮಹಾವಿಷವನ್ನು ಕಂಠದಲ್ಲಿ ಧರಿಸಿದವನಾಗಿರುವೆ. ಸಂಸಾರ ಸಮುದ್ರದಿಂದ ಭಕ್ತರನ್ನು ಉದ್ಧರಿಸುವೆ. ಪಾಪಕರ್ಮಿಗಳಿಗೆ ಭಯಂಕರನಾಗಿರುವೆ. ಯಮನಿಗೂ ಯಮನಂತಿದ್ದು, ಭಕ್ತವೃಂದಗಳಿಗೆ ನಿನ್ನ ಸ್ವರೂಪವನ್ನೇ ಅನುಗ್ರಹಿಸುವೆ. ಸುರಾಸುರೇಂದ್ರರಿಗೂ ನಾಯಕನೆನಿಸಿ ಅರ್ಧ ನಾರೀಶ್ವರನಾಗಿರುವೆ. ಮಹಾದೇವನೇ, ಇಂತಹ ಮಹಿಮಾವಿಶಿಷ್ಟನಾದ ನಿನಗೆ ವಂದನೆ.” ||೧೯||

“ಮಹಾದೇವನೇ, ನಿನ್ನ ಜಟಾಜೂಟವು ಲೋಕವನ್ನೇ ಆವರಿಸುವಂತಿರುವುದು. ನಿನ್ನ ತೋಳು ತೆಕ್ಕೆಯಲ್ಲಿ ಪಾರ್ವತಿಯು ನೆಲಸಿ, ನಿನ್ನನ್ನು ಆಹ್ಲಾದಗೊಳಿಸುತ್ತಿರುವಳು. ಸೌಮ್ಯಗುಣವುಳ್ಳ ನಿನ್ನ ಮುಖವೂ ಅವಸ್ಥಾತ್ರಯನಿರ್ಮುಕ್ತಿಯನ್ನು ಕೊಡುವ ನಿನ್ನ ಸ್ವಭಾವವೂ ಭಕ್ತರಿಗೆ ಸೇವ್ಯವಾಗಿರುವುದು. ನಿನ್ನ ಮುಖವಾದರೋ ತಪಸ್ವಿಗಳಿಗೆ ಸೌಮ್ಯಸ್ವಭಾವದಿಂದಿರುವುದು. ಅಗ್ನಿ, ಚಂದ್ರ, ಸೂರ್ಯ ಮುಂತಾದುವುಗಳನ್ನೇ ಕಣ್ಣುಗಳನ್ನಾಗಿ ಉಳ್ಳ ಮಹೇಶ್ವರನು ಸರ್ವದಾ ನನ್ನ ಹೃದಯದಲ್ಲಿ ನಾಟ್ಯವಾಡುತ್ತಿರಲಿ ” ಎಂದು ಮರುತ್ತುಗಳು ಪ್ರಾರ್ಥಿಸಿದರು. ||೨೧||

|| ರುದ್ರಾ ಊಚುಃ ||

ದೃಗಂಚಲಸ್ಫುಲಿಂಗಲೇಶಭಸ್ಮಿ
ತಾಂಗಾನಂಗಭಸ್ಮಸಂಗತಂ ।
ಪತಂಗದೃಕ್ಸಮಾಂತರಂಗ
ಮಿಂದುಧಾಮಗಂ ವಿಹಂಗವಾಹನಾರ್ಚಿತಂ ||೨೨||

ಭಜೇ ಶಿವಂ ದೃಗಂಗತಂ ಶಿವಾಂಗಕಂ
ಪಾಥೋಜಗಾರ್ಚಿತಾಂಗಮೌಳಿಸಂಗತಂ ।
ಸುದಕ್ಷದಕ್ಷಶಿಕ್ಷಕಂ ಮಹೋಕ್ಷವಾಹಕಕ್ಷಗಂ
ಸುಪಕ್ಷಿವಾಹನಪ್ರಿಯಂ ಭಜಾಮ್ಯಧೋಕ್ಷಜಾರ್ಚಿತಂ ||೨೩||

ಹೃದಕ್ಷಹೀನಮಕ್ಷತಂ ತ್ವಪಕ್ಷಯಾದಿವರ್ಜಿತಂ
ಭಜಾಮಿ ಭಕ್ತಜಾಲಕೇ ಹ್ಯುಪೇಕ್ಷಯಾ ಸುವರ್ಜಿತಂ ।
ಕ್ಷಪೇಶಮೌಲಿಮೀಕ್ಷಣೀಕೃತಾಬ್ಜಮಿತ್ರಕಾನನಂ
ಅಲಕ್ಷಮಕ್ಷತಾಕ್ಷದೃಶ್ಯವಿಗ್ರಹಂ ವಿರೂಪಕಾಕ್ಷ
ಮೀಶ್ವರಂ ಭಜೇ ಸದಾ ಹೃದಂತರೇ ||೨೪||

---

" ಪರಮೇಶ್ವರನು ತನ್ನ ಅಗ್ನಿನೇತ್ರದ ಕಟಾಕ್ಷದಿಂದಲೇ ಮನ್ಮಥನ ದೇಹವನ್ನು ಸುಟ್ಟು ಭಸ್ಮಮಾಡಿದನು. ಆ ಭಸ್ಮದಿಂದಲೇ ಶಂಕರನ ದೇಹವು ಲಿಪ್ತವಾಗಿರುವುದು. ಸೂರ್ಯನನ್ನೇ ಒಂದು ದೃಷ್ಟಿಯನ್ನಾಗಿ ಮಾಡಿಕೊಂಡು ಚಂದ್ರನನ್ನೇ ತನ್ನ ಮೌಳಿಯಲ್ಲಿ ಧರಿಸಿ, ಮಹಾವಿಷ್ಣುವಿನಿಂದಲೂ ಅರ್ಚಿತನಾಗಿರುವನು. ||೨೨||

ಯೋಗಿಗಳಿಗೆ ಪ್ರತ್ಯಕ್ಷನಾಗುವವನೂ, ಮಂಗಳಕರವಾದ ಅವಯವವುಳ್ಳವನೂ, ಕಮಲಜನಾದ ಬ್ರಹ್ಮನಿಂದ ಪೂಜಿತವಾದ ಶಿರೋಭಾಗವುಳ್ಳವನೂ, ದಕ್ಷಬ್ರಹ್ಮನನ್ನು ಶಿಕ್ಷಿಸಿದವನೂ, ವೃಷಭಾರೂಢನೂ, ವಿಷ್ಣುಪ್ರಿಯನೂ, ವಿಷ್ಣುಪೂಜಿತನೂ ಆದ ಮಹೇಶ್ವರನನ್ನು ಸರ್ವದಾ ಪೂಜಿಸುವೆನು. ||೨೩||

ಪರಮೇಶ್ವರನಿಗೆ ಇಂದ್ರಿಯಗಳ ಸಂಬಂಧವಿಲ್ಲ. ಯಾವ ವಿಧವಾದ ಹಿಂಸೆಗಳಿಗಾಗಲಿ, ನಾಶಕ್ಕಾಗಲಿ ಒಳಗಾಗುವವನಲ್ಲ. ಭಕ್ತವೃಂದವನ್ನು ಯಾವಾಗಲೂ ತಿರಸ್ಕರಿಸದೆ ಕಾಪಾಡುವವನು. ಚಂದ್ರನನ್ನು ಶಿರಸ್ಸಿನಲ್ಲಿಟ್ಟು, ಸೂರ್ಯನನ್ನೇ

|| ಆದಿತ್ಯಾ ಊಚುಃ ||

ಗಣಾಧಿನಾಥನಾಥಿತಾಖಿಲ
ಪ್ರಪಂಚಗಾಧಿಜಾತಸನ್ನುತಂ ।
ದಿಗಾಧಿಗಾಯಕಾತಿಥೀಕೃತಾಬ್ಜದಿವ್ಯಪಾದುಕಂ
ಭಜಾಮಿ ರಾತ್ರಿನಾಥಮೌಲಿಕೆಸ್ಫುರ
ತ್ಸುರಂಜನೀತರಂಗಿಣೀದಿವಾಸನಾಥಗಂ ಸದಾ ॥೨೫॥

|| ಗಣೇಶ ಉವಾಚ ||

ಅಶೇಷಶೋಷಿತಾಖಿಲಪ್ರಪಂಚಜಾತಶೇಷಕಂ
ಮುನೀಷ್ಟಜಾತಪೋಷಕಂ ಮಹಾಹಿಶೇಷಭೂಷಕಂ ।
ಸಮುದ್ರನೀರಶೋಷಕಂ ಪ್ರಕಾಮಮಿಷ್ಟಲೋಚನಂ ।
ಮಹಾಂಬುದಪ್ರಕರ್ಷಣಂ ತಟಿತ್ಸಮಾನಘೋಷಣಂ ॥೨೬॥

ನೇತ್ರವನ್ನಾಗಿ ಮಾಡಿಕೊಂಡಿರುವವನು. ಜಿತೇಂದ್ರಿಯಶಾಲಿಗಳಿಗೆ ಗೋಚರಿಸುವವನು. ಮೂರನೆಯ ಕಣ್ಣಿನಿಂದ ವಿರೂಪನಾಗಿರುವವನು. ಇಂತಹ ಮಹೇಶ್ವರನನ್ನು ನಾನು ಸರ್ವದಾ ಹೃದಯಾಂತರಾಳದಲ್ಲಿ ಧ್ಯಾನಮಾಡುತ್ತಿರುವೆನು" ಎಂದು ರುದ್ರದೇವತೆಗಳು ಬಹಳವಾಗಿ ಸ್ತುತಿಸಿದರು. ||೨೪||

"ಅಖಂಡಪ್ರಪಂಚದ ರಕ್ಷಣೆಗಾಗಿ ಶಂಕರನು ಅನೇಕ ಗಣನಾಯಕರನ್ನು ಲೋಕಾಧಿಪತಿಗಳನ್ನಾಗಿ ನಿಯಮಿಸಿ, ಅವರಿಂದ ತಾನು ಸೇವಿಸಲ್ಪಡುತ್ತಿರುವನು. ಮತ್ತು ಅಷ್ಟದಿಕ್ಪತಿಗಳಿಗೆ ತನ್ನ ಪಾದುಕೆಗಳನ್ನು ಅತಿಥಿಗಳನ್ನಾಗಿ ಮಾಡಿರುವನು. ಅಂದರೆ ದಿಕ್ಪಾಲಕರಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನಾಗಿರುವನು. ಶಿರಸ್ಸಿನಲ್ಲಿ ರಾತ್ರೀಶ್ವರನಾದ ಚಂದ್ರನನ್ನೂ, ತರಂಗರಂಜಿತವಾದ ದೇವಗಂಗೆಯನ್ನೂ ಧರಿಸಿ ಸರ್ವದಾ ಸಂತೋಷಭರಿತನಾಗಿರುವನು. ಇಂತಹ ಮಹಾದೇವನನ್ನು ನಾವು ಸರ್ವದಾ ಧ್ಯಾನಮಾಡುವೆವು" ಎಂದು ದ್ವಾದಶಾದಿತ್ಯರೂ ಪ್ರಾರ್ಥಿಸ ತೊಡಗಿದರು. ||೨೫||

"ಪರಶಿವನು ಪ್ರಳಯಕಾಲದಲ್ಲಿ ಸಮಸ್ತ ಜಗತ್ತನ್ನೂ ನಾಶಮಾಡಿ ತಾನೊಬ್ಬನೇ ಪರಬ್ರಹ್ಮರೂಪದಿಂದ ಉಳಿಯುವನು. ಮತ್ತು ಮೃಕಂಡುಮುನಿಯ ಪ್ರಿಯ ಪುತ್ರನಾದ ಮಾರ್ಕಂಡೇಯನನ್ನು ಸಂರಕ್ಷಿಸಿದನು. ಆದಿಶೇಷನನ್ನೇ ಭೂಷಣವ

ಭಜಾಮಿ ವೇದಭಾಷಿಣಂ ವಿಧೇಸ್ತು ಸೃಷ್ಟಿಕಾರಣಂ ॥೨೭॥

॥ ಸ್ಕಂದ ಉವಾಚ ॥

ಘನಸ್ತನಯುಗರ್ಕ್ಷಕಂ ಘನಸ್ತನಿತನಿಮ್ನ
ಮೇರುದಾಘಘೃಣಾಯುತಸುಚಕ್ಷುಷಂ ।
ನಿರಾಕೃತಾಘಸಂಘಕಂ ಘೃಣಾಯುತಂ ಸ್ವಭಕ್ತಕೇ
ಧೃತಾಕ್ಷಭೂತಿಸುಪ್ರಿಯಂ ಘನಾಭಕಂಠಮಂಡಲಂ ॥೨೮॥

ಸ್ವನನ್ನಖಾಗ್ರನಿಃಸೃತವಿಧಿಜಮುಂಡಮಂಡಲಂ ।
ಭಜೇಂತರಂಗಚಿದ್ಘನಂ ಸದಾಶಿವಂ ಸದಾ ಹೃದಿ ॥೨೯॥

॥ ನಂದೀಶ್ವರ ಉವಾಚ ॥

**ಚರಾಚರಂ ಸುಶಂಕರಂ ಕೃಪೀಟಯೋನಿಧಾರಕಂ ।**
**ನಿಶಾಚರಾಂತಕಂ ಚತುರ್ಮುಖಾನನಾರವಿಂದವೇದಜಾಲಸಂಸ್ತುತಂ ಶಿವಂ**

---

ನ್ನಾಗಿ ಮಾಡಿಕೊಂಡಿರುವನು. ನಿಖಿಲ ಸಮುದ್ರಗಳನ್ನೆಲ್ಲಾ ಬತ್ತಿಸುವಂತಹ ಅಗ್ನಿನೇತ್ರವುಳ್ಳವನು. ಮೇಘದಂತೆ ವ್ಯಾಪಿಸಿ, ಸಿಡಿಲಿನಂತೆ ಧ್ವನಿಯುಳ್ಳವನು. ವೇದಸ್ತುತನಾಗಿ, ಬ್ರಹ್ಮನಿಗೂ ಪ್ರಪಂಚಸೃಷ್ಟಿಗೂ ಮೂಲಕಾರಣನಾಗಿರುವ ಮಹಾದೇವನನ್ನು ನಾನು ಭಕ್ತಿಯಿಂದ ಧ್ಯಾನಿಸುವೆನು" ಎಂದು ಗಣಪತಿಯು ಸ್ತುತಿಸಿದನು. ॥೨೬-೨೭॥

"ಅರ್ಧನಾರೀಶ್ವರನೆನಿಸಿ, ಸ್ತನದ್ವಯಗಳಿಂದ ಪರಿಶೋಭಿತನಾಗಿ ಮಹೇಶ್ವರನು ಮೇಘಧ್ವನಿಯಿಂದ ಹೆದರಿದ ಮೇರುಪರ್ವತವನ್ನು ದಯೆಯಿಂದ ರಕ್ಷಿಸುವಂತಹ ಕಟಾಕ್ಷವುಳ್ಳವನಾಗಿರುವನು. ಸ್ವಭಕ್ತವೃಂದದಲ್ಲಿ ದಯಾಯುತನಾಗಿ, ಅಕ್ಷಮಾಲೆ, ವಿಭೂತಿ ಇವುಗಳಲ್ಲಿ ಪ್ರೀತಿಯುಳ್ಳವನಾಗಿ, ನೀಲಕಂಠನಾಗಿರುವನು. ಅಲ್ಲದೆ ತನ್ನ ಕೈಯುಗುರಿನಿಂದಲೇ ಬ್ರಹ್ಮನ ಒಂದು ತಲೆಯನ್ನು ಚಿಗುಟಿರುವನು. ಇಂತಹ ಮಹಾವೀರನೂ ಸಮಸ್ತ ಮಂಗಳಪ್ರದನೂ, ಚಿದ್ಘನಾನಂದಸ್ವರೂಪನೂ ಆದ ಶಂಕರನನ್ನು ನಾನು ಸರ್ವದಾ ಹೃದಯದಲ್ಲಿ ಧರಿಸಿ ಧ್ಯಾನಿಸುವೆನು" ಎಂದು ಕುಮಾರಸ್ವಾಮಿಯು ಸ್ತೋತ್ರಮಾಡಿದನು. ॥೨೮-೨೯॥

"ಚರಾಚರಾತ್ಮಕವಾದ ಈ ಜಗತ್ತಿಗೆ ಸುಖವನ್ನು ಕೊಡುವವನು ಶಂಕರನು.

ವಿಚಾರಮಾತ್ರಗೋಚರಂ ಸುಪಂಚವಕ್ತ್ರಗೋಚರಂ ।
ಸುನಿಶ್ಚಲಂ ಹೃದಂತರೇ ಸುಚಾಮರೌಘವೀಜಿತಂ
ಮಹೋಕ್ಷಗಂ ಭಜೇ ಶಿವಂ ॥೩೦॥

॥ ಚಂಡೀಶ್ವರ ಉವಾಚ ॥

ಹರಿಜ್ಜಟಾತಟೇನಿಕಂಕಟೇಭಚರ್ಮಧಾರಕಂ ।
ಕವಾಟಹೃತ್ತಟೇನಿಕಾಟಹಂಸಕಂ ವಟೋರು
ಮೂಲಗಂ ಶಿವಂ ಮಹೋತ್ಕಟಂ ॥೩೧॥

॥ ಭೃಂಗೀಶ್ವರ ಉವಾಚ ॥

ಮೃಡಂ ದೃಢಂ ಪರೀಬೃಢಂ ಸುಬಾಢಗಾಢಹೃದ್ಗತಂ
ಸುಮೂಢವ್ಯೂಢಸನ್ಮುಖಂ ಕ್ರಿಯಾಸಮೂಹತರ್ಪಿತಂ ।

---

ಅಗ್ನಿಯನ್ನು ನೇತ್ರವನ್ನಾಗಿ ಮಾಡಿಕೊಂಡಿರುವನು. ರಾಕ್ಷಸನಾಶಕನು. ಬ್ರಹ್ಮನ ನಾಲ್ಕು ಮುಖಕಮಲಗಳಿಂದಲೂ ಹೊರಡುವ ವೇದಚತುಷ್ಟಯಗಳಿಂದ ಶಂಕರನು ಸಂಸ್ತುತನಾಗಿರುವನು. ವಿಚಾರಮಾಡಿ ಜ್ಞಾನಾರ್ಜನೆ ಮಾಡಿದವರಿಗೆ ಮಾತ್ರ ಶಂಕರನು ಗೋಚರಿಸುವನು. ಐದು ಮುಖಗಳಿಂದ ಕೂಡಿ ನಿಶ್ಚಲಸ್ವರೂಪದಲ್ಲಿರುವ ಮತ್ತು ಶ್ರೇಷ್ಠವಾದ ಚಾಮರಗಳಿಂದ ಸೇವಿತನಾಗಿ ವೃಷಭಾರೂಢನಾಗಿರುವ ಮಹಾದೇವನನ್ನು ನಾನು ಯಾವಾಗಲೂ ಸೇವಿಸುವೆನು'' ಎಂದು ನಂದೀಶ್ವರನು ಹೊಗಳಿದನು. ॥೩೦॥

"ನೀಲವರ್ಣದ ಜಟೆಯಿಂದಲೂ, ಗಂಗಾನದಿಯಿಂದಲೂ, ಗಜಚರ್ಮ ದಿಂದಲೂ ಕೂಡಿ ಮುಚ್ಚಿದ ಹೃದಯಕೋಶದಲ್ಲಿ ಹಂಸರೂಪದಿಂದ ಸಂಚರಿಸುವ ಮಹಾದೇವನು, ದೊಡ್ಡ ಆಲದಮರದ ಕೆಳಗೆ ದಕ್ಷಿಣಾಮೂರ್ತಿ ರೂಪದಿಂದ ಕುಳಿತು ಸರ್ವರಿಗೂ ಜ್ಞಾನೋಪದೇಶಮಾಡುವನು. ಇಂತಹ ಮಹಾ ಬಲಿಷ್ಠನಾದ ಮಹೇಶ್ವರನನ್ನು ನಾನು ಧ್ಯಾನಮಾಡುವೆನು'' ಎಂದು ಚಂಡೀಶ್ವರನು ಧ್ಯಾನಿಸಿದನು. ॥೩೧॥

"ಮೃಡನೆನಿಸಿ, ನಾಶರಹಿತನಾಗಿ, ಸರ್ವರ ಹೃದಯಾಂತರ್ವರ್ತಿಯಾಗಿರುವವನು ಮಹೇಶ್ವರನು. ಮತ್ತು ಕೇವಲ ಪರಮೇಶ್ವರಜ್ಞಾನದಲ್ಲಿಯೇ ಮುಳುಗಿ ಮೂಢರಂತಿರುವ ಜನರಿಗೆ ಪ್ರಸನ್ನನಾಗುವವನು. ಮತ್ತು ಭಕ್ತರ ಸೇವೆಯಿಂದ

ಅನೂಢಕನ್ಯಕಾದ್ರಿಜಾಸಖಂ ಸಮೂಢಗೂಢಹೃದ್ಗತಂ
ಮಹಾಕರಾಂಬುಜೋತ್ಥಿತಪ್ರಕಾಶಢಕ್ಕವಾದ್ಯಕಂ ॥೩೨॥

ಗೀರ್ವಾಣೈರಮೃತಾರ್ಥಿಭಿಃ ಕಿಲ ಶಿವೇ ಕ್ಷೀರಾಬ್ಧಿಧಾರಾರ್ಣವೇ ।
ಕೃತ್ವಾ ವಾಸುಕಿರಜ್ಜುಮಜ್ಜನವಿಧೌ ಮಂಥಾನಮಂದ್ರಾಚಲಂ ।
ತಸ್ಮಾದಪ್ಯುದಭೂನ್ಮಹಾಮಣಿಗಣಂ ಧೇನೂಗಣಂ ಪಂಕಜಾ ।
ಜ್ಞಾತಾ ಚೋಷಧಿನಾಯಕಸ್ಸುರತರುಸ್ಸಾರಂಗತೀರಂಗಕೌ ॥೩೩॥

ಧೂಮೋತ್ಕೀಲಿತಕಾಲಕೂಟಶಬಲಜ್ವಾಲಾತಿಗಂ ತೇ ತತಾಃ
ಕಾಂದೀಶೀಕೃತದೇವದೈತ್ಯನಿವಹಂ ದೃಷ್ಟ್ವಾಹಮೇಕೋ ಘೃಣೀ ।
ತತ್ಪ್ರಾಶ್ಯಾಖಿಲದೇವಸಂಘವಿನುತೋ ನೀಲಾಚ್ಛಕಂಠೋಽಭವಂ ॥೩೪॥

---

ತೃಪ್ತನಾಗುವವನು. ಕನ್ಯಕಾವಸ್ಥೆಯಲ್ಲಿಯೇ ಪಾರ್ವತಿಯನ್ನು ವರಿಸಿದವನು. ಗೂಢವಾಗಿ ಯಾರಿಗೂ ಅರಿಯದಂತೆ ಹೃದಯದಲ್ಲಿ ಅಡಗಿರುವವನು. ದಿವ್ಯವಾದ ತನ್ನ ಕೈಯ್ಯಲ್ಲಿ ಢಕ್ಕವೆಂಬ ವಾದ್ಯವಿಶೇಷವನ್ನು ಧರಿಸಿರುವವನು. ಇಂತಹ ಸಕಲ ಮಂಗಳಪ್ರದನಾದ ಮಹಾಮಹಿಮನನ್ನು ನಾನು ಪ್ರಾರ್ಥಿಸುವೆನು" ಎಂದು ಭೃಂಗೀಶ್ವರನು ಸ್ತುತಿಸಿದನು ಎಂದು ಶಂಕರನು ಪಾರ್ವತಿಗೆ ಹೇಳುತ್ತಾ ತಾನು ನೀಲಕಂಠನಾದುದನ್ನು ವಿವರಿಸಲಾರಂಭಿಸಿದನು. ॥೩೨॥

ದೇವಿಯೇ, ಹಿಂದೆ ದೇವತೆಗಳು ಅಮೃತಾರ್ಥಿಗಳಾಗಿ ಕ್ಷೀರಸಮುದ್ರದಲ್ಲಿ ಮಂದರಪರ್ವತವನ್ನಿಟ್ಟು ವಾಸುಕಿಯನ್ನು ಕಟ್ಟಿ ಮಥನಮಾಡಿದರು. ಆಗ ಅಲ್ಲಿಂದ ದಿವ್ಯರತ್ನಗಳೂ, ಕಾಮಧೇನು, ಮಹಾಲಕ್ಷ್ಮೀ, ಚಂದ್ರ, ಕಲ್ಪವೃಕ್ಷ ಇವುಗಳು ಹುಟ್ಟಿದುವು. ॥೩೩॥

ಕೊನೆಯದಾಗಿ, ಧೂಮಕಾರದಿಂದ ಸರ್ವತ್ರ ವ್ಯಾಪಿಸುವ ಹಾಲಾಹಲವಿಷವು ಉದ್ಭವಿಸಿತು. ಅದರ ಉರಿಯು ಎಲ್ಲವನ್ನೂ ಸುಡಲಾರಂಭಿಸಿತು. ಆ ಬೇಗೆಯನ್ನು ಸಹಿಸಲಾರದೆ ದೇವತೆಗಳೂ, ದೈತ್ಯರೂ ದಿಕ್ಕಾಪಾಲಾಗಿ ಓಡಲಾರಂಭಿಸಿದರು. ಅವರನ್ನು ನೋಡಿ ನಾನು ದಯಾಶಾಲಿಯಾಗಿ, ಆ ಮಹಾವಿಷವನ್ನು ಪಾನಮಾಡಿ ನೀಲಕಂಠನೆನಿಸಿಕೊಂಡೆನು. ಆಗ ಸಕಲ ದೇವತೆಗಳೂ ನನ್ನನ್ನು ಬಹುವಾಗಿ ಸ್ತುತಿಸಲಾರಂಭಿಸಿದರು. ॥೩೪॥

ಅಕಪಟಪಟುವಾಕ್ಯವೌಲಿಗುಂಫೈಃ
ತಟಿನೀಜಾಲಕವೌಲಿರಾಗಹಾಖಿಲಾಗ್ರ್ಯಃ ।
ಕರಟಿತ್ವಕ್ಪಟಭೂತಭೂತಟೋಪೋ
ಕಪಟಿತದೂರಹೃದಬ್ಜನೃತ್ತಟೋಪಃ ॥೩೫॥

ಸಂಧ್ಯಾತಾಂಡವಡಂಬರವ್ಯಸನಿನೋ ಭರ್ಗಸ್ಯ ಚಂಡಭ್ರಮೋ
ಪ್ರೋನ್ನೃತ್ಯದ್ಭುಜಚಂಡಮಂಡಲಭುವೋ ಜಂಝೂನಿಲಾಃ ಕೇವಲಂ ।
ಯೇಷಾಮುಚ್ಚಲತಾಂ ಜವೇನ ಝುಟಿತಿ ವ್ಯೂಹೇಷು ಭೂಮೀಭೃತಾ
ಮುಡ್ಡೀನೇಷು ಬಿಡೌಜಸಾ ಪುನರಸೌ ದಂಭೋಲಿರಾಲೋಕಿತಃ ॥೩೬॥

॥ ಸರ್ವೇದೇವಾ ಊಚುಃ ॥

ತ್ವಲ್ಲಿಂಗಾರ್ಚನತೋ ಮಹೇಶ ಶರದಾಂ ಜೀವೇಮ ಶಂಭೋ ಶತಂ
ತ್ವನ್ನಾಮಾನಿ ಸದಾ ಬ್ರುವಾಮ ಚ ವಿಭೋ ಭಕ್ತಾನ್ಹಿ ನಂದಾಮ ತೇ ।
ಲಿಂಗಂ ಬಿಲ್ವದಲೋತ್ತಮಾಂಗಮಸಕೃತ್ಪಶ್ಯೇಮ ಪುಣ್ಯಾಃ ಕಥಾ
ಶ್ಶೃಣ್ವಾಮಃ ಪ್ರತಿವಾಸರಂ ಚ ವಿಗತೈನಸ್ಕಾ ಭವಾಮೋ ವಯಂ ॥೨೭॥

---

ಆಗ ಸಮುದ್ರರಾಜನು ಸತ್ಯವಾದ ಮತ್ತು ಚಮತ್ಕಾರವಾದ ಸ್ತುತಿವಚನಗಳಿಂದ ನನ್ನನ್ನು ಹೊಗಳುತ್ತಾ, ತನ್ನ ಸಮಸ್ತ ಅಪರಾಧವನ್ನೂ ಕ್ಷಮಿಸಬೇಕೆಂದು ಪ್ರಾರ್ಥಿಸಿ, ತಾನು ಭೂಮಿಯನ್ನೇ ಗಜಚರ್ಮವನ್ನಾಗಿ ಮಾಡಿಕೊಂಡು, ನನ್ನ ಸಾರೂಪ್ಯವನ್ನು ಪಡೆಯಲು ತನ್ನ ಹೃದಯಕಮಲದಲ್ಲಿ ಯಾವಾಗಲೂ ನನ್ನನ್ನೇ ಧ್ಯಾನಮಾಡಲಾರಂಭಿಸಿದನು. ॥೩೫॥

ಅನಂತರ ಸಂಧ್ಯಾಕಾಲದ ನರ್ತನದಲ್ಲಿ ತೊಡಗಿದ ನನ್ನ ಭ್ರಮಣವೇಗದಿಂದಲೂ, ನಾಟ್ಯಶಾಸ್ತ್ರವನ್ನನುಸರಿಸಿ ಚಲಿಸುತ್ತಿರುವ ಭುಜದಂಡಗಳ ಚಲನೆಯಿಂದಲೂ, ಎದ್ದಂತಹ ವಾಯುವು ಬಿರುಗಾಳಿಯಂತೆ ಸಕಲಪರ್ವತಗಳನ್ನೂ ಮೇಲಕ್ಕೆ ಹಾರಿಸಲಾರಂಭಿಸಿತು. ಆಗ ಇಂದ್ರನು ಮತ್ತೆ ಪರ್ವತಗಳಿಗೇನಾದರೂ ರೆಕ್ಕೆ ಹುಟ್ಟಿತೋ ಎಂಬ ಭ್ರಾಂತಿಯಿಂದ ತನ್ನ ವಜ್ರಾಯುಧದ ಕಡೆಗೆ ದೃಷ್ಟಿಯಿಟ್ಟು ನೋಡಲಾರಂಭಿಸಿದನು. ॥೩೬॥

ಆ ಕಾಲದಲ್ಲಿ ಸಕಲ ದೇವತೆಗಳೂ ಈ ರೀತಿಯಾಗಿ ನನ್ನನ್ನು ಕುರಿತು ಪ್ರಾರ್ಥಿಸಿದರು. "ಓ ಮಹೇಶ್ವರನೇ, ನಿನ್ನ ಲಿಂಗಾರ್ಚನೆಯಿಂದ ನಾವು ನೂರಾರು

|| ಶೇಷ ಉವಾಚ ||

ವಸುಧಾಧರಧಾರಕಂ ಮಹೇಶಂ
ವಸುಧಾರಾಧಿಪಮಿತ್ರಮಿತ್ರಸಂಸ್ಥಂ ।
ಹಿಮಕರಹಿಮಭೇಷಜಾಕ್ಷಿಯುಗ್ಮಂ
ಹಿಮಗಿರಿಸುತಯಾ ನತೋಽಸ್ಮಿ ದೇವಮಾದ್ಯಂ ॥೩೮॥

|| ಈಶ್ವರ ಉವಾಚ ||

ಪೃಷ್ಠೇಽಷ್ಟಲಗ್ನಕಮಠಾಕೃತಿಲೋಕನಾಟ್ಯಂ
ಭೂದಾರದಾರಿತರಸಾತಲತೋಽತಿದೂರಂ ।
ಬ್ರಹ್ಮಾಂಡಖರ್ಪರಮತೀತ್ಯ ಗತೋಽರ್ಧ್ವಮೌಲಿಂ
ಲೋಕೇಶದೃಷ್ಟಿವಿರಹಾನ್ಮಮ ಲಿಂಗಮೇತತ್ ॥೩೯॥

---

ವರ್ಷಗಳು ಬದುಕಬೇಕೆಂದಿದ್ದೇವೆ. ನಿನ್ನ ನಾಮಾವಳಿಗಳನ್ನೇ ನಾವು ಸರ್ವದಾ ಹೇಳುತ್ತಿರಬೇಕು. ಬಿಲ್ವದಳಗಳಿಂದ ನಿನ್ನ ಲಿಂಗಮೌಳಿಯನ್ನು ಅರ್ಚಿಸುತ್ತಿರಬೇಕು. ಪ್ರತಿದಿನವೂ ನಿನ್ನ ಪುಣ್ಯಕರವಾದ ಕಥೆಗಳನ್ನು ಕೇಳುವವರಾಗಬೇಕು. ಅದರಿಂದ ನಾವು ಪಾಪವಿಮುಕ್ತರಾಗಿ ಮುಕ್ತಿಭಾಗಿಗಳಾಗಬೇಕು. ಹಾಗೆ ಅನುಗ್ರಹಿಸುವವನಾಗು" ಎಂದು ಎಲ್ಲರೂ ಮೊರೆಯಿಟ್ಟರು. ||೩೭||

ಆದಿಶೇಷನು ಅನಂತರ ನನ್ನನ್ನು ಹೀಗೆ ಸ್ತುತಿಸಿದನು. "ಮಹೇಶ್ವರನು ಆದಿಶೇಷನನ್ನೇ ಹಾರವನ್ನಾಗಿಮಾಡಿಕೊಂಡು, ಸಕಲ ನಿಧಿಗಳಿಗೂ ಅಧಿಪತಿಯಾದ ಕುಬೇರನಿಗೆ ಮಿತ್ರನಾದ ಈಶಾನ್ಯ ದಿಕ್ಕಿನಲ್ಲಿ ವಿರಾಜಿಸುವ ಕೈಲಾಸದಲ್ಲಿ ಸರ್ವದಾ ನೆಲಸಿರುವನು. ಚಂದ್ರನನ್ನೂ, ಸೂರ್ಯನನ್ನೂ ಎರಡು ಕಣ್ಣುಗಳನ್ನಾಗಿ ಮಾಡಿಕೊಂಡಿರುವನು. ಹೀಗೆ ನೆಲಸಿ ಪಾರ್ವತೀಸಮೇತನಾಗಿರುವ ಆದಿದೇವನಾದ ಮಹೇಶ್ವರನನ್ನು ಸರ್ವದಾ ನಮಸ್ಕರಿಸುವೆನು." ||೩೮||

ದೇವಿಯೇ, ನನ್ನ ನಾಟ್ಯಭರಕ್ಕೆ ಭೂಮಿಯನ್ನು ಹೊತ್ತಿರುವ ಕೂರ್ಮನ ಬೆನ್ನುಮೂಳೆಯು ಬಗ್ಗಿಹೋಗುವುದು. ನನ್ನ ಈ ಶಿವಲಿಂಗವಾದರೋ, ವರಾಹಾವತಾರಮಾಡಿ ವಿಷ್ಣುವು ಪ್ರವೇಶಮಾಡಿದ ರಸಾತಲಕ್ಕಿಂತಲೂ ಕೆಳಭಾಗಕ್ಕೆ ಹೋಗಿರುವುದು. ಬ್ರಹ್ಮಾಂಡದ ತುತ್ತತುದಿಗಿಂತಲೂ ಮೇಲೆ ಹೋಗಿರುವುದು. ಯಾವ ಲೋಕ

ತಲ್ಲಿಂಗಪೂಜನಮುಮೋ ಶ್ರುತಿಮೌಲಿವಾಕ್ಯೆ
ಸಿದ್ಧಾಂತಗರ್ಭಿತಪದಪ್ರಪಥೇನ ಭಾವ್ಯಂ ।
ತತ್ಕಕ್ಷಿದೇವ ಕುರುತೇ ಮಮ ಚ ಪ್ರಸಾದಾ
ನ್ನೋ ವಾ ಸುರಾ ಭರಿತಭಕ್ತಿರಸಾ ಹಿ ಕೇಚಿತ್ ॥೪೦॥

ಚಂಡಾಂಶುಪ್ರಕಟಪ್ರದೀಪಿತತಮುಸ್ತ್ಸೋಮ್ಯೆಕಸೀಮಾ ದಿಶಃ
ಖದ್ಯೋತದ್ಯೋತನೇನ ಪ್ರಭವತಿ ಭವತಾಂ ದೇವಜಾಲಂ ಸಮಗ್ರಂ ।
ಕಿಂ ನಿಂಬಾಕತರುಸ್ಸುರದ್ರುಮುಸಮೋ ಭೂಯಾತ್ತತೋ ಮೇ ಶಿವೇ
ಹ್ಯಜ್ಞಾನಂ ಕಿಮು ವೇದನೇನ ಸದೃಶಂ ವಿಷ್ಣ್ವಾದಯಃ ಕಿಂ ಸಮಾಃ ॥೪೧॥

ಗಗನಾತಿಗಲಿಂಗಮೌಳಿಮೇತತ್
ವರಪಾತಾಲತಲಾತ್ತಮೂಲಭಾಗಂ ।
ಮಹಸಾ ಧವಳೀಕೃತಾಖಿಲಾಶಂ
ಭವದಾಶಾಸ್ಯಸಮಂ ಮಮೇಷ್ಟವಾಸಂ ॥೪೨॥

---

ಪಾಲಕರೂ ನನ್ನ ಶಿವಲಿಂಗದ ಊರ್ಧ್ವಾಧೋಭಾಗಗಳನ್ನು ಸುಲಭವಾಗಿ ಕಾಣ ಲಾರರು. ॥೩೯॥

ದೇವಿಯೇ, ಇಂತಹ ಶಿವಲಿಂಗದ ಆರಾಧನೆಯನ್ನು ಸರ್ವರೂ ವೇದವೇದಾಂತ ಗಳ ಸಿದ್ಧಾಂತಸಾರದ ಆಚರಣೆಯೆಂದು ಅರಿಯಬೇಕು. ಆದರೆ ಈರೀತಿ ಶಿವಲಿಂಗಾ ರ್ಚನೆಯಲ್ಲಿ ಮನಸ್ಸುಬರಬೇಕಾದರೆ ಮೊದಲು ನನ್ನ ಅನುಗ್ರಹಪ್ರಾಪ್ತಿಯಿರಬೇಕು. ಇಲ್ಲವಾದರೆ ಅವರು ದೇವತೆಗಳಾದರೂ ಭಕ್ತಿಯು ಲಭಿಸಲಾರದು. ॥೪೦॥

ಸಮಸ್ತ ದಿಕ್ಕುಗಳಲ್ಲಿಯೂ ಅಡಗಿರುವ ಕತ್ತಲೆಯ ರಾಶಿಯು ಸೂರ್ಯನ ಕ್ರೂರಕಿರಣಗಳಿಂದ ನಾಶವಾಗುವಂತೆ ಮಿಂಚುಹುಳುಗಳ ಕಾಂತಿಯಿಂದ ಎಂದಾದರೂ ಹೋದೀತೇ? ಅಲ್ಲದೆ ಬೇವಿನಮರವು ಯಾವ ರೀತಿಯಲ್ಲಿ ಬೆಳೆದರೂ ಕಲ್ಪವೃಕ್ಷಕ್ಕೆ ಸಮನೆನಿಸೀತೆ? ಹಾಗೆಯೇ ಅನೇಕ ದೇವತೆಗಳು ಅಜ್ಞಾನದಿಂದ ನನ್ನನ್ನು ವಿಷ್ಣ್ವಾ ದಿಮೂರ್ತಿಗಳಿಗೆ ಸಮನೆಂದು ತಿಳಿದಿರುವರು. ಅವರು ಎಂದಿಗೂ ನಮಗೆ ಸರಿಸಮ ರೆನಿಸಲಾರರು. ॥೪೧॥

ಎಲೈ ದೇವತೆಗಳಿರಾ, ಈ ನನ್ನ ಶಿವಲಿಂಗವು ಪಾತಾಳಲೋಕದಲ್ಲಿ ತನ್ನ ಮೂಲಪ್ರದೇಶವನ್ನೂ, ಗಗನದ ಊರ್ಧ್ವಭಾಗದಲ್ಲಿ ತನ್ನ ಮೌಳಿಭಾಗವನ್ನೂ

ಗಗನಗತಮಪಾರತೇಜಸೇದ್ಧಂ
ಜನಿತಾನಂದಭರೇಣ ದೇವಸಂಘಾಃ ।
ಅವನಿತಲನಿವಾಸಮಸ್ತಕಾಸ್ತೇ
ಪರಿಬದ್ಧಾಂಜಲಯೋ ದದರ್ಶುರೀಶಂ ॥೪೩॥

॥ ಸ್ಕಂದ ಉವಾಚ ॥

ಸುರಕುವಲಯಸೋಮಂ ಸೋಮಧಾನೋತ್ತಮಾಂಗಂ
ಮಧುರಿಮಗುಣಸೀಮಂ ಭೂಮಸಾಮಾದಿಗೀತಂ ।
ಸುಮಸಮಮೃದುಕಾಯಂ ಭೀಮಮೀಶಂ ಚ ಸೋಮಂ
ಕುಮತಿಪಥವಿದೂರಂ ಕಾಮದಂ ಕಾಮನಾಶಂ ॥೪೪॥

ಕಮಲಾಮಲನೇತ್ರಪೂಜ್ಯಪಾದಂ
ಕಮಲಾರಾತಿಜಟಾತಟೋರುಭೂಷಂ ।

---

ಇಟ್ಟಿರುವದು. ತನ್ನ ಕಾಂತಿಯಿಂದ ಸಕಲ ದಿಕ್ಕುಗಳನ್ನೂ ಬೆಳಗಿಸುತ್ತಿರುವುದು. ಇಂತಹ ಲಿಂಗವು ನಿಮಗೆ ಇಷ್ಟಾರ್ಥಪ್ರದವಾಗಿಯೂ, ನನಗೆ ಆವಾಸಸ್ಥಾನವಾಗಿಯೂ ರಂಜಿಸುತ್ತಿರುವುದು. ॥೪೨॥

ಹೀಗೆ ಹೇಳಿದ ಶಂಕರನ ಮಾತುಗಳನ್ನು ಕೇಳಿ ದೇವತೆಗಳ ಗುಂಪು ಆನಂದಾತಿಶಯದಿಂದ ಅವನತಶಿರಸ್ಕವಾಗಿ, ಕೈಜೋಡಿಸಿ ನಿಂತು ಶಿವಲಿಂಗವನ್ನು ಬಹಳ ಭಕ್ತಿಯಿಂದ ನೋಡಿತು. ॥೪೩॥

ಆ ಶಂಕರಲಿಂಗವು ದೇವತೆಗಳೆಂಬ ನೈದಿಲೆಗಳಿಗೆ ಚಂದ್ರನಂತಿತ್ತು. ಚಂದ್ರ ಮಂಡಲವನ್ನು ಶಿರಸ್ಸಿನಲ್ಲಿ ಧರಿಸಿ, ಸುಗುಣಗಳಿಗೆ ಆಕರವೆನಿಸಿ, ಸಾಮವೇದಸ್ತುತ ವಾಗಿ ರಂಜಿಸುತ್ತಿತ್ತು. ಅಲ್ಲಿ ನೆಲಸಿದ ಪರಶಿವನ ಸ್ವರೂಪವಾದರೋ, ಪುಷ್ಪರಾಶಿ ಯಂತೆ ಮೃದುವಾದ ದೇಹವುಳ್ಳದ್ದಾಗಿದ್ದರೂ, ನೋಡಲು ಬಹುಭಯಂಕರವಾಗಿ ಕಾಣುತ್ತಿತ್ತು. ದುರ್ಮಾರ್ಗವನ್ನು ದೂರಮಾಡಿ, ಸಕಲರ ಇಷ್ಟಾರ್ಥವನ್ನೂ ಒದಗಿ ಸುತ್ತಾ ಕಾಮನಾಶಕನಾಗಿರುವ ಶ್ರೀ ಪರಮೇಶ್ವರಮೂರ್ತಿಯನ್ನು ಸಕಲ ದೇವತೆ ಗಳೂ ಸಂದರ್ಶಿಸಿದರು. ॥೪೪॥

ಮತ್ತೂ ಶಂಕರನು ವಿಷ್ಣುವಿನ ನೇತ್ರಕಮಲದಿಂದ ಪೂಜಿತನಾದವನು. ಕಮಲವೈರಿಯಾದ ಚಂದ್ರನನ್ನು ಶಿರಸ್ಸಿನಲ್ಲಿ ಆಭರಣದಂತೆ ಧರಿಸಿರುವವನು.

ಕಲಿತಾಲಕಗಾಂಗತುಂಗಲೀಲಂ
ಕಲಶೋದ್ಭೂತಮುನಿಪ್ರಪೂಜಿತಾಂಘ್ರಿಂ ॥೪೫॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಸರ್ವದೇವಸ್ತುತಿರ್ನಾಮ
ಸಪ್ತಪಂಚಾಶೋಽಧ್ಯಾಯಃ

ಮುಂಗುರುಳಿನಲ್ಲಿ ಗಂಗಾನದಿಯ ಅಲೆಗಳನ್ನು ತಡೆದಿರುವವನು. ಕಲಶಸಂಭವನಾದ ಅಗಸ್ತ್ಯಮುನಿಯೇ ಮೊದಲಾದ ಋಷಿಗಣಗಳಿಂದ ಪೂಜಿತನಾದವನು. ಇಂತಹ ಪರಮೇಶ್ವರನನ್ನು ಸಕಲ ದೇವತೆಗಳೂ ನೋಡಲಾರಂಭಿಸಿದರು. ಎಂದು ಕುಮಾರ ಸ್ವಾಮಿಯು ಜೈಗೀಷವ್ಯಾದಿ ಸಕಲ ಮಹರ್ಷಿಗಳಿಗೂ ವಿವರಿಸಿ ಹೇಳಿದನು. ॥೪೫॥

ಇಲ್ಲಿಗೆ ಶ್ರೀಶಿವರಹಸ್ಯದ ಮೊದಲನೆಯ ಅಂಶದಲ್ಲಿ ಸರ್ವದೇವಸ್ತುತಿಯೆಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಅಷ್ಟಪಂಚಾಶೋಽಧ್ಯಾಯಃ

### ಆತ್ಮಲಿಂಗಕಥನಂ

|| ಜೈಗೀಷವ್ಯ ಉವಾಚ ||

ಅಹೋ ಜ್ಞಾನಮಹಾನಂದಧಾರಾಮೃತನಿಮಜ್ಜನೈಃ ।
ಸಾನಂದಮಗ್ನಹೃದಯಾಶ್ಶಿವಜ್ಞಾನಹತಾಶುಭಾಃ ॥೧॥

ಧನ್ಯಾ ವಯಂ ನ ಸಂದೇಹಸ್ಸ್ಕಂದಾನಂದೈಕಮೇದುರಃ ।
ಕಿಂ ತಲ್ಲಿಂಗಂ ಮಹೇಶೇನ ಪ್ರೋಕ್ತಂ ತದ್ವದ ಮೇಽಧುನಾ ॥೨॥

ಕಿಂ ತಲ್ಲಿಂಗಂ ಕಶ್ಚ ಲಿಂಗೀ ಕೋ ವಾ ತಲ್ಲಿಂಗಪೂಜಕಃ ।
ಲಿಂಗಾರ್ಚನೇನ ಕಿಂ ಪ್ರಾಪ್ಯಂ ವದ ವಿಸ್ತರತೋಽಧುನಾ ॥೩॥

---

### ಶ್ರೀಶಿವರಹಸ್ಯದಲ್ಲಿ ಐವತ್ತೆಂಟನೆಯ ಅಧ್ಯಾಯ

ಜೈಗೀಷವ್ಯ ಮಹರ್ಷಿಯು ಮತ್ತೆ ಕುಮಾರಸ್ವಾಮಿಯನ್ನು ಕುರಿತು, " ಸ್ವಾಮಿಯೇ, ನಾವು ಇಲ್ಲಿನವರೆಗೂ ತಮ್ಮ ಬಾಯಿಂದ ಹೊರಟ ಶಿವಕಥಾರೂಪವಾದ ಅಮೃತಪಾನದಿಂದ ಆನಂದಪರವಶರಾಗಿ ಸಕಲ ಅಮಂಗಳಗಳನ್ನೂ ಕಳೆದುಕೊಂಡು ಧನ್ಯರೆನಿಸಿದ್ದೇವೆ. ಇದರಲ್ಲಿ ಸಂಶಯವಿಲ್ಲ. ಆದರೆ ಶಂಕರನು ದೇವತೆಗಳೊಡನೆ ಹೇಳಿದ ಪವಿತ್ರವಾದ ಲಿಂಗವಾವುದು ? ||೧-೨||

ಆ ಲಿಂಗಸ್ವರೂಪವೇನು ? ಅದರಲ್ಲಿರುವ ದೇವನಾರು ? ಆ ಲಿಂಗಾರಾಧಕನ ಲಕ್ಷಣಗಳೇನು ? ಇಂತಹ ಲಿಂಗಾರ್ಚನೆಯಿಂದ ಬರುವ ಫಲವಾವುದು ? ಇವೆಲ್ಲವನ್ನೂ ನಿನ್ನ ವಾಗ್ಧಾರೆಯಿಂದ ಕೇಳಿ ತಿಳಿದು, ನಮ್ಮ ಪಾಪರಾಶಿಯನ್ನೆಲ್ಲಾ ಕಳೆದು

ತ್ವದ್ವಾಗಮೃತಧಾರಾಭಿಃ ಪಾಪದಾವಾನಲೋ ಮಮ ।
ಶಾಂತಃ ಪ್ರಶಾಂತಂ ಚಿತ್ತಂ ಚ ಮಹಾನಂದಾಬ್ಧಿವೀಚಿಗಂ ॥೪॥

॥ ಸೂತ ಉವಾಚ ॥

ಜೈಗೀಷವ್ಯವಚೋವೀಚೀಸಂಪ್ಲಾವಿತಹೃದಂತರಃ
ಸ್ಕಂದೋ ನಂದಿತಮಂದಾರೋ ಗುಹ್ಯಂ ತತ್ಪಾರಮೇಶ್ವರಂ ।
ದೇವ್ಯೈ ದೇವೇನ ಕಥಿತಂ ಅವಾದೀಚ್ಛಾಂಭವಾಯ ತು ॥೬॥

॥ ಸ್ಕಂದ ಉವಾಚ ॥

ಯಥಾ ಮುನೇ ತ್ವಯಾ ಪೃಚ್ಛಿ ಪ್ರಶ್ನೋಽಯಂ ಸರ್ವದುಸ್ತರಃ ।
ತಥೈವ ಪೃಷ್ಟೋ ಭಗವಾನ್ ದೃಷ್ಟ್ವಾ ಕೈಲಾಸಮೌಳಿಗಂ ॥೭॥

ಕೈಲಾಸೇಶ್ವರಲಿಂಗಂ ಚ ಪ್ರಣಮ್ಯ ಸ್ತುತ್ಯಭಕ್ತಿತಃ ॥೮॥

ಕೊಳ್ಳಬೇಕೆಂದಿದ್ದೇವೆ. ಅಲ್ಲದೆ ನಮ್ಮ ಮನಸ್ಸು ಶಾಂತವಾಗಿ ಆನಂದಾಂಬುಧಿಯ ಅಲೆಯಲ್ಲಿ ಓಡಾಡುತ್ತಾ ನಿತ್ಯಸುಖವನ್ನು ಅನುಭವಿಸಲಿ. ಅದೆಲ್ಲವನ್ನೂ ವಿಸ್ತರಿಸಿ ಹೇಳಬೇಕೆಂದು '' ಕೇಳಿಕೊಳ್ಳಲು ||೩-೪||

ಸ್ಕಂದಸ್ವಾಮಿಯು, ಜೈಗೀಷವ್ಯಮಹರ್ಷಿಯ ಮಾತುಗಳೆಂಬ ಅಲೆಗಳಿಂದ ನೆನೆಸಲ್ಪಟ್ಟ ಹೃದಯವುಳ್ಳವನಾಗಿ, ಸಂತೋಷದಿಂದ, ಪರಮೇಶ್ವರನೇ ಪಾರ್ವತಿಗೆ ಹೇಳಿದ್ದ ರಹಸ್ಯಾಂಶವನ್ನೆಲ್ಲಾ ಶಂಭುಭಕ್ತನಾದ ಜೈಗೀಷವ್ಯಮುನಿಗೆ ಹೇಳಲಾರಂಭಿಸಿದನು. ||೬||

" ಅಯ್ಯಾ ಋಷಿಯೇ, ನೀನು ಕೇಳಿದ ಪ್ರಶ್ನೆಯನ್ನೇ ದೇವಿಯು ಹಿಂದೆ ಶಂಕರನನ್ನು ಕುರಿತು ಪ್ರಶ್ನೆಮಾಡಿದಳು. ಪ್ರಶ್ನೆಮಾಡುವಾಗಲೇ ಕೈಲಾಸಪರ್ವತಾಗ್ರದಲ್ಲಿರುವ ಕೈಲಾಸೇಶ್ವರಲಿಂಗವನ್ನು ಮೊದಲು ನಮಸ್ಕರಿಸಿ, ವಿಧವಿಧವಾದ ಸ್ತುತಿವಚನಗಳಿಂದ ಈರೀತಿ ಸ್ತೋತ್ರಮಾಡಿದಳು. ||೭-೮

|| ದೇವ್ಯುವಾಚ ||

**ಲಿಂಗಂ ಕೈಲಾಸಮೌಲೌ ಜನಿತತಿವಿಹಿತಾಪಾರತಾಪೈಕಭಂಗಂ**
**ಮಚ್ಚಿತ್ತಾಬ್ಜೈಕಭೃಂಗಂ ರವಿಶಶಿಶಿಖಿಜಾಪಾರಕಾಂತೋತ್ತಮಾಂಗಂ ।**
**ಧ್ಯಾನಾನಂದೈಕಸಂಗಂ ವಿವಿಧಜನಿಜರಾನಾಶನೇನಾಪ್ಯಸಂಗಂ**
**ಶಾಂತಂ ಸ್ವಾಂತೈಕಸಂಗಂ ಕಥಯ ಭವಹರಂ ಶಾಂಗಮಧ್ಯಾನಸಂಗಂ ॥೯॥**

**ವಿವಿಧಜನವಿಧೀಂದ್ರೈರ್ವಿಷ್ಣುಭಿಶ್ಚೈವ ರುದ್ರೈ**
**ರಮರವರಸಮೂಹೈರ್ದೈತ್ಯಗಂಧರ್ವಸಂಘೈಃ ।**
**ಮುನಿವರಗಣಬೃಂದೈಸ್ಸ್ಕಂದಹೇರಂಬಕಾದ್ಯೈ**
**ರ್ನ ಹಿ ಖಲು ಭಗವಂಸ್ತೇ ಲಿಂಗಮೇತದ್ಧಿ ದೃಷ್ಟಂ ॥೧೦॥**

**ಕಥಮಿದಮನಲಾಕ್ಷಂ ಪಶ್ಯತಿ ಪ್ರೀತಿಯುಕ್ತೋ**
**ಯಮನಿಯಮತಪಸ್ಯಾಪಾರದಾನೈರ್ಮಖೈರ್ವಾ ।**

---

ಕೈಲಾಸಶಿಖರದಲ್ಲಿರುವ ಕೈಲಾಸೇಶ್ವರಲಿಂಗವು ಸಂಸಾರದಲ್ಲಿ ಸಿಕ್ಕುವ ಜನನ ಮರಣಾದಿ ಸಕಲ ದುಃಖಗಳನ್ನೂ ನಾಶಗೊಳಿಸತಕ್ಕದ್ದು. ನನ್ನ ಮನಸ್ಸೆಂಬ ಕಮಲ ದಲ್ಲಿ ಸದಾ ದುಂಬಿಯಂತೆ ಹಾರಾಡತಕ್ಕದ್ದು. ಅದರ ಮೌಳಿಭಾಗವು ಸೂರ್ಯ, ಚಂದ್ರ, ಅಗ್ನಿ ಇವರುಗಳ ಕಾಂತಿಯಿಂದ ಸುರಂಜಿತವಾಗಿರುವುದು. ಧ್ಯಾನದಿಂದ ಉಂಟಾಗುವ ಆನಂದವನ್ನು ಒದಗಿಸಿ, ಸ್ವಯಂ ಜನನಮರಣಾದಿ ಯಾವ ದುಃಖಗಳಿಗೂ ಸಿಕ್ಕ ದಂತೆ, ಶಾಂತಸ್ವಭಾವದಿಂದ, ಮನಸ್ಸಿಗೆ ಮಾತ್ರ ಗೋಚರಿಸುವುದಾಗಿರುವುದು. ಹೀಗೆ ಯಾವ ವಿಧವಾದ ಧ್ಯಾನ ಸಂಸರ್ಗವೂ ಇಲ್ಲದಿರುವ ಶ್ರೀ ಕೈಲಾಸಲಿಂಗಕ್ಕೆ ಮನಃಪೂರ್ವಕವಾಗಿ ಎರಗುವೆನು. ||೯||

ಮಹೇಶ್ವರನೇ, ಈ ಶಿವಲಿಂಗವನ್ನು ಸುಲಭವಾಗಿ ನೋಡಲು, ಬ್ರಹ್ಮಾದಿ ಸಕಲ ದೇವತಾಶ್ರೇಷ್ಠರಿಗೂ, ದೇವತಾವರ್ಗದವರಿಗೂ, ಋಷಿಜನರಿಗೂ, ಸ್ಕಂದ, ಗಣಪತಿಯರೇ ಮೊದಲಾದ ಶಂಭುಗಣಾಧಿಪತಿಗಳಿಗೂ ಸಹ ಸಾಧ್ಯವಾಗಲಾರದು. ||೧೦||

ಹಾಗಿರುವಾಗ ಯಮನಿಯಮಾದಿ ಅಷ್ಟಾಂಗಗಳನ್ನು ಅನುಷ್ಠಾನಮಾಡುವುದ ರಿಂದಲೂ, ಯಜ್ಞಯಾಗಾದ್ಯಾಚರಣೆಯಿಂದಲೂ ಈ ಶಿವಲಿಂಗದರ್ಶನಮಾಡಲು ಹೇಗೆ ಸಾಧ್ಯವಾದೀತು ? ನೂರಾರು ಜನ್ಮಗಳು ತಪಸ್ಸನ್ನಾಚರಿಸಿದವರಿಗೆ ನೋಡಲು

ಜನಿಶತತಪಸಾ ವಾ ಪ್ರಾಪ್ಯಮೇತನ್ಮಹೇಶ
ತ್ರಿಭುವನಭವನೇ ವಾ ಕಶ್ಚಿದಸ್ತೀಶ ದ್ರಷ್ಟುಂ ||೧೧||

ಕಥಯ ರಹಸಿ ಶಂಭೋ ಹಾಃ ಕಿಮೇತದ್ವಿಚಿತ್ರಂ ।
ಹ್ಯಹಮಪಿ ಭಗವಂಸ್ತೇ ಜ್ಞಾಸಿಷಂ ನೈವ ಲಿಂಗಂ ||೧೨||

|| ಸ್ಕಂದ ಉವಾಚ ||

ಇತ್ಥಂಭಾವಚನೇನ ಸುಂದರತರಸ್ವಾಂತೇಂದುಮೌಲಿಸ್ಸದಾ
ವೀಕ್ಷ್ಯಾಂಬಾಂ ಮುಖಪಂಕಜೋತ್ತಮಲಸನ್ನೇತ್ರಾಲಿಮಾಲಾದರಃ ।
ವೇದಾಂತಾಂಬುಜಭಾಸ್ಕರಸ್ತ್ರಿಜಗತಾಮಾಧಾರಭೂತೋ ಹರಃ
ಪ್ರಾಹೋತ್ಫುಲ್ಲಮನೋಹರಾರವಿಂದವದನೋ ದೇವೀಂ ಮುದಾ ಶಂಕರಃ
||೧೩||

ಪುನಃ ಪ್ರಣಮ್ಯ ಸಾ ದೇವೀ ಪ್ರಾಹ ಕಾಮಾರಿಮೀಶ್ವರಂ ||೧೪||

ಒಂದುವೇಳೆ ಸುಲಭಸಾಧ್ಯವಾದೀತು. ಹೀಗಿರುವಾಗ ಸುಲಭವಾಗಿ ನೋಡುವ ಪುರುಷನು ಮೂರು ಲೋಕದಲ್ಲಿ ಯಾರಿರುವನು? ಆದ್ದರಿಂದ ಮಹೇಶ್ವರನೇ, ಇಂತಹ ಮಹಾರಹಸ್ಯದಿಂದ ಕೂಡಿದ ಈ ಶಿವಲಿಂಗವಿಚಾರವನ್ನು ನನಗೆ ದಯವಿಟ್ಟು ತಿಳಿಸುವವನಾಗು. ನನಗೂ ಸಹ ಸರಿಯಾಗಿ ತಿಳಿಯದ ರಹಸ್ಯವು ಈ ಲಿಂಗದಲ್ಲಿರುವುದಲ್ಲವೆ?'' ಎಂದು ಪಾರ್ವತಿಯು ಪರಶಿವನನ್ನು ಕೇಳಿಕೊಂಡಳು. ||- - - ||

ಹಾಗೆ ಕೇಳಿಕೊಂಡ ದೇವಿಯ ಸುಂದರತರವಾದ ಮುಖವನ್ನು ನೋಡಿ, ಹರ್ಷಚಿತ್ತನಾಗಿ, ವಿಕಸಿತ ಕಮಲನೇತ್ರನಾಗಿ, ವೇದಾಂತಗಳೆಂಬ ಕಮಲಗಳಿಗೆ ಸೂರ್ಯನಂತೆಯೂ, ಲೋಕತ್ರಯಗಳಿಗೆ ಆಧಾರಭೂತನಂತೆಯೂ ಇರುವ ಶಂಕರನು ದೇವಿಯನ್ನು ಒಂದುಸಾರಿ ಪ್ರೀತಿಯಿಂದ ನೋಡಿದನು. ಪತಿಯ ಮನೋಹರವಾದ ಮುಖಭಂಗಿಯನ್ನರಿತ ದೇವಿಯು ಮತ್ತೆ ಪತಿಯನ್ನು ವಂದಿಸಿ ಹೀಗೆ ಪ್ರಾರ್ಥಿಸಿದಳು. ||೧೩-೧೪||

|| ದೇವ್ಯುವಾಚ ||

ದೇವದೇವ ಮಹಾದೇವ ಮಹಾಕಾರುಣಿಕೋತ್ತಮ ।
ಕಿಂ ತಲ್ಲಿಂಗಂ ಕಶ್ಚ ಲಿಂಗೀ ಲೋಕೇ ಲಿಂಗಂ ಕಿಮುಚ್ಯತೇ ॥೧೫॥

ಕಥಂ ಲಿಂಗಂ ಕಶ್ಚ ಲಿಂಗಂ ಸಮರ್ಚಯತಿ ಶಂಕರ ।
ತದ್ವದೇವಾನುಪೂರ್ವ್ಯೇಣ ಯದಿ ತೇ ಮಯ್ಯನುಗ್ರಹಃ ॥೧೬॥

|| ಸ್ಕಂದ ಉವಾಚ ||

ಇತ್ಥಂ ದೇವ್ಯಾ ಪುರಾ ಪೃಷ್ಟಿ ಮಹೇಶೋ ಭಕ್ತವತ್ಸಲಃ ।
ತಸ್ಯೈವಾಕಥಯತ್ಪುಣ್ಯಂ ಶಿಪಿವಿಷ್ಟಃ ಕಥಾನಕಂ ॥೧೭॥

ನಿವಿಷ್ಟಹೃದಯೋ ದೇವ್ಯಾಮಷ್ಟಮೂರ್ತಿಃ ಪ್ರತುಷ್ಟಿವಾನ್ ।
ಉವಾಚಾಹ್ಲಾದಯನ್ ದೇವೀಂ ತಚ್ಛೃಣುಷ್ವ ಗಣೋತ್ತಮ್ಯಃ ॥೧೮॥

ಸುರೇಂದ್ರೈಶ್ಚ ಮುನೀಂದ್ರೈಶ್ಚ ಗೋಪ್ಯಮೇತತ್ಸನಾತನಂ ।
ನಾಖ್ಯೇಯಂ ಕಸ್ಯಚಿದ್ವಾಪಿ ಜ್ಞಾನಹೀನಾಯ ಶಾಂಭವೈಃ ॥೧೯॥

ದೇವದೇವನೇ, ಮಹಾದೇವನೇ, ದಯಾಶಾಲಿಯೇ, ಆ ಲಿಂಗವಾವುದು. ಅದರಲ್ಲಿ ಅಡಗಿರುವವನು ಯಾರು ? ಲೋಕದಲ್ಲಿ ಆ ಲಿಂಗವನ್ನು ಏನೆಂದು ಕರೆಯು ವರು ? ಲಿಂಗಾರಾಧನೆಯ ಕ್ರಮವೆಂತು ? ಆರಾಧಿಸುವವರು ಯಾರು ? ಈ ವಿಷಯ ಗಳೆಲ್ಲವನ್ನೂ ನನ್ನಮೇಲಿನ ಅನುಗ್ರಹದಿಂದ ವಿವರಿಸಬೇಕು. ಎಂದು ದೇವಿಯು ಪ್ರಾರ್ಥಿಸಿಕೊಂಡಳು. ||೧೫-೧೬||

ಹಾಗೆ ಕೇಳಿಕೊಂಡ ದೇವಿಯನ್ನು ನೋಡಿ ಭಕ್ತವತ್ಸಲನಾದ ಶಂಕರನು ದೇವಿಗೆ ಮುಂದಿನ ವಿಷಯಗಳನ್ನು ವಿವರಿಸಲಾರಂಭಿಸಿದನು. ||೧೭||

ಶಂಕರನು ದೇವಿಯಲ್ಲಿ ಪ್ರೀತಿಯಿಟ್ಟು ಆ ಲಿಂಗದ ವಿಷಯವನ್ನು ವಿವರಿಸುತ್ತಾ, "ದೇವತೆಗಳಿಂದಲೂ, ಸಕಲ ಮುನಿವರ್ಗದಿಂದಲೂ, ಗಣನಾಥರುಗಳಿಂದಲೂ ತಿಳಿಯಲಾಗದಂತಹ ಈ ಸನಾತನವಾದ ರಹಸ್ಯವನ್ನು ಈಗ ನಿನಗೆ ಹೇಳುವೆನು. ಈ ರಹಸ್ಯಾಂಶವನ್ನು ಶಂಭುಭಕ್ತರಲ್ಲದವರಿಗೆ ವಿವರಿಸಬಾರದು" ಎಂದು ಹೇಳಿದನು. ||೧೮-೧೯||

|| ಈಶ್ವರ ಉವಾಚ ||

ಸಾವಧಾನೇನ ದೇವೇಶಿ ಲಿಂಗಪೂಜಾವಿಧಿಕ್ರಮಂ ।
ಶೃಣ್ವಪರ್ಣೇ ಪ್ರಣಯತೋ ಮಯೋಕ್ತಂ ಹೃದಯೇ ಧರ ||೨೦||

ನಾಖ್ಯೇಯಂ ಕಸ್ಯಚಿದ್ವಾಪಿ ರಹಸ್ಯಂ ಮಮ ಸರ್ವದಾ ।
ಲಯನಾತ್ಸರ್ವಜಗತಾಂ ಲಿಂಗಮಿತ್ಯುಚ್ಯತೇ ಶಿವೇ ||೨೧||

ಲೀನಮರ್ಥಂ ಗಮಯತಿ ತಸ್ಮಾತ್ತಲ್ಲಿಂಗಮುಚ್ಯತೇ ।
ಲಮು ಕ್ರೀಡಾಂ ಚ ಜಗತೋ ಗಚ್ಛತೀತಿ ತದುಚ್ಯತೇ ||೨೨||

ತಸ್ಮಾಲ್ಲಿಂಗಂ ವಿದುಃ ಪ್ರಾಜ್ಞಾ ಬಿಂದುಹೀನಂ ಚ ತತ್ಪ್ರಿಯೇ ।
ಅರ್ಚನಂ ಚ ಪ್ರವಕ್ಷ್ಯಾಮಿ ಹ್ಯರ್ಚಕಂ ಚ ವಿಶೇಷತಃ ||೨೩||

ಲಿಂಗಂ ಗುಣತ್ರಯಾದ್ಭಿನ್ನಂ ಬ್ರಹ್ಮವಿಷ್ಣುಮನೋಹರೈಃ ।
ಪೀಠಪೀಠ್ಯಾದಿರಹಿತಂ ಪೂಜ್ಯಪೂಜಾವಿವರ್ಜಿತಂ ||೨೪||

ಎಲೌ ದೇವಿಯೇ, ಈಗ ಲಿಂಗಪೂಜಾಕ್ರಮವನ್ನು ನಿನಗೆ ವಿವರಿಸುವೆನು. ನಾನು ಹೇಳಿದ ವಿಷಯವನ್ನು ಪ್ರೀತಿಯಿಂದ ಮನಸ್ಸಿನಲ್ಲಿಡು. ||೨೦||

ಅಲ್ಲದೆ ಈ ರಹಸ್ಯವನ್ನು ಯಾರಿಗೂ ಹೆಚ್ಚಾಗಿ ವಿವರಿಸಿ ಹೇಳಬೇಡ. ಸರ್ವ ಜಗತ್ತುಗಳನ್ನು ಲಯಗೊಳಿಸುವುದರಿಂದಲೂ, ಭಕ್ತರ ಸಕಲ ಇಷ್ಟಾರ್ಥಗಳನ್ನು ಪೂರ್ತಿಗೊಳಿಸುವುದರಿಂದಲೂ, ಅಡಗಿದ ಜಗತ್ತು ಮತ್ತೆ ಲಿಂಗದಿಂದಲೇ ಉದ್ಭವಿಸಿ ಚಲನವಲನಾದಿಗಳನ್ನು ಪಡೆಯುವುದರಿಂದಲೂ, ಲಿಂಗಶಬ್ದವು ಅನ್ವರ್ಥವಾಗಿ ನಿರೂಪಿತವಾಗಿದೆ. ||೨೧-೨೨||

ಈ ವಿಧವಾಗಿ ಕ್ರೀಡಾರ್ಥಕವಾದ ಲಮುಧಾತುವಿನಿಂದಲೇ ಲಿಂಗಶಬ್ದವು ನಿಷ್ಪನ್ನವಾಗಿದೆ. ಇನ್ನುಮುಂದೆ ಅರ್ಚನೆಮಾಡುವ ಕ್ರಮವನ್ನೂ, ಅರ್ಚಕನ ಲಕ್ಷಣವನ್ನೂ ವಿವರಿಸುವೆನು ಕೇಳು, ಎಂದು ಮಹಾದೇವನು ತಿಳಿಸಲಾರಂಭಿಸಿದನು. ಈ ಲಿಂಗವು ಗುಣತ್ರಯರಹಿತವಾದದ್ದು. ಆದ್ದರಿಂದಲೇ ಗುಣತ್ರಯವಿಶಿಷ್ಟರಾಗಿರುವ ಬ್ರಹ್ಮ, ವಿಷ್ಣು, ಮಹೇಶ್ವರರಿಗಿಂತ ಭಿನ್ನವಾಗಿದೆ. ಇದಕ್ಕೆ ಆಧಾರಾಧೇಯ

ಧ್ಯಾನಧ್ಯೇಯಾದಿರಹಿತಂ ನಿರ್ಗುಣಂ ತಮಸಃ ಪರಂ ।
ಜಗಜ್ಜನ್ಮೋದಯಾಸ್ಥಾನವಿನಾಶನವಿವರ್ಜಿತಂ ॥೨೫॥

ಓಂಕಾರಾದ್ಯಂ ಸಪ್ರಣವಂ ತ್ರಿಮಾತ್ರಾಪರಿವರ್ಜಿತಂ ।
ಭಾವಾಭಾವಾದಿರಹಿತಂ ಭಾವಾಭಾವವಿವರ್ಜಿತಂ ॥೨೬॥

ಬೋಧ್ಯಬೋಧಾದಿರಹಿತಂ ವ್ಯಾಪ್ಯವ್ಯಾಪಕವರ್ಜಿತಂ ।
ಜ್ಞಾನಜ್ಞೇಯಜ್ಞಾತೃಹೀನಂ ಖಂಡಾಖಂಡವಿವರ್ಜಿತಂ ॥೨೭॥

ಪ್ರಭವಾಭವಸಂಹಾರತಿರೋಧಾನಾದಿವರ್ಜಿತಂ ।
ಧ್ಯಾನಧ್ಯೇಯಾದಿರಹಿತಂ ಮಹಾಧ್ಯಾನವಿದೂರಗಂ ॥೨೮॥

ಅಲಕ್ಷ್ಯಲಕ್ಷಣಾಹೀನಂ ಗೋಪ್ಯಗೋಪಕವರ್ಜಿತಂ ।
ನ ಸ್ಯಾನ್ನಸನ್ನಚೈವಾಸತ್ಸದಸಚ್ಚೈವ ನಾಪ್ಯಸತ್ ॥೨೯॥

---

ಭಾವವಾಗಲಿ, ಧ್ಯಾನಧ್ಯೇಯಾದಿಕ್ರಿಯಾಗುಣಗಳಾಗಲಿ ಇರುವುದಿಲ್ಲ. ಮಾಯಾರಹಿತವಾದ ನಿರ್ಗುಣರೂಪಿಯೆಂದರೆ ಇದೇ. ಜಗತ್ತಿನಲ್ಲಿ ಸ್ವಭಾವವಾಗಿ ಕಂಡುಬರುವ, ಜನನ, ಮರಣಾದಿ ದುಃಖಪರಂಪರೆಗಳು ಈ ಲಿಂಗಕ್ಕೆ ಎಂದೂ ಸಲ್ಲವು. ||೨೩-೨೪-೨೫||

ಓಂಕಾರರೂಪವಾದ ಪ್ರಣವವೇ ಈ ಲಿಂಗವು. ಆದರೆ ಪ್ರಣವದಲ್ಲಿರುವ ತ್ರಿಮಾತ್ರಾಕಾಲಿಕವಾದ ಅಕ್ಷರಗಳು ಈ ಲಿಂಗದಲ್ಲಿಲ್ಲ. ವಸ್ತುಸ್ಥಿತಿ, ವಸ್ತುವಿನ ಅಭಾವ, ಇವುಗಳಾಗಲಿ ಇಲ್ಲಿಲ್ಲ. ಶಬ್ದಗಳ ಮೂಲಾರ್ಥವಾಗಲಿ, ಅರ್ಥವಿಲ್ಲದ ಶಬ್ದಗಳಾಗಲಿ ಇಲ್ಲಿಲ್ಲ. ಮತ್ತೊಂದನ್ನು ತಿಳಿಯುವ ವಸ್ತುವು, ತಿಳಿಯಲ್ಪಡುವ ವಸ್ತುವೂ ಇದಲ್ಲ. ಜಗತ್ತನ್ನು ವ್ಯಾಪಿಸುವ ಮತ್ತು ವ್ಯಾಪಕವಸ್ತುವಿನಲ್ಲಿ ಲೀನವಾಗುವ ಕ್ರಿಯೆಯೂ ಇದರಲ್ಲಿಲ್ಲ. ಜ್ಞಾನರೂಪವೂ, ತಿಳಿಯಲ್ಪಡುವ ವಸ್ತುರೂಪವೂ, ತಿಳಿಯುವ ಕರ್ತೃತ್ವವೂ ಈ ಶಿವಲಿಂಗದಲ್ಲಿ ಕಂಡುಬರುವುದಿಲ್ಲ. ಇದು ಖಂಡವೂ ಅಲ್ಲ. ಅಖಂಡವೂ ಅಲ್ಲ. ಏತದುಭಯದಿಂದಲೂ ಬೇರೆಯಾದದ್ದು. ||೨೬-೨೭||

ಈ ಶಿವಲಿಂಗಕ್ಕೆ ಸೃಷ್ಟಿ ಸ್ಥಿತಿ ಲಯಾದಿಗಳಿಲ್ಲ. ಯಾವ ಆವರಣವೂ ಅದಕ್ಕೆ ಸಲ್ಲದು. ಧ್ಯಾನವಾಗಲಿ, ಧ್ಯಾನಕ್ಕೆ ವಿಷಯವಾದ ವಸ್ತುವಾಗಲಿ ಅದಲ್ಲ. ಮತ್ತೆ ಯಾವ ವಿಧವಾದ ಧ್ಯಾನಕ್ಕೂ ಅದು ಆಶ್ರಿತವಾಗಿಲ್ಲ. ಯಾವ ಲಕ್ಷಣಕ್ಕೂ ಅದು

ಸತ್ತಾಮಾತ್ರಾದಿರಹಿತಂ ಕೇವಲಂ ಸ್ವಾತ್ಮದರ್ಶನಂ ।
ಭಾನಾಭಾನವಿಹೀನಂ ಚ ಸ್ವಭಾಸಾ ಭಾಸಿತಾಖಿಲಂ ॥೩೦॥

ಚೇತ್ಯಚೇತಕರಾಹಿತ್ಯಂ ಕ್ಷರಾಕ್ಷರವಿವರ್ಜಿತಂ ।
ಚರಾಚರವಿಹೀನಂ ಚ ಪ್ರಮಾಮೇಯಾದಿವರ್ಜಿತಂ ॥೩೧॥

ಬಿಂದುನಾದಾದಿಕಂ ಸಾಕ್ಷಾತ್ಸಾಕ್ಷಿಸಾಕ್ಷ್ಯಾದಿವರ್ಜಿತಂ ।
ಬಿಂಬೀಬಿಂಬಾತಿಗಂ ಚೈತತ್ಪ್ರತಿಭಾಸಾದಿವರ್ಜಿತಂ ॥೩೨॥

ನೈವ ದೃಶ್ಯಂ ನ ಚಾದೃಶ್ಯಂ ಗ್ರಾಹ್ಯಗ್ರಾಹಕವರ್ಜಿತಂ ।
ನ ವಾಗ್ವಾಕ್ಯವಿಹೀನಂ ಚ ವಾಚಾಂ ದೂರಮನೌಪಮಂ ॥೩೩॥

ಲಕ್ಷ್ಯವಾಗುವುದಲ್ಲ. ಗೋಪ್ಯವಸ್ತುವೂ ಅಲ್ಲ. ಗೋಪಕವಾದದ್ದೂ ಅಲ್ಲ. ಸದ್ವಸ್ತುವೂ, ಅಸದ್ವಸ್ತುವೂ ಇದೇ ಆಗಿರುವುದು. ವಸ್ತುತಃ ವಿಚಾರಮಾಡಿದರೆ ಸದ್ವಸ್ತುವೂ ಅಲ್ಲ. ಅಸದ್ವಸ್ತುವೂ ಅಲ್ಲ. ಆದರೆ ಇತರ ವಸ್ತುಗಳಂತೆ ಸತ್ತಾಮಾತ್ರವಾಗಿ ಕಾಣುವುದಿಲ್ಲ. ಆತ್ಮನಿಗೆ ಮಾತ್ರ ಆತ್ಮನಂತೆ ತೋರಿಬರುವುದು. ಭ್ರಾಂತಿಮೂಲಕವಾಗಿ ನಾನಾರೂಪದಿಂದ ಕಾಣುವ ವಸ್ತುವೂ ಅದಲ್ಲ. ಇದು ಸ್ವಸ್ವರೂಪದಿಂದ ಪ್ರಪಂಚವನ್ನೇ ಬೆಳಗಿಸುತ್ತಿರುವುದು. ॥೨೮-೨೯-೩೦॥

ಚೈತನ್ಯವಿಶಿಷ್ಟವಸ್ತುವಾದರೂ ಚೈತನ್ಯವಿಲ್ಲದ ವಸ್ತುವಿನಂತೆ ಕಾಣುವುದು. ಇದರಲ್ಲಿ ನಾಶವಾಗಲಿ, ಸ್ಥಿರತ್ವವಾಗಲಿ ಇರುವುದಿಲ್ಲ. ಚರವೂ ಅಲ್ಲ. ಅಚರವಸ್ತುವೂ ಅಲ್ಲ. ಊಹೆಯಿಂದಲಾಗಲಿ, ಅಳತೆಯಿಂದಾಗಲಿ ಈ ಲಿಂಗಸ್ವರೂಪವನ್ನು ನಿರ್ಣಯಿಸಲು ಸಾಧ್ಯವಿಲ್ಲ. ॥೩೧॥

ನಾದಬಿಂದುಮಯವಾಗಿ, ಪ್ರತ್ಯಕ್ಷಾದಿಪ್ರಮಾಣಗಳಿಗೆ ಸುಲಭವಾಗಿ ಸ್ಫುರಿಸತಕ್ಕುದಾಗಿಲ್ಲ. ಬಿಂಬಾತ್ಮಕವೂ ಅಲ್ಲ. ಬಿಂಬವಿಶಿಷ್ಟವಸ್ತುವೂ ಅಲ್ಲ. ವಸ್ತುಸ್ಥಿತಿಯಿಂದ ದೂರವಾಗಿ ಪ್ರತಿಭಾಸಮಾನವಾಗುವುದೂ ಅಲ್ಲ. ಪ್ರತ್ಯಕ್ಷವಾಗುವುದೂ ಅಲ್ಲ. ಆದರೆ ಗೋಚರಿಸದೇ ಇರತಕ್ಕದ್ದೂ ಅಲ್ಲ. ಸಿಕ್ಕುವ ಮತ್ತು ಸಿಕ್ಕದಿರುವ ಪದಾರ್ಥವೂ ಅಲ್ಲ. ವಾಗ್ರೂಪವಾದದ್ದೂ, ಮಾತುಗಳಿಗೆ ಗೋಚರಿಸುವುದೂ ಅಲ್ಲ. ಮಾತಿನಿಂದ ವರ್ಣಿಸಲಾಗತಕ್ಕದ್ದಲ್ಲ. ಸಜಾತೀಯವಾದ ಮತ್ತೊಂದು ವಸ್ತುವೂ ಇದಕ್ಕಿಲ್ಲ. ॥೩೨-೩೩॥

ನ ಮನೋ ನಾಮನಃಸ್ಪ್ರಾಶ್ಯಂ ನ ಪ್ರಾಣಂ ಪ್ರಾಣಬೋಧಕಂ ।
ನ ಚಕ್ಷೂರೂಪರಹಿತಂ ತದ್ದೃಶ್ಯಜ್ಞಾನವರ್ಜಿತಂ ॥೩೪॥

ನ ಶ್ರೋತ್ರಂ ಶ್ರವಣಾದ್ಧೀನಂ ತದಾಕಾಶಮನೌಪಮಂ ।
ನ ಘ್ರಾಣಂ ಗಂಧಹೀನಂ ಚ ಪೃಥಿವೀಪರಿವರ್ಜಿತಂ ॥೩೫॥

ನ ರಸಂ ತದಪೋಹೀನಂ ಜಿಹ್ವಾಸ್ವಾನಾದಿವರ್ಜಿತಂ ।
ನ ಪಾಣಿಪಾದಪಾಯ್ವಾದಿಮರುದ್ಧೀನಂ ಶಿವೇ ಹಿ ತತ್ ॥೩೬॥

ನ ರೂಪರಸಗಂಧಾದಿಶಬ್ದಸ್ಪರ್ಶವಿವರ್ಜಿತಂ ।
ನೈವಾಕಾಶಮನಾಕಾಶಮಾಕಾಶಸ್ಯಾಪಿ ಚೇತಕಂ ॥೩೭॥

ನ ಭೂಮಿರ್ಭೌತಿಕೈರ್ಹೀನಂ ಘನಭಾವವಿವರ್ಜಿತಂ ।
ನ ತೇಜಸ್ತೇಜಸಾ ಹೀನಂ ಸರ್ವತೇಜಃಪ್ರವರ್ತಕಂ ॥೩೮॥

ನ ವಾಯುಶ್ಚಲನಾದ್ಧೀನಂ ವಾಯೋರುದ್ಬೋಧಕಂ ಹಿ ತತ್ ।
ನ ಚೈತತ್ಸಲಿಲಂ ಸಾಕ್ಷಾತ್ಸಲಿಲದ್ರವಕಲ್ಪಕಂ ॥೩೯॥

ಈ ಲಿಂಗವು ಮನಸ್ಸೂ ಅಲ್ಲ. ಮನಸ್ಸಿಗೆ ತಿಳಿಯದುದೂ ಅಲ್ಲ. ಪ್ರಾಣವೂ ಅಲ್ಲ. ಪ್ರಾಣಬೋಧಕವೂ ಅಲ್ಲ. ಕಣ್ಣೂ ಅದಕ್ಕೆ ವಿಷಯವಾಗುವ ವಸ್ತುವೂ ಅಲ್ಲ. ಕಿವಿಯೂ, ಅದಕ್ಕೆ ಶ್ರವಣವಾಗುವ ಶಬ್ದವೂ ಅಲ್ಲ. ಆಕಾಶವಲ್ಲ. ತತ್ಸದೃಶವಾದದ್ದೂ ಅಲ್ಲ. ಘ್ರಾಣೇಂದ್ರಿಯವಾಗಲಿ, ತದ್ವಿಷಯವಾಗಲಿ, ಗಂಧಗುಣವಾಗಲಿ, ತದಾಶ್ರಯವಾದ ಪೃಥಿವಿಯೇ ಆಗಲಿ ಇದಲ್ಲ. ॥೩೪-೩೫॥

ರಸಗುಣವಾಗಲಿ, ಅದಕ್ಕೆ ಆಧಾರವಾದ ನೀರಾಗಲಿ ಇದಲ್ಲ. ಜಿಹ್ವಾಸ್ವಾನಾದಿಗಳು ಈ ಶಿವಲಿಂಗಕ್ಕಿಲ್ಲ. ಕೈ, ಕಾಲು, ಪಾಯ್ವಾದಿ ಇತರ ಅವಯವಗಳೂ ವಾಯುವೂ ಇದಲ್ಲ. ರೂಪ, ರಸ, ಗಂಧ, ಸ್ಪರ್ಶ, ಶಬ್ದಾತ್ಮಕಗಳಾದ ಯಾವ ಇಂದ್ರಿಯಾರ್ಥಗಳೂ ಇದಲ್ಲ. ಆಕಾಶವಾಗಲಿ, ಆಕಾಶಾಶ್ರಿತವಾಗಲಿ, ಇದಲ್ಲ. ಆಕಾಶಕ್ಕೂ ಸಹ ಚೈತನ್ಯಕೊಡುವ ವಸ್ತುವಿದು. ॥೩೬-೩೭॥

ಭೂಮಿಯೂ ಅಲ್ಲ. ಪಂಚಭೂತಗಳ ಸಂಬಂಧವೂ ಇದರಲ್ಲಿಲ್ಲ. ಘನಭಾವವಾಗಲಿ, ತೇಜೋರೂಪವಾಗಲಿ, ತೇಜೋರಾಹಿತ್ಯವಾಗಲಿ ಇದಲ್ಲ. ಲೋಕದ ಸಕಲ ತೇಜಸ್ಸುಗಳಿಗೂ ತೇಜಸ್ಸನ್ನು ಕೊಡತಕ್ಕದ್ದೇ ಇದು. ವಾಯುರೂಪಿಯೂ,

ಭೂತಾದ್ವಿಹೀನಂ ಭೂತಾದಿ ಭೂತಾಧಾರಂ ಸನಾತನಂ ।
ಅಪಾಣಿಪಾದವದನಂ ಅಚಕ್ಷುಶ್ಶ್ರುತಿವರ್ಜಿತಂ ॥೪೦॥

ಸರ್ವೇಂದ್ರಿಯಗುಣಾತೀತಂ ಸರ್ವೇಂದ್ರಿಯವಿವರ್ಜಿತಂ ।
ಸರ್ವಸ್ಯ ಪ್ರಭುಮೀಶಾನಂ ಸರ್ವಸ್ಯ ಶರಣಂ ಸುಹೃತ್ ॥೪೧॥

ಸರ್ವೇಂದ್ರಿಯಗುಣೈಃ ಕಾಂತಂ ನಿತ್ಯಕಾಂತಂ ಸದೋದಿತಂ ।
ನವದ್ವಾರಗೃಹಾಂತಸ್ಥ ದಿವ್ಯಪೀಠೇ ಪ್ರತಿಷ್ಠಿತಂ ॥೪೨॥

ಯದಪ್ರತಿಷ್ಠಂ ವಿಶ್ವಾಸ್ಯಂ ವಿಶ್ವಹಸ್ತೋರುಪಾದಕಂ ।
ವಿಶ್ವಮೌಲಿಂ ವಿಶ್ವಪೀಠಂ ವಿಶ್ವಪೀಠತಮಃಪರಂ ॥೪೩॥

ನ ತತ್ರ ಕಿಂಚಿತ್ಪ್ರತಿಭಾತಿ ರೂಪಂ
ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್

ವಾಯುವಿನಂತೆ ಚಲನವುಳ್ಳದ್ದೂ ಇದಲ್ಲ. ಸ್ವತಃ ಜಲರೂಪವಲ್ಲದಿದ್ದರೂ, ದ್ರವ ವಸ್ತುಗಳನ್ನು ಕಲ್ಪಿಸುವುದೇ ಇದು. ||೩೮-೩೯||

ಪಂಚಭೂತಗಳಿಂದ ಕೂಡದಿದ್ದರೂ, ಸಕಲ ಭೂತಗಳಿಗೂ ಆಧಾರವಾಗಿದೆ. ಈ ಶಿವಲಿಂಗಕ್ಕೆ ಕೈಕಾಲುಗಳಾಗಲಿ, ಕಣ್ಣುಕಿವಿಗಳಾಗಲಿ ಇಲ್ಲ. ಯಾವ ಇಂದ್ರಿಯಗಳೂ, ಆ ಇಂದ್ರಿಯಗಳ ಗುಣಗಳೂ ಇದರಲ್ಲಿ ಕಾಣಲಾರದು. ಸಕಲ ಲೋಕಕ್ಕೂ ಪತಿಯೆನಿಸಿ ಸರ್ವರಿಗೂ ಶರಣನಾಗಿ, ಸ್ನೇಹಿತನಂತೆ ವರ್ತಿಸುವ ಶಕ್ತಿಯೇ ಈ ಲಿಂಗವು. ||೪೦-೪೧||

ಹೀಗಿದ್ದರೂ, ಎಲ್ಲಾ ಇಂದ್ರಿಯಗಳ ಗುಣಗಳೂ ಇಲ್ಲಿಯೇ ಇರುವುವು. ನಿತ್ಯಸುಂದರವಾಗಿ, ಸ್ವಯಂಪ್ರಕಾಶವಾಗಿ, ನವದ್ವಾರಗಳಿಂದ ಕೂಡಿ ರಂಜಿಸುವ ದಿವ್ಯ ದೇವಾಲಯದ ಮಧ್ಯದಲ್ಲಿ ಪ್ರತಿಷ್ಠಿತವಾಗಿರುವುದು. ಆದರೆ ಇದನ್ನು ಪ್ರತಿಷ್ಠೆ ಮಾಡಿದವರು ಯಾರೂ ಇಲ್ಲ. ಇದಕ್ಕೆ ಪ್ರಪಂಚವೇ ಕೈಕಾಲುಗಳು. ಪ್ರಪಂಚವೇ ಶಿರಸ್ಸು. ಪೀಠವೂ ಪ್ರಪಂಚವೇ. ಆದರೆ ಪ್ರಪಂಚದಿಂದ ಮಾತ್ರ ಭಿನ್ನವಾಗಿರುವುದು. ||೪೨೪೩||

ಆ ಶಿವಲಿಂಗದಲ್ಲಿ ಮತ್ತಾವುದರ ಆಕಾರವೂ ಪ್ರತಿಫಲಿಸಲಾರದು. ವಾಸ್ತವವಾಗಿಯೂ ಇದಕ್ಕಿಂತ ಪ್ರತ್ಯೇಕವಾದ ವಸ್ತುವೂ ಜಗತ್ತಿನಲ್ಲಿಲ್ಲ. ಇದರ ವಾಸ್ತವಾಂಶ

ವೇದಾಂತವೇದ್ಯಂ ನಿರ್ಗುಣಂ ಯದ್ವಚೋಗಂ
ಯತೋ ಜಾತಂ ಭುವನಂ ವೈ ವಿಚಿತ್ರಂ ॥೪೪॥

ಯಸ್ಮಿಲ್ಲಿಂಗೇ ಸ್ಥಿತಂ ಚೈತದ್ಯಸ್ಮಿನ್ ಲೀನಂ ಜಗಚ್ಛಿನೇ ।
ಯದಾಧಾರಮಿದಂ ವಿಶ್ವಂ ತ್ರಿಗುಣಂ ಪರಿವರ್ತತೇ ॥೪೫॥

ತಲ್ಲಿಂಗಪರಿಮಾಣಂ ಹಿ ಕೇನ ವಕ್ತುಂ ಹಿ ಪಾರ್ಯತೇ ।
ಪರಿಮಾಣಾದಿರಹಿತಂ ಗುಣಖಂಡತ್ರಯಾತಿಗಂ ॥೪೬॥

ಅಖಂಡಮೇಕಪಿಂಡಾಂಡಬ್ರಹ್ಮಾಂಡೋಪರಿ ತತ್ಸ್ಥಿತಂ ।
ನ ಪ್ರತಿಷ್ಠಾ ನ ಚ ಸ್ಥಾನಂ ತಲ್ಲಿಂಗಸ್ಯ ಮಹೇಶ್ವರಿ ॥೪೭॥

ನಾಲಯಸ್ಥಂ ಮಹೇಶಾನಿ ಸರ್ವಾವಾಸ್ಯಂ ಮಹಚ್ಚ ತತ್ ।
ಸರ್ವಭೂತಮಹಾಕೋಶಗರ್ಭಾಗಾರಸ್ಥಮಂಬಿಕೇ ॥೪೮॥

ವನ್ನು ಉಪನಿಷತ್ತಿನಿಂದ ತಿಳಿಯಬಹುದು. ನಿರ್ಗುಣವಾಗಿಯೂ, ವಾಗಗೋಚರ ವಾಗಿಯೂ, ಇರುವ ಈ ಶಿವಲಿಂಗದಿಂದಲೇ ಈ ವಿಚಿತ್ರವಾದ ಜಗತ್ತು ಆವಿರ್ಭವಿಸಿ ರುವುದು. ಇದಲ್ಲವೇ ಆಶ್ಚರ್ಯ! ॥೪೪॥

ಈ ಪ್ರಪಂಚವೆಲ್ಲಾ ಈ ಲಿಂಗದಲ್ಲಿಯೇ ನಿಂತಿರುವುದು. ಕೊನೆಗೆ ಲಯವಾ ಗುವುದೂ ಇದರಲ್ಲಿಯೇ. ವಿಶ್ವಾಧಾರಕವಾದ ಈ ಲಿಂಗವೇ ತ್ರಿಗುಣಾತ್ಮಕವಾಗಿ ಭಿನ್ನ ಭಿನ್ನ ರೂಪದಿಂದ ಪ್ರತಿಫಲಿಸುತ್ತಿರುವುದು. ॥೪೫॥

ಈ ಶಿವಲಿಂಗದ ಪ್ರಮಾಣವನ್ನು ಯಾರಿಂದಲೂ ಹೇಳಲು ಸಾಧ್ಯವಿಲ್ಲ. ಏಕೆಂದರೆ, ಇದಕ್ಕೆ ಒಂದು ಅಳತೆಯಾಗಲಿ, ದರ್ಶನಸಾಧಕಗಳಾದ ಸತ್ವರಜಸ್ತಮೋ ರೂಪ ಗುಣಗಳಾಗಲಿ, ಇರುವುದಿಲ್ಲ. ॥೪೬॥

ಈ ಲಿಂಗವು ಅಖಂಡವಾದದ್ದು. ಸಮಸ್ತ ಪಿಂಡಾಂಡಗಳಿಗೂ ಆಶ್ರಯವಾದ ಬ್ರಹ್ಮಾಂಡವನ್ನೂ ಮೀರಿ ನೆಲಸಿರತಕ್ಕದ್ದು. ಇದಕ್ಕೆ ಒಂದು ನಿರ್ದಿಷ್ಟವಾದ ಸ್ಥಾನ ವಾಗಲಿ, ಪ್ರತಿಷ್ಠಾಕ್ರಮವಾಗಲಿ ಇರುವುದಿಲ್ಲ. ॥೪೭॥

ಇದಕ್ಕೆ ನಿರ್ದಿಷ್ಟವಾದ ಒಂದು ಆಲಯವಿಲ್ಲ. ಸರ್ವತ್ರ ಹರಡಿ, ಸರ್ವ ವ್ಯಾಪಕವಾಗಿರುವುದು. ಮತ್ತು ಮಹಾವಸ್ತುವೆನಿಸಿ, ಇದರ ಗರ್ಭದಲ್ಲಿ ಸಕಲ

ಅಣೋರಣೀಯಶೋಪಿ ಮಹನ್ಮಹತೋಪಿ ಮಹತ್ತರಂ ।
ಸರ್ವಾಧಾರಮನಾಧಾರಂ ವಿಶ್ವರೂಪಂ ಪ್ರಕಾಶನಂ ॥೪೯॥

ತೇಜೋರೂಪಂ ಸ್ವಪ್ರಕಾಶಂ ಜೀವೇಶಾನಾದಿವರ್ಜಿತಂ ।
ಪ್ರತ್ಯಕ್ಚೈತನ್ಯಮಾತ್ಮಾನಮಾನಂದಘನಮದ್ವಯಂ ॥೫೦॥

ಬ್ರಹ್ಮವಿಷ್ಣುಹರಾದ್ಯುತ್ಥಪೀಠಜಾಲವಿವರ್ಜಿತಂ ।
ಸ್ವಾತ್ಮೈಕವೇದ್ಯಂ ತಲ್ಲಿಂಗಂ ಸ್ವಸ್ಮಿನ್ನೇವ ಪ್ರತಿಷ್ಠಿತಂ ॥೫೧॥

ತದ್ಭೂಮಾ ಪರಮಾನಂದಂ ತತ್ರ ನೋ ನಾಸ್ತಿ ಕಿಂಚನ ।
ತಸ್ಮಿಲ್ಲಿಂಗೇ ದೃಷ್ಟಿಗತೇ ದೃಗ್ರೂಪೋ ಲಿಂಗತಾಮಿಯಾತ್ ॥೫೨॥

ಲಿಂಗೋಪ್ಯಲಿಂಗೋ ಭವತಿ ತಲ್ಲಿಂಗಸ್ಯೈವ ಶೀಲನಾತ್ ।
ನಾನ್ಯೇ ಪಶ್ಯಂತಿ ತಲ್ಲಿಂಗಂ ನಾನ್ಯೇ ಜಾನಂತಿ ಕೇಚನ ॥೫೩॥

ಪ್ರಾಣಿವರ್ಗವನ್ನೂ, ಲೋಕಸಮೂಹಗಳನ್ನೂ ಒಳಗೊಂಡಿರುವುದು. ಅಲ್ಲದೆ ಪ್ರಾಣಿಗಳಲ್ಲಿರುವ ಮಹಾಭೂತಾತ್ಮಕಗಳಾಗಿ ವಿಖ್ಯಾತವಾಗಿರುವ ಅನ್ನಮಯಾದಿ ಪಂಚಕೋಶಗಳಲ್ಲಿ ಅಡಗಿರುವುದೂ ಈ ಶಿವಲಿಂಗವೇ. ||೪೮||

ಈ ಶಿವಲಿಂಗವು ಅಣುವಸ್ತುಗಳಿಗಿಂತಲೂ ಚಿಕ್ಕದಾದದ್ದು. ಮಹಾವಸ್ತುಗಳೆಲ್ಲಕ್ಕೂ ಮಹತ್ತೆನಿಸಿದೆ. ಸರ್ವಕ್ಕೂ ಆಧಾರವೆನಿಸಿ, ವಿಶ್ವರೂಪವಾಗಿ ಪ್ರಕಾಶಿಸುತ್ತಿರುವ ತೇಜೋರೂಪವೇ ಇದು. ಜೀವ, ಆತ್ಮ ಎಂಬ ಭೇದವಿಲ್ಲದೆ ಏಕರೂಪದಿಂದ ಸ್ವಪ್ರಕಾಶವಸ್ತುವೆನಿಸಿ, ಚೈತನ್ಯವಿಶಿಷ್ಟವಾಗಿ ಆನಂದಮಯವಾಗಿರುವುದೇ ಈ ಶಿವಲಿಂಗದ ವೈಶಿಷ್ಟ್ಯ. ||೪೯-೫೦||

ಬ್ರಹ್ಮ, ವಿಷ್ಣು, ಮಹೇಶ್ವರರಿಗಿರುವ ಯಾವ ಪೀಠಾದ್ಯುಪಲಕ್ಷಿತತ್ವವೂ ಈ ಲಿಂಗಕ್ಕಿಲ್ಲ. ಕೇವಲ ಆತ್ಮಗಮ್ಯವಾಗಿ, ತನ್ನಲ್ಲಿಯೇ ನಿಂತುಹೋಗುವ, ಪರಮಾನಂದರೂಪವಾಗಿರುವ ಈ ಶಿವಲಿಂಗಕ್ಕಿಂತ ಬೇರೆಯಾಗಿ ನಾನಾರೂಪದಿಂದ ಕಾಣುವ ಈ ಜಗತ್ತು ವಾಸ್ತವವಾದದ್ದಲ್ಲ. ಈ ಲಿಂಗವು ಜ್ಞಾನಗೋಚರವಾದೊಡನೆಯೇ, ನಿಜವಾದ ಲಿಂಗವಿಷಯಕವಾದ ಜ್ಞಾನವು ತಲೆದೋರುವುದು. ||೫೧-೫೨||

ಈ ಶಿವಲಿಂಗದ ಸ್ವರೂಪವನ್ನರಿಯುವುದರಿಂದ ಲಿಂಗದೇಹವೂ ಸಹ ಸ್ವದೇಹತ್ಯಾಗಮಾಡಿ ಮುಕ್ತನಾಗುವುದು. ಏಕೆಂದರೆ ಲಿಂಗಾಂತರ್ಗತನಾದ ಪರ್ತ

ತಲ್ಲಿಂಗಂ ಪರಮಾನಂದಂ ರಸಹೀನಂ ರಸಾತಿಗಂ।
ಉಪಾಸ್ಯಂ ಸರ್ವದಾ ಸರ್ವೈಸ್ತದು ನಾತ್ಯೇತಿ ಕಿಂಚನ ॥೫೪॥

ನ ತಸ್ಯ ಮಹಿಮಾ ಕಶ್ಚಿತ್ ಸ್ವಮಹಿಮ್ನಿ ಪ್ರತಿಷ್ಠಿತಂ।
ಸರ್ವಹೃತ್ಸಂಸ್ಥಿತಂ ಲಿಂಗಂ ನಿತ್ಯಂ ಸರ್ವಪ್ರಕಾಶಕಂ ॥೫೫॥

ಅವಸ್ಥಾಭೇದರಹಿತಂ ಮಾಯಾಗರ್ಭಗೃಹಾಂತರಂ।
ಸಾರ್ವಕಾಲಿಕಪೂಜ್ಯಂ ತತ್ ಷಟ್‌ತ್ರಿಕಾಲಾದಿವರ್ಜಿತಂ ॥೫೬॥

ಪ್ರವಿಷ್ಟಂ ಸ್ವಾವೃತತನೋರಾಶಿಸ್ವಾಭಾನಭಾಸಕಂ ॥೫೭॥

ನ ತತ್ರ ವಾಙ್ನ ಮನೋ ವಾ ಕದಾಚಿತ್
ನ ಚೇಂದ್ರಿಯಪ್ರಾಣಭೂತಾದಿಸಂಘಃ।
ಸ್ವಯಂ ಪ್ರಭಾತಂ ಭಾಸಿತುಂ ನೋ ಸಮರ್ಥೋ
ದೃಗ್ರೂಪಂ ತತ್ಕೇವಲಂ ಬೋಧಹೀನಂ ॥೫೮॥

ಬ್ರಹ್ಮವಸ್ತುವೊಂದೇ ಶಾಶ್ವತವಾದದ್ದು. ಶಿವಲಿಂಗಸ್ವರೂಪ ಜ್ಞಾನವಿಲ್ಲದವರು ಎಂದೂ ಮುಕ್ತರಾಗುವುದಿಲ್ಲ. ಆದರಿಂದಲೇ ಯಾರೂ ಈ ಲಿಂಗವನ್ನು ಸರಿಯಾಗಿ ತಿಳಿಯಲಾರರು, ಮತ್ತು ಪರಮಾರ್ಥದೃಷ್ಟಿಯಿಂದ ನೋಡಲಾರರು. ॥೫೩-೫೪॥

ತನ್ನ ಮಹಿಮೆಯಲ್ಲದೆ ಮತ್ತಾವ ಮಹಿಮೆಯೂ ಈ ಲಿಂಗದಲ್ಲಿ ಗೋಚರಿಸುವಂತಿಲ್ಲ. ಸರ್ವರ ಹೃದಯದಲ್ಲಿಯೂ ಇದ್ದು ಸರ್ವಪ್ರಕಾಶಕವಾಗಿರುವ ಈ ಲಿಂಗವು ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯವಸ್ಥೆಗಳಿಂದ ದೂರವಾಗಿರುವುದು. ಇದು ಮಾಯಾವರಣದಿಂದ ಮುಚ್ಚಿಹೋಗದೆ, ಮಾಯಾಸಂಬಂಧದಿಂದ ಸರ್ವ ದೇಹಾಂತರ್ವರ್ತಿಯಾಗಿರುವುದು. ಲಿಂಗಕ್ಕೆ ಷಟ್ಕಾಲ, ತ್ರಿಕಾಲಗಳೆಂಬ ಕಾಲನಿಯಮವಿರುವುದಿಲ್ಲ. ಆದ್ದರಿಂದಲೇ ಇದು ಸರ್ವಕಾಲದಲ್ಲಿಯೂ ಪೂಜಾಯೋಗ್ಯವೆನಿಸಿದೆ. ॥೫೫-೫೬॥

ತನ್ನಿಂದ ಕಲ್ಪಿತವಾದ ಮಾಯಾರಾಶಿಯಲ್ಲಿ ತಾನೇ ಪ್ರವೇಶಿಸಿ, ತನ್ನ ಕಾಂತಿಯಿಂದಲೇ ಅದನ್ನೂ ಪ್ರಕಾಶಗೊಳಿಸಿ ಜಗನ್ಮಯವಾಗಿ ಪ್ರತಿಫಲಿಸುವುದು. ಇದರಲ್ಲಿ ವಾಕ್ಕಾಗಲಿ, ಮನಸ್ಸಾಗಲಿ, ಇಂದ್ರಿಯ, ಪ್ರಾಣ, ಪಂಚಭೂತಾದಿಗಳು ಇವು ಯಾವುವೂ ಕಾಣುವುದಿಲ್ಲ. ಸ್ವಯಂ ತೇಜೋರೂಪವಾಗಿರುವುದರಿಂದ ಇದನ್ನು ನೋಡಲು ಮತ್ತೊಂದು ತೇಜಸ್ಸು ಪ್ರಕಾಶಕವಾಗಲಾರದು. ಕೇವಲ ಜ್ಞಾನರೂಪ

ಜೀವೇಶ್ವರೌ ಬ್ರಹ್ಮವಿಷ್ಣೂ ಕದಾಚಿತ್
ತಲ್ಲಿಂಗಮೇವಂ ಸ್ವಹೃದ್ದೃಷ್ಟಿಹೀನೌ ।
ಕಿಂಚಿಜ್ಞಸರ್ವಜ್ಞವಿಮೋಹಮಾನಿನೌ
ಅಹಂಕಾರಮಾಯಾವಿವಶಾಂತರಂಗೌ ॥೫೯॥

ಹಂಸೀಭವದ್ವಾಕ್ಯಜಪಾಮಿಮಾಂ ವಪನ್
ಜೀವೋ ವಿಧಿರ್ಮೋಹಜಾಲೇಷು ಮಗ್ನಃ ।
ಅಹಂಗ್ರಹೋಪಾಸನಾಶಸ್ತ್ರಜಾಲೈ
ಸ್ಸರ್ವಜ್ಞಮೋ[1]ವಾಭಿಮುಖೇ ಯುಯೋಧಂ ॥೬೦॥

ವಿಷ್ಣುಂ ತದಾ ಚೇಶ್ವರಪ್ರಾಜ್ಞಮಜ್ಞಂ
ಸ ಚಾಪ್ಯಹಂಕಾರವಶಾಂತರಾತ್ಮಾ ।

ವಾಗಿರುವುದರಿಂದ ಇದು ಇತರ ವಿಧವಾದ ಯಾವ ಶಾಬ್ದಬೋಧಗಳಿಗೂ ಅವಕಾಶ ಕೊಡತಕ್ಕದ್ದಲ್ಲವಾಗಿದೆ. ||೫೭-೫೮||

ಹಿಂದೆ ಒಂದು ಸಾರಿ ಬ್ರಹ್ಮ ಮತ್ತು ವಿಷ್ಣು ಇವರಿಬ್ಬರೂ, ಜೀವ ಮತ್ತು ಈಶ್ವರರೆನಿಸಿ ತಮ್ಮನ್ನೇ ತಾವು ಸರಿಯಾಗಿ ಅರಿಯದೆ, ತಮ್ಮ ಮನಸ್ಸಿನಲ್ಲಿ ಈ ಲಿಂಗ ವಿಷಯಕವಾದ ಅರಿವಿಲ್ಲದೆ ಜೀವನು ಏನೂ ತಿಳಿಯದವನೆಂದೂ, ಈಶ್ವರನು ಸರ್ವಜ್ಞನೆಂದೂ ತೋರಿಸಿಕೊಂಡರು. ಈ ವಿಧವಾದ ಜ್ಞಾನಕ್ಕೆ ಮೋಹ ಮತ್ತು ಅಹಂಕಾರಗಳೇ ಕಾರಣ. ಅದರಿಂದಲೇ ಅವರು ನನ್ನ ಮಾಯಾಜಾಲಕ್ಕೆ ಸಿಕ್ಕಿದವ ರೆಂದು ತಿಳಿದುಬರುವುದು. ||೫೯||

ಜೀವರೂಪಿಯಾದ ಬ್ರಹ್ಮನು ಹಂಸಗಾಯತ್ರೀ ಮಂತ್ರಪುರಶ್ಚರಣೆಮಾಡುತ್ತಾ ಕೇವಲ ಜೀವನೆನಿಸಿ ಮೋಹಜಾಲಕ್ಕೆ ಸಿಕ್ಕಿ ನರಳಿದನು. ವಿಷ್ಣುವು ಅಹಂಕಾರದಲ್ಲಿ ಸಿಕ್ಕಿದವನಾಗಿ, ಕೇವಲ ಅಸ್ತ್ರಶಸ್ತ್ರಗಳಿಂದ ಕೂಡಿ ಸರ್ವಜ್ಞನೆನಿಸಿಕೊಂಡು ಯುದ್ಧ ದಲ್ಲಿ ಬಹುವಾಗಿ ಹೋರಾಡಿದನು. ಅಂತೂ ಇಬ್ಬರೂ ಅಹಂಕಾರ ಮಮಕಾರಗಳಿಂದ ಸಿಕ್ಕಿ ನರಳಿದವರೇ. ||೬೦||

ಇಂತಹ ವಿಷ್ಣುವನ್ನೇ ಸರ್ವಜ್ಞನೆಂದೂ, ಪ್ರಾಜ್ಞನೆಂದೂ ತಿಳಿದು ಬ್ರಹ್ಮನೂ ಸಹ ಅಹಂಕಾರವಶನಾಗಿ ಅಜ್ಞಾನದಿಂದ ಕೂಡಿದ್ದನು. ಆ ಸಮಯದಲ್ಲಿ ನಾನು

1 ಅಭಿಮುಖೇಷು ಬೋಧಃ, ಮತ್ತು ಯೋಧ ಎಂಬ ಪಾಠಾಂತರವಿದೆ.

ಅಹಂ ಚ ಸರ್ವೇಶ್ವರ ಇತ್ಯಥೋಚ್ಯ
ಯದ್ವ್ಯಷ್ಟಿಲಿಂಗೋಭ್ಯುವಾಚ ವಿಧಿಂ ತಂ ॥೬೧॥

ಏವಂ ಚ ತೌ ಯುಯುಧಾತೇಽದ್ಯ ಶಾಸ್ತ್ರೈಃ
ಮಿಥ್ಯಾಭೂತೈಃ ಪಶ್ಯ ಮೋಹಾಂಧಕೌ ತೌ।
ಕದಾಚಿದ್ವೈಕ್ಷ್ಣಂತ ವಿಹಾಯ ಮೋಹಂ
ಕ್ಷರಾಕ್ಷರೌ ವಿಧಿವಿಷ್ಣೂ ಭವಾನಿ ॥೬೨॥

ವ್ಯಪೇತಮೋಹೌ ಭವತಂ ತದಂಬಿಕೇ
ದೃಷ್ಟ್ವಾಽಹತುರ್ಲಿಂಗಮೇತದ್ವಿಲೋಕ್ಯ।
ಪುನಶ್ಚ ಮಾಯಾಪ್ರಭವೈಶ್ಚ ಪಾಶೈ
ರ್ಮೌಲಿಂ ಮೂಲಂ ಚಾಸ್ಯ ಪಶ್ಯಾವ ಚೇತಿ ॥೬೩॥

ನಾಂತೋ ನ ಮೂಲಂ ನ ಚ ಮೌಲಿರಸ್ಯ
ಲಿಂಗಸ್ಯ ದೃಷ್ಟ್ವೋಽಪರತೌ ತದಾ ಶಿವೇ।

---

ಸರ್ವೇಶ್ವರನೆಂಬ ಭಾವವನ್ನು ಯಥಾಶ್ರುತವಾಗಿ ತಿಳಿಸಿ, ಆ ಕಾಲದಲ್ಲಿಯೇ ಈ ಶಿವ ಲಿಂಗದ ಮಹಿಮೆಯನ್ನು ವಿಸ್ತಾರವಾಗಿ ಬ್ರಹ್ಮನಿಗೆ ತಿಳಿಯಹೇಳಿದನು. ॥೬೧॥

ಹೀಗೆ ಎಲೌ ದೇವಿಯೇ, ಆ ಬ್ರಹ್ಮ, ವಿಷ್ಣು ಇವರಿಬ್ಬರೂ ಮಿಥ್ಯಾಭೂತ ವಾದ ಶಾಸ್ತ್ರಜಾಲಗಳಿಂದ ಸ್ತುತರಾಗಿ ಮೋಹಾಂಧಕಾರದಿಂದ ಕೂಡಿ ಕಾಲವನ್ನು ಕಳೆದರು. ಕೊನೆಯಲ್ಲಿ ಒಂದು ಸಾರಿ ಅಜ್ಞಾನವನ್ನು ಬಿಟ್ಟು, ಉತ್ಪತ್ತಿ ಮತ್ತು ನಾಶಕ್ಕೆ ತಾವು ಸಿಕ್ಕಿದವರೆಂದು ಅರಿತು, ಈ ಲಿಂಗವಿಷಯಕವಾದ ಮಹಿಮೆಯನ್ನು ಮತ್ತೆ ಅನುಸಂಧಾನಮಾಡತೊಡಗಿದರು. ॥೬೨॥

ಅನಂತರ ಅವರಿಗೆ ಅಜ್ಞಾನವು ತೊಲಗಿತು. ಈ ಮಹಾಮಹಿಮವಾದ ಲಿಂಗವನ್ನು ನೋಡಿ ಧನ್ಯರೆನಿಸಿದರು. ಆದರೂ ಮತ್ತೆ ಮಾಯಾಪಾಶಕ್ಕೆ ಸಿಕ್ಕಿದವ ರಾಗಿ, ಈ ಶಿವಲಿಂಗದ ಊರ್ಧ್ವಭಾಗವನ್ನೂ ಅಧೋಭಾಗವನ್ನೂ ನೋಡಬೇ ಕೆಂದು ನಿರ್ಧರಿಸಿದರು. ॥೬೩॥

ಆದಕ್ಕಾಗಿ ಇಬ್ಬರೂ ಕಷ್ಟಪಟ್ಟು ಆದ್ಯಂತಗಳನ್ನು ಹುಡುಕಿದರು. ಯಾರಿಗೂ ಅದು ದೊರೆಯಲಿಲ್ಲ. ಆಗಲೇ ವಿಷ್ಣುವು ವರಾಹರೂಪದಲ್ಲಿ ಪಾತಾಳಕ್ಕೂ, ಬ್ರಹ್ಮನು

ಭೂದಾರಹಂಸಾಕೃತಿದೇಹಭಾಜೌ
ಸ್ತುತ್ವಾ ಚ ಲಿಂಗೇ ವ್ಯರಮಂತ ತೌ ತದಾ ॥೬೪॥

ಕ್ಷರಾಕ್ಷರೌ ತೌ ಹರಿವೇಧಸೌ ಶಿವೇ
ಹಂಸಾಖ್ಯಮಂತ್ರೇಣ ವಿಭಾವ್ಯ ದೇವಂ ।
ಜ್ಞಾಜ್ಞಾನನೀಶೌ ಯದಾ ದೃಷ್ಟಲಿಂಗೌ
ಅಲಿಂಗಮಾಕಾಶಸಧರ್ಮಕೌ ತದಾ ॥೬೫॥

ವ್ಯಪೇತಮೋಹಾವಭವಂತ ತೌ ತದಾ
ಹ್ಯುಪಾಧಿಹೀನೌ ನ ಹಿ ಕಿಂಚಿದತ್ರ ।
ತದೇವ ಲಿಂಗಂ ಮಮ ದೇವ್ಯಲಿಂಗಂ
ನ ಪೂಜನಾಯಾಸಪರೈರ್ನರೈಶ್ಶಿವೇ ॥೬೬॥

ಹಂಸರೂಪದಿಂದ ನಭೋಮಾರ್ಗಕ್ಕೂ ಹೋಗಿದ್ದುದು. ಅವರ ಕಾರ್ಯವು ಕೊನೆಗೆ ನಿಷ್ಫಲವೆನಿಸಿತು. ಅನಂತರ ಮತ್ತೆ ಮೊದಲಿನ ಸ್ಥಳಕ್ಕೇ ಬಂದು ಇದೇ ಶಿವಲಿಂಗವನ್ನು ಬಹುವಾಗಿ ಪ್ರಾರ್ಥಿಸಿದರು. ॥೬೪॥

ದೇವಿಯೇ, ಉತ್ಪತ್ತಿ ಮತ್ತು ನಾಶಕಾರ್ಯಗಳಿಗೆ ಸಿಕ್ಕಿಬಿದ್ದ ಆ ಬ್ರಹ್ಮವಿಷ್ಣುಗಳೂ ಕೂಡ ಆಗ ಹಂಸಗಾಯತ್ರೀಮಂತ್ರಪಠನೆಯಿಂದ ಈ ಲಿಂಗಾನುಗ್ರಹವನ್ನು ಪಡೆದು ದಿವ್ಯಜ್ಞಾನಿಗಳಾದರು. ಆಗಲೇ, ಪರಬ್ರಹ್ಮವಸ್ತುವು ಲಿಂಗಾದಿಗಳಿಂದ ರಹಿತವಾದದ್ದು, ಆಕಾಶದಂತೆ ಸರ್ವವ್ಯಾಪಿಯು, ಇದಕ್ಕೆ ನಾಮರೂಪಾದಿಯಾದ ಯಾವ ಗುಣಗಳೂ ಇಲ್ಲ ಎಂಬುದನ್ನರಿತರು. ॥೬೫॥

ಮತ್ತು ಲಿಂಗಾನುಗ್ರಹದಿಂದ ಅವರೂ, ತಾವು ಮಾಯೋಪಾಧಿವಿವರ್ಜಿತರೆಂದು ತಿಳಿದರು. ಅದರಿಂದಲೇ ಆಗ ಜ್ಞಾನಿಗಳೆನಿಸಿದರು. ಅದೇ ರೀತಿಯಾಗಿಯೇ ಈ ಶಿವಲಿಂಗವೂ ಮಾಯಾರಹಿತವಾದದ್ದೆಂದೂ, ಉಪಾಧಿವಶದಿಂದ ಲಿಂಗಾದ್ಯಾಕಾರಗಳನ್ನು ಪಡೆದಿರುವುದೆಂದೂ, ಕೇವಲ ಪೂಜಾದಿಕರ್ಮಗಳಿಂದ ಈ ವಿಷಯವನ್ನು ತಿಳಿಯಲಾಗುವುದಿಲ್ಲವೆಂದೂ ಅರಿತರು. ॥೬೬॥

ಕಾರ್ಯಂ ಶಿಲಾಧಾತುಜಬಾಣಲಿಂಗೇ
ಚರೇ ಸ್ಥಿರೇ ಚಾಪಿ ವಿಶಿಷ್ಟಲಿಂಗೇ।
ಸಂಪೂಜಯೇದ್ಬಿಲ್ವದಲೈರ್ಭವಾನಿ
ಭವಾಂಬುಧೇಸ್ಸಂತರಣಾಯ ಲೋಕೇಃ ॥೬೭॥

ತಲ್ಲಿಂಗಪೂಜಾ ನ ಕದಾಚಿದೀದೃಶೈ
ರ್ನರೈಸ್ಸುರೈರ್ವಾ ಗಣವಿಪ್ರವರ್ಯೈಃ।
ಕರ್ತುಂ ನ ಶಕ್ಯಾ ವಿವಿಧೈರುಪಾಯೈ
ರ್ದಾನೈಸ್ತಪೋನಾಶನಯಾದಿಭಿಶ್ಶಿವೇ ॥೬೮॥

ಸಮರ್ಚನಂ ತತ್ಕಥಯೇ ಭವಾನಿ
ಗೂಢಂ ಸದಾ ಪ್ರಾಜ್ಞತನ್ವೈಕಗಮ್ಯಂ।
ತದರ್ಚನಂ ಪುಣ್ಯನರೈಕಲಭ್ಯ
ಮಲಭ್ಯಮನ್ಯೈರ್ನರಪಶುತ್ವಧರ್ಮೈಃ ॥೬೯॥

ದೇವಿಯೇ, ಶಿವಲಿಂಗವನ್ನು ಶಿಲೆಯಿಂದಲೂ, ಲೋಹಗಳಿಂದಲೂ ನಿರ್ಮಿಸಬಹುದು ಅಥವಾ ನರ್ಮದಾಲಿಂಗವನ್ನು ತಂದು ಪೂಜಿಸಬಹುದು. ಶಿವಲಿಂಗಗಳಲ್ಲಿ, ಜಂಗಮರೂಪವಾದ ಚರಲಿಂಗವೂ ದೇವಾಲಯಾದಿಗಳಲ್ಲಿ ಪ್ರತಿಷ್ಠಿತವಾದ ಸ್ಥಿರಲಿಂಗವೂ ಗುರುಲಿಂಗ, ಆಚಾರಲಿಂಗವೇ ಮೊದಲಾದ ಪ್ರಭೇದಗಳುಳ್ಳ ಇಷ್ಟಲಿಂಗವೂ, ಬೇರೆ ಬೇರೆ ವಿಧಗಳಾಗಿ ತೋರಿಬರುವುವು. ಈ ಎಲ್ಲಾ ವಿಧದ ಲಿಂಗಗಳೂ ಪೂಜಾರ್ಹಗಳೇ. ಇವುಗಳನ್ನು ಬಿಲ್ವಪತ್ರಾದಿಗಳಿಂದ ಪೂಜಿಸಿದವರು ಸಂಸಾರ ದುಃಖವನ್ನು ದಾಟಿ ಮುಕ್ತರಾಗಲು ಸಿದ್ಧರಾಗುವರು. ॥೬೭॥

ದೇವಿಯೇ, ಈ ದೇವತೆಗಳಾಗಲಿ, ಮನುಷ್ಯರಾಗಲಿ, ವಿಪ್ರವರ್ಯರಾಗಲಿ, ಯಾವ ಯಾವ ತಪೋದಾನಾದಿ ಕರ್ಮಗಳಿಂದ ಸುಕೃತವನ್ನಾರ್ಜಿಸಿದರೂ, ಈ ದಿವ್ಯಲಿಂಗವನ್ನು ವಿಧಿವತ್ತಾಗಿ ಪೂಜಿಸಲಾರರು. ॥೬೮॥

ಈ ಲಿಂಗದ ಪೂಜಾಕ್ರಮವನ್ನು ನಾನು ನಿನಗೆ ಗುಟ್ಟಾಗಿ ಹೇಳುವೆನು. ಇದು ಹೇಳಿದರೂ ಪ್ರಾಜ್ಞರಿಗೆ ಮಾತ್ರ ಸಂಪೂರ್ಣವಾಗಿ ತಿಳಿಯುವುದು. ಆ ರೀತಿ ಅರ್ಚನೆಮಾಡುವುದು ಕೇವಲ ಪುಣ್ಯಶಾಲಿಗಳಿಂದ ಮಾತ್ರ ಸಾಧ್ಯ. ಮನುಷ್ಯರಂತೆ, ಪಶುಗಳಂತೆ ಇರುವ ಯಾವ ಪ್ರಾಣಿವಿಶೇಷಗಳಿಗೂ ಇದು ಸಾಧ್ಯವಿಲ್ಲ. ॥೬೯॥

ಭೂತಾದಿಕಾರಣಧರಾಧರಧಾರಣೇನ
ಸರ್ವಜ್ಞರೂಪಹರಿಣಾ ಕಿಟಿರೂಪಕೇಣ ।
ಕಿಂಚಿಜ್ಞಜೀವವರಹಂಸಕಭೂತಪುಣ್ಯ
ಪಾಥೋಜಜಾತವದನೈಸ್ಸ್ತುತಮರ್ಚಿತಂ ಚ ॥೭೦॥

ಹೃಲ್ಲಿಂಗಮಾತ್ಮಕಮುಮೇ ಮನಸಾಭಿಪಶ್ಯ ।
ಪಶ್ಯಂಸ್ತದಾತ್ಮಕತಯಾ ಭವತೀವ ಚಿತ್ರಂ ॥೭೧॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಆತ್ಮಲಿಂಗಕಥನಂ ನಾಮ
ಅಷ್ಟಪಂಚಾಶೋಽಧ್ಯಾಯಃ

ಪಂಚಭೂತಗಳಲ್ಲಿ ಮೊದಲನೆಯದಾದ ಪೃಥಿವಿಯನ್ನೇ ಹೊತ್ತಿರುವ ಆದಿ ಶೇಷನಮೇಲೆ ಪವಡಿಸಿ ಸರ್ವಜ್ಞರೂಪಿಯಾಗಿ ವರಾಹರೂಪದಿಂದ ಪಾತಾಳವನ್ನು ಹೊಕ್ಕ ವಿಷ್ಣುವೂ, ಅಲ್ಪಜ್ಞನೂ, ಜೀವನೂ ಎನಿಸಿ, ಹಂಸಾಕೃತಿಯಿಂದ ನಭೋ ಮಾರ್ಗದಲ್ಲಿ ಸಂಚರಿಸಿದ ಪದ್ಮಸಂಭವನಾದ ಬ್ರಹ್ಮನೂ, ಈ ದಿವ್ಯಲಿಂಗವನ್ನು ಬಹುವಾಗಿ ಸ್ತುತಿಸಿರುವರು. ಮತ್ತು ಅರ್ಚನೆಮಾಡಿರುವರು. ಪಾರ್ವತಿಯೇ, ಇಲ್ಲಿನವರೆಗೂ ವಿವರಿಸಿದ ಈ ದಿವ್ಯಲಿಂಗವನ್ನೇ ನನ್ನ ಹೃದಯಲಿಂಗ ಅಥವಾ ಆತ್ಮ ಲಿಂಗವೆಂಬುದಾಗಿ ತಿಳಿ. ಇದರ ಸ್ವರೂಪವನ್ನು ಸರಿಯಾಗಿ ಮನನಮಾಡಿನೋಡು. ನಿನಗೆ ಇದು ಅತಿ ವಿಚಿತ್ರವಾಗಿ ಕಾಣುತ್ತಿರುವುದಲ್ಲವೆ? ಎಂದು ಶಂಕರನು ಪಾರ್ವ ತಿಗೆ ಆತ್ಮಲಿಂಗದ ವಿಷಯವನ್ನು ವಿಸ್ತಾರವಾಗಿ ಬೋಧಿಸಿದನು. ||೭೦-೭೧||

ಇಲ್ಲಿಗೆ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಆತ್ಮಲಿಂಗಸ್ವರೂಪನಿರೂಪಣವೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಏಕೋನಷಷ್ಟಿತಮೋಽಧ್ಯಾಯಃ

### ಉಪನಿಷಲ್ಲಿಂಗಕಥನಂ

ಅಹಮೀಶಶ್ಚ ಜೀವೋಽಹಂ ಇತ್ಯಹಂಕಾರಮಾನಿನೌ ।
ತಾವೇವ ಹರಿಬ್ರಹ್ಮಾಣೌ ತಲ್ಲಿಂಗಾದರ್ಶಕೌ ಶಿವೇ ॥೧॥

ತನ್ಮೌಲಿಮೂಲಂ ಚ ಸುರೌ ಸೋಽಹಂಕಾರಃ ಪ್ರಕೀರ್ತಿತಃ ।
ಅಹಂ ಮಾನಾಭಿಪನ್ನಾನಾಂ ನಾಸ್ತಿ ತತ್ಪೂಜನಂ ಶಿವೇ ॥೨॥

ವರ್ಣಾಶ್ರಮಮಹಾಧರ್ಮಶ್ರಮೀಭಿಸ್ತದಪೂಜನಂ ।
ತತ್ಪೂಜಾರಹಿತಾನಾಂ ತು ನಾಸ್ತಿ ಮುಕ್ತಿಃ ಕದಾಚನ ॥೩॥

ತತ್ಪೂಜಯಾ ವಿಮುಚ್ಯೇತ ನಾನ್ಯಥಾ ಕರ್ಮಕೋಟಿಭಿಃ ।
ಸುರಾಣಾಂ ರೂಪಪೂಜಾತೋ ಮಮ ಲಿಂಗಾರ್ಚನಂ ವರಂ ॥೪॥

## ಶ್ರೀಶಿವರಹಸ್ಯದಲ್ಲಿ ಐವತ್ತೊಂಬತ್ತನೆಯ ಅಧ್ಯಾಯ

ಪರಮೇಶ್ವರನು ದೇವಿಯನ್ನು ಕುರಿತು ಮತ್ತೆ ಹೀಗೆ ಹೇಳಲಾರಂಭಿಸಿದನು. "ದೇವಿಯೇ, ನಾನೇ ಸರ್ವಜ್ಞ, ನಾನು ಜೀವ ಎಂಬ ಭಾವನೆಯಿಂದ ವಿಷ್ಣು ಮತ್ತು ಬ್ರಹ್ಮ ಇವರಿಬ್ಬರೂ ಬಹಳ ಪ್ರಯತ್ನಪಟ್ಟು ಕೊನೆಗೆ ಶಿವಲಿಂಗದ ಮೂಲವನ್ನೂ, ಶಿರಸ್ಸನ್ನೂ ಕಾಣಲಾರದೆ ಹೋದರು. ಇದನ್ನೇ ಅಹಂಕಾರವೆನ್ನುವುದು, ಇಂತಹ ಅಹಂಕಾರವಿಶಿಷ್ಟರಾದವರಿಗೆ ಶಿವಪೂಜೆಯಲ್ಲಿ ಅಧಿಕಾರವಿರುವುದಿಲ್ಲ. ||೧-೨||

ಕೇವಲ ವರ್ಣಾಶ್ರಮಧರ್ಮಗಳಿಗಾಗಿ ಶ್ರಮವಹಿಸುವವರೇ, ಲಿಂಗಪೂಜೆಗೆ ಯೋಗ್ಯರೆಂದು ಹೇಳಲಾಗುವುದಿಲ್ಲ. ಶಿವಲಿಂಗವನ್ನು ಆರಾಧಿಸದವರಿಗೆ ನಿಜವಾಗಿಯೂ ಮುಕ್ತಿಯು ದೊರಕಲಾರದು. ಕರ್ಮಕೋಟಿಗಳನ್ನಾಚರಿಸಿದರೂ ತೊಲ

ಮನು ಭೌತಿಕಲಿಂಗಾರ್ಚಾ ಬಿಲ್ವಪತ್ರೈರ್ಮಹೇಶ್ವರಿ ।
ತಲ್ಲಿಂಗಪೂಜಾತ್ಮೈಕ್ಯಾ ಹಿ ಪಾರಂಪರ್ಯಕ್ರಮೇಣ ಚ ॥೫॥

ಸನ್ನಿಪತ್ಯೋಪಕಾರಾದೌ ಪ್ರವರ್ತೇತ ಮಹೇಶ್ವರಿ ।
ವಿಭೂತಿಧಾರಣಂ ಚಾಪಿ ಜ್ಞಾನಾಂಗತ್ವಮುದಾಹೃತಂ ॥೬॥

ರುದ್ರಾಕ್ಷಧಾರಣಂ ಚಾಪಿ ಜ್ಞಾನಾಂಗತ್ವಮುದಾಹೃತಂ ।
ಪಂಚಾಕ್ಷರಜಪಶ್ಚಾಪಿ ಜ್ಞಾನಾಂಗತ್ವಮುದಾಹೃತಂ ॥೭॥

ರುದ್ರಾಧ್ಯಾಯಜಪಶ್ಚಾಪಿ ಜ್ಞಾನಾಂಗತ್ವಮುದಾಹೃತಂ ।
ತ್ರಿಣೇತ್ರಮಂಬಿಕಾಯುಕ್ತಂ ನೀಲಕಂಠಂ ಮಹೇಶ್ವರಿ ॥೮॥

ಮನ್ನೈವೇದ್ಯಸ್ಯ ಭುಕ್ತಿಶ್ಚ ಚಿತ್ತಶುದ್ಧ್ಯೈ ಶ್ರುತೀರಿತಂ ।
ತದಶ್ಯಾಮೇತಿ ಮಂತ್ರೇಣ ತ್ರಿಗುಪ್ತಾತೇತಿ ಮಂತ್ರತಃ ॥೯॥

ಅಂತರಿಕ್ಷೇತಿ ಚ ಋಚಾ ಸಂಪ್ರಾಪ್ತೋಽಯಂ ವಿಧಿಕ್ರಮಃ ।
ಜಾಬಾಲಾಥರ್ವಣೈರ್ಮಂತ್ರೈಃ ಶಿಖಾಕೈವಲ್ಯಸಂಭವೈಃ ॥೧೦॥

---

ಗದ ಪಾಪವಿಶೇಷವು ಶಿವಲಿಂಗಾರಾಧನೆಯಿಂದ ಸುಲಭವಾಗಿ ಪರಿಹಾರವಾಗುವುದು. ಇತರ ದೇವತಾವಿಗ್ರಹಾರಾಧನೆಗಿಂತ ಲಿಂಗಪೂಜೆಯೇ ಅತ್ಯುತ್ತಮವಾದದ್ದು. ||೩-೪||

ದೇವಿಯೇ, ಲೋಹಾದಿಗಳಿಂದ ನಿರ್ಮಿತವಾದ ಶಿವಲಿಂಗಗಳನ್ನು ಬಿಲ್ವಪತ್ರಾದಿಗಳಿಂದ ಪೂಜಿಸುವುದೇ ನಿಜವಾದ ಲಿಂಗಪೂಜೆ. ಆದರೆ ಗುರುಮುಖವಾಗಿ ತಿಳಿದು ಆತ್ಮಲಿಂಗಧ್ಯಾನಾನುಸಂಧಾನಮಾಡುವುದೇ ಆತ್ಮೈಕತ್ವ. ||೫||

ಆತ್ಮಲಿಂಗಾರ್ಚನೆಯ ಆರಂಭದಲ್ಲಿ ವಿಭೂತಿಧಾರಣ, ರುದ್ರಾಕ್ಷಧಾರಣ, ಶಿವಪಂಚಾಕ್ಷರೀಮಂತ್ರಜಪ, ರುದ್ರಾಧ್ಯಾಯಪುರಶ್ಚರಣ, ಪಾರ್ವತೀಸಹಿತನಾಗಿ ಮುಕ್ಕಣ್ಣನಾಗಿರುವ ಶಂಕರನ ಧ್ಯಾನ ಇವುಗಳೆಲ್ಲವೂ ಜ್ಞಾನಸಾಧಕಗಳಾದ ಅಂಗಗಳು. ||೬-೭-೮||

ಹಾಗೆಯೇ ಶಿವಪ್ರಸಾದಭಕ್ಷಣ ಮುಂತಾದುವುಗಳಿಂದ ಮನುಷ್ಯರ ಚಿತ್ತವು ಶುದ್ಧಿಗೊಳ್ಳುವುದು. ತದಶ್ಯಾಮ, ತ್ರಿಗುಪ್ತಾತಃ, ಅಂತರಿಕ್ಷಂ ಮುಂತಾದ ಮಂತ್ರಗಳಿಂದಲೂ, ಜಾಬಾಲೋಪನಿಷತ್, ಅಥರ್ವಶೀರ್ಷ, ಶಿಖಾ, ಕೈವಲ್ಯ ಮುಂತಾದ

ಭಸ್ಮರುದ್ರಾಕ್ಷಲಿಂಗಾರ್ಚಾರುದ್ರಾ ಪಂಚಾಕ್ಷರೇಷು ಮೇ ।
ಧ್ಯಾಯೀತೇಶೀತಿ ಚ ಶಿವೇ ಶಿವ ಏಕ ಇತೀರಿತಂ ॥೧೧॥

ಉಮಾಸಹಾಯಮಿತ್ಯಾದಿಮಂತ್ರೈರ್ಧ್ಯಾನಾಂಗಕಲ್ಪನೈಃ ।
ಸನ್ನಿಪತ್ಯೋಪಕಾರೀಣಿ ಹೃಲ್ಲಿಂಗಾರಾಧನಾಯ ಹಿ ॥೧೨॥

ಇಜ್ಯಾದಾನವ್ರತೈಶ್ಚಾಪಿ ವರ್ಣಾಶ್ರಮನಿಬಂಧನೈಃ ।
ತದಾರಾದುಪಕಾರಂ ಹಿ ನ ಸಾಕ್ಷಾಲ್ಲಿಂಗಪೂಜನೇ ॥೧೩॥

ನ ಚೇಯಂ ಪ್ರಾಪ್ಯತೇ ಪೂಜಾ ಪೂಜ್ಯಪೂಜಕವರ್ಜಿತಾ ।
ಧೂಪದೀಪಾದಿರಹಿತಾ ಗಂಧಪುಷ್ಪವಿವರ್ಜಿತಾ ॥೧೪॥

ಪಂಚಾಮೃತೋದಸೇಕಾದಿನೈವೇದ್ಯಪರಿವರ್ಜಿತಾ ।
ಭಾವನಾಮಾತ್ರಸುಲಭಾ ದುರ್ಲಭಾ ಯೋಗಿನಾಮಪಿ ॥೧೫॥

ಉಪನಿಷತ್ಪಾರಾಯಣದಿಂದಲೂ ಮೇಲೆ ಹೇಳಿದ ರುದ್ರಾಕ್ಷಭಸ್ಮಾದಿಗಳನ್ನು ಧರಿಸಬೇಕು. ॥೯-೧೦॥

ದೇವಿಯೇ, ಭಸ್ಮಧಾರಣ, ರುದ್ರಾಕ್ಷಿಧಾರಣ, ಲಿಂಗಾರ್ಚನೆ, ರುದ್ರಾಧ್ಯಾಯ, ಶಿವಪಂಚಾಕ್ಷರ ಇವುಗಳ ಜಪ, ಶಿವೋಹಂ, ಏಕಏವಶಿವಃ ಎಂಬ ಧ್ಯಾನ, ಉಮಾಸಹಾಯನಾಗಿರುವ ಶಂಕರನನ್ನು ಮಂತ್ರಗಳಿಂದ ಪೂಜಿಸುವಿಕೆ, ಇವು ಆತ್ಮಲಿಂಗಾರಾಧನೆಗೆ ಸನ್ನಿಪತ್ಯೋಪಕಾರಕಗಳು. ॥೧೧-೧೨॥

ಯಾಗ, ದಾನ, ವ್ರತ ಇವುಗಳ ಆಚರಣೆಯೂ. ವರ್ಣಾಶ್ರಮಧರ್ಮಪರಿಪಾಲನೆಯೂ ಪರಮೇಶ್ವರಪೂಜೆಗೆ ಆರಾದುಪಕಾರಗಳೇ ಹೊರತು ಸಾಕ್ಷಾದುಪಕಾರಕಗಳಲ್ಲ. ಭಾವನಾಮಾತ್ರದಿಂದಲೂ ಶಂಕರನನ್ನು ಆರಾಧಿಸಬಹುದು. ಆ ವಿಧವಾದ ಭಾವನಾಪೂಜೆಗೆ, ಧೂಪ, ದೀಪಾದಿಗಳಾಗಲಿ, ಪೂಜ್ಯಪೂಜಕಭಾವವಾಗಲಿ, ಪಂಚಾಮೃತ, ಶುದ್ಧೋದಕ ಇವುಗಳಿಂದ ಅಭಿಷೇಕ, ನೈವೇದ್ಯ ಮುಂತಾದ ಉಪಚಾರಗಳಾಗಲಿ, ಅವಶ್ಯಕಗಳಲ್ಲ. ಶುದ್ಧಭಾವನೆಯೇ ಲಿಂಗಾರಾಧನೆಗೆ ಮುಖ್ಯವಾದದ್ದು. ಈ ಭಾವನಾಪ್ರಧಾನವಾದ ಆರಾಧನೆಯು ಯೋಗಿಗಳಿಗೂ ಅಸಾಧ್ಯವಾದದ್ದು. ॥೧೩-೧೪-೧೫॥

ಸ್ವಾತ್ಮಬಿಲ್ವಾದಿಕುಸುಮೈಃ ಪಂಕಜೈಶ್ಚ ಸಮಾಧಿಜೈಃ ।
ದೇಹಜಾಲಾದಿರಹಿತಪ್ರಣಾಮಪ್ರಕ್ರಮಾದಿಭಿಃ ॥೨೭॥

ಮಹಾನಂದಮಹಾಧಾರಾಗಾನೈಶ್ಚ ಕರತಾಲಕೈಃ ।
ಅಹಂ ವಿಶ್ವಮಭವಮಿತಿ ಗಾನೈರ್ನಟನತತ್ಪರೈಃ ॥೨೮॥

ಸರ್ವಸಂಗಪರಿತ್ಯಾಗಛತ್ರಚಾಮರದರ್ಪಣೈಃ ।
ಸಂಪೂಜ್ಯ ಪೂಜಾಪೂಜ್ಯಾದಿಪೂಜಕಾದಿಲಯಕ್ರಮೈಃ ॥೨೯॥

ನೈವಾಹಮಸ್ಮಿ ಕಿಂಚಿದ್ವೈ ನೇದಂ ನಾನಾತ್ಮಕಂ ಜಗತ್ ।
ಸಂಪೂಜ್ಯಾತ್ಮಾನಮದ್ರೀಂದ್ರತನಯೇ ತತ್ಪ್ರಪೂಜನಂ ॥೩೦॥

ನ ಪೂಜಾಂತೋ ನ್ಯಾಸ್ಯ ಶಿವೇ ನ ವೋದ್ವಾಸನಕಲ್ಪನಂ ।
ನ ಕಾಲದೇಶನಿಯಮೋ ನ ಸಾಧನಪರಿಗ್ರಹಃ ॥೩೦॥

ಸರ್ವದಾ ಸರ್ವಭಾವೇನ ಹ್ಯಾತ್ಮಲಿಂಗಂ ಪ್ರಪೂಜಯೇತ್ ।
ಬ್ರಹ್ಮಕ್ಷೇತ್ರಮಿದಂ ದೃಶ್ಯಂ ನೈವೇದ್ಯಂ ತನ್ನಿವೇದಿತಂ ॥೩೨॥

ಶಿವೋಽಹಮಸ್ಮಿ ಎಂಬ ತಿಳಿವಳಿಕೆಯೇ ಆತ್ಮಲಿಂಗಕ್ಕೆ ತಾಂಬೂಲಸಮರ್ಪಣೆ. ॥೨೫-೨೬॥

ಶಿವಧ್ಯಾನಪರನಾಗಿ ಸಮಾಧ್ಯವಸ್ಥೆಯನ್ನು ಪಡೆಯುವುದೇ ಪುಷ್ಪಾಂಜಲಿ. ದೇಹಾಭಿಮಾನತ್ಯಾಗವೇ ಪ್ರಣಾಮಪ್ರಕ್ರಮಾದಿಗಳು. ಮಹಾನಂದಾನುಭವವೇ ಕರತಾಡನಪೂರ್ವಕವಾದ ದಿವ್ಯಗಾನ. ಅಹಂ ವಿಶ್ವರೂಪೀ ಎಂಬ ಭಾವವೇ ಛತ್ರಿ ಚಾಮರಾದಿಗಳ ಸಮರ್ಪಣೆ. ಹೀಗೆ ಪೂಜ್ಯವಸ್ತು, ಪೂಜಕವಸ್ತು, ಪೂಜಾಕ್ರಿಯಾ ಇವುಗಳಿಗಿರುವ ಭೇದವನ್ನು ತೊರೆದು ಸರ್ವವನ್ನೂ ಶಿವಾಭೇದದಿಂದ ತಿಳಿಯುವುದೇ ನಿಜವಾದ ಪೂಜೆಯು. ॥೨೭-೨೮-೨೯॥

ನಾನು ಪರಶಿವನಿಗಿಂತ ಬೇರೆಯವನಲ್ಲ. ಈ ನಾನಾರೂಪದಲ್ಲಿ ಕಾಣುವ ಜಗತ್ತೂ ಶಿವನಿಂದ ಭಿನ್ನವಾಗಿಲ್ಲ. ಸರ್ವವೂ ಶಿವಮಯ ಎಂದು ತಿಳಿಯುವುದೇ ನಿಜವಾದ ಆತ್ಮಲಿಂಗಾರಾಧನೆ. ॥೩೦॥

ಪಾರ್ವತಿಯೇ, ಈ ವಿಧವಾದ ಆತ್ಮಲಿಂಗಪೂಜೆಗೆ ಕೊನೆಯಿಲ್ಲ ಆದಿಯಿಲ್ಲ. ಪೂಜೆಗೆ ಸಂಬಂಧಿಸಿದ ಕಾಲದೇಶಾದಿಗಳ ನಿಯಮವಾಗಲಿ, ಪೂಜಾಸಾಮಗ್ರಿಗಳ

ಭುಕ್ತ್ವಾ ಸುಖಮವಾಪ್ನೋತಿ ತನ್ನಿವೇದನಭೋಜನಾತ್ ।
ಗುಣತ್ರಯಾದಿರಹಿತಂ ತ್ರಿಶ್ಯಂಖಾಂಬು ಪಿಬೇತ್ತತಃ ॥೩೩॥

ಸದಾಶಿವೋಽಹಮಸ್ಮೀತಿ ತನ್ನಿರ್ನೋದಕಪಾನಕೃತ್ ।
ಏವಮಾತ್ಮಮಹಾಲಿಂಗಪೂಜಾ ತೇ ಕಥಿತಾ ಶಿವೇ ॥೩೪॥

ಏವಂ ಪೂಜಯತೋ ನಿತ್ಯಂ ಪೂಜ್ಯಪೂಜಾವಿವರ್ಜಿತಃ ।
ಪೂಜಕಃ ಪೂಜ್ಯತಾಮೇತಿ ಸದಾ ಲಿಂಗಮಯೋ ಭವೇತ್ ॥೩೫॥

ನ ಪೂಜಾ ನ ಲಿಂಗಂ ನ ಚೋಪಾಸನಾದಿ
ನ ವೇದಾಂತಧಾರಾರಸಾಸ್ವಾದನಂ ಹಿ ।
ನ ವೇದಪ್ರಚಾರೋತ್ಥಧರ್ಮೈಕಜಾಲೈ
ಶ್ಶಿವೇ ಮತ್ಪ್ರಸಾದೈಕಲಭ್ಯಂ ಕಿಲೇದಂ ॥೩೬॥

---

ನಿರ್ಮಾಣವಾಗಲಿ ಕಾಣುವುದಿಲ್ಲ. ಎಲ್ಲಾ ಕಾಲದಲ್ಲಿಯೂ, ಸರ್ವಭೂತಾತ್ಮಕನಾಗಿರುವ ಪರಬ್ರಹ್ಮವಸ್ತುವನ್ನು ಸ್ಮರಿಸುವುದೇ ನಿಜವಾದ ಪೂಜೆ. ವ್ಯವಹಾರದಲ್ಲಿರುವ ಬ್ರಹ್ಮಕ್ಷತ್ರಾದಿ ಜಾತಿಭೇದಗಳು ಕೇವಲ ಪರಮಾತ್ಮನ ಓದನವೇ ಹೊರತು ವಾಸ್ತವಿಕವಲ್ಲ. ಆತ್ಮಲಿಂಗಾರಾಧಕನಿಗೆ ಈ ಜಾತ್ಯಾದಿಗಳು ಕಾರ್ಯಕಾರಿಗಳಲ್ಲ. ||೩೧-೩೨||

ವ್ಯವಹಾರಗತವಾದ ಬ್ರಹ್ಮಕ್ಷತ್ರಾದಿ ಜಾತಿಭೇದಗಳನ್ನೆಲ್ಲಾ ಆತ್ಮಲಿಂಗಕ್ಕೆ ನೈವೇದ್ಯರೂಪವಾಗಿ ಸಮರ್ಪಿಸಿ, ಅದರಿಂದ ತೃಪ್ತನಾಗಬೇಕು. ಸತ್ವರಜಸ್ತಮೋಗುಣಾದಿಗಳ ರಾಹಿತ್ಯವೇ ಶಂಖೋದಕದ ತ್ರಿರಾವೃತ್ತಿ ತೀರ್ಥಪ್ರಾಶನ. ಸದಾಶಿವೋಽಹಂ ಎಂಬ ನಿಶ್ಚಲಜ್ಞಾನವೇ ಪರಮಾತ್ಮೋದ್ದೇಶಕವಾದ ಉಪವಾಸಾದಿ ವ್ರತಗಳು. ಹೀಗೆ ಎಲೌ ದೇವಿಯೇ! ನಿನಗೆ ಪೂಜ್ಯಪೂಜಾಪೂಜಕಗಳಿಗೆ ವ್ಯತ್ಯಾಸವಿಲ್ಲದಂತಹ ಆತ್ಮಲಿಂಗಾರ್ಚನೆಯ ಕ್ರಮವನ್ನು ವಿವರಿಸಿರುವೆನು. ಈ ವಿಧವಾದ ಪೂಜೆಯನ್ನು ಮಾಡುವ ಪೂಜಕನು ಲೋಕಪೂಜ್ಯನಾಗುವುದರಲ್ಲಿ ಸಂಶಯವಿಲ್ಲ. ಅಂದರೆ ಅವನು ಸಾಕ್ಷಾತ್ಸದಾಶಿವಸ್ವರೂಪನೇ ಆಗುವನು. ||೩೩-೩೪-೩೫||

ಈ ವಿಧವಾದ ದಿವ್ಯಜ್ಞಾನವು ನನ್ನ ಅನುಗ್ರಹದಿಂದ ಮಾತ್ರ ಲಭ್ಯವಾಗುವುದು. ಈ ಜ್ಞಾನದಲ್ಲಿ ಪೂಜೆಯಾಗಲಿ, ಲಿಂಗವಾಗಲಿ, ಉಪಾಸನಾದಿ ಕಾರ್ಯಗಳಾಗಲಿ, ವೇದಾಂತವಾಕ್ಯಗಳ ರಸಾನುಭವವಾಗಲಿ ತೋರಿಬರುವುದಿಲ್ಲ. ಕೇವಲ ಆನಂದಾನುಭವವೇ ಈ ದಿವ್ಯಜ್ಞಾನಸ್ವರೂಪ. ||೩೬||

ನ ಚ ಪ್ರಾಣಕೋಶಂ ನ ಚಾನಂದಕೋಶಂ
ನ ವಿಜ್ಞಾನಕೋಶಂ ನ ಚಾನ್ನಾದಿಕೋಶಂ ।
ನ ಚಾಣುರ್ನ ದೀರ್ಘಂ ನ ಬದ್ಧಂ ನ ಮುಕ್ತಂ
ನ ಚ ದ್ವೈತಮೇಕಂ ತ್ವನೀಶಂ ಪರಂ ಚ ॥೩೭॥

ನ ಚ ವ್ಯಾಪಕಂ ದೇಶಕಾಲಾದಿಹೀನಂ
ಅವಸ್ಥಾದಿಹೀನಂ ತ್ವಲಿಂಗಂ ರಸಾದಿ ।
ಗುಣಾತೀತಮೇಕಂ ಚಿದಾನಂದರೂಪಂ
ಘನಂ ಚಾಪ್ಯಖಂಡಂ ಸದಾ ಖಂಡಿತೇಷು ॥೩೮॥

ಮನೋವಾಗತೀತಂ ತ್ವನಾದಿಂ ಚ ಸೂಕ್ಷ್ಮಂ
ಸದಾ ಶುದ್ಧಬುದ್ಧಂ ತ್ವಸಂಗಂ ಮಹಾಂಗಂ ।
ಸದಾ ಲಿಂಗಸಂಗಂ ತ್ವಲಿಂಗಂ ಸುತುಂಗಂ
ನಭಸ್ವಾಂತರಂಗಂ ಜನಾನಾಮಸಂಗಂ ॥೩೯॥

ಅನ್ನಮಯ, ಪ್ರಾಣಮಯ, ವಿಜ್ಞಾನಮಯ, ಆನಂದಮಯಾದಿ ಪಂಚ ಕೋಶಗಳು ಈ ಆತ್ಮಲಿಂಗದಲ್ಲಿಲ್ಲ. ಇದು ಚಿಕ್ಕದೂ ಅಲ್ಲ, ದೀರ್ಘವಾದದ್ದೂ ಅಲ್ಲ. ಬಂಧನಕ್ಕೂ ಸಿಕ್ಕಿಲ್ಲ, ಬಿಡುಗಡೆಯನ್ನೂ ಹೊಂದಿದ್ದಲ್ಲ. ಎರಡು ವಸ್ತುಗಳಂತೆ ನಿಲ್ಲುವುದಲ್ಲ. ಮತ್ತೊಂದು ಮುಖ್ಯವಸ್ತುವಿಗೆ ಇದು ಅಧೀನವಾಗಿಲ್ಲ. ॥೩೭॥

ಇದು ವ್ಯಾಪಕವಸ್ತುವೂ ಇಲ್ಲ. ಇದಕ್ಕೆ ದೇಶಕಾಲಾದಿಗಳ ಪರಿಚ್ಛಿನ್ನತ್ವವಿರುವುದಿಲ್ಲ. ಜಾಗ್ರದಾದಿ ಅವಸ್ಥಾತ್ರಯಗಳು ಇದರಲ್ಲಿಲ್ಲ. ಯಾವ ಗುರುತುಗಳಾಗಲಿ ಇಲ್ಲ. ಸತ್ತ್ವರಜಸ್ತಮೋರೂಪವಾದ ಗುಣಗಳಿಗೆ ಮೀರಿದ್ದಾಗಿ ಚಿದಾನಂದರೂಪಿಯೆನಿಸಿ, ಖಂಡಿತವಾದ ವಸ್ತುಗಳಲ್ಲಿಯೂ ಸಹ ಅಖಂಡರೂಪದಿಂದಿರುವುದೇ ಈ ಆತ್ಮಲಿಂಗಸ್ವರೂಪವು. ॥೩೮॥

ಮನಸ್ಸಿಗೂ, ಮಾತಿಗೂ ಸಿಕ್ಕದೆ ಅನಾದಿಯಾಗಿ ಸೂಕ್ಷ್ಮವಾಗಿಯೂ ಶುದ್ಧರೂಪದಲ್ಲಿಯೂ ಜ್ಞಾನರೂಪದಲ್ಲಿಯೂ ಇದ್ದು ಯಾವ ವಿಧವಾದ ಸಹವಾಸವೂ ಇಲ್ಲದೆ ಈ ಆತ್ಮಲಿಂಗವು ಭಕ್ತರಿಗೆ ಮೊದಲು ಲಿಂಗಾಕಾರದಲ್ಲಿ ತೋರಿಬಂದರೂ ವಾಸ್ತವಾಂಶದಲ್ಲಿ ಯಾವ ಗುರುತುಗಳೂ ಇಲ್ಲದಂತೆ ತೋರಿಬರುವುದು. ಜನಗಳ ಸಂಸರ್ಗವಿಲ್ಲದೆ ಆಕಾಶವ್ಯಾಪಿಯಾಗಿ ಮಹಾಮಹಿಮವಾಗಿರುವುದು. ॥೩೯॥

ನ ಪುಣ್ಯಂ ನ ಪಾಪಂ ನ ತಜ್ಜನ್ಮನಾಶೇ
ನ ಚಿಂತಾ ನ ಚಾರ್ತಿರ್ನತಲ್ಲೋಭಮೋಹೌ ।
ನ ವಾ ದೇಶಿಕೋ ನೈವ ಶಿಷ್ಯಸ್ತದೇವಂ
ನ ವೇದಾಂತವಾದ್ಯೈರ್ದುರಾಪಂ ಸದಾಪಂ ॥೪೦॥

ಸಹಸ್ರಾಸ್ಯಹಸ್ತಂ ಸಹಸ್ರೋರುಪಾದಂ
ತದೇವಾಧುನಾ ಪಾಣಿಪಾದಾಸ್ಯಹೀನಂ ।
ತಥಾ ಗಂಧಮೇಕಂ ರಸೈಶ್ಚಾಪಿ ಹೀನಂ
ಅಸಂಸ್ಪರ್ಶಕಂ ಘ್ರಾಣಜಿಹ್ವಾದಿಹೀನಂ ॥೪೧॥

ತುರೀಯಂ ತ್ವಶೀರ್ಣಂ ಶರೀರೇಷು ನಿತ್ಯಂ
ವಿಭುಂ ಸರ್ವದೇಹಾದಿಧರ್ಮೈರ್ವಿಹೀನಂ ।
ತಥಾತ್ಮಾನಮಿಷ್ಟಂ ಕನಿಷ್ಠಂ ಚ ಜ್ಯೇಷ್ಠಂ
ಪ್ರಿಯಂ ವಸ್ತುತಸ್ಸರ್ವಭಾಗೇಷು ಯುಕ್ತಂ ॥೪೨॥

---

ಪುಣ್ಯಪಾಪಗಳಾಗಲಿ, ಜನನಮರಣಗಳಾಗಲಿ, ಚಿಂತಾಮೋಹಲೋಭಾದಿಗಳಾಗಲಿ ಇದರಲ್ಲಿರುವುದಿಲ್ಲ. ಗುರುವೂ, ಶಿಷ್ಯನೂ, ವೇದಾಂತವಾಕ್ಯಗಳೂ ಇದಲ್ಲ. ಯಾರಿಗೂ ವಾದದಿಂದ ಸುಲಭವಾಗಿ ದೊರೆಯುವುದಿಲ್ಲವಾದರೂ, ಜ್ಞಾನಿಗಳಿಗೆ ಮಾತ್ರ ಸರ್ವದಾ ಸುಲಭವಾಗಿ ದೊರೆಯುವಂತಿರುವುದು. ॥೪೦॥

ಪರಬ್ರಹ್ಮನಿಗೆ ಸಹಸ್ರ ಮುಖಗಳೂ, ಸಹಸ್ರ ಹಸ್ತಗಳೂ, ಸಹಸ್ರಕಾಲುಗಳೂ ಇವೆಯೆಂದು ವರ್ಣಿತವಾಗಿದ್ದರೂ ನಿಜವಾಗಿಯೂ ಕೈ, ಕಾಲು, ಮುಖ ಮುಂತಾದುವುಗಳು ಯಾವುವೂ ಇಲ್ಲ. ಹಾಗೆಯೇ ರೂಪರಸಗಂಧಾದಿ ಯಾವ ಭೂತಗುಣಗಳೂ, ಮೂಗು, ನಾಲಗೆ ಮುಂತಾದ ಇಂದ್ರಿಯಗಳೂ ಇಲ್ಲ. ॥೪೧॥

ಜಾಗ್ರದಾದಿ ಅವಸ್ಥಾತ್ರಯಗಳಿಗೂ ಸಿಕ್ಕದೆ ಕೇವಲ ಆನಂದರೂಪಿಯಾಗಿಯೂ, ಎಂದೂ ನಾಶವಾಗದೆಯೂ, ಸರ್ವಶರೀರಗಳಲ್ಲಿ ನಿತ್ಯರೂಪದಿಂದಿರುವುದಾಗಿಯೂ, ಸರ್ವವ್ಯಾಪಿಯಾಗಿಯೂ, ಸಕಲ ದೇಹ ಧರ್ಮಾದಿಗಳಿಂದ ದೂರವಾಗಿಯೂ ಇರುವ ವಸ್ತುವೇ ಪರಬ್ರಹ್ಮವಸ್ತು. ಇದನ್ನೇ ಆತ್ಮಲಿಂಗವೆನ್ನಬಹುದು. ಇದು ಜ್ಯೇಷ್ಠತ್ವ, ಕನಿಷ್ಠತ್ವಾದಿ ವ್ಯವಹಾರಕ್ಕೆ ಸಿಕ್ಕಿರುವುದಾದರೂ, ಸರ್ವಭಾಗ

ತದೇವಾಖಿಲೈರ್ಭೋಗಜಾಲೈರ್ವಿಹೀನಂ
ಮಹಾನಂದಸಂದೋಹಧಾಮ್ನೈಕಸೀಮ ।
ತದೇವಾಸ್ಮಿ ಲಿಂಗಂ ತದೇವಾಸ್ಮಿ ಭೂತಂ
ತದೇತದ್ಭವಿಷ್ಯಂ ಶಿವೇ ವರ್ತಮಾನಂ ॥೪೩॥

ತದೇವಾಖಿಲಾಧಾರಪುಚ್ಛಂ ಪ್ರತಿಷ್ಠಂ
ತದೇವಾದ್ಯ ಬ್ರಹ್ಮ ತದೇವ ತ್ವಮೀಶೇ ।
ತದೇವೇಶಿ ತತ್ತ್ವಂ ಸದಾ ತತ್ತ್ವಮಸ್ಮೀ
ತ್ಯಹಂ ಬ್ರಹ್ಮಚಾಸ್ಮೀತಿ ವಾಕ್ಯೈರ್ದುರಾಪಂ ॥೪೪॥

ತದೇವಾಯಮಾತ್ಮೇತಿ ಬ್ರಹ್ಮೇತ್ಯಹಂ ವೈ
ಸದಾ ಬ್ರಹ್ಮಭೂತೋ ಭವೇದೇವ ಬ್ರಹ್ಮ ।
ತದೂರ್ಧ್ವಂ ಹ್ಯಧಸ್ತಾತ್ತದೇವೇತಿ ದೇವಿ
ತದೇವೇಶಿ ಪಶ್ಚಾತ್ಪುರಸ್ತಾತ್ತದೇವ ॥೪೫॥

ದಲ್ಲಿಯೂ ಒಂದೇ ರೂಪದಲ್ಲಿರುವುದರಿಂದ ಸರ್ವರಿಗೂ ಇದು ಸಮಾನವೆನಿಸಿ ಪ್ರಿಯವಾದದ್ದಾಗಿದೆ. ॥೪೨॥

ಈ ಲಿಂಗದಲ್ಲಿ ಮಾನುಷಿಕವಾದ ಮತ್ತು ದೈವಿಕವಾದ ಯಾವ ಭೋಗಾದಿಗಳೂ ಇರುವುದಿಲ್ಲ. ಕೇವಲ ಆನಂದಮಯವಾಗಿ, ಅಂತಹ ನಿತ್ಯಾನಂದಕ್ಕೆ ಆಶ್ರಯವಿತ್ತಿರುವುದಾಗಿ ಕಾಣುತ್ತಿರುವುದು. ಅಂತಹ ಆತ್ಮಲಿಂಗವೇ ನಾನಾಗಿರುವೆನು. ನಾನೇ ಅದಾಗಿರುವುದು. ಈ ಶಿವಲಿಂಗವೇ ಪ್ರಪಂಚವಾಗಿರುವುದು. ಭೂತ, ಭವಿಷ್ಯದ್ವರ್ತಮಾನಕಾಲಗಳೆಲ್ಲವೂ ಈ ಶಿವಲಿಂಗರೂಪವೇ. ॥೪೩॥

ಲಿಂಗವೇ ಸಕಲ ಲೋಕಕ್ಕೂ ಆಧಾರಭೂತವಾಗಿರತಕ್ಕದ್ದು. ಸ್ಥಿರರೂಪದಲ್ಲಿರತಕ್ಕದ್ದು. ಅದನ್ನೇ ಬ್ರಹ್ಮನೆನ್ನುವರು. ಎಲೌ ದೇವಿಯೇ, ನೀನೂ ಸಹ ಅದೇ ಲಿಂಗವೇ ಆಗಿರುವೆ. ನಿಜವಾದ ತತ್ತ್ವವೇ ಇದು. ತತ್ತ್ವಮಸ್ಯಾದಿ ಮಹಾವಾಕ್ಯಗಳಿಂದ ತೋರಿಬರುವ ಬ್ರಹ್ಮಸ್ವರೂಪವೇ ಇದು. ಇತರ ವಾಕ್ಯಗಳಿಗೆ ಸಿಲುಕದೆ ಇರುವ ದಿವ್ಯವಸ್ತುವೂ ಇದೇ ಆಗಿರುವುದು. ॥೪೪॥

ಅದೇ ಲಿಂಗವೇ, ಬ್ರಹ್ಮ, ಆತ್ಮ ಎಂಬ ಶಬ್ದದಿಂದ ವಾಚ್ಯವಾಗಿರುವುದು. ಬ್ರಹ್ಮಭೂತನಾಗಿ ಅಂದರೆ ಸೋಹಂ ಬ್ರಹ್ಮ ಎಂಬ ಶಾಬ್ದಬೋಧದಂತೆ, ಜ್ಞಾನಿಯಾಗಿರು

ತದೇವಾದ್ಯ ಲೋಕಾಸ್ತಥಾಲೋಕಲೋಕ್ಯಾ
ದಿಶೋ ಭೂತವರ್ಗಂ ತಥಾ ವೇದಜಾಲಂ ।
ಸುರಾಶ್ಚಾಸುರಾ ಭೂಸುರಾ ಭಾಸುರಂ ತತ್
ಪ್ರವಿಷ್ಟಂ ಸಮಸ್ತೇಷು ನಿಷ್ಠಂ ವಿಶಿಷ್ಟಂ ॥೪೬॥

ಕನಿಷ್ಠಂ ವಿಶಿಷ್ಟೈಶ್ಚ ಶಿಷ್ಟೈರ್ದುರಾಪಂ
ಸದಾ ಲೋಕನೇತ್ರೇ ಶಿವೌ ಚಾಪಿವಿಷ್ಟಂ ।
ತದೀಯಪ್ರಸಾದೇನ ವಾಯುರ್ಧರಿತ್ರೀ
ತಥಾ ಸೂರ್ಯಚಂದ್ರಾದಯೋ ವಹ್ನಯಶ್ಚ ॥೪೭॥

ವಿಭಾತ್ಯಸ್ಯ ಭಾಸೈವ ಲೋಕಂ
ತ್ವಶೇಷಂ ಯದಜ್ಞಾನತೋ ನಿತ್ಯಮೇತಜ್ಜಡಂ ಚ ।
ಯದುದ್ಬೋಧನೇನಾಪಿ ಸರ್ವಂ ವಿಭಾತಿ
ಯದಾಲೋಕನೇ ಸರ್ವಮೇತದ್ಧಿ ಪಶ್ಯೇತ್ ॥೪೮॥

ವವನು ಸಾಕ್ಷಾದ್ಬ್ರಹ್ಮನೇ ಆಗುವನು. ಊರ್ಧ್ವ, ಅಧೋಭಾಗವೆಂದೂ, ಮುಂದು, ಹಿಂದು ಎಂದೂ ಕರೆಯಲ್ಪಡುವ ವಸ್ತುವೇ ಆ ಶಿವಲಿಂಗವು. ||೪೫||

ಸಮಸ್ತ ಲೋಕಗಳೂ, ಸಮಸ್ತ ತೇಜಸ್ಸೂ, ಎಲ್ಲಾ ದಿಕ್ಕುಗಳೂ, ನಿಖಿಲ ಪ್ರಾಣಿಗಳೂ, ಚತುರ್ವೇದಗಳೂ, ದೇವತೆಗಳೂ, ರಾಕ್ಷಸರೂ, ಬ್ರಾಹ್ಮಣರೂ, ಇವರಿಂದ ಹೊರಡುವ ತೇಜಃಪ್ರಸರವೂ, ಎಲ್ಲವೂ ಈ ಲಿಂಗವೇ. ಇದು ಸಕಲ ವಸ್ತುಗಳಲ್ಲಿಯೂ ಪ್ರವೇಶಿಸಿದ್ದಾಗಿ, ಸರ್ವವಸ್ತುರೂಪದಿಂದಲೂ ಇರುವುದು. ||೪೬||

ಸಕಲ ವಸ್ತುಗಳಿಗಿಂತಲೂ ಕನಿಷ್ಠರೂಪದಲ್ಲಿದ್ದು, ಶಿಷ್ಟರಿಗೂ ಸಹ ಸಿಕ್ಕದಿರುವುದು ಈ ವಸ್ತುವಾಗಿದೆ. ಇದೇ ಶಿವಲಿಂಗವೇ ಲೋಕಕ್ಕೆ ಕಣ್ಣುಗಳಂತಿರುವುದು. ಇದರ ಅನುಗ್ರಹದಿಂದಲೇ, ವಾಯು, ಭೂಮಿ, ಸೂರ್ಯಚಂದ್ರರು, ವಹ್ನಿ ಮುಂತಾದುವುಗಳು ಲೋಕದಲ್ಲಿ ಪ್ರಕಾಶಿಸುತ್ತಿವೆ. ||೪೭||

ಇದರ ಮಹಿಮೆಯಿಂದಲೇ ಈ ಲೋಕವು ಪ್ರಕಾಶಿಸುತ್ತಿರುವುದು. ಇದರ ಸ್ವರೂಪಜ್ಞಾನವಿಲ್ಲದ್ದರಿಂದಲೇ ಈ ಜಗತ್ತೆಲ್ಲವೂ ನಿತ್ಯವೆಂದು ತೋರಿಬರುತ್ತಿರುವುದು. ಈ ಆತ್ಮಲಿಂಗದ ಅಥವಾ ಪರಬ್ರಹ್ಮವಸ್ತುವಿನ ಸ್ವರೂಪವನ್ನು ತಿಳಿದರೆ ಅಧರ

ದೃಗೇತದ್ದೃಶೌ ನೈವ ರೂಪಂ ತದೇತತ್
ನ ದೃಶ್ಯಂ ತಥಾದರ್ಶನಂ ಚಾಪಿ ಗೌರಿ ।
ನ ತದ್ಜ್ಞಾನಮಜ್ಞಾನಮೇತದ್ವಿಚಿತ್ರಂ
ನ ಸೂಕ್ಷ್ಮಂ ನ ಚ ಸ್ಥೂಲಮಣ್ವಾದಿಹೀನಂ ॥೪೯॥

ನ ತತ್ ಕಿಂ ಚ ಕೇನಾಪಿ ಪಶ್ಯಂ ಚ ಜಿಘ್ರಂ
ನ ಚ ಸ್ಪರ್ಶಗಂಧಾದಿಶಬ್ದಾದಿಹೀನಂ ।
ತದೇತತ್ಸುರಾಣಾಂ ಹೃದಿಸ್ಥಂ ಗುಹಾಸ್ಥಂ
ನ ಹಿ ಪ್ರಾಣವಾಚಾಂ ಮನಸ್ತೋಽಪಿ ದೂರಂ ॥೫೦॥

ನ ಚ ಸ್ತ್ರೀ ನಪುಂಶ್ಚ ನ ಹಿ ಕ್ಲೀಬಮೇತತ್
ಯದಾ ಕೇನ ಕಾರ್ಯೇಣ ಯುಕ್ತಂ ಹಿ ತದ್ಧಿ ।
ನ ಬಾಲಂ ಯುವಾ ನೈ ನ ವೃದ್ಧಂ ನ ಧೀರ್ಘಂ
ನ ಚ ಹ್ರಸ್ವದೀರ್ಘಂ ನ ಕೃಷ್ಣಂ ನ ಪೀತಂ ॥೫೧॥

ಪ್ರೇರಣೆಯಿಂದಲೇ ಈ ವಸ್ತುಗಳೆಲ್ಲವೂ ಪ್ರಕಾಶಿಸುವುವೆಂದು ತಿಳಿದುಬರುವುದು. ಇದನ್ನರಿತವನೇ ಸರ್ವವನ್ನೂ ತಿಳಿಯಲು ಸಮರ್ಥನಾಗುವನು. ॥೪೮॥

ಇದು ಕಣ್ಣುಗಳಂತಿದ್ದರೂ ಇದಕ್ಕೆ ಒಂದು ರೂಪವಿಲ್ಲ. ತಾನು ಯಾರಿಗೂ ಕಾಣಿಸದಿದ್ದರೂ ಎಲ್ಲವನ್ನೂ ನೋಡುವುದೇ ಇದು. ಜ್ಞಾನವೂ, ಅಜ್ಞಾನವೂ ಇದಲ್ಲ. ಸೂಕ್ಷ್ಮ, ಸ್ಥೂಲ, ಅಣು ಮುಂತಾದ ಪರಿಮಾಣಗಳಿಗೆ ಸಿಕ್ಕದಿರುವುದೂ ಇದೇ. ಇಂತಹ ವಿಚಿತ್ರ ಗುಣವುಳ್ಳದ್ದೇ ಆತ್ಮವು. ॥೪೯॥

ಅದು ಅಲ್ಪವಸ್ತುವೂ ಅಲ್ಲ. ಆದರೆ ಅದು ಯಾರಿಗೂ ಕಾಣಿಸದು. ಘ್ರಾಣೇಂದ್ರಿಯಕ್ಕೂ ಅದು ವಿಷಯವಾಗದು. ಸ್ಪರ್ಶ, ಗಂಧ ಮುಂತಾದ ಪಂಚ ಭೂತಗಳ ಗುಣಗಳೂ ಅದರಲ್ಲಿಲ್ಲ. ಇದೇ ಸಕಲ ದೇವತೆಗಳ ಹೃದಯದಲ್ಲಿಯೂ, ಗುಹಾರೂಪವಾದ ಹೃತ್ಕುಹರದಲ್ಲಿಯೂ ಇರತಕ್ಕದ್ದು. ಪ್ರಾಣಾಪಾನಾದಿಗಳಿಗೂ, ಮಾತಿಗೂ, ಮನಸ್ಸಿಗೂ ದೂರವಾಗಿರುವುದೇ ಇದು. ॥೫೦॥

ಇದು ಸ್ತ್ರೀಯೂ ಅಲ್ಲ. ಪುರುಷನೂ ಅಲ್ಲ. ನಪುಂಸಕನೂ ಅಲ್ಲ. ಯಾವ ಕಾರ್ಯಕ್ಕೆ ಯಾವರೀತಿ ಸಾಧಕವಾಗಬೇಕೋ ಆ ರೀತಿ ಆಗುವುದು. ಹಾಗೆಯೇ ವಯಸ್ಸಿನ ವಿಚಾರದಲ್ಲಿ ಬಾಲಕನೂ ಅಲ್ಲ. ಯುವಕನೂ ಅಲ್ಲ. ವೃದ್ಧನೂ ಅಲ್ಲ.

ನ ವೈ ವರ್ತುಲಂ ನೈವ ತದ್ವೈ ಚತುಷ್ಕಂ
ನ ಚೋರ್ಧ್ವಂ ನ ಚಾಧೋ ನ ತದ್ವಿಸ್ತರಂ ಹಿ ।
ತದೇವಾದ್ಯಖಂಡಂ ನ ಖಂಡಾದಿಹೀನಂ
ಸಮಸ್ತಾಂಡಗಂ ವಿಸ್ತೃತಂ ಚಾಂಡತೋಽಪಿ ॥೫೨॥

ನ ಶುಷ್ಕಂ ನ ಚಾರ್ದ್ರಂ ಘನಂ ನಾಪಿ ದೇವಿ
ನ ಕಿಂಚಿತ್ತದೇವೇಹ ಪಶ್ಯಾಮಿ ಲಿಂಗಂ ।
ಯತೋ ಬ್ರಹ್ಮವಿಷ್ಣ್ವಿಂದ್ರರುದ್ರಾಃ ಪ್ರಜಾತಾ
ಯತೋ ವಾ ಮಹಾಭೂತಸಂಘಾನಿ ದೇವಿ ॥೫೩॥

ಅನೇನೈವ ಜೀವಂತಿ ನಿತ್ಯಂ ಸದಾಸ್ತೇ
ಜಗಜ್ಜಾಲಮೇತನ್ಮಹಾಲೋಕವರ್ಗೈಃ ।
ತಥಾಂತೇ ಲಯಂ ಯಾತಿ ಲಿಂಗೇ ತ್ವಲಿಂಗೇ
ತದೇತದ್ವಿಜಿಜ್ಞಾಸಸ್ವ ಬ್ರಹ್ಮತ್ವಮೇವ ॥೫೪॥

ಹ್ರಸ್ವದೀರ್ಘಾದಿಗಳಿಗೆ ಸೇರಿದುದೂ ಅಲ್ಲ. ಕೃಷ್ಣಪೀತಾದಿವರ್ಣಗಳೂ ಇದರಲ್ಲಿ ಕಾಣುವಂತಿಲ್ಲ. ||೫೧||

ದುಂಡು, ಚೌಕ ಮುಂತಾದ ಆಕಾರಗಳಾಗಲಿ, ಊರ್ಧ್ವಾಧೋಭಾಗಗಳಾಗಲಿ, ಹ್ರಸ್ವವಿಸ್ತಾರಗಳಾಗಲಿ ಇದರಲ್ಲಿಲ್ಲ. ಇದೇ ಆದಿಭೂತವಾದದ್ದು. ಅಖಂಡಾತ್ಮಕವಾದದ್ದು. ಖಂಡಾದಿಗಳು ಯಾವುವೂ ಇದರಲ್ಲಿ ತೋರಿಬರುವಂತಿಲ್ಲ. ಬ್ರಹ್ಮಾಂಡದಲ್ಲೆಲ್ಲಾ ವ್ಯಾಪಿಸಿ, ಬ್ರಹ್ಮಾಂಡವನ್ನೂ ಮೀರಿ ನಿಂತಿರುವುದಾಗಿದೆ. ||೫೨||

ಒಣಗಿದ ಮತ್ತು ಹಸಿಯಾದ ವಸ್ತುವೂ ಇದಲ್ಲ. ಘನೀಭೂತವಾದದ್ದಾಗಲಿ, ದ್ರವೀಭೂತವಾದ ವಸ್ತುವಾಗಲಿ ಇದಲ್ಲ. ಬ್ರಹ್ಮ, ವಿಷ್ಣು, ರುದ್ರ ಇವರೇ ಮೊದಲಾದ ದೇವತೆಗಳೂ, ಮಹಾಭೂತಸಂಘಗಳೂ ಇದರ ದೆಸೆಯಿಂದಲೇ ಉತ್ಪನ್ನವಾದವು. ||೫೩||

ಈ ಜಗತ್ತು ಜೀವಿಸುತ್ತಿರುವುದು ಈ ಲಿಂಗದಲ್ಲಿಯೇ. ಕೊನೆಯಲ್ಲಿ ಲಯವಾಗುವುದು ಈ ಶಿವಲಿಂಗದಲ್ಲಿಯೇ. ಈ ವಿಷಯವನ್ನು ದೃಢವಾಗಿ ತಿಳಿದವರೇ ಬ್ರಹ್ಮಭಾವವನ್ನು ಹೊಂದುವರು. ||೫೪||

ಯೇನೈವ ಸರ್ವೇಂದ್ರಿಯಕಲ್ಪನಾ ತಥಾ
ರೂಪಂ ಚ ಚಕ್ಷುಃ ಪರಿಪಶ್ಯತೇ ತತ್ ।
ತದೇವ ಲಿಂಗಂ ವಿಮಲಂ ಪ್ರಪಶ್ಯ ನಾನ್ಯೈವ
ನಾಸ್ತಿ ಪರಿದೃಶ್ಯತೇ ತತ್ ॥೫೫॥

ಯದ್ವೈವ ವಾಕ್ಸರ್ವರಸಾಂಶ್ಚ ವೇತ್ತಿ
ರಸಾತಿಗಂ ತತ್ಪರಿಪಶ್ಯ ಲಿಂಗಂ ।
ತದೇವ ತಚ್ಛ್ರೋತ್ರವರಂ ಚ ದಿವ್ಯಂ
ಶ್ರಾವ್ಯಂ ಶೃಣೋತೀದಮೇವಾದ್ಯಲಿಂಗಂ ॥೫೬॥

ಯದೇವ ಚಾಘ್ರಾತಿ ಸುಗಂಧಮೇತತ್
ತದೇವ ಲಿಂಗಂ ಪರಿಪಶ್ಯ ದೇವಿ ।
ಯತ್ರೈವ ತ್ವಕ್ಸ್ಪರ್ಶಮಥೈವ ವೇತ್ತಿ
ತದೇವ ಲಿಂಗಂ ಮಮ ದೇವಿ ಪಶ್ಯ ॥೫೭॥

ಈ ಲಿಂಗದ ಮಹಿಮೆಯಿಂದಲೇ ಪ್ರಾಣಿಗಳು ಇಂದ್ರಿಯಗಳ ವ್ಯಾಪಾರಾದಿಗಳನ್ನು ಅರಿಯುವರು. ಈ ಲಿಂಗವೇ ರೂಪವಾಗಿಯೂ, ರೂಪಗ್ರಹಣಶಕ್ತಿಯುಳ್ಳ ಚಕ್ಷುಸ್ಸಾಗಿಯೂ ಪರಿಣತವಾಗಿರುತ್ತದೆ. ಪರಿಶುದ್ಧವಾದ ಈ ಶಿವಲಿಂಗವನ್ನು ಬಿಟ್ಟರೆ, ಏತದ್ಭಿನ್ನವಾದ ವಸ್ತುವು ಜಗತ್ತಿನಲ್ಲಿ ಮತ್ತಾವುದೂ ಇರಲಾರದು. ||೫೫||

ಸರ್ವರಸದ ರುಚಿಗಳನ್ನು ತಿಳಿಸುವ ಮಾತೂ, ತಿಳಿಯುವ ನಾಲಿಗೆಯೂ, ರಸದ ರುಚಿಯೂ ಈ ಶಿವಲಿಂಗವೇ. ಹಾಗೆಯೇ ಧ್ವನಿಯನ್ನು ಕೇಳುವ ಶಕ್ತಿಯುಳ್ಳ ಕಿವಿಯೂ, ಕಿವಿಗೆ ವಿಷಯವಾಗಿರುವ ಧ್ವನಿಯೂ ಈ ಶಿವಲಿಂಗವೇ. ||೫೬||

ಆಘ್ರಾಣಮಾಡುವ ನಾಸಿಕವೂ, ಆಘ್ರಾಣಿಸುವ ಸುಗಂಧವೂ ಈ ಲಿಂಗವೇ. ಹಾಗೆಯೇ ಸ್ಪರ್ಶೇಂದ್ರಿಯವಾದ ಚರ್ಮವೂ ಸ್ಪರ್ಶಕ್ಕೆ ಆಧಾರವಾದ ವಸ್ತುಜಾಲವೂ ಈ ಲಿಂಗವೇ ಆಗಿರುವುದು. ||೫೭||

ಯದೇವ ಚ ಪ್ರಾಣಿತಿ ಪ್ರಾಣಿವರ್ಗಂ
ಬುದ್ಧ್ಯಾದಿ ಯದ್ಬೋಧಯತೇಽದ್ಯ ಲಿಂಗಂ ।
ಪಾಣ್ಯಂಘ್ರಿಪಾಯುಪ್ರಜನಾದಿಕೇಷು
ವಿಸರ್ಗಜಾನಂದಚಲಂ ಚ ಧರ್ಮಂ ॥೫೮॥

ತಲ್ಲಿಂಗಮೇತದ್ಧಿ ವಿಜಾನತೇ ಜನಾ
ಮನೋ ಮನೋ ಯಚ್ಚ ತದೇವ ಲಿಂಗಂ ।
ಯಥೈವ ನದ್ಯಸ್ಸರಮಾಣಾಸ್ಸಮುದ್ರಂ
ವೇಲಾತಿಗಾ ನಾಮರೂಪೇ ವಿಹಾಯ ॥೫೯॥

ತಲ್ಲಿಂಗಸಂದರ್ಶನತೋ ನರೋ ಭವೇತ್
ನಾಮಾತಿಗೋ ರೂಪಗುಣಾತಿಗಶ್ಚ ।
ತದೇವ ಲಿಂಗಂ ಧ್ವನಿಬಿಂದುವರ್ಣಂ
ಮಾತ್ರಾಕಲಾತೀತಗುಣಾತಿಗಂ ಚ ॥೬೦॥

---

ಪ್ರಾಣಿವರ್ಗದಲ್ಲಿ ಕಂಡುಬರುವ ಪಂಚಪ್ರಾಣವಾಯುಗಳೂ, ಬುದ್ಧಿಯೇ ಮೊದಲಾದ ಚಿತ್ತವೃತ್ತಿಗಳೂ, ಕಾಲು, ಕೈ, ಗುದ, ಜನನೇಂದ್ರಿಯ ಇವೇ ಮೊದಲಾದುವುಗಳೂ, ಅಚಲವಾದ ಆನಂದ, ಧರ್ಮ ಇವೇ ಮೊದಲಾದವುಗಳೂ ಈ ಲಿಂಗ ವಿಕಾರಗಳೇ. ॥೫೮॥

ಒಟ್ಟಿನಲ್ಲಿ ಮನಸ್ಸೂ ಈ ಲಿಂಗವೇ. ಮನೋವಿಷಯಕವಾದ ಜಗತ್ತೆಲ್ಲವೂ ಇದರ ವಿಕಾರವೇ. ವಸ್ತುಗಳು ಬೇರೆ ಬೇರೆ ರೂಪದಲ್ಲಿ ತೋರಿಬರುತ್ತಿದ್ದರೂ, ಲಯಕಾಲದಲ್ಲಿ ಬ್ರಹ್ಮತ್ವವನ್ನು ಪಡೆದು ಲಯವಾಗುವುವು. ಬೇರೆ ಬೇರೆ ಹೆಸರಿನಿಂದ ಭಿನ್ನ ಭಿನ್ನ ಕ್ರಮದಲ್ಲಿ ಹರಿಯುವ ನದಿಗಳ ಹೆಸರಾಗಲಿ, ಬಣ್ಣವಾಗಲಿ, ರುಚಿಯಾಗಲಿ, ಆಕಾರವಾಗಲಿ ಸಮುದ್ರಕ್ಕೆ ಸೇರಿದಮೇಲೆ ಉಳಿಯುವುವೇ ? ಅದರಂತೆ ಸಕಲ ಜಗತ್ತು ಲಯಕಾಲದಲ್ಲಿ ಬ್ರಹ್ಮತ್ವವನ್ನು ಪಡೆದು ಪರಬ್ರಹ್ಮವಸ್ತುವಿನಲ್ಲಿ ಲೀನವಾಗುವುವು. ॥೫೯॥

ಅದೇರೀತಿ ಮನುಷ್ಯನೂ ಈ ಲಿಂಗದರ್ಶನದಿಂದ ಮುಕ್ತಿಯನ್ನು ಪಡೆದು ತನ್ನ ರೂಪ, ಗುಣ ಇವುಗಳನ್ನು ಕಳೆದುಕೊಂಡು ಧ್ವನಿ, ಬಿಂದು, ವರ್ಣ, ಮಾತ್ರಾ, ಕಲ, ಗುಣ ಇವೇ ಮೊದಲಾದುವುಗಳು ಇಲ್ಲದ ನಿರ್ಗುಣಸ್ವರೂಪವಾಗಿ ಪರಬ್ರಹ್ಮ ವಸ್ತುವೆನಿಸಿದ ಈ ಶಿವಲಿಂಗದಲ್ಲಿ ಐಕ್ಯವನ್ನು ಪಡೆಯುವರು. ॥೬೦॥

ಓಮೋಮಿತಿ ಪ್ರಾಣಿವರ್ಗೇ ಚ ವೇದೇ
ವೇದಾಂತಸಂಘೇ ಚ ವದತ್ಯಭೀಕ್ಷ್ಣಂ
ಈಶಾನವಾಸ್ಯಂ ಹಿ ತದೇವ ಲಿಂಗಂ
ಪೂರ್ಣಾತ್ತಥಾ ಪೂರ್ಣತರಂ ಸುಪೂರ್ಣಂ ॥೬೧॥

ಯದಾ ತಮಸ್ತನ್ನ ದಿವಾ ನ ರಾತ್ರಿರ್ನಸನ್ನ
ಚಾಸತ್ತದತೀತಲಿಂಗಂ ।
ತದಕ್ಷರಂ ತತ್ಸವಿತುರ್ವರೇಣ್ಯಂ
ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ ॥೬೨॥

ಭಾವಗ್ರಾಹ್ಯಗನೀಡಂ ತದ್ಭಾವಾಭಾವಕರಂ ಹಿ ತತ್ ।
ಕಲಾಸರ್ಗಗತಂ ಲಿಂಗಂ ಯೇ ವಿದುಸ್ತೇ ಜಹುಸ್ತನುಂ ॥೬೩॥

ಸಕಲ ಪ್ರಾಣಿಗಳೂ, ವೇದಾರಂಭದಲ್ಲಿಯೂ, ಉಪನಿಷದಾರಂಭದಲ್ಲಿಯೂ, ಮತ್ತು ಆಗಾಗ ಮಂತ್ರೋಚ್ಚಾರಣಕಾಲಗಳಲ್ಲಿಯೂ ಹೇಳುವ ಓಂಕಾರವೇ ಪ್ರಣವ ಮಂತ್ರವು. ಆ ಪ್ರಣವಸ್ವರೂಪವೇ ಈ ಆತ್ಮಲಿಂಗವು. ಪೂರ್ಣವೆನಿಸಿರುವ ಈ ಜಗತ್ತು ಇದರಿಂದಲೇ ಸಂಪೂರ್ಣವೆನಿಸಿರುವುದು. ॥೬೧॥

ಕತ್ತಲೆಯಿರುವಾಗ ಹಗಲೆನಿಸುವುದಿಲ್ಲ. ತೇಜಸ್ಸಿನ ಮುಂದೆ ಕತ್ತಲೆಯಿರುವುದಿಲ್ಲ. ಆದರೆ ಯಾವಾಗಲೂ ಈ ಶಿವಲಿಂಗದ ತೇಜಸ್ಸು ಅಸ್ತಮಯವಾಗುವುದಿಲ್ಲವಾದ್ದರಿಂದ ಹಗಲು ರಾತ್ರಿಯ ಭೇದವೇ ಇರುವುದಿಲ್ಲ. ಇದರಿಂದ ಇದರ ಇರುವಿಕೆ ಅಥವಾ ನಾಶವಾಗುವಿಕೆಯನ್ನು ಊಹಿಸಲು ಸಾಧ್ಯವಿಲ್ಲ. ಹೀಗೆ ಸದಸದತೀತವಾಗಿ ನಾಶವಾಗದೇ ಸ್ಥಿರವಾಗಿದ್ದು ಸಕಲ ಲೋಕದಲ್ಲಿಯೂ ವ್ಯಾಪ್ತವಾಗಿರುವ ಅನಾದಿಯಾದ ಈ ಆತ್ಮಲಿಂಗವೇ ದೇವಶ್ರೇಷ್ಠವೆನಿಸಿದ್ದಾಗಿರುವುದು. ॥೬೨॥

ಭಾವನಾಪ್ರಧಾನವಾದ ಆತ್ಮಲಿಂಗಾರಾಧನೆಯನ್ನು ಕೈಗೊಂಡವರು, ಯಾರು ಈ ಲಿಂಗವನ್ನು ಕಲಾತ್ಮಕವಲ್ಲವೆಂದೂ, ಸೃಷ್ಟ್ಯಾದಿಲೋಕಧರ್ಮಗಳಿಗೆ ಸಿಕ್ಕಿದ್ದಲ್ಲವೆಂದೂ ಅರಿಯುವರೋ ಅವರು ನಿಜವಾಗಿಯೂ ಅಶಾಶ್ವತವಾದ ಪಾಂಚಭೌತಿಕ ದೇಹವನ್ನು ಬಿಟ್ಟು ಮುಕ್ತರೆನಿಸುವರು. ॥೬೩॥

ಸ್ವಭಾವಮೇಕೇ ವದಂತೀಶಲಿಂಗಂ
ಕಾಲಂ ತಥಾನ್ಯೇ ಪರಿಮುಹ್ಯಮಾನಾಃ ।
ಲಿಂಗಸ್ಯೈತನ್ಮಹಿಮಾನಮಿತಿ ವೀತಶೋಕೋ
ಜ್ಞಾತ್ವಾ ಲಿಂಗಂ ಶಾಂತಿಮತ್ಯಂತಮೇತಿ ॥೬೪॥

ಯಸ್ಮಿಲ್ಲಿಂಗೇ ಅಧಿವಿಶ್ವೇ ನಿಷೇದು
ರ್ಯಸ್ಮಿನ್ನಿದಂ ಸಂಚವಿಚೈತಿ ವಿಶ್ವಂ ।
ಯಸ್ಮಾದ್ಬಭೂವ ಭುವನಸ್ಯಾಸ್ಯ ಗೋಪಾಃ
ಪ್ರಜ್ಞಾಪತಿರ್ಭೂತವರ್ಗೈಕಕರ್ತಾ ॥೬೫॥

ಯಲ್ಲಿಂಗಮೇತದ್ಭುವನಂ ವಿಚಕ್ರಮೇ
ತಸ್ಯಾಂಶತಃ ಪಾದಮಿದಂ ಹಿ ವಿಶ್ವಂ ।
ಅಣೋರಣೀಯಾನ್ಮಹತೋ ಮಹೀಯಾನ್
ತದೇವ ಲಿಂಗಂ ನಿಹಿತಂ ಗುಹಾಯಾಂ ॥೬೬॥

ತದೇವ ಲಿಂಗಂ ಪಶ್ಯತಿ ವೀತಶೋಕೋ ।
ಧಾತುಃ ಪ್ರಸಾದಾನ್ಮಹಿಮಾನಮೀಶಂ ॥೬೭॥

ಕೆಲವರು ಅಜ್ಞಾನದಿಂದ ಇದನ್ನು ಈಶ್ವರಲಿಂಗವೆಂದೂ ಮತ್ತೆ ಕೆಲವರು ಕಾಲರೂಪನೆಂದೂ ಹೇಳುವರು. ನಾನು ಹೇಳಿದಷ್ಟು ಮಹಿಮೆಯನ್ನು ಈ ಲಿಂಗದಲ್ಲಿ ಅರಿತವರು, ನಿಜವಾದ ಜ್ಞಾನಿಗಳೆನಿಸಿ ಸ್ಥಿರವಾದ ಶಾಂತಿಯನ್ನು ಪಡೆಯುವರು.॥೬೪॥

ಅಖಿಲಪ್ರಪಂಚಾತ್ಮಕವಾದ ಈ ಲಿಂಗದಲ್ಲಿ ಸಕಲ ಲೋಕವೂ ಲೀನವಾಗುವುದು. ಹಾಗೆಯೇ ಪ್ರತಿಭಾಸಮಾನವೂ ಆಗುವುದು. ಈ ಲೋಕರಕ್ಷಕರೂ, ಜ್ಞಾನದಾಯಕನೂ, ಪ್ರಾಣಿಗಳ ಸೃಷ್ಟಿಕರ್ತನೂ ಆದ ಬ್ರಹ್ಮನೂ ಸಹ ಈ ಲಿಂಗದ ದೆಸೆಯಿಂದಲೇ ಹುಟ್ಟಿದವರಾಗಿರುವರು. ॥೬೫॥

ಯಾವ ಲಿಂಗವೇ ಈ ಪ್ರಪಂಚಾತ್ಮನಾ ಪರಿಣತವಾಗಿದೆಯೋ, ಅಂತಹ ಶಿವಲಿಂಗದ ಪಾದಭಾಗವೇ ಈ ವಿಶ್ವವು. ಆತ್ಮಸ್ವರೂಪವಾದ ಈ ಲಿಂಗವು ಅಣುವಸ್ತುಗಳಿಗಿಂತ ಅಣುವಾಗಿಯೂ, ಮಹಾವಸ್ತುಗಳಿಗಿಂತ ಮಹತ್ತಾಗಿಯೂ ಇರುವುದು,

ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕರ್ಮಾಣಿ ತಸ್ಯ ನಶ್ಯಂತಿ ಲಿಂಗೇ ದೃಷ್ಟೇ ಪರಾವರೇ ॥೬೮॥

ತಲ್ಲಿಂಗಂ ಜ್ಯೋತಿಷಾಂ ಜ್ಯೋತಿಶ್ಚೇತನಾನಾಂ ಚ ಚೇತನಂ।
ತತ್ರ ಕೋ ಮೋಹಃ ಕಶ್ಶೋಕಸ್ತಲ್ಲಿಂಗಮನುಪಶ್ಯತಃ ॥೬೯॥

ತದ್ದರ್ಶನವಿಹೀನಾನಾಂ ವಿಪದಸ್ಸ್ಯುರ್ಭವೇ ಭವೇ ।
ಜನ್ಮಮೃತ್ಯುಜರಾದುಃಖೈರಭಿಭೂತಾ ಹಿ ನಿತ್ಯಶಃ ॥೭೦॥

ಆನಂದಂ ತಸ್ಯ ಲಿಂಗಸ್ಯ ಜ್ಞಾತ್ವಾ ಬಿಭ್ಯೇನ್ನ ಜಾತುಚಿತ್ ।
ತಲ್ಲಿಂಗದರ್ಶನಾನಂದಮಾತ್ರಾಜ್ಜೀವಂತಿ ಸರ್ವಶಃ ॥೭೧॥

ಗುಹಾರೂಪವಾದ ಹೃದಯಕೋಶದಲ್ಲಿ ಪರಬ್ರಹ್ಮರೂಪದಿಂದ ನೆಲಸಿರುವುದೂ ಈ ಶಿವಲಿಂಗವೇ. ಪರಬ್ರಹ್ಮನ ಮಹಿಮೆಯಿಂದಲೂ, ಆತನ ಪ್ರಸಾದದಿಂದಲೂ, ಈ ಲಿಂಗದರ್ಶನಮಾಡಿಯೇ ಮನುಷ್ಯನು ದುಃಖನಿರ್ಮುಕ್ತನೆನಿಸಿ ಮುಕ್ತನಾಗುವನು. ॥೬೬-೬೭॥

ಈ ದಿವ್ಯವಾದ ಶಿವಲಿಂಗದರ್ಶನದಿಂದ ಶಾರೀರಕ ದುಃಖವೆಲ್ಲಾ ನಾಶವಾಗುತ್ತದೆ. ಸರ್ವಸಂಶಯಗಳೂ ದೂರವಾಗುತ್ತವೆ. ಪೂರ್ವಾರ್ಜಿತಪಾಪಕರ್ಮಗಳೆಲ್ಲಾ ನಾಶವಾಗುತ್ತವೆ. ॥೬೮॥

ಸಕಲತೇಜಸ್ಸುಗಳಿಗೂ ತೇಜಸ್ಸನಂತಿರುವುದೂ, ಚೈತನ್ಯವಿಶಿಷ್ಟವಾದ ವಸ್ತುಗಳಲ್ಲೆಲ್ಲಾ ಚೈತನ್ಯದಂತಿರುವುದೂ ಇದೇ ಲಿಂಗವೇ. ಇಂತಹ ಲಿಂಗದರ್ಶನಮಾಡಿದವನಿಗೆ ಅಜ್ಞಾನವಾಗಲಿ, ದುಃಖವಾಗಲಿ ಒದಗಲಾರದು. ॥೬೯॥

ಈ ಆತ್ಮಲಿಂಗದರ್ಶನಮಾಡದವರಿಗೆ ಜನ್ಮಾಂತರಗಳಲ್ಲು, ಅಲ್ಲಲ್ಲಿ ಒದಗುವ ಜನನ, ಮರಣ, ಮುಪ್ಪು, ಶೋಕ, ಇಂತಹ ವಿಪತ್ತುಗಳೂ ಅನಿವಾರ್ಯವಾಗಿ ಒದಗುತ್ತಲೇ ಇರುವುವು. ॥೭೦॥

ಆನಂದಮಯವಾದ ಈ ಲಿಂಗದರ್ಶನದಿಂದ ಆನಂದವನ್ನು ಪಡೆದವರು ಮತ್ತಾವ ವಿಪತ್ತುಗಳಿಗೂ ಹೆದರುವುದಿಲ್ಲ. ಆ ಶಿವಲಿಂಗದರ್ಶನಮಾತ್ರದಿಂದಲೇ ಸಕಲರೂ ಆನಂದಿತರಾಗಿ ಸುಖದಿಂದ ಜೀವಿಸುವರು. ॥೭೧॥

ಅಪಾಣಿಪಾದಂ ತಲ್ಲಿಂಗಂ ಮನಸೋಽತಜ್ಜವೀಯ ಹಿ ।
ಸ್ಥಾನಕಾಲಾತಿಗಂ ಯಚ್ಚ ಸ ಏವಾದ್ಯ ಸ್ಸ ಈಶ್ವರಃ ॥೭೨॥

ತಲ್ಲಿಂಗವೇತ್ತಾ ತರತಿ ಶೋಕಮೇತತ್ಸನಾತನಂ ।
ತದೇವ ಜಾನಥೈನ್ಯೈಕಂ ಲಿಂಗಮೇತನ್ಮನಃಸ್ಥಿತಂ ॥೭೩॥

ಧ್ಯಾತವ್ಯಂ ಧ್ಯಾನಹೀನಂ ಚ ಧ್ಯೇಯಧ್ಯಾನಾದಿವರ್ಜಿತಂ ।
ಜ್ಞಾನಜ್ಞೇಯಾದಿ ರಹಿತಂ ನಾಮರೂಪವಿವರ್ಜಿತಂ ॥೭೪॥

ಅನಂತಮಹಿಮಾಧಾರಮಪ್ರತಿಷ್ಠಿತವೈಭವಂ ।
ಅಜಾತಮೇತತ್ತಲ್ಲಿಂಗಂ ಕಶ್ಚಿದ್ಧೀರಃ ಪ್ರಪಶ್ಯತಿ ॥೭೫॥

ತಲ್ಲಿಂಗಂ ಸರ್ವತೋ ವಕ್ತ್ರಂ ಜ್ವಾಲಾಜಟಿಲಿತಾಖಿಲಂ ।
ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ॥೭೬॥

ತದಾ ತಲ್ಲಿಂಗಮಜ್ಞಾತ್ವಾ ದುಃಖಸ್ಯಾಂತೋ ಭವಿಷ್ಯತಿ ।
ನಾಂತಃಪ್ರಜ್ಞಂ ಹಿ ತಲ್ಲಿಂಗಂ ನೋಭಯಪ್ರಜ್ಞಮೇವ ಚ ॥೭೭॥

ಪಾಣಿಪಾದಾದ್ಯವಯವಗಳಿಲ್ಲದೆ ಮನೋವೇಗಾದಿ ಸಕಲ ವೇಗಗಳನ್ನೂ ಮಾರಿ, ಸ್ಥಾನ, ಕಾಲ ಇವುಗಳ ನಿಯಮವಿಲ್ಲದೆ ಜಗದೀಶ್ವರನೆನಿಸಿರುವ ಈ ಶಿವ ಲಿಂಗವೇ ಪರಬ್ರಹ್ಮವಸ್ತುವು. ॥೭೨॥

ಈ ಲಿಂಗದ ವಿಷಯಗಳನ್ನೆಲ್ಲಾ ಚೆನ್ನಾಗಿ ತಿಳಿದವನು ಸಕಲ ದುಃಖ ಗಳನ್ನೂ ಕಳೆದುಕೊಳ್ಳುವನು. ಆದ್ದರಿಂದ ಆತ್ಮಲಿಂಗವು ಸನಾತನವೆಂದೂ ಸರ್ವದಾ ಮನೋಮಾತ್ರೈಕವೇದ್ಯವೆಂದೂ ತಿಳಿಯಬೇಕು. ॥೭೩॥

ಈ ಲಿಂಗವು ಧ್ಯಾನ, ಧ್ಯೇಯ, ನಾಮ, ರೂಪ, ಏತದ್ವಿಷಯಕಗಳಲ್ಲದೆ, ಅನಂತ ಮಹಿಮಾಶ್ರಯವಾದದ್ದು. ಅಖಿಲೈಶ್ವರ್ಯಸಂಪನ್ನವೂ, ಉತ್ಪತ್ತಿಯಿಲ್ಲದೆ ಅನಾದಿಯೆನಿಸಿರುವುದೂ ಆದ ಈ ಆತ್ಮಲಿಂಗವನ್ನು ಯಾರು ಸರಿಯಾಗಿ ಅರಿಯು ವರೋ ಅವರೇ ಧೀರರು. ಅವರಿಗೇ ಇದು ಸುಲಭಗೋಚರವೆನಿಸುವುದು. ॥೭೪-೭೫॥

ಈ ಲಿಂಗವು ಸರ್ವತೋಮುಖವುಳ್ಳದ್ದು. ಪ್ರತಿವಕ್ತ್ರವೂ ಜ್ವಾಲೆಯಿಂದ ಜ್ವಲಿಸತಕ್ಕದ್ದಾಗಿರುವುದು. ಆಕಾಶವು (ಮಾಯೆಯು) ಚರ್ಮದಂತೆ ಸುತ್ತುವರಿಯಲ್ಪಟ್ಟಿರುವುದರಿಂದ, ಮನುಷ್ಯನಿಗೆ ಸುಲಭವಾಗಿ ಈ ಲಿಂಗದ ತೇಜಸ್ಸು ಗೋಚರಿಸ

ನ ಪ್ರಜ್ಞೈವ ಚ ತಲ್ಲಿಂಗಂ ನಾಪ್ರಜ್ಞಂ ಚೈತದೀಶ್ವರಿ ।
ಅದೃಶ್ಯಂ ಚೈವ ತಲ್ಲಿಂಗಂ ಅಗ್ರಾಹ್ಯಂ ತತ್ಸದೈವ ಹಿ ॥೭೮॥

ಏಕಾತ್ಮಪ್ರತ್ಯಯಂ ಲಿಂಗಂ ಪ್ರಪಂಚೋಪಶಮಂ ಹಿ ತತ್
ತಲ್ಲಿಂಗಜ್ಞಾ ಇಮೇ ಲೋಕಾಸ್ತಲ್ಲಿಂಗೇ ಲೀಯತೇಽಖಿಲಂ ॥೭೯॥

ತಲ್ಲಿಂಗೇ ಲಯನಾದ್ದೇವಿ ತಜ್ಜಲಾನೀತಿ ತೇ ಜಗುಃ
ತದ್ವೇದಾದೌ ಸ್ವರಂ ಲಿಂಗಂ ವೇದಾಂತೇ ಚ ಪ್ರತಿಷ್ಠಿತಂ ॥೮೦॥

ತಲ್ಲಿಂಗಪ್ರಕೃತೌ ಲೀನಾ ಬ್ರಹ್ಮವಿಷ್ಣುಮಹೇಶ್ವರಾಃ ।
ತದ್ಬ್ರಹ್ಮತಚ್ಛಿವಸ್ಸಾಕ್ಷಾತ್ ತದ್ವಿಷ್ಣುಸ್ತದ್ವಿರಾಟ್ ಸ್ವರಾಟ್ ॥೮೧॥

ಲಾರದು. ಅಂತಃಪ್ರಜ್ಞವೆನಿಸಿ, ಮಾಯೋಪಾಧಿಯಿದ್ದರೂ ಗೋಚರಿಸುವ ವಸ್ತುವು ಇದಲ್ಲ. ಬಹಿಃಪ್ರಜ್ಞನೆನಿಸಿಕೊಂಡು ಸಾಮಾನ್ಯದೃಗ್ಗೋಚರವಾದುದೂ ಇದಲ್ಲ. ಅಂತಃಪ್ರಜ್ಞ, ಬಹಿಃಪ್ರಜ್ಞ, ಏತದುಭಯವಿಶಿಷ್ಟವಾದ ಉಭಯಪ್ರಜ್ಞತ್ವವೂ ಇದರಲ್ಲಿಲ್ಲ. ॥೭೬-೭೭॥

ಈ ಲಿಂಗವು ಕೇವಲ ಪ್ರಜ್ಞಾರೂಪವಾದುದಲ್ಲ. ಪ್ರಜ್ಞಾರಹಿತವಾದದ್ದೂ ಅಲ್ಲ. ಅದೃಶ್ಯವಸ್ತುವೆನಿಸಿ, ಸರ್ವರಿಗೂ ಸುಲಭಗ್ರಾಹ್ಯವಲ್ಲದುದಾಗಿಯೇ ಇರುವುದು. ॥೭೮॥

ಇಷ್ಟು ಮಹಿಮಾವಿಶಿಷ್ಟವಾಗಿರುವುದರಿಂದಲೇ, ಈ ಲಿಂಗವು "ಲೋಕದಲ್ಲಿ ಪರಬ್ರಹ್ಮವಸ್ತುವು ಒಂದೇ ಶಾಶ್ವತವಾದದ್ದು" ಎಂಬ ಭಾವನೆಯನ್ನು ಕಲ್ಪಿಸುವುದಾಗಿದೆ. ಪ್ರಪಂಚವನ್ನು ಲಯಗೊಳಿಸಿ ತಾನೊಂದು ಮಾತ್ರ ಸ್ಥಿರವೆನಿಸಿಕೊಳ್ಳುವುದು. ಅದಕ್ಕಾಗಿಯೇ ಈ ವಿಷಯವನ್ನರಿತಪರು ಪ್ರಪಂಚವು ಇಲ್ಲಿಯೇ ಲಯವಾಗುವುದರಿಂದ ಇದಕ್ಕೆ ಲಿಂಗವೆಂಬ ಹೆಸರನ್ನಿಟ್ಟಿರುವರು. ॥೭೯॥

ಸರ್ವವೂ ಈ ಲಿಂಗದಲ್ಲಿ ಲಯವಾಗುವುದರಿಂದಲೇ ಇದನ್ನು ಜಲಮಯವೆಂದೂ ಹೇಳುವರು. ವೇದಾದಿಯಲ್ಲಿರುವ ಸ್ವರದಂತೆಯೂ, ವೇದಾಂತದಲ್ಲಿ ಪ್ರತಿಪಾದ್ಯಮಾನವಾಗುವ ಪರಬ್ರಹ್ಮನಂತೆಯೂ ಲಿಂಗವು ತೋರಿಬರುತ್ತಿರುವುದು.॥೮೦॥

ಈ ಬ್ರಹ್ಮ, ವಿಷ್ಣು ಮಹೇಶ್ವರರೆಲ್ಲರೂ ಲಿಂಗವೆಂಬ ಈ ಪ್ರಕೃತಿಯಲ್ಲಿ ಲೀನವಾಗುವವರೇ. ಆದ್ದರಿಂದಲೇ ಈ ಲಿಂಗವನ್ನು ಬ್ರಹ್ಮ, ವಿಷ್ಣು, ರುದ್ರ, ವಿರಾಟ್ಪುರುಷ, ಜಗತ್ಪತಿ ಈ ಹೆಸರುಗಳಿಂದ ವ್ಯವಹರಿಸಬಹುದು. ॥೮೧॥

ಸಮ್ರಾಡ್ವಿಶ್ವೇಶಿ ತಲ್ಲಿಂಗಂ ತದ್ದೃಶ್ಯಂ ಸೂಕ್ಷ್ಮದರ್ಶಿಭಿಃ ।
ಹೃದಾ ಪಶ್ಯಂತಿ ತಲ್ಲಿಂಗಂ ಮನಸೈವ ಮನೀಷಿಣಃ ॥೮೨॥

ಶ್ರವಣಾಯಾಪಿ ತಲ್ಲಿಂಗಂ ನ ಲಬ್ಧಂ ಬಹುಭಿಶ್ಶಿವೇ ।
ಶೃಣ್ವಂತೋಽಪಿ ಶಿವೇ ಲಿಂಗಂ ನ ವಿದುರ್ಬಹವೋಽಪಿ ಯೇ ॥೮೩॥

ಆಶ್ಚರ್ಯವತ್ಪಶ್ಯತಿ ಕಶ್ಚಿದೇತತ್
ಆಶ್ಚರ್ಯವಚ್ಛೃಣುತೇ ತಚ್ಚ ಲಿಂಗಂ ।
ಆಶ್ಚರ್ಯವದ್ಬೋಧತೇ ಯಂ ತಥಾನ್ಯೇ
ಹ್ಯಾಶ್ಚರ್ಯವತ್ಪಶ್ಯತಿ ತಚ್ಚಲಿಂಗಂ ॥೮೪॥

ನ ಪ್ರಾಣೇನ ನಾಪಾನೇನ ಲಿಂಗಹೀನೋ ನ ಜೀವತಿ ॥೮೫॥

ಲೋಕರಕ್ಷಕಳಾದ ದೇವಿಯೇ, ಈ ಲಿಂಗವು ಸೂಕ್ಷ್ಮಜ್ಞಾನಿಗಳಿಗೆ ಮಾತ್ರ ಗೋಚರಿಸತಕ್ಕದ್ದು. ಜ್ಞಾನಿಗಳು ಇದನ್ನು ಕೇವಲ ಹೃದಯಕಮಲದಲ್ಲಿ ಮಾತ್ರ ಅನುಸಂಧಾನಮಾಡಿಕೊಳ್ಳುವರು. ಇದರ ವಿಷಯವನ್ನು ಸರಿಯಾಗಿ ಕೇಳುವುದಕ್ಕೂ ಕಿವಿಗಳಿಗೆ ಸಾಧ್ಯವಿಲ್ಲವಾಗಿದೆ. ಒಂದುವೇಳೆ ಲಿಂಗಮಹಿಮೆಯನ್ನೆಲ್ಲಾ ಕೇಳಿದರೂ ತಿಳಿದುಕೊಳ್ಳುವುದು ಬಹುಜನರಿಗೆ ಸಾಧ್ಯವಿರುವುದಿಲ್ಲ. ॥೮೨-೮೩॥

ಇದೇ ಲಿಂಗವು ಒಂದು ಆಕಾರದಲ್ಲಿ ತನ್ನನ್ನೇ ಆಶ್ಚರ್ಯದಿಂದ ನೋಡಿಕೊಳ್ಳುವುದು. ಮಾಯೋಪಾಧಿವಶದಿಂದ ತನ್ನ ಸ್ವರೂಪವನ್ನರಿಯದೆ, ಕಿವಿಗೆ ಕೇಳಿ ಬರುವ ಧ್ವನಿಯನ್ನೆಲ್ಲಾ ಆಶ್ಚರ್ಯವೆಂದು ತಿಳಿದು ಕೇಳಬಯಸುವುದು. ಹಾಗೆಯೇ ತಿಳಿದುಕೊಳ್ಳುವ ವಿಷಯಗಳನ್ನು ಅಚ್ಚರಿಯಿಂದ ತಿಳಿಯಲು ಯತ್ನಿಸುವುದು. ಹಾಗೂ ಆವರಣಬಲದಿಂದ ಜ್ಞಾನಿಯಾಗದೆ ಇದೇ ಶಿವಲಿಂಗವನ್ನು ಆಶ್ಚರ್ಯವಸ್ತುವೆಂದೇ ಭಾವಿಸುವುದು. ಅಂದರೆ ಸ್ವಸ್ವರೂಪಜ್ಞಾನರಹಿತನಾದವನು ಮಾಯಾ ಸಂಬಂಧದಿಂದ ಬೇರೆಬೇರೆಯಾಗಿ ಕಾಣುವ ಈ ಜಗತ್ತನ್ನೆಲ್ಲಾ ಆಶ್ಚರ್ಯವಸ್ತುಗಳಂತೆ ಭಾವಿಸುವನು. ವಾಸ್ತವವಾಗಿ ಸರ್ವವೂ ಆತ್ಮವಿಕಾರವೇ. ಜೀವಿಯಾಗಿರುವ ಮನುಷ್ಯನು ಪ್ರಾಣಾಪಾನರೂಪನಾದ ಪಂಚಪ್ರಾಣಗಳುಳ್ಳವನಾಗಿದ್ದರೂ, ಈ ಪರಮಾತ್ಮವಸ್ತುಸಂಬಂಧವಿಲ್ಲದಿದ್ದರೆ ಜೀವಿಸಲಾರನು. ॥೮೪-೮೫॥

ಅಜಾಮೇಕಾಂ ಲೋಹಿತಕೃಷ್ಣವರ್ಣಾಂ
ಬಹ್ವೀಂ ಪ್ರಜಾಂ ಜನಯಂತೀಂ ಸರೂಪಾಂ ।
ಅಜೋ ಲಿಂಗೀ ಜುಷಮಾಣೋನುಶೇತೇ
ಜಹಾತ್ಯೇನಾಂ ಲಿಂಗಸಂಸ್ಥಸ್ಸ ಆತ್ಮಾ ॥೮೬॥

ತಲ್ಲಿಂಗಮಾರೇ ದ್ರಷ್ಟವ್ಯಂ ಶ್ರೋತವ್ಯಂ ವೇದಪರ್ವತೈಃ ।
ಪುರೀಶಯಂ ಚ ತಲ್ಲಿಂಗಂ ಸರ್ವಭೂತೇಷು ಸಂಸ್ಥಿತಂ ॥೮೭॥

ಕೋಹ್ಯೇವಾನ್ಯಾಚ್ಚ ಕಃ ಪ್ರಾಣ್ಯಾಲ್ಲಿಂಗಹೀನೋ ಮಹೇಶ್ವರಿ ।
ರಸೋಹ್ಯೇಷ ಮಹಾಲಿಂಗಂ ರಸ ಏಷೋಂಬಿಕೇ ಸದಾ ॥೮೮॥

ಏತದ್ಧಿ ಪರಮಾನಂದಂ ಲಿಂಗಮೇತತ್ಸ್ವಯಂ ಪ್ರಭಂ ॥೮೯॥

---

ಲಿಂಗಸಂಸ್ಥನಾಗಿಯೂ, ಆತ್ಮವಸ್ತುವಾಗಿಯೂ ಇರುವ ಪರಮಾತ್ಮನು ಸ್ವಯಂ ಉತ್ಪತ್ತಿರಹಿತನಾಗಿದ್ದೂ, ಉತ್ಪತ್ತ್ಯಾದಿಗಳಿಲ್ಲದ ಕೆಂಪು, ಕಪ್ಪು ಮುಂತಾದ ಬಣ್ಣಬಣ್ಣಗಳಿಂದ ಕೂಡಿ ಪ್ರಜಾವರ್ಗವನ್ನು ಸೃಷ್ಟಿಸುವ ಮಾಯಾ ಎಂಬ ವಸ್ತುವನ್ನು ಆಶ್ರಯಿಸಿ ಪ್ರಪಂಚಾತ್ಮಕವಾಗಿ ಭಾಸಮಾನವಾಗುವನು. ಈ ಜಗತ್ತನ್ನಾಗಿ ತಿರುಗಿಸುವ ಮಾಯಾಸಂಸರ್ಗವು ಈ ದಿವ್ಯಲಿಂಗಸ್ಥನಾದಾಗ ಪರಿಹಾರವಾಗುವುದು. ॥೮೬॥

ಇಂತಹ ಲಿಂಗದ ಸ್ವರೂಪವನ್ನು ವೇದಗಳೆಂಬ ಪರ್ವತಗಳಲ್ಲಿ ಸ್ಪಷ್ಟವಾಗಿ ತಿಳಿಯಬಹುದು. ಮತ್ತು ಸಾಕ್ಷಾತ್ಕಾರಮಾಡಿಕೊಳ್ಳಬಹುದು. ಸರ್ವಭೂತಾಂತರ್ವರ್ತಿಯಾಗಿರುವ ಈ ಲಿಂಗವೇ ದೇಹಾಭಿನ್ನವಾದ ಸಪ್ತಪುರಿಗಳಲ್ಲಿ (ನಾಡಿಗಳಲ್ಲಿ) ಜೀವರೂಪದಿಂದ ಹೊಳೆಯುತ್ತಿರುವುದು. ॥೮೭॥

ಈ ಪರಶಿವಲಿಂಗ ಸಹಾಯವಿಲ್ಲದೆ ಯಾವನುತಾನೇ ಉಳಿಯುವನು ? ಬದುಕುವವನು ಯಾವನು ? ಲೋಕದಲ್ಲಿ ಕಂಡುಬರುವ ನಿಖಿಲರಸಗಳೂ ಈ ಮಹಾಲಿಂಗವೇ. ಮಹಾಲಿಂಗವೇ ರಸರೂಪವಾಗಿರುವುದು. ಈ ವಿಧವಾದ ಅಸಾಧಾರಣಗುಣವಿಶಿಷ್ಟ ಶಿವಲಿಂಗವೇ ಪರಮಾನಂದರೂಪಿಯು, ಮತ್ತು ಸ್ವಯಂಪ್ರಕಾಶವುಳ್ಳದ್ದು. ॥೮೯॥

ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್
ಯಸ್ಮಾನ್ನಾಣೀಯೋ ನ ಜ್ಯಾಯೋಽಸ್ತಿ ಕಿಂಚಿತ್ ।
ವೃಕ್ಷ ಇವ ಸ್ತಬ್ಧಂ ದಿವಿ ತಿಷ್ಠತಿ ಲಿಂಗಮೇಕಂ
ತೇನೇದಂ ಪೂರ್ಣಂ ಲಿಂಗಭಾಸ್ಯೈಕಸರ್ವಂ ॥೯೦॥

ಲಿಂಗಾದ್ವಾಚೋ ನಿವರ್ತಂತೇ ಹ್ಯಪ್ರಾಪ್ಯ ಮನಸಾ ಸಹ ।
ತದತ್ಯತಿಷ್ಠದ್ದೇವೇಶಿ ಬ್ರಹ್ಮಾಂಡೋರ್ಧ್ವಾಂಗುಲಂ ತತಂ ॥೯೧॥

ತಸ್ಮಿನ್ ಭಾತಿ ಸ್ವಯಂ ಲಿಂಗಂ ಚಂದ್ರಸೂರ್ಯಾಗ್ನಯೋ ನ ಹಿ ।
ಭಾತಿ ತತ್ತೇಜಸಾ ವ್ಯಾಪ್ತಂ ಜಗದೇತಚ್ಚರಾಚರಂ ॥೯೨॥

ಯಥಾ ಕ್ಷೇತ್ರಜ್ಞನಿಹಿತಂ ಹಿ ಭೂಮೌ
ಗುಹಾಹಿತಂ ತಚ್ಚ ಲಿಂಗಂ ಮಹಾಂತಂ ।
ಹಿರಣ್ಯಂ ನ ವಿಂದಂತಿ ಚೋರ್ಧ್ವಂ ಚರಂತ
ಸ್ತಥೇದಂ ಪ್ರಪಶ್ಯಾಂಬಿಕೇ ಲಿಂಗಮೇತತ್ ॥೯೩॥

ಈ ಆತ್ಮಲಿಂಗಕ್ಕಿಂತ ಪ್ರತ್ಯೇಕವಾದ ವಸ್ತುವು ಲೋಕದಲ್ಲಿ ಮತ್ತೊಂದಿಲ್ಲ. ಇದಕ್ಕಿಂತ ಚಿಕ್ಕ ವಸ್ತುವಾಗಲಿ, ದೊಡ್ಡ ಪದಾರ್ಥವಾಗಲಿ ಯಾವುದೂ ಕಾಣಲಾರದು. ಅಂತರಿಕ್ಷಭಾಗದಲ್ಲಿ ದ್ವಿತೀಯರಹಿತವಾದ ಈ ಲಿಂಗವು ವೃಕ್ಷದಂತೆ ಅಚಲವಾಗಿ ನಿಂತಿರುವುದಾದರೂ, ಪ್ರಪಂಚವು ಈ ಆತ್ಮಲಿಂಗದಿಂದಲೇ ಪೂರ್ಣವೆನಿಸಿಕೊಳ್ಳುವುದು. ಇದೇ ಈ ಜಗದಾತ್ಮನಾ ಭಾಸಮಾನವಾಗುತ್ತಿರುವುದು. ॥೯೦॥

ಈ ಶಿವಲಿಂಗದ ಮಹಿಮೆಯನ್ನು ವಿವರಿಸಲು ಮಾತಿಗಾಗಲಿ, ಮನಸ್ಸಿಗಾಗಲಿ ಸಾಧ್ಯವಿಲ್ಲ. ಬ್ರಹ್ಮಾಂಡವನ್ನು ಸಹ ಮೀರಿ, ಅದಕ್ಕಿಂತಲೂ ಅತಿಶಯವಾಗಿ ತೋರುವ ಗುಣವುಳ್ಳದ್ದೆಂದರೆ ಈ ಶಿವಲಿಂಗವೇ. ನಿಜವಾಗಿಯೂ ಸೂರ್ಯ, ಚಂದ್ರ, ಅಗ್ನಿ ಮುಂತಾದ ದೇವತೆಗಳಿಗೆ ಸ್ವಯಂಪ್ರಕಾಶಕತ್ವವಿರುವುದಿಲ್ಲ. ಪರಬ್ರಹ್ಮರೂಪಿಯಾದ ಈ ಲಿಂಗದ ತೇಜಸ್ಸಿನಿಂದಲೇ ಅವು ತೇಜೋವಸ್ತುಗಳೆನಿಸಿಕೊಂಡಿರುವುವು. ॥೯೧-೯೨॥

ಭೂಮಿಯ ಗುಣವನ್ನು ತಿಳಿದು, ಹೂತಿಟ್ಟವನ ನಿಧಿಯು ಭೂಮಿಯ ಮೇಲೆ ಸಂಚರಿಸುವವರಿಗೆ ಹೇಗೆ ತಿಳಿಯಲಾರದೋ, ಹಾಗೆ ಹೊರಗಿನ ಶಾಸ್ತ್ರಾರ್ಥ

ಜಾಗ್ರತ್ಸ್ವಪ್ನಸುಷುಪ್ತೀಷು ಯಲ್ಲಿಂಗಂ ಮನಸಾ ತತಂ ।
ತದೇತದಹಮಿತಿ ಜ್ಞಾತ್ವಾ ಲಿಂಗೀ ಲಿಂಗಾತಿಗೋ ಭವೇತ್ ॥೯೪॥

ಯಥೋರ್ಣನಾಭಿಸ್ಸೃಜತೇ ತಂತುಜಾಲಂ
ಗೃಹ್ಣಾತಿ ವಕ್ತ್ರೇಣ ತಥಾತ್ತಿ ಸರ್ವಂ ।
ತಥಾ ಜಗಜ್ಜಾಲಮಿದಂ ಹಿ ಲಿಂಗತೋ
ಭವತ್ಯಥೋಽಂತೇ ವಿಲಯಂ ಪ್ರಯಾತಿ ॥೯೫॥

ಬ್ರಹ್ಮೈವ ತಲ್ಲಿಂಗಮಿದಂ ಸನಾತನಂ
ಸ್ವವಿದ್ಯಯಾ ಸಂಸರತೇ ಚ ಮುಚ್ಯತೇ ।
ತದೇತಲ್ಲಿಂಗಂ ತಪಸಾ ವೇದಿತವ್ಯಂ
ನಾನ್ಯೈರ್ಧರ್ಮೈಸ್ತಚ್ಚ ಲಿಂಗಂ ತ್ವಲಿಂಗಂ ॥೯೬॥

ಗಳಿಂದ ಕಾಲಕಳೆಯುವವರಿಗೆ ನಿಜವಾದ ಈ ಶಿವಲಿಂಗಸ್ವರೂಪದ ಅರಿವು ದುರ್ಲಭವೆನಿಸುವುದು. ಇದೇ ಈ ದೇಹರೂಪಗುಹಾಂತರ್ಗತವಾದ ಆತ್ಮವೈಚಿತ್ರ್ಯ. ॥೯೩॥

ಜೀವಿಯು, ತನ್ನ ಜಾಗ್ರತ್, ಸ್ವಪ್ನ, ಸುಷುಪ್ತ್ಯಾದಿ ಅವಸ್ಥಾತ್ರಯಗಳಲ್ಲಿಯೂ ಯಾವುದನ್ನು ತನ್ನ ಅಂತಃಕರಣವೃತ್ತಿಯಿಂದ ಅರಿಯುವನೋ, ಅದನ್ನೇ ಈ ಲಿಂಗವೆಂದು ತಿಳಿಯಬೇಕು. ಆ ಲಿಂಗಸ್ವರೂಪಿಯಾದ ಪರಬ್ರಹ್ಮವಸ್ತುವೇ ತಾನು ಎಂಬುದನ್ನು ಸೋಽಹಂಭಾವದಿಂದ ಪೂರ್ಣವಾಗಿ ಅರಿತವನು, ಈ ಇಂದ್ರಿಯ ಸಂಬಂಧವಾದ ಸ್ಥೂಲ ಸೂಕ್ಷ್ಮ ದೇಹದಿಂದ ಬಿಡುಗಡೆಹೊಂದಿ ಮುಕ್ತನಾಗುವನು. ॥೯೪॥

ಜೇಡರಹುಳುವು ತನ್ನ ಬಾಯಿಂದಲೇ ತಂತುವನ್ನು ಎಳೆದು ಒಂದು ಗೂಡನ್ನು ನಿರ್ಮಿಸಿಕೊಳ್ಳುವುದು, ಕೊನೆಗೆ ಅದನ್ನೆಲ್ಲಾ ತಾನೇ ನುಂಗಿಬಿಡುವುದು. ಹಾಗೆಯೇ ಈ ಜಗತ್ತೆಲ್ಲವೂ ಲಿಂಗಮೂಲಕವಾಗಿಯೇ ಪ್ರಕಾಶವಾಗುವುದು. ಕೊನೆಗೆ ಲಿಂಗದಲ್ಲಿಯೇ ಐಕ್ಯವಾಗುವುದು. ॥೯೫॥

ಈ ಲಿಂಗವೇ ಅದ್ವೈತಿಗಳು ಹೇಳುವ ಪರಬ್ರಹ್ಮವಸ್ತು. ಇದೇ ಸನಾತನವಾದದ್ದು. ಅವಿದ್ಯಾರೂಪವಾದ ಮಾಯಾಸಂಸರ್ಗದಿಂದ ಸಂಸಾರಚಕ್ರಕ್ಕೆ ಸಿಕ್ಕುತ್ತದೆ. ಮಾಯಾರಾಹಿತ್ಯದಿಂದ ಮುಕ್ತವಾಗುತ್ತದೆ. ತಪಸ್ಸುಗಳನ್ನಾಚರಿಸಿ, ತಿಳಿಯಲ್ಪಡುವ ವಸ್ತುವೆಂದರೆ ಈ ಶಿವಲಿಂಗವೇ. ನಿಜವಾದ ಚಿತ್ತಶುದ್ಧಿಯಿಲ್ಲದೆ ದಾನ

ತದೇವ ಲಿಂಗಂ ತ್ವವಿಮುಕ್ತೇ ನಿವಿಷ್ಟಂ
ಭೂತಾತಿಗಂ ವಿಶ್ವನಾಥಾಭಿಧಂ ಚ ।
ವಾರಾಣಸ್ಯಾಂ ಭ್ರೂಯುಗೇ ಸನ್ನಿವಿಷ್ಟಂ
ಯೋಗೈಃ ಪಶ್ಯಂತಿ ತತ್ರ ತೇ ಚೋತ್ಕ್ರಮಂತಿ ॥೯೭॥

ತತ್ರೈವ ತೇಷಾಂ ತಾರಕಂ ಚೋಪದೇಶಂ
ಓಂಕಾರಾದ್ಯಂ ಪ್ರಣವಂ ಬ್ರಹ್ಮಮಂತ್ರಂ ।
ನ ತಸ್ಯ ಪ್ರಾಣೋಽನುತ್ಕ್ರಮತೀವ ದೇವಿ
ತಲ್ಲಿಂಗಸಂಗಂ ಭವತೀತ್ಯಲಿಂಗಂ ॥೯೮॥

ತತ್ರಾವಿಮುಕ್ತೇ ಚೋಪಾಸ್ಯಂ ತಲ್ಲಿಂಗಂ ಮಹಿಮಾತಿಗಂ ।
ತತ್ರಾಶಕ್ತಸ್ಯ ದೇವೇಶಿ ಭೌತಿಕಂ ಭುವಿ ಮುಕ್ತಿದಂ ॥೯೯॥

---

ಧರ್ಮಾದಿಗಳಿಂದ ಸಂಪಾದಿಸುವ ಸುಕೃತವು ಎಂದಿಗೂ ಈ ಲಿಂಗವಾಗಲಾರದು. ॥೯೬॥

ಇದೇ ಲಿಂಗವೇ ಅವಿಮುಕ್ತೇಶ್ವರಕ್ಷೇತ್ರವೆನಿಸಿದ ಕಾಶಿಯಲ್ಲಿ ವಿಶ್ವೇಶ್ವರಲಿಂಗ ವೆಂಬ ಹೆಸರಿನಿಂದ ನೆಲಸಿದ್ದಾಗಿದೆ. ಯೋಗಿಗಳು ಯೋಗಶಾಸ್ತ್ರಕ್ರಮದಿಂದ ತಮ್ಮ ಭ್ರೂಮಧ್ಯದಲ್ಲಿರುವ ಚಕ್ರಸ್ಥಳದಲ್ಲಿ ಪರಶಿವನನ್ನು ಅನುಸಂಧಾನಮಾಡುತ್ತಾ ಹಾಗೆಯೇ ಸಮಾಧ್ಯವಸ್ಥೆಯನ್ನು ಪಡೆದು ಮುಕ್ತರಾಗುವರು. ॥೯೭॥

ಅಲ್ಲಿಯೇ ಪರಶಿವನು ಓಂಕಾರರೂಪವಾದ ಪ್ರಣವಮಂತ್ರವನ್ನೂ ಪರಬ್ರಹ್ಮಾತ್ಮಕವಾದ ತಾರಕಮಂತ್ರವನ್ನೂ ಪ್ರಾಣಿಗಳಿಗೆ ಉತ್ಕ್ರಮಣಕಾಲದಲ್ಲಿ ಉಪದೇಶಿಸುವನು. ಅಲ್ಲಿ ಮೃತರಾದವರು ಮತ್ತೆ ದೇಹಿಗಳಾಗದೆ ಕೇವಲ ಶಿವಲಿಂಗೈಕ್ಯವನ್ನು ಹೊಂದುವರು. ॥೯೮॥

ಆದ್ದರಿಂದ ಲಿಂಗೋಪಾಸನೆಮಾಡುವವರು ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿಯೇ ಶಿವಲಿಂಗಾರಾಧನೆಮಾಡಬೇಕು. ಅದು ಸಾಧ್ಯವಿಲ್ಲದಿದ್ದರೆ ಭೂಮಿಯಲ್ಲಿ ಪಂಚಭೂತನಿರ್ಮಿತಗಳಾದ ಯಾವ ಶಿವಲಿಂಗಗಳನ್ನಾದರೂ ಸೇವಿಸಬಹುದು. ಅದೇ ಮುಕ್ತಿಪ್ರದವಾಗುವುದು. ॥೯೯॥

ಸಂದೃಶ್ಯಂ ಚಕ್ಷುಷಾ ಮರ್ತ್ಯೈಃ ಕ್ರಮಾತ್ತನ್ಮುಕ್ತಿದಾಯಕಂ ।
ತಸ್ಮಿನ್ನೇಕೇ ತತೇ ಲಿಂಗೇ ತ್ವಂತರೇಣ ಭವೇದ್ಭಯಂ ॥೧೦೦॥

ತತ್ಪರಾದಾದಿದಂ ಲಿಂಗಂ ಅಸ್ಮಿ ಬ್ರಹ್ಮೇತಿ ವಾಕ್ಯತಃ ।
ತದೇತದ್ಬ್ರಹ್ಮಪರಮಂ ಆತ್ಮಲಿಂಗಂ ಸನಾತನಂ ॥೧೦೧॥

ವೇದಾ ಯತ್ರೈವ ವೇದಾಂತೈರ್ನಿರ್ವೃತ್ತಾ ಯತ್ರ ಲಿಂಗಕೇ ।
ಹೃತ್ಪುಂಡರೀಕಂ ವಿರಜಂ ತಲ್ಲಿಂಗಂ ಭಾಸತೇಽನಿಶಂ ॥೧೦೨॥

ಕಂ ಚ ಖಂ ಚೈವ ತಲ್ಲಿಂಗಂ ಸರ್ವವ್ಯಾಪಿ ನಿರಾಮಯಂ ।
ಆನಂದಘನಮದ್ವೈತಂ ಚತುರ್ಥಂ ಮನಸಃ ಪರಂ ॥೧೦೩॥

ದಹರಾದ್ವಿಸ್ತರಂ ತಚ್ಚ ಸೂರ್ಯಮಂಡಲಮಂಡಿತಂ ।
ಚಂದ್ರಕೋಟಿಸಹಸ್ರಾಭಂ ತದ್ದೃಶ್ಯಂ ಸರ್ವಥಾ ಶಿವೇ ॥೧೦೪॥

ಮನುಷ್ಯರು ಮೊದಲು ಆ ಭೌತಿಕವಾದ ಲಿಂಗವನ್ನು ಭಕ್ತಿಯಿಂದ ದರ್ಶನಮಾಡಬೇಕು. ಅದರಿಂದಲೇ ಭಕ್ತರಿಗೆ ಭಯನಿವಾರಣೆಯಾಗುವುದು. ಅದನ್ನು ಬಿಟ್ಟು ಭಯನಿವಾರಕವಾದ ವಸ್ತುವು ಮತ್ತೊಂದಿಲ್ಲ. ॥೧೦೦॥

"ಅಹಂ ಬ್ರಹ್ಮಾಸ್ಮಿ" ಇತ್ಯಾದಿ ವಾಕ್ಯಗಳಿಂದ ಬ್ರಹ್ಮಸತ್ಯತ್ವವನ್ನು ನಿರೂಪಿಸಿ, ಜಗನ್ಮಿಥ್ಯಾತ್ವವನ್ನು ಕಲ್ಪಿಸುವ ಸಕಲರೂ ಈ ಲಿಂಗವನ್ನೇ ಪರಬ್ರಹ್ಮಸ್ವರೂಪವೆಂದೂ, ಇದೇ ಸನಾತನವಾದ ಆತ್ಮಲಿಂಗವೆಂದೂ ನಿರೂಪಿಸಿರುವರು. ॥೧೦೧॥

ವೇದಗಳೂ, ವೇದಾಂತಗಳೂ ಯಾವ ಲಿಂಗವನ್ನು ವಿವರಿಸುವುದರಲ್ಲಿ ಪರ್ಯಾಪ್ತಗಳಾಗುವುವೋ, ಆದೇ ಲಿಂಗವೇ ಹೃತ್ಕಮಲದಲ್ಲಿ ರಜೋಗುಣಸಂಬಂಧವಿಲ್ಲದೆ ಸರ್ವದಾ ಪ್ರಕಾಶಿಸುವ ಈ ಆತ್ಮಲಿಂಗವು. ॥೧೦೨॥

ಜಲಾತ್ಮಕವಾಗಿಯೂ, ಆಕಾಶಾತ್ಮಕವಾಗಿಯೂ ಇದ್ದು ಈ ಲಿಂಗವು ಸರ್ವವ್ಯಾಪಿಯಾಗಿರುವುದು. ಆನಂದಮಯವೂ, ದ್ವಿತೀಯವಸ್ತುಶೂನ್ಯವೂ ಜಾಗ್ರದಾದಿ ಅವಸ್ಥಾತ್ರಯನಿರ್ಮುಕ್ತವೂ, ಕಾಂತಿಯಿಂದ ಪ್ರಸರಿಸುವುದಾಗಿ ಸೂರ್ಯಮಂಡಲಾಂತರ್ವರ್ತಿಯೂ, ಸಹಸ್ರಕೋಟಿ ಚಂದ್ರನಂತೆ ಹೊಳೆಯುತ್ತಲೂ ಇರುವ ಲಿಂಗವೇ ಈ ದಿವ್ಯವಾದ ಆತ್ಮಲಿಂಗ. ॥೧೦೩-೧೦೪॥

ಯೋಗೇನಾತ್ಮಾನುಸಂಧಾನೈರ್ವಿತಮೋಹಭಯೈಸ್ಸದಾ ॥೧೦೫॥

ವೇದಾಂತವಿಜ್ಞಾನಸುನಿಶ್ಚಿತಾರ್ಥೈಃ
ಸಂನ್ಯಾಸಯೋಗೈರ್ಯತಿಭಿಶ್ಶುದ್ಧಬುದ್ಧೈಃ ।
ತೇಷಾಮೇವೈತದ್ವಿರಜಂ ಲಿಂಗಧಾಮ
ಪ್ರಾಪ್ಯ ಪ್ರಾಪ್ತೇಶ್ಚಾವಿದೂರೇ ಶಿವೇದ್ಯ ॥೧೦೬॥

ನೈಷಾ ತರ್ಕೇಣ ಮತಿರಾಪನೇಯಾ
ಕ್ಷುರೋಪಮಂ ಲಿಂಗಮೇತದ್ಧಿ ಸತ್ಯಂ ।
ಋಚೋ ಅಕ್ಷರೇ ಪರಮೇ ತತ್ಪ್ರವಿಷ್ಟಂ
ಸರ್ಗಾದಿಹೀನಂ ಮಹಾಲಿಂಗಮೇತತ್ ॥೧೦೭॥

ಸುರಾದ್ಯೈರ್ದುರಾಪಂ ತಥಾ
ಯೋಗಿಭಿಃ ಕರ್ಮಭಿಶ್ಚಾಪ್ಯವಶ್ಯಂ ।
ತಲ್ಲಿಂಗತ್ಯಾಗೇನ ಸರ್ವದಾ ವೀತಮೋಹೋ
ಭವತ್ಯವಶ್ಯಂ ಶ್ರುತಿಗುಹ್ಯಮೇತತ್ ॥೧೦೮॥

---

ಇದನ್ನು ಸರಿಯಾಗಿ ಅರಿಯಲು, ಯೋಗಶಾಸ್ತ್ರಾನುಸಾರವಾಗಿ ಆತ್ಮಾನುಸಂಧಾನಮಾಡುತ್ತಾ ಭಯಶೋಕಾದಿಗಳನ್ನು ದೂರಮಾಡಿರಬೇಕು. ॥೧೦೫॥

ವೇದಾಂತಪಠನದಿಂದ ಪರಿಪಕ್ವವಾದ ಬುದ್ಧಿಯುಳ್ಳವರೂ, ಸಂನ್ಯಾಸಾಶ್ರಮದಲ್ಲಿದ್ದು ಚಿತ್ತಶುದ್ಧಿಯನ್ನು ಪಡೆದು ಯತಿಗಳೆನಿಸಿದವರೂ, ಈ ಶುದ್ಧವಾದ ಲಿಂಗಸ್ವರೂಪವನ್ನೂ, ಲಿಂಗದ ಮಹಿಮೆಯನ್ನೂ ಸರಿಯಾಗಿ ಅರಿಯುವರು. ಉಳಿದವರಿಗೆ ಇದು ಅಷ್ಟು ಸುಲಭಸಾಧ್ಯವಲ್ಲ. ॥೧೦೬॥

ಈ ಲಿಂಗದ ವಿಷಯವನ್ನು ಕೇವಲ ತರ್ಕವಾದಗಳಿಂದ ತಿಳಿಯಲು ಸಾಧ್ಯವಿಲ್ಲ. ಕತ್ತಿಯ ಅಲುಗಿನಂತೆ ಅತಿ ಸೂಕ್ಷ್ಮವಾದ ಈ ಶಿವಲಿಂಗವು ಕೇವಲ ಸತ್ಯಾತ್ಮಕವಾದದ್ದು. ಎಂದೂ ನಾಶವಿಲ್ಲದ ಸ್ಥಿರವಾದ ಸ್ಥಾನದಲ್ಲಿ ಸೇರಿರತಕ್ಕದ್ದು. ಸೃಷ್ಟಿಸ್ಥಿತಿಲಯಾದಿಗಳಿಗೆ ಸಿಕ್ಕದಿರುವ ಮಹಾಲಿಂಗವೇ ಇದು. ॥೧೦೭॥

ಇದು ದೇವತೆಗಳಿಗೂ, ಋಷಿಗಳಿಗೂ, ಯೋಗಿಗಳಿಗೂ ಸುಲಭವಾಗಿ ದೊರೆಯತಕ್ಕುದಲ್ಲ. ಆದ್ದರಿಂದ ಎಲ್ಲರೂ ದೇಹಾಭಿಮಾನವನ್ನು ಬಿಟ್ಟು ಆತ್ಮ-

ಯೋ ನಾವಿರತೋ ದುಶ್ಚರಿತಿ
ತಾನ್ನಾಶಾಂತೋ ನಾಸಮಾಹಿತಃ ।
ತಸ್ಯೈತದ್ದುರ್ಲಭಂ ಲಿಂಗ
ಮಾಸಕ್ತಸ್ಯೈವ ಸರ್ವಗಂ ॥೧೦೯॥

ಯೇಷಾಂ ನ ಜಿಹ್ಮ ಮನೃತಂ ಸದೈವ
ತೇಷಾಂ ಲಿಂಗಂ ಹೃದಿ ಭಾತ್ಯೇವ ಶಾಂತಂ ।
ಅತೋ ಲಿಂಗಂ ಪೂಜಯೇದಾತ್ಮಕಾಮೋ
ನ ಕಾಮಕಾಮೀ ಲಿಂಗಪೂಜಾಧಿಕಾರೀ ॥೧೧೦॥

ಏತದರ್ಥಂ ಗೂಢತಮಂ ಮಹೇಶಿ
ನಾನ್ಯೇ ವಿಂದಂತಿ ಜ್ಞಾನನಿಷ್ಠಾ ಹಿ ಭೂಯಃ ।
ನ ವಾ ದೇಶಿಕೋ ನೈವ ಶಿಷ್ಯಃ ಕದಾಚಿತ್
ನ ಪೂಜಾ ನ ಪೂಜ್ಯೋ ನ ವಾ ಪೂಜಕತ್ವಂ ॥೧೧೧॥

---

ಲಿಂಗಾನುಸಂಧಾನದಿಂದ ಅಜ್ಞಾನವನ್ನು ಕಳೆದುಕೊಳ್ಳಬೇಕು. ಇದೇ ವೇದರಹಸ್ಯ. ||೧೦೮||

ಯಾವನು ಸ್ಥಿರಬುದ್ಧಿಯುಳ್ಳವನಲ್ಲವೋ, ದುರ್ಮಾರ್ಗದಿಂದ ಯಾವನು ದೂರನಾಗಿಲ್ಲವೋ, ಶಾಂತಿ, ಸಮಾಧಾನಗಳನ್ನು ಯಾರು ಸಂಪಾದಿಸಿಲ್ಲವೋ, ಅಂತಹವರಿಗೆ ನಿಜವಾಗಿಯೂ ಈ ಲಿಂಗವಿಷಯಕವಾದ ಜ್ಞಾನವು ದುರ್ಲಭವೆನಿಸುವುದು. ಯಾವನು ಇವುಗಳನ್ನು ಹೊಂದುವುದರಲ್ಲಿ ಅತ್ಯಾಸಕ್ತನೋ ಆತನಿಗೇ ಇದು ಸುಲಭಸಾಧ್ಯ. ||೧೦೯||

ಯಾರ ಮನಸ್ಸಿನಲ್ಲಿ, ಕಪಟ, ಸುಳ್ಳು, ಇತ್ಯಾದಿದುರ್ಗುಣಗಳಿಗೆ ಅವಕಾಶವಿಲ್ಲವೋ ಅಂತಹವರ ಹೃದಯದಲ್ಲಿ ಈ ಆತ್ಮಲಿಂಗವು ಸರ್ವದಾ ಸ್ಫುರಿಸುತ್ತಿರುವುದು. ಆದ್ದರಿಂದ ಯಾರು ಆತ್ಮಕಾಮರಾಗಿ ಭಕ್ತಿಯಿಂದ ಲಿಂಗಾರಾಧಕರಾಗುವರೋ ಅವರೇ ಆತ್ಮಲಿಂಗಜ್ಞಾನಕ್ಕೆ ಅರ್ಹರೆನಿಸುವರು. ಕಾಮ್ಯಕಾಮಿಗಳಿಗೆ ಇದು ಅಸಾಧ್ಯವೆನಿಸುವುದು. ||೧೧೦||

ದೇವಿಯೇ! ಇಲ್ಲಿನವರೆಗೂ ನಾನು ಹೇಳಿದ ವಿಷಯವು ಅತ್ಯಂತ ನಿಗೂಢವಾದದ್ದು. ಜ್ಞಾನಿಗಳೂ ಸಹ ಇದನ್ನು ಸರಿಯಾಗಿ ಅರಿತಿರಲಾರರು. ಆತ್ಮಲಿಂಗವು

ಸ್ವದೋಷಾತ್ಪ್ರದೋಷೋಽಪಿ ನಾಸ್ತ್ಯೇವ ಲಿಂಗೇ
ಜಗನ್ನೈವ ಶೇಷಂ ವಿಶೇಷಾದ್ಭವಾನಿ ।
ಮಹಾಶೇಷಭೂಷಾವಿಶೇಷೋಽಪಿ ನಾತ್ರ
ಸದೋಷಾಕರಾಪಾರಮೌಳಿರ್ನ ಚೈವ ॥೧೧೨॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಶಿವಗೌರೀಸಂವಾದೇ
ಉಪನಿಷಲ್ಲಿಂಗಕಥನಂ ನಾಮ ಏಕೋನಷಷ್ಟಿತಮೋಽಧ್ಯಾಯಃ

---

ಗುರುವೂ ಅಲ್ಲ, ಶಿಷ್ಯನೂ ಅಲ್ಲ. ಇದರಲ್ಲಿ ಪೂಜಾ, ಪೂಜ್ಯ, ಪೂಜಕ ಭಾವಗಳಾವುವೂ ತೋರದೆ ಕೇವಲ ನಿರ್ಗುಣವಸ್ತುವಾಗಿ ತೋರುವುದು. ॥೧೧೧॥

ಎಲೌ ಗಿರಿಜೆಯೇ, ಈ ಆತ್ಮಲಿಂಗಾನುಸಂಧಾನಕ್ಕೆ ಒಂದು ರಾತ್ರಿಯಾಗಲಿ, ಪ್ರದೋಷಕಾಲವಾಗಲಿ ಅನವಶ್ಯಕ. ಜಗತ್ತೆಲ್ಲವೂ ಕ್ಷಣಿಕವಾದದ್ದು. ವಿಶೇಷವಾಗಿ ಉಳಿಯುವುದೊಂದೋ ಈ ಆತ್ಮಲಿಂಗವು. ನಿರ್ಗುಣೋಪಾಸಕನಿಗೆ ಆತ್ಮಲಿಂಗವು ಸರ್ಪಭೂಷಿತವೂ ಅಲ್ಲ. ಚಂದ್ರಶೇಖರನೂ ಅಲ್ಲ. ಸಗುಣೋಪಾಸಕರಿಗೆ ಮಾತ್ರ ಹಿಂದೆ ಹೇಳಿದ ಈಶ್ವರಾಕಾರಗಳು ಸಾಧಕಗಳಾಗುವುವೇ ಹೊರತು ನಿರ್ಗುಣೋಪಾಸಕನಿಗೆ ಇದರಿಂದ ಪ್ರಯೋಜನವಿಲ್ಲ. ಇದೇ ತಾತ್ತ್ವಿಕಾಂಶ ಎಂದು ಪರಶಿವನು ದೇವಿಗೆ ನಿರೂಪಿಸಿದನು. ॥೧೧೨॥

ಶ್ರೀ ಶಿವರಹಸ್ಯದ ಪ್ರಥಮಾಂಶದಲ್ಲಿ ಶಿವಗೌರೀ ಸಂವಾದರೂಪವಾಗಿ
ಉಪನಿಷಲ್ಲಿಂಗಪ್ರತಿಪಾದನೆಯನ್ನು ವಿವರಿಸುವ
ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ಷಷ್ಟಿತಮೋಽಧ್ಯಾಯಃ

### ಸ್ಕಂದಸ್ತುತಿಃ

|| ಈಶ್ವರ ಉವಾಚ ||

**ಶೃಣು ವಕ್ಷ್ಯಾಮಿ ತೇ ದೇವಿ ಹಿತಮಾತ್ಯಂತಿಕಂ ಶಿವೇ ।**
**ಯತ್ಪ್ರೋಕ್ತಂ ಪೂಜನಂ ದೇವಿ ಸುರಾಣಾಂ ಚ ನೃಣಾಂ ಸದಾ ॥೧॥**

**ಸಾ ಪೂಜಾನಂತಫಲದಾ ಜನ್ಮಕರ್ಮಪ್ರಣಾಶಿನೀ ।**
**ಸಂವಿದೇವ ಪರಾ ಪೂಜಾ ಸಾ ತು ತಸ್ಯಾಂ ಮನೋಲಯಃ ॥೨॥**

**ಸಾಧಾರಣಾನಾಂ ಸಾ ಪೂಜಾ ಹ್ಯವ್ಯಕ್ತಾತೀವ ದುರ್ಘಟಾ ।**
**ಮತ್ಪ್ರಸಾದೇನ ದೇವೇಶಿ ಪಚೇಲಿಮತಪಃಫಲೈಃ ॥೩॥**

---

## ಶ್ರೀಶಿವರಹಸ್ಯದಲ್ಲಿ ಅರುವತ್ತನೆಯ ಅಧ್ಯಾಯ

ಶಂಕರನು ಆತ್ಮಲಿಂಗಸ್ವರೂಪವನ್ನೆಲ್ಲಾ ವಿವರಿಸಿದ ಮೇಲೆ ದೇವಿಯನ್ನು ಕುರಿತು "ಎಲೌ ದೇವಿಯೇ, ನಿನಗೆ ಅತ್ಯಂತ ಸುಖವನ್ನುಂಟುಮಾಡುವಂತಹ ಶಿವಪೂಜಾವಿಧಾನವನ್ನು ತಿಳಿಸುವೆನು. ಇದನ್ನೇ ಹಿಂದೆ ದೇವತೆಗಳಿಗೂ, ಮನುಷ್ಯರಿಗೂ ಅವರ ಸುಖಪ್ರಾಪ್ತಿಗಾಗಿ ವಿವರಿಸಿರುವೆನು. ||೧||

ಶಿವಲಿಂಗಪೂಜೆಯು ಭಕ್ತರಿಗೆ ವಿಶೇಷಫಲಪ್ರದವಾದದ್ದು. ಜನ್ಮಾಂತರದ ಕರ್ಮವನ್ನೆಲ್ಲಾ ನಾಶಗೊಳಿಸತಕ್ಕದ್ದು. ಪೂಜೆಯಲ್ಲಿ ಜ್ಞಾನವೇ ಮುಖ್ಯವಾದದ್ದು. ಅಂತಹ ಸುಜ್ಞಾನದಲ್ಲಿ ಮನಸ್ಸನ್ನಡಗಿಸುವುದೇ ನಿಜವಾದ ಆರಾಧನೆ. ||೨||

ಇಂತಹ ಸುಜ್ಞಾನಪ್ರಾಪ್ತಿರೂಪವಾದ ಪೂಜೆಯು ಸಾಧಾರಣಮನುಷ್ಯರಿಗೆ ಸುಲಭವಾಗಿ ದೊರೆಯುವುದಲ್ಲ. ಯಾರು ನನ್ನನ್ನು ಕುರಿತು ತಪಸ್ಸುಮಾಡಿ, ತನ್ಮೂಲಕ ಚಿತ್ತಶುದ್ಧಿಯನ್ನು ಪಡೆದು ನನ್ನ ಅನುಗ್ರಹವನ್ನು ಸಂಪಾದಿಸಿ, ಯೋಗಾಭ್ಯಾಸದಿಂದಲೂ, ಯಜ್ಞಾಚರಣೆಯಿಂದಲೂ, ತಪಸ್ಸಿನಿಂದಲೂ, ಮಹಾನಂದವನ್ನು

ಯೋಗೈರ್ಯಾಗೈಶ್ಚ ತಪಸಾ ಮಹಾನಂದಕದಂಬಕೈಃ ।
ಭಸ್ಮನಿಷ್ಠಸ್ಯ ಸತತಂ ರುದ್ರಾವರ್ತನಶೀಲಿನಃ ॥೪॥

ಭಸ್ಮತ್ರಿಪುಂಡ್ರಯುಕ್ತಸ್ಯ ಸದಾರುದ್ರಾಕ್ಷಧಾರಿಣಃ ।
ಪಂಚಾಕ್ಷರಪರಸ್ಯೈವ ಸದಾ ಲಿಂಗಾರ್ಚಕಸ್ಯ ಚ ॥೫॥

ಬಿಲ್ವಪತ್ರೈರ್ಮಹಾದೇವಿ ಪ್ರದೋಷೇ ಪೂಜಕಸ್ಯ ಮಾಂ ।
ನಕ್ತಾಶನಾರ್ಚನಧ್ಯಾನಚತುರ್ದಶ್ಯಷ್ಟಮೀಷು ಚ ॥೬॥

ಸೋಮವಾರವ್ರತಾಚಾರಯುಕ್ತಸ್ಯ ನಿಯತಸ್ಯ ಚ ।
ಮತ್ಕ್ಷೇತ್ರವಾಸಿನೋ ದೇವಿ ಹ್ಯವಿಮುಕ್ತರತಸ್ಯ ಚ ॥೭॥

ವಿಶ್ವೇಶ್ವರಾರ್ಚಕಸ್ಯಾಸ್ಯ ಸುರಸ್ಯ ಚ ನರಸ್ಯ ಚ ।
ತಥಾ ಮಹಾಲಯೇ ಪುಣ್ಯೇ ರುದ್ರಕೋಟೌ ಮಹೇಶ್ವರಿ ॥೮॥

ಕಾಲಂಜರೇ ಪ್ರಭಾಸೇಪಿ ಪುಷ್ಕರೇಽಮರಕಂಟಕೇ ।
ಪಿಂಡಾರಕೇ ಕುರುಕ್ಷೇತ್ರೇ ಮಹಾಕಾಲೇ ಮಹೇಶ್ವರೇ ॥೯॥

---

ಅನುಭವಿಸುವರೋ ಅಂತಹವರಿಗೆ ಈ ಜ್ಞಾನಪ್ರಾಪ್ತಿಯು ಅತ್ಯಂತ ಸುಲಭವಾದದ್ದು. ಆ ಜ್ಞಾನಪ್ರಾಪ್ತಿಗೆ ಅರ್ಹತೆಯು ರುದ್ರಾಧ್ಯಾಯವನ್ನು ಪಠಿಸುವಂತಹ ಭಸ್ಮಧಾರಿಗಳಾದ ನನ್ನ ಭಕ್ತರಿಗೆ ಮಾತ್ರ ದೊರಕುವುದು. ||೩-೪||

ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಧಾರಿಗಳಾಗಿ, ಶಿವಪಂಚಾಕ್ಷರೀ ಜಪತತ್ಪರತೆಯಿಂದ ಸರ್ವಪ್ರದೋಷಕಾಲದಲ್ಲಿಯೂ ಯಾರು ಬಿಲ್ವಪತ್ರಾದಿಗಳಿಂದ ನನ್ನನ್ನು ವಿಶೇಷವಾಗಿ ಪೂಜಿಸುವರೋ, ಯಾರು ಕೃಷ್ಣಚತುರ್ದಶೀ, ಅಷ್ಟಮೀ ಮುಂತಾದ ಶಿವಪ್ರೀತಿಕರಗಳಾದ ತಿಥಿಗಳಲ್ಲಿ, ರಾತ್ರಿ ಉಪವಾಸ ಮತ್ತು ಅರ್ಚನ ಇವುಗಳನ್ನು ನಡೆಸುವರೋ, ಸೋಮವಾರ ವ್ರತ, ಶಿವಕ್ಷೇತ್ರದಲ್ಲಿ ನಿಯಮದಿಂದ ವಾಸ, ಅವಿಮುಕ್ತೇಶ್ವರಕ್ಷೇತ್ರವಾದ ಕಾಶೀನಗರದಲ್ಲಿ ನೆಲಸುವಿಕೆ, ಇವುಗಳಿಂದ ಧನ್ಯರೆನಿಸಿರುವರೋ, ಅವರಿಗೆ ಈ ಪೂಜಾಜ್ಞಾನವು ದೊರಕುವುದು. ||೫-೬-೭||

ಕಾಶೀವಿಶ್ವೇಶ್ವರಲಿಂಗಸನ್ನಿಧಿಯಲ್ಲಿ ವಾಸಮಾಡುವ ದೇವತೆಗಳಿಗೂ ಮನುಷ್ಯರಿಗೂ ಅತಿಸುಲಭವಾಗಿ ಶಿವಪೂಜಾಫಲವು ದೊರಕುವುದು. ಅಲ್ಲದೆ ಮಹಾಲಯವೇ ಮೊದಲಾದ ಪುಣ್ಯತಿಥಿಗಳಲ್ಲಿ ರುದ್ರಕೋಟಿಕ್ಷೇತ್ರ, ಕಾಲಂಜರಕ್ಷೇತ್ರ, ಪ್ರಭಾಸ, ಪುಷ್ಕರ, ಅಮರಕಂಟಕ, ಪಿಂಡಾರಕ, ಕುರುಕ್ಷೇತ್ರ, ಮಹಾಕಾಲ, ಮಹೇಶ್ವರಕ್ಷೇತ್ರವಾದ ದೇವದಾರುವನ, ನೈಮಿಷಾರಣ್ಯ, ಚಿತ್ರಕೂಟ, ಕೇದಾರ

ದೇವದಾರುವನೇ ಪುಣ್ಯೇ ನೈಮಿಷೇ ಚಿತ್ರಕೂಟಕೇ।
ಕೇದಾರೇ ಕಾಮದೇ ಪುಣ್ಯೇ ವೈದ್ಯನಾಥೇ ಮಹೇಶ್ವರಿ ॥೧೦॥

ಶ್ರೀಶೈಲೇ ಚ ತಥೋಂಕಾರೇ ತಥಾ ವೇಣುವನೇ ಶಿವೇ।
ಆವಟಂಕೇ ಸೋಮನಾಥೇ ಗೋಕರ್ಣೇ ತ್ರ್ಯಂಬಕೇ ಗಿರೌ ॥೧೧॥

ಶ್ರೀಮದ್ದಕ್ಷಿಣಕೈಲಾಸೇ ತಥೈಕಾಮ್ರವನೇ ಮಮ।
ವೃದ್ಧಾದ್ರಾವರುಣಾದ್ರೌ ಚ ತಥಾ ಗೋಪರ್ವತೇ ಶಿವೇ ॥೧೨॥

ಹೃತ್ಪುಂಡರೀಕೇ ಗೂಢೇ ಚ ಜಪ್ಯೇಶೇ ಶ್ವೇತಕಾನನೇ।
ಗಜಾರಣ್ಯೇ ರತ್ನಗಿರೌ ಶ್ರೀಕಂಠೇ ಮಾತೃಪರ್ವತೇ ॥೧೩॥

ಕೋಟಿಕಾಯಾಂ ಮಂಗಲೇ ಚ ಪುಣ್ಯೇ ದ್ರುತಿವನೇಽಪಿ ಚ।
ಕುಂಭಕೋಣೇಽರ್ಜುನೇ ಚೈವ ಶ್ರೀಸುಂದರಗಿರೌ ತಥಾ ॥೧೪॥

ಮಾಧವೀತೇಜಿನೀ ದೇವೀ ಕ್ಷೀರಿಣೇ ಕಾನನೇ ತಥಾ।
ಶಮೀವನೇ ಬಿಲ್ವವನೇ ಘಟೇಶೇ ಬ್ರಹ್ಮಕಾನನೇ ॥೧೫॥

---

ಕ್ಷೇತ್ರ, ಇಷ್ಟಾರ್ಥವನ್ನೆಲ್ಲಾ ಒದಗಿಸುವ ವೈದ್ಯನಾಥಕ್ಷೇತ್ರ, ಶ್ರೀಶೈಲ, ಓಂಕಾರ ಕ್ಷೇತ್ರ, ವೇಣುವನ, ಆವಟಂಕ, ಸೋಮನಾಥ, ಗೋಕರ್ಣ, ತ್ರ್ಯಂಬಕಕ್ಷೇತ್ರ, ದಕ್ಷಿಣಕೈಲಾಸವೆನಿಸಿದ ಏಕಾಮ್ರೇಶ್ವರಕ್ಷೇತ್ರ, ವೃದ್ಧಾಚಲ, ಇವುಗಳಲ್ಲಿ ವಾಸಿಸುವರಿಗೂ ಶಿವಪೂಜಾಫಲವು ಸುಲಭವಾಗಿ ದೊರಕುವುದು. ॥೮-೯-೧೦॥

ಹೃತ್ಪುಂಡರೀಕಕ್ಷೇತ್ರ, ಗೂಢವಾದ ಜಪ್ಯಕ್ಷೇತ್ರ, ಶ್ವೇತಕಾನನಕ್ಷೇತ್ರ, ಗಜಾರಣ್ಯಕ್ಷೇತ್ರ, ರತ್ನಗಿರಿ, ಶ್ರೀಕಂಠಕ್ಷೇತ್ರ, ಮಾತೃಪರ್ವತ, ಕೋಟಿಮಂಗಲಕ್ಷೇತ್ರ, ದ್ರುತಿವನಕ್ಷೇತ್ರ, ಕುಂಭಕೋಣ, ಅರ್ಜುನಕ್ಷೇತ್ರ, ಸುಂದರಗಿರಿ,॥೧೧-೧೨-೧೩-೧೪॥

ಮಾಧವವನ, ತೇಜೋವನ, ಕ್ಷೀರವನ, ಶಮೀವನ, ಬಿಲ್ವವನ, ಬ್ರಹ್ಮವನ ಛಾಯಾವನ, ಕುಂಭವನ, ಶ್ರೀವನ, ವೇದವನ, ವಲ್ಮೀಕವನ, ಮುಂತಾದ ಶಿವಸಂಬಂಧವಾದ ವನಗಳಲ್ಲಿಯೂ, ವಾತಪುರೀ, ರಾಮಸೇತು, ಗಂಧಮಾದನ ಪರ್ವತ, ಹಾಲಾಸ್ಯಕ್ಷೇತ್ರ, ಶಾಲಿಕಾವನ, ಗಜಶೈಲ, ಮಹೇಂದ್ರಶೈಲ ಮುಂತಾದ

ಛಾಯಾವನೇ ಚ ಶ್ರೀವಾಂಛ್ಯೇ ತಥಾ ವೇದವನೇ ಶಿವೇ ।
ವಲ್ಮೀಕೇ ವಾತಪುರ್ಯಾಂ ಚ ಸೇತೌ ವೈ ಗಂಧಮಾದನೇ ॥೧೬॥

ಹಾಲಾಸ್ಯೇ ಶಾಲಿಕವನೇ ಗಜಶೈಲೇ ಮಹೇಂದ್ರಕೇ ।
ವಸತಃ ಪುಣ್ಯಶೀಲಸ್ಯ ನಕ್ತಾಶನರತಸ್ಯ ಚ ॥೧೭॥

ಸಂವಸದ್ದ್ವಾದಶಾಬ್ದಂ ತು ಭಸ್ಮನೋದ್ಧೂಲಿತಸ್ಯ ಚ ।
ಕಸ್ಯಚಿದ್ಭಾಗ್ಯನಿವಹೈರ್ಜ್ಞಾನಂ ತಲ್ಲಭ್ಯತೇ ಮಮ ॥೧೮॥

ಬಹುಭಿರ್ಜನ್ಮಭಿರ್ದೇವಿ ಮತ್ಪ್ರಸಾದಯುತಸ್ಯ ಚ ।
ವೈರಾಗ್ಯಭಕ್ತಿಯುಕ್ತಸ್ಯ ಚಾತ್ಮಲಿಂಗಾರ್ಚನೇ ಮತಿಃ ॥೧೯॥

ಜಾಯತೇ ಪುಣ್ಯಪಾಕೇನ ಚಿತ್ತಶುದ್ಧ್ಯನುಸಾರತಃ ।
ಜಾಯತೇ ಜನ್ಮನಾಶಾಯ ನೃಣಾಮತ್ಯಂತದುರ್ಲಭಂ ॥೨೦॥

ನಾನಾಚಾರವಿಹಾರಾಣಾಂ ವಿಷಯಾಸಕ್ತಚೇತಸಾಂ ।
ವಾಂಛಾ ನ ಜಾಯತೇ ದೇವಿ ಕಸ್ಯಚಿತ್ಕ್ವಚಿದೇವ ಹಿ ॥೨೧॥

ಪುಣ್ಯಸ್ಥಳಗಳಲ್ಲಿಯೂ ಯಾರು ನಕ್ತಾಶನವ್ರತಾದಿಗಳನ್ನು ಅನುಷ್ಠಾನಮಾಡುತ್ತಾ, ಭಸ್ಮಲಿಪ್ತಾಂಗರಾಗಿ, ಹನ್ನೆರಡು ವರ್ಷ ಪರ್ಯಂತ ವಾಸಮಾಡುವರೋ ಅಂತಹ ವರಲ್ಲಿ ಯಾವನೋ ಒಬ್ಬ ಪುಣ್ಯಶಾಲಿಗೆ ಮಾತ್ರ ಈ ಶಿವಪೂಜಾವಿಷಯಕವಾದ ದೃಢಜ್ಞಾನವು ಪ್ರಾಪ್ತವಾಗುವುದು. ॥೧೫-೧೬-೧೭-೧೮॥

ಮಾನವರು ಅನೇಕ ಜನ್ಮಗಳಲ್ಲಿ ನನ್ನನ್ನು ಆರಾಧಿಸಿ, ನನ್ನ ಅನುಗ್ರಹಕ್ಕೆ ಪಾತ್ರರಾಗಿ, ವೈರಾಗ್ಯಾದಿ ಗುಣಗಳನ್ನು ಸಂಪಾದಿಸಿ, ಆತ್ಮಲಿಂಗಾರ್ಚನೆಯಲ್ಲಿ ತೊಡ ಗಿದವರಾದರೆ, ಆಗ ಅವರಿಗೆ ಚಿತ್ತಶುದ್ಧಿಯೂ ಪುಣ್ಯಫಲವೂ ದೊರೆಯುವುದು. ಅದರಿಂದ ಅವರು ಮುಕ್ತರೆನಿಸಿ, ಪುನರ್ಜನ್ಮವನ್ನು ಪಡೆಯದೆ ನಿತ್ಯಾನಂದಭಾಗಿ ಗಳಾಗುವರು. ॥೧೯-೨೦॥

ಅನೇಕ ಆಚಾರಾದಿಗಳನ್ನು ತೋರ್ಪಡಿಸುತ್ತಾ ಕೇವಲ ಸುಖಾಭಿಲಾಷೆ ಯುಳ್ಳವರಾಗಿರುವವರಿಗೆ ಎಂದಿಗೂ ಈ ಆತ್ಮಲಿಂಗಾರ್ಚನೆಯೇ ಮೊದಲಾದ ಸತ್ಕರ್ಮಗಳಲ್ಲಿ ಬುದ್ಧಿ ಹುಟ್ಟಲಾರದು. ಅಂತಹವರು ಅನೇಕ ಜನ್ಮಪರ್ಯಂತವಾಗಿ ಪಶುಪಕ್ಷಿಯೇ ಮೊದಲಾದ ಜೀವಿಗಳಾಗಿ ಹುಟ್ಟಿ ಕಾಲವನ್ನು ಕಳೆಯುವರು,

ಬಹುಜನ್ಮಸಹಸ್ರೇಷು ತಿರ್ಯಕ್ಸ್ಥಾವರಜಂಗಮೈಃ ।
ಜನ್ಮಭಿಃ ಪುಣ್ಯನಿಚಯೈರ್ಯುಕ್ತಸ್ಯ ಪುರುಷಸ್ಯ ಚ ॥೨೨॥

ಮತ್ಪ್ರಸಾದೇನ ವಿಜ್ಞಾನಂ ಜಾಯತೇ ನಾನ್ಯಥಾ ಶಿವೇ ।
ಮದ್ಧ್ಯಾನಧಾರಾಮೋದಾದಿಯುಕ್ತಸ್ಯ ನಿರತಸ್ಯ ಚ ॥೨೩॥

ಅಥರ್ವಶಿರಸೋಽಧ್ಯಾಯಶಿಖಾಜಪಯುತಸ್ಯ ಚ ।
ಜಾಬಾಲಶ್ರುತಿನಿಷ್ಠಸ್ಯ ಶಾಂಭವಸ್ಯ ವಿಶೇಷತಃ ॥೨೪॥

ಕೈವಲ್ಯಕಾಲರುದ್ರಾದಿಜಾಪಿನೋ ಬ್ರಾಹ್ಮಣಸ್ಯ ಚ ।
ರುದ್ರಾವರ್ತನಶೀಲಸ್ಯ ಭಸ್ಮನಿಷ್ಠಸ್ಯ ಮೇ ಸದಾ ॥೨೫॥

ಜ್ಞಾನಂ ವಿಜಾಯತೇ ಗೌರಿ ಕಸ್ಯಚಿಚ್ಛಿವಯೋಗಿನಃ ।
ಯತತಾಮಪಿ ಶೈವಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥೨೬॥

ಮಜ್ಜ್ಞಾನಸಾಧನಂ ದೇವಿ ಸೃಣಾಮತ್ಯಂತದುರ್ಲಭಂ ।
ಮಾಂ ಧ್ಯಾಯೇದ್ಧೃದಯಾಗಾರಪದ್ಮಸಂಸ್ಥಂ ಚತುರ್ಭುಜಂ ॥೨೭॥

ಆದರೆ ಕೆಲವರು ತಮಗೆ ದೊರೆತ ಜನ್ಮಗಳಲ್ಲಿಯೇ ಪುಣ್ಯಕರ್ಮಗಳನ್ನಾಚರಿಸಿ ನನ್ನ ಅನುಗ್ರಹಕ್ಕೆ ಪಾತ್ರರೂ ಆಗುವರು. ಅಂತಹವರು ಮಾತ್ರ ನನ್ನ ಧ್ಯಾನ, ನನ್ನ ಶಿವಲಿಂಗಾರ್ಚನೆ ಇಂತಹವುಗಳಲ್ಲಿ ಆಸಕ್ತಿಯನ್ನು ತೋರ್ಪಡಿಸುವರು. ||೨೧-೨೨||

ಅಂತಹವರು ನನ್ನ ಅನುಗ್ರಹಬಲದಿಂದ ಜ್ಞಾನಿಗಳಾಗುವರು. ಮತ್ತು ನನ್ನ ಧ್ಯಾನದಲ್ಲಿಯೇ ಸರ್ವದಾ ನಿರತರಾಗಿದ್ದು, ಅಥರ್ವಶೀರ್ಷೋಪನಿಷತ್ತು, ರುದ್ರಾಧ್ಯಾಯ ಜಾಬಾಲೋಪನಿಷತ್ತು, ಕೈವಲ್ಯೋಪನಿಷತ್ತು, ಕಾಲರುದ್ರೋಪನಿಷತ್ತು, ಬ್ರಾಹ್ಮಣಮಂತ್ರಗಳು ಇವುಗಳನ್ನು ಸರ್ವದಾ ಪಠಿಸುತ್ತಾ, ಭಸ್ಮಧಾರಿಯಾಗಿರುವ ಯಾವನೋ ಒಬ್ಬ ಶಿವಯೋಗಿಗೆ ಮಾತ್ರ ನನ್ನ ವಿಷಯಕವಾದ ಜ್ಞಾನೋದಯವಾಗುವುದು. ಆದರೆ ಇದಕ್ಕಾಗಿ ಪ್ರಯತ್ನಮಾಡುವ ನನ್ನ ಭಕ್ತರಿಗೆಲ್ಲಾ ನನ್ನ ಅನುಗ್ರಹವು ದೊರೆತಿಲ್ಲ. ||೨೩-೨೪-೨೫-೨೬||

ನನ್ನನ್ನು ಧ್ಯಾನಮಾಡುವುದೂ ಸಹ ಮನುಷ್ಯರಿಗೆ ಸುಲಭಸಾಧ್ಯವಲ್ಲ. ನಾನು ಸರ್ವದಾ ಮೃಗಪಾಣಿಯಾಗಿಯೂ ಟಂಕಹಸ್ತನಾಗಿಯೂ, ಸಚ್ಚಿದಾನಂದಾತ್ಮ

ಮೃಗಟಂಕಧರಂ ಸೌಮ್ಯಂ ಸಚ್ಚಿದಾನಂದವಿಗ್ರಹಂ ।
ಶುದ್ಧಕರ್ಪೂರಸಾರಾಚ್ಛಕುಂದೇಂದುಧವಲಪ್ರಭಂ ॥೨೮॥

ಮುಕುಟೋದ್ಭಾಸಿ ಚಂದ್ರಾಂಕಂ ಗಂಗಾಮಲಕಪರ್ದಕಂ ।
ಭುಜಂಗರಾಜವಲಯಮಹಾರ್ಘಮಣಿಭೂಷಣಂ ॥೨೯॥

ದಿವ್ಯಾನೇಕಮಣಿವ್ರಾತಚಿತಸಿಂಹಾಸನಸ್ಥಿತಂ ।
ತ್ರಿಣೇತ್ರಂ ನೀಲಕಂಠಂಚಾಪೀಂದುಧಾಮಸಮಾನನಾಂ ॥೩೦॥

ಉಮಯಾ ಸಹಿತಂ ಧ್ಯಾಯೇತ್ ಕ್ಷಣಂ ವಾಥ ಕ್ಷಣಾರ್ಧಕಂ ।
ಸೋಽಹಮೀಶಶ್ಶಿವಸ್ಸಾಕ್ಷಾತ್ ಅಹಂ ರುದ್ರೋ ಹರಿರ್ವಿಧಿಃ ॥೬೧॥

ಅಹಮಿಂದ್ರೋಽನಿಲೋ ವಾಯುರ್ಯಮೋಽಹಂ ವರುಣೋಽರ್ಯಮಾ ।
ಚಂದ್ರಃ ಕುಬೇರೋ ಮರುತೋ ಹ್ಯಶ್ವಿನೌ ಮರುತೋಽರ್ಕಕಾಃ ॥೩೨॥

ಸ್ಕಂದೋ ವಿಘ್ನೇಶ್ವರಶ್ಚೈವ ನಂದಿಕೇಶಾದಯೋ ಗಣಾಃ ।
ಸರ್ವೇಷಾಂ ಜನಿತಾ ಚಾಹಂ ಮತ್ತ ಏವಾಪ್ನ ನಿರ್ಗತಾಃ ॥೩೩॥

ಕನಾಗಿಯೂ ಇರುವೆನೆಂದು ತಿಳಿಯಬೇಕು. ನನ್ನ ವರ್ಣವು ಶುದ್ಧ ಕರ್ಪೂರದಂತೆಯೂ, ಕುಂದಪುಷ್ಪದಂತೆಯೂ, ಇಂದು ಪ್ರಭೆಯಂತೆಯೂ ಶುಭ್ರವಾಗಿರುವುದೆಂದು ಭಾವಿಸಬೇಕು. ಶಿರಸ್ಸಿನಲ್ಲಿ ಚಂದ್ರಕಲೆಯನ್ನೂ, ಜಟಾಜೂಟವನ್ನೂ, ನಿರ್ಮಲವಾದ ಗಂಗಾನದಿಯನ್ನೂ ಧರಿಸಿರುವೆನೆಂದು ತಿಳಿಯಬೇಕು. ಸರ್ಪರಾಜನಾದ ಆದಿಶೇಷನನ್ನೇ ಆಭರಣವನ್ನಾಗಿ ಮಾಡಿಕೊಂಡಿರುವೆನೆಂದೂ, ರತ್ನಮಯವಾದ ಆಭರಣಗಳಿಂದ ಅಲಂಕೃತವಾದ ದಿವ್ಯಸಿಂಹಾಸನಾರೂಢನಾಗಿ, ತ್ರಿನಯನನೂ, ನೀಲಕಂಠನೂ, ಚಂದ್ರಕಾಂತಿಸದೃಶನೂ ಆಗಿರುವೆನೆಂದು ಯೋಚಿಸಿ ಸರ್ವದಾ ತನ್ನ ಹೃದಯಕಮಲದಲ್ಲಿ ನನ್ನನ್ನು ಧ್ಯಾನಿಸಬೇಕು. ॥೨೭-೨೮-೨೯-೩೦॥

ಉಮಾಸಹಿತನಾದ ನನ್ನನ್ನು ಯಾರು ಒಂದು ಕ್ಷಣವಾಗಲಿ, ಕ್ಷಣಾರ್ಧವಾಗಲಿ, ಸೋಽಹಂಭಾವದಿಂದ ಧ್ಯಾನಿಸುವರೋ ಅವರೇ ನಿಜವಾದ ಭಕ್ತರು. ಲೋಕದಲ್ಲಿ, ಇಂದ್ರ, ಅಗ್ನಿ, ವಾಯು, ಯಮ, ವರುಣ, ಅರ್ಯಮ, ಚಂದ್ರ, ಕುಬೇರ, ಮರುತ್ತುಗಳು, ಅಶ್ವಿನೀದೇವತೆಗಳು, ಮರುದ್ಗಣಗಳು, ದ್ವಾದಶಾದಿತ್ಯರು, ಸ್ಕಂದ, ವಿಘ್ನೇಶ್ವರ, ನಂದಿಕೇಶಾದಿಗಳು, ಎಂಬ ಹೆಸರಿನಿಂದ ಇರುವ ದೇವತಾ

ಮಯ್ಯೈವ ನಿಧಯೋ ದತ್ತಾ ವೇದಾಸ್ಸರ್ವೇ ಸನಾತನಾಃ ।
ಮಯ್ಯೈವ ವಿಷ್ಣವೇ ದತ್ತಂ ಸಹಸ್ರಾರಂ ಸುದರ್ಶನಂ ॥೩೪॥

ಅಹಮೇವೇತಿ ವಿಜ್ಞಾಯ ಧ್ಯಾಯೇನ್ಮದ್ರೂಪಮೈಶ್ವರಂ ।
ಏವಂ ಹಿ ಧ್ಯಾಯತಾಂ ದೇವಿ ಮಜ್ಜ್ಞಾನಂ ಜಾಯತೇ ನೃಣಾಂ॥೩೫॥

ಅಥವಾ ದೇವಮೀಶಾನಂ ಮಾಂ ಧ್ಯಾಯೇತ್ಸೂರ್ಯಮಂಡಲೇ ।
ಹಿರಣ್ಯಬಾಹುಮಾಶಾಸ್ಯಂ ಹಿರಣ್ಯಶ್ಮಶ್ರುಮೀಶ್ವರಂ ॥೩೬॥

ಹಿರಣ್ಯವರ್ಣಂ ದೇವೇಶಿ ಹ್ಯಂಬಿಕಾಪತಿಮೀಶ್ವರಂ ।
ಸರ್ವಗ್ರಂಥಿವಿಮೋಕ್ಷಾಯ ತಜ್ಜ್ಞಾನಂ ಜಾಯತೇ ನೃಣಾಂ ॥೩೭॥

ಯೋಗೇನ ವಾಪಿ ನಿಯಮಯಮಾಸನಯುತಸ್ಯ ಚ ।
ರೇಚಕೇ ಪೂರಯೇದ್ವಾಯುಂ ಪೂರಕೇಣಾಥ ಪೂರಯೇತ್ ॥೩೮॥

ಭೇದಗಳೆಲ್ಲಾ ನಾನೇ. ಅವರೆಲ್ಲರ ಸೃಷ್ಟಿಕರ್ತನೇ ನಾನು. ಸನಾತನಗಳಾದ ಸಕಲ ವೇದ ರಾಶಿಯನ್ನೆಲ್ಲಾ ಲೋಕೋಪಕಾರಾರ್ಥವಾಗಿ ಬ್ರಹ್ಮನಿಗೆ ಕೊಟ್ಟವನೇ ನಾನು. ಸಹಸ್ರ ಅಲುಗುಗಳುಳ್ಳ ಸುದರ್ಶನ ಚಕ್ರವನ್ನು ವಿಷ್ಣುವಿಗೆ ಅನುಗ್ರಹಿಸಿದವನೇ ನಾನಲ್ಲವೆ! ॥೩೧-೩೨-೩೩-೩೪॥

ಇಂತಹ ಮಹಿಮಾಶಾಲಿಯಾದ ನನ್ನ ಸ್ವರೂಪವನ್ನರಿತು ಯಾರು ಸೋಹಂಭಾವದಿಂದ ಧ್ಯಾನಮಾಡುವರೋ ಅವರೇ ನನ್ನ ವಿಷಯವನ್ನು ತಿಳಿಯುವವರು. ॥೩೫॥

ಅಥವಾ ಸಕಲಲೋಕಕ್ಕೂ ಒಡೆಯನಾದ ನಾನು ಸೂರ್ಯಮಂಡಲನಿವಾಸಿಯೆಂದರಿತು, ನನ್ನ ಬಾಹುಗಳು ಸರ್ವದಾ ಹಿರಣ್ಮಯಗಳಾದುವೆಂದೂ, ನನ್ನ ಶ್ಮಶ್ರುವೂ, ದೇಹವೂ ಹಿರಣ್ಯವರ್ಣದವುಗಳೆಂದೂ ತಿಳಿಯಬೇಕು. ಹೀಗೆ ಅಂಬಿಕಾಪತಿಯಾದ ನನ್ನನ್ನು ಯಾರು ಸರ್ವದಾ ಧ್ಯಾನಮಾಡುವರೋ ಅವರು ಅನಾದಿಯಾದ ವಾಸನಾಸಂಸಾರಬಂಧನಗಳನ್ನೆಲ್ಲಾ ಪರಿಹರಿಸಿಕೊಳ್ಳುವರು. ॥೩೬-೩೭॥

ಅಲ್ಲದೆ ನನ್ನ ಉಪಾಸನೆಗೆ ಮತ್ತೊಂದು ಮಾರ್ಗವಿರುವುದು. ಯೋಗಶಾಸ್ತ್ರದಲ್ಲಿ ಉಕ್ತವಾಗಿರುವಂತೆ ಯಮನಿಯಮಾದಿ ಅಷ್ಟಾಂಗಯೋಗಗಳಿಂದ ಚಿತ್ತಶುದ್ಧಿಯನ್ನು ಸಂಪಾದಿಸಬೇಕು. ಅವುಗಳಲ್ಲಿಯೇ ಕೊನೆಯದಾದ ಸಮಾಧ್ಯವಸ್ಥೆಯಲ್ಲಿ

ಕುಂಭಕೇ ಕುಂಭವದ್ಧೀಮಾನ್ ಧಾರಯೇತ್ ಘಟಿಕಾತ್ರಯಂ ।
ಯೋಗಾತ್ತದಗ್ಧಕಾನೋತ್ಥಮಲಸ್ಯಾಮಲತೇಜಸಃ ॥೩೯॥

ನೀಹಾರಧೂಮಸಂವಿದ್ಯುತ್ಸ್ಫಟಿಕೋಜ್ವಲದೀಪವತ್ ।
ಜ್ಯೋತಿರ್ವಿಭಾಸತೇ ದೇವಿ ಹೃದಿ ಪೂರಿತವಾಯುಭಿಃ ॥೪೦॥

ಪ್ರಾಣಾಯಾಮೇನ ಸತತಂ ತನ್ನೀವಾರಶಿಖೇವ ಹಿ ।
ಸೋಽಹಂ ಜ್ಯೋತಿರ್ಮಹಾನಾತ್ಮಾ ಹ್ಯಸಂಗಃ ಪುರುಷಶ್ಶಿವಃ ॥೪೧॥

ಆಪಾದಮಸ್ತಕಂ ದೇಹಂ ವ್ಯಾಪ್ಯ ಸರ್ವೇಷ್ವವಸ್ಥಿತಃ ।
ಯೋ ಮಾಂ ಯೋಗೇನ ಜಾನಾತಿ ಸ್ವಾತ್ಮಾರಾಮಂ ಮಹೇಶ್ವರಂ ॥೪೨॥

ಧ್ಯೇಯವಸ್ತುವೂ ಪರಮಾತ್ಮರೂಪಿಯೂ ಆದ ನನ್ನಲ್ಲಿ ಚಿತ್ತವನ್ನು ನಿಲ್ಲಿಸಬೇಕು. ರೇಚಕಪ್ರಯತ್ನದಿಂದ ಬಹಿರ್ವಾಯುವನ್ನು ಎಳೆದುಕೊಂಡು, ಪೂರಕದಿಂದ ಒಳಕ್ಕೆ ತುಂಬಿ ಕುಂಭಕದಿಂದ ಪ್ರಾಣವಾಯುವನ್ನು ನಿರೋಧಿಸಬೇಕು. ಏಕಾಗ್ರಚಿತ್ತತೆಯಿಂದ ಮೂರುಗಳಿಗೆಗಳವರೆಗೂ ಕುಂಭಕಮಾಡಿ ಪರಮಾತ್ಮಾನುಸಂಧಾನಮಾಡಬೇಕು. ಹೀಗೆ ಶಾರೀರಕವಾದ ಮತ್ತು ಮಾನಸಿಕವಾದ ದೋಷಗಳನ್ನು ಯೋಗಾಭ್ಯಾಸವೆಂಬ ಅಗ್ನಿಯಿಂದ ಧ್ವಂಸಮಾಡಿ ಶುದ್ಧಮನಸ್ಕನಾಗಿ ಸಮಾಧ್ಯವಸ್ಥೆಯಲ್ಲಿ ಪರಮಾತ್ಮರೂಪಿಯಾದ ನನ್ನನ್ನು ಕ್ರಮಕ್ರಮವಾಗಿ ಮಂಜಿನಂತೆಯೂ, ಧೂಮಾಕಾರದಲ್ಲಿಯೂ, ಮಿಂಚಿನಂತೆಯೂ, ಶುದ್ಧಸ್ಫಟಿಕದಂತೆಯೂ, ಜ್ವಲಿಸುವ ದೀಪದಂತೆಯೂ, ಜ್ಯೋತೀರೂಪದಲ್ಲಿಯೂ, ಧ್ಯಾನಿಸಬೇಕು. ಇದೇ ಪರಮಾತ್ಮಾನುಸಂಧಾನಕಾಲದಲ್ಲಿ ಯೋಗಚಕ್ಷುಸ್ಸಿಗೆ ವಿಷಯವಾಗುವ ಅವಸ್ಥಾಂತರಗಳು. ಆಗ ಪರಮಾತ್ಮಸ್ವರೂಪವು ಶುದ್ಧತೇಜೋರೂಪದಿಂದ ಗೋಚರಿಸದಂತಾಗುವುದು. ||೩೮-೩೯-೪೦||

ಹೀಗೆ ಪ್ರಾಣವಾಯುನಿರೋಧದಿಂದ ತಿಳಿಯುವ ತೃಣಧಾನ್ಯದ ಶಿಖಾರೂಪವಾದ ಬ್ರಹ್ಮಾಕಾರವೇ ನಾನು. ಇಷ್ಟು ಸೂಕ್ಷ್ಮರೂಪಿಯಾಗಿ ತೋರಿ ಸಂಗರಹಿತನೂ, ಪುರುಷಾತ್ಮಕನೂ ಆದ ನನ್ನನ್ನು ಸೋಹಂಭಾವದಿಂದ ತಿಳಿಯಬೇಕು, ||೪೧||

ಯೋಗಾಭ್ಯಾಸಬಲದಿಂದ ಶರೀರವಾದ್ಯಂತವನ್ನೂ ನಿಶ್ಚಲವಾಗಿಟ್ಟು ಸರ್ವರೂಪದಲ್ಲಿಯೂ, ಆತ್ಮಾನಂದರೂಪಿಯಾದ ಮಹೇಶ್ವರನನ್ನು ಯಾರು ಸ್ಮರಿಸುವರೋ

ತಸ್ಯ ಸಿದ್ಧ್ಯಂತಿ ನಿಯತಂ ಸಿದ್ಧಯೋಽಷ್ಟೌ ಮಹೇಶ್ವರಿ ।
ತಸ್ಯ ಮೂರ್ಧ್ನಿ ಮಹಾನಾತ್ಮಾ ಸಹಸ್ರದಲಪಂಕಜೇ ॥೪೩॥

ಗೋಸ್ತನಾಕಾರವದ್ದ್ವಾರಾ ಹ್ಯಮೃತೈಕರಸಸ್ರವಾ ।
ವ್ಯಪೋಹ್ಯ ತತ್ಕಪಾಲಂ ತು ಚೇಡಾಯಾಂ ಸಂತತಸ್ರವಾ ॥೪೪॥

ಪಿಂಗಳಾ ಕುಂಡಲೀಮಧ್ಯಾತ್ಪತಂತೀ ಶಿಖಿಮಸ್ತಕೇ ।
ವೈಶ್ವಾನರೋಽಯಂ ಸರ್ವೇಷು ಮದ್ರೂಪೋ ದೇಹಿಷು ಸ್ಥಿತಃ ॥೪೫॥

ತತ್ರ ಚಂದ್ರಾಮೃತಕರೈಃ ಪಿಂಗಲಾಯಾಂ ಮಹೇಶ್ವರಿ ।
ಸ ಆತ್ಮಜ್ಯೋತಿರಾನಂದೋ ನಿತ್ಯಮುಕ್ತೋ ಮಹೇಶ್ವರಃ ॥೪೬॥

ಸದಾ ಕ್ರೀಡನ್ನಭೋಮಧ್ಯಂ ದಹರಾಕಾಶಗಸ್ಸದಾ ।
ಚೇತಯಾಮೀಂದ್ರಿಯಗಣಂ ವಾಚಾ ಚ ಮನಸಾ ಸಹ ॥೪೭॥

ಪರಾಪಶ್ಯಾನ್ಯೈಖರೀಷು ಪ್ರಣವಾದಿರಸಸ್ತ್ವಹಂ ।
ಸೋಽಹಮಾವಸಥಾತೀತಃ ಪುರುಷೋಽಹಂ ಪುರೀಶಯಃ ॥೪೮॥

ಅವರಿಗೆ ಯೋಗಶಾಸ್ತ್ರದಲ್ಲಿ ಹೇಳುವ ಅಷ್ಟಾಂಗಯೋಗಗಳೂ ಸಿದ್ಧಿಸುವುವು. ಆದರ ಫಲವನ್ನೂ ಅವರು ಸುಲಭವಾಗಿ ಹೊಂದುವರು. ಅಂತಹ ಸಿದ್ಧಿಯನ್ನು ಪಡೆದ ಮಹಾತ್ಮನ ಬ್ರಹ್ಮರಂಧ್ರವು ಸಹಸ್ರದಳಗಳಿಂದ ಕೂಡಿದ ಕಮಲದಂತೆ ವಿಕಾಸ ವಾಗಿರುವುದು. ಅಲ್ಲಿ ಅಡಗಿರುವ ಅಮೃತಧಾರೆಯು ಗೋಸ್ತನಾಕಾರದಲ್ಲಿ ಬ್ರಹ್ಮ ರಂಧ್ರದಿಂದ ಹೊರಟು ಇಡಾನಾಡಿಯಲ್ಲಿ ಸ್ರವಿಸುವುದು. ॥೪೨-೪೩-೪೪॥

ಬ್ರಹ್ಮರಂಧ್ರದ ಅಧೋಭಾಗದಲ್ಲಿರುವ ಪಿಂಗಳಾ ನಾಡಿಯು ಚಂದ್ರದೇವತಾಕ ವಾದದ್ದು. ಅದರಲ್ಲಿ ಸುರಿಯುವ ಅಮೃತಧಾರೆಯು ವೈಶ್ವಾನರರೂಪದಿಂದ ಸರ್ವ ದೇಹಕ್ಕೂ ವ್ಯಾಪಿಸುತ್ತದೆ. ಇಂತಹ ಪಿಂಗಳಾನಾಡಿಯಲ್ಲಿ ಚಂದ್ರನ ಅಮೃತ ಕಿರಣ ಗಳಿಂದ ಕೂಡಿದ ಆತ್ಮಜ್ಯೋತಿಯೂ, ನಿತ್ಯ ಮುಕ್ತನೂ ಆದವನೇ ನಾನು. ॥೪೬॥

ಅಂತಹ ನಾನು ಯಾವಾಗಲೂ ನಭೋಮಧ್ಯವಾದ ಆಕಾಶಸ್ಥಾನದಲ್ಲಿ ಅಂದರೆ ಬ್ರಹ್ಮರಂಧ್ರಭಾಗದಲ್ಲಿ ನೆಲಸುತ್ತಾ ಸಕಲ ಇಂದ್ರಿಯ ವರ್ಗವನ್ನೂ ವಾಕ್ಕು, ಮನಸ್ಸು ಮುಂತಾದುವುಗಳನ್ನೂ ಜೀವಿಗಳಲ್ಲಿ ಬೆಳಸಿ ಅವರನ್ನು ಉತ್ತಮಗೊಳಿಸು

ಲಿಂಗೋಸ್ಮ್ಯಹಮಾತ್ಮಾ ಚ ಸುರತಿರ್ಯಙ್ನರೇಷು ಚ।
ನಾಮರೂಪಾತಿಗಸ್ಸಾಕ್ಷಾದಹಂಕಾರವಿವರ್ಜಿತಃ ॥೪೯॥

ರಮ್ಯಸ್ತತ್ಕೃತಕರ್ಮಾಣಿ ವಿಷಯಾನ್ಪೈಷಿಕಂ ಸುಖಂ।
ಷೋಡಶಾಖ್ಯಕಲಾ ದೇವಿ ಹ್ಯೇಕೋ ಜಾನಾಮಿ ಸರ್ವಶಃ ॥೫೦॥

ತಾಸ್ಸರ್ವಾಃಪಿ ಕಲಾ ದೇವಿ ಮಯಿ ದ್ಯೋತಂತಿ ನಿತ್ಯಶಃ।
ಮಂತಾ ಬೋದ್ಧಾ ರಸಯಿತಾ ಜ್ಞಾತಾ ವಿಜ್ಞಾನಮೀಶ್ವರಃ ॥೫೧॥

ಶ್ರುತೇಶ್ಶ್ರೋತಾ ತಥಾ ಘ್ರಾತಾ ದೃಕ್ ದೃಶ್ಯಾನ್ಯಹಮೇವ ಹಿ।
ಯಥಾ ಕೂರ್ಮಮಹಾಗ್ರೀವಾ ಹ್ರಸ್ವದೀರ್ಘಾ ಭವೇಚ್ಛಿವೇ ॥೫೨॥

ವೆನು. ಪರಾ, ಪಶ್ಯಂತೀ, ವೈಖರಿಗಳೆಂಬ ವಾಗ್ಭೇದರೂಪದಿಂದಲೂ, ಪ್ರಣವ ಮಂತ್ರೈಕರೂಪಿಯಾಗಿ, ಸೋಹಂಭಾವಕ್ಕೆ ಆಶ್ರಿತನಾಗಿಯೂ ಇದ್ದು ಸೂಕ್ಷ್ಮಶರೀರಾಂತರ್ವರ್ತಿಯೆನಿಸಿರುವ ಪುರುಷಾಕಾರನೇ ನಾನು.. ॥೪೭-೪೮॥

ಹೀಗಿದ್ದರೂ ನನಗೆ ನಿಜವಾಗಿ ನಾಮರೂಪಾದಿಗಳಿಲ್ಲ. ನಾನು ಮಮಕಾರಾದಿಗಳಿಗೆ ದೂರನಾದವನು. ಹಾಗಿದ್ದರೂ, ಸುರರಲ್ಲಿಯೂ, ನರರಲ್ಲಿಯೂ, ಇತರ ಪ್ರಾಣಿಗಳಲ್ಲಿಯೂ ಷೋಡಶಕಲಾರೂಪದಿಂದ ಅಡಗಿರುವವನಾಗಿ, ವಿಷಯ ಸುಖಗಳನ್ನು ಅನುಭವಿಸುತ್ತಾ, ಅವರಿಂದ ನಡೆಸಲ್ಪಡುವ ಕರ್ಮಾದಿಗಳಿಗೆ ಸಾಕ್ಷೀಭೂತನಾಗಿ ಸರ್ವವನ್ನೂ ತಿಳಿಯುವ ಶಕ್ತಿಯುಳ್ಳವನಾಗಿದ್ದೇನೆ. ॥೪೯-೫೦॥

ಆ ಷೋಡಶಕಲೆಗಳೂ ನನ್ನಲ್ಲಿ ಅಡಗಿ ಪ್ರಕಾಶಿಸುತ್ತಿರುವುವು. ಸಕಲವನ್ನೂ ತಿಳಿಯುವವನೂ, ಮನನಮಾಡುವವನೂ, ರುಚಿನೋಡುವವನೂ, ಜ್ಞಾನಾಶ್ರಯನೂ, ಜ್ಞಾನರೂಪಿಯೂ ಆದ ಈಶ್ವರನೇ ನಾನು. ಶ್ರುತಿವಿಷಯನೂ, ಶ್ರೋತೃವೂ, ದೃಕ್ಸ್ವರೂಪನೂ, ದೃಶ್ಯವಸ್ತುವೂ ಇವೆಲ್ಲವೂ ನಾನೇ. ಆಮೆಯಲ್ಲಿ ಅಡಗಿರುವ ಗ್ರೀವಾದಿಗಳು ಹೇಗೆ ಒಂದೊಂದು ಕಾಲದಲ್ಲಿ ಹ್ರಸ್ವದೀರ್ಘಾದ್ಯಾಕಾರಗಳನ್ನು ಪಡೆಯುವುವೋ, ಹಾಗೆಯೇ ನಾನು ಸಂದರ್ಭಾನುಸಾರವಾಗಿ ನಾನಾ ವಸ್ತುಗಳ ಆಕೃತಿಯನ್ನು ಪಡೆಯುವೆನು. ॥೫೧-೫೨॥

ಯಥಾ ನದ್ಯಸ್ಸ್ಯಂದಮಾನಾ ನಾಮರೂಪಗುಣಾತಿಗಾಃ ।
ಸಮುದ್ರೇಸ್ತಂ ಪ್ರಯಾಂತೀಶೇ ಯಥಾ ತೇ ಭಾನುದೀಪ್ತಯಃ ॥೫೩॥

ಪುನರ್ಯಥೋದಯಂ ಪ್ರಾಪ್ತೇ ಸೂರ್ಯಸ್ಯೈವ ಮರೀಚಯಃ ।
ಪ್ರಸರಂತಿ ಮಹಾದೇವಿ ತಥಾ ಮತ್ಸನ್ನಿಧೌ ಜಗತ್ ॥೫೪॥

ಪದ್ಮಂ ಮಿತ್ರಕರೈರ್ಯದ್ವತ್ ವಿಕಸತ್ಯಬ್ಜಿನೀಕುಲಂ ।
ಯಥಾ ಮಣಿಜಸಾನ್ನಿಧ್ಯಾತ್ ಚೇಷ್ಟಂತೇ ಲೋಹಸೂಚಯಃ ॥೫೫॥

ಕಾಲಕರ್ಮವಿಪಾಕೇನ ತಥಾ ಮತ್ಸನ್ನಿಧೌ ಜಗತ್ ।
ಚೇಷ್ಟತೇ ನಿತರಾಂ ದೇವಿ ಸ್ಥಿತಿಸಂಹಾರಜನ್ಮತಃ ॥೫೬॥

ಸೋಹಂ ದೃಷ್ಟ್ವಾ ಪ್ರವಿಶ್ಯೈವ ತನ್ನಾಮಗುಣರೂಪತಃ ।
ಬ್ರಹ್ಮವಿಷ್ಣುಹರಾಖ್ಯಾಭಿರ್ಯಥಾ ಪೂರ್ವಂ ಯುಗೇ ಯುಗೇ ॥೫೭॥

---

ನದಿಗಳು ಮೊದಲು ನಾಮ, ರೂಪ, ಗುಣ ಇವುಗಳನ್ನು ಪಡೆದಿದ್ದರೂ, ಸಮುದ್ರದಲ್ಲಿ ಸೇರಿದ ಮೇಲೆ ಹೇಗೆ ಎಲ್ಲವನ್ನೂ ಕಳೆದುಕೊಳ್ಳುವುವೋ ಹಾಗೆ ಈ ಜಗತ್ತು ನನ್ನಲ್ಲಿ ಐಕ್ಯವಾದ ಮೇಲೆ ಇದರ ನಾಮರೂಪಗುಣಾದಿಗಳು ನಷ್ಟವಾಗುವುವು. ಮತ್ತು ಸೂರ್ಯನ ಕಿರಣಗಳು ಸೂರ್ಯಾಸ್ತವಾದಮೇಲೆ ನಮಗೆ ಗೋಚರಿಸದೆ ಇದ್ದರೂ, ಮತ್ತೆ ಹೇಗೆ ಸೂರ್ಯೋದಯ ಕಾಲದಲ್ಲಿ ಆವಿರ್ಭವಿಸುವುವೋ, ಹಾಗೆ ಈ ಜಗತ್ತು ನನ್ನಲ್ಲಿ ಲೀನವಾದರೂ ಮತ್ತೆ ಜಗದ್ರೂಪವಾಗಿಯೇ ಉದಿಸುವುದು. ||೫೩-೫೪||

ಸೂರ್ಯನ ಕಿರಣಗಳ ಸ್ಪರ್ಶಮಾತ್ರದಿಂದ ಭೂಮಿಯಲ್ಲಿರುವ ಕಮಲಗಳು ಹೇಗೆ ವಿಕಾಸವಾಗುವುವೋ, ಆಯಸ್ಕಾಂತದ ಸಾಮೀಪ್ಯದಿಂದಲೇ ಹೇಗೆ ಕಬ್ಬಿಣವು ಚಲನೆಯನ್ನು ಪಡೆಯುವುದೋ, ಹಾಗೆ ಈ ಜಡಾತ್ಮಕವಾದ ಜಗತ್ತು ನನ್ನ ಸಾನ್ನಿಧ್ಯದಿಂದಲೇ ಸೃಷ್ಟಿ, ಸ್ಥಿತಿ, ಸಂಹಾರಕಾರ್ಯಗಳನ್ನು ಪಡೆದಿದ್ದಾಗಿ ಕಾಲ ಕರ್ಮಾನುಗುಣವಾಗಿ ಚೇತನವಂತೆ ಚಲಿಸುತ್ತಿರುವುದು. ಈ ಪ್ರಪಂಚಚಾಲನೆಗೆ ನಾನೇ ಮುಖ್ಯ ಕಾರಣನು. ||೫೫-೫೬||

ಅಂತಹ ನಾನೇ ಜಗದ್ರೂಪಿಯಾಗಿ ಪ್ರತಿಫಲಿಸುತ್ತಾ, ಬ್ರಹ್ಮ, ವಿಷ್ಣು, ಹರ ಎಂಬ ನಾಮಭೇದದಿಂದಲೂ, ಸತ್ವರಜಸ್ತಮೋರೂಪವಾದ ಗುಣಭೇದದಿಂದಲೂ,

ಸೃಜಾಮ್ಯಾತ್ಮಾನಮೇವಾಗ್ರೇ ತತೋ ನಾನಾವಿಧಂ ಜಗತ್ ।
ಯಥಾಗ್ನೇರ್ವಿಸ್ಫುಲಿಂಗಾ ವೈ ಕ್ಷುದ್ರಾಸ್ಸಂಭವಂತಿ ಪ್ರಿಯೇ ॥೫೮॥

ಇಂದ್ರೋ ಮಿತ್ರೋಽಥ ವರುಣಃ ಪೂಷಾ ಸೋಮೋಽಹಮೇವ ಹಿ ।
ಮನವಃ ಪಿತರೋ ವಿಪ್ರಾಸ್ತಾರಾಜಾಲಂ ಗ್ರಹಾಸ್ತಥಾ ॥೫೯॥

ಸ್ಥಾವರಂ ಜಂಗಮಂ ಚೈತದಹಮೇವ ಸನಾತನಃ ।
ಸರ್ವಸ್ಸರ್ವಶರೀರೇಷು ಸರ್ವೇಂದ್ರಿಯಗುಣಾತಿಗಃ ॥೬೦॥

ಸರ್ವಭೋಕ್ತಾಹಮೇವಾಸ್ಮಿ ಸರ್ವಕಾರ್ಯಕೃತಾಸ್ಪದಃ ।
ನಾಹಂ ತಜ್ಜನ್ಮಮರಣೈಸ್ಸ್ಥಿತಿಸಂಗೇಷ್ವಸಜ್ಜಕಃ ॥೬೧॥

ಅಸಂಗೋ ನೈವ ಲಿಪ್ತೋಽಸ್ಮಿ ಸರ್ವಬಾಹ್ಯಾಂತರಸ್ತ್ವಹಂ ।
ಏಕಸ್ತಥಾಂತರಸ್ಸರ್ವದುಃಖಹೀನೋಽಸ್ಮಿ ಶಂಕರಿ ॥೬೨॥

ರೂಪಭೇದದಿಂದಲೂ ಅವತರಿಸಿ ನಾನಾರೂಪವಾದ ಜಗತ್ತನ್ನೆಲ್ಲಾ ಸೃಷ್ಟಿ, ಸ್ಥಿತಿ, ಲಯಕಾರ್ಯಗಳಿಂದ ನಡೆಸುವೆನು. ಒಂದೇ ಒಂದು ಅಗ್ನಿಯ ದೆಸೆಯಿಂದ ಅನೇಕ ಸಣ್ಣ ಸಣ್ಣ ಅಗ್ನಿಕಣಗಳು ಬೇರೆ ಬೇರೆ ಪ್ರಕಾಶಿಸುವಂತೆ ಪರಬ್ರಹ್ಮವಸ್ತುವಿನಿಂದ ಈ ಮೂರ್ತಿಗಳೆಲ್ಲಾ ಪ್ರಕಾಶಿಸುತ್ತಿರುವುವು. ॥೫೭-೫೮॥

ಇಂದ್ರ, ಮಿತ್ರ, ವರುಣ, ಪೂಷ, ಸೋಮ, ಮನುಗಳು, ಪಿತೃದೇವತೆಗಳು, ವಿಪ್ರರು, ನಕ್ಷತ್ರಗಳು, ಗ್ರಹಗಳು, ಸ್ಥಾವರಜಂಗಮಾತ್ಮಕವಾದ ಪ್ರಾಣಿವರ್ಗಗಳು, ಇವೆಲ್ಲವೂ ನಾನೇ. ಸರ್ವಶರೀರಗಳಲ್ಲಿ ಅಡಗಿರುವವನಾಗಿ, ಸಕಲ ಇಂದ್ರಿಯಗಳಿಗೂ, ಸಕಲ ಗುಣಗಳಿಗೂ, ಸಿಕ್ಕದೆ ನಿರ್ಲಿಪ್ತನಾಗಿರುವವನೂ ನಾನೇ! ॥೫೯-೬೦॥

ಸಕಲ ಭೋಗಗಳನ್ನೂ ಅನುಭವಿಸುವವನು ನಾನು. ಸಕಲ ಕಾರ್ಯಗಳಿಗೂ ಮುಖ್ಯಾಶ್ರಯನು ನಾನು. ನನಗೆ ಜನನಮರಣಗಳಾಗಲಿ, ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳಲ್ಲಿ ಮತ್ತಾರ ಸಂಬಂಧವಾಗಲಿ ಇರುವುದಿಲ್ಲ. ನಾನು ಯಾವ ವಸ್ತುವಿನಲ್ಲಿಯೂ ಲೀನವಾಗುವವನಲ್ಲ. ಆದರೆ ಸಕಲ ಜೀವರಾಶಿಗಳ ಒಳಭಾಗ ಮತ್ತು ಹೊರಭಾಗದಲ್ಲಿ ವ್ಯಾಪಕನಾಗಿರುವೆನು. ಏಕರೂಪಿಯಾಗಿ ದೇಹಾಂತರ್ವರ್ತಿಯಾಗಿದ್ದರೂ ಯಾವ ವಿಧವಾದ ದುಃಖಗಳಿಗೂ ಒಳಗಾಗದಿರುವವನು ನಾನೇ. ॥೬೧-೬೨॥

ಏವಂ ಮಾಂ ಯೋ ವಿಜಾನಾತಿ ಸೋಹಂಸೋ ಮೇ ಹೃದಂತರಃ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೬೩॥

ಯೋಗಸಾಂಖ್ಯೌ ಮಹಾದೇವಿ ತಥೋಕ್ತೌ ಮಮ ಹೃತ್ತಮೌ ।
ಸರ್ವಸಾಧಾರಣಂ ದೇವಿ ಕಥಯಿಷ್ಯೇಽಪ್ಯುಪಾಸನಂ ॥೬೪॥

ಅಲಿಂಗೋಽಸ್ಮ್ಯಹಮೀಶಾನೋ ಲಿಂಗೇ ತಿಷ್ಠಾಮಿ ಸರ್ವದಾ ।
ಯಥಾ ಗವಿ ಗತಂ ಕ್ಷೀರಂ ವಿಶಾಣಾದೌ ನ ದೃಶ್ಯತೇ ॥೬೫॥

ಊಧಸ್ಯೇವ ಪ್ರದೃಶ್ಯೇತ ತಥಾಹಂ ಸರ್ವಗಾಸ್ಯಪಿ ।
ಹೃದಿ ಧ್ಯಾತುಮಶಕ್ತಾನಾಂ ಜ್ಞಾನಯೋಗೇನ ವೈ ಶಿವೇ ॥೬೬॥

ಯಾರು ಹೀಗೆ ನನ್ನನ್ನು ಸಂಪೂರ್ಣವಾಗಿ ಅರಿಯುವರೋ, ಅವರು ಹಂಸ ಸ್ವರೂಪರಾಗಿ ಅಂದರೆ ಪರಬ್ರಹ್ಮತ್ವವನ್ನು ಪಡೆದು ನನ್ನ ಹೃದಯಾಂತರ್ವರ್ತಿಗಳಾಗುವರು. ಅಂತಹವರು ನನ್ನ ಸಮಾನರಾಗುವರೇ ಹೊರತು, ನನಗೂ ಅವರಿಗೂ ನಾಶ್ಯನಾಶಕಭಾವಬರುವುದಿಲ್ಲ. ॥೬೩॥

ಇಲ್ಲಿನವರೆಗೂ ಯೋಗ ಮತ್ತು ಸಾಂಖ್ಯಮತಾಚಾರ್ಯರು ಉಪಪಾದಿಸಿರುವ ಪರಬ್ರಹ್ಮಸ್ವರೂಪವನ್ನು ನಿನಗೆ ವಿವರಿಸಿರುವೆನು. ದೇವಿಯೇ, ಈಗ ಸರ್ವಶಾಸ್ತ್ರ ಸಾಧಾರಣವಾಗಿ ಸಕಲರಿಗೂ ಉಪಯುಕ್ತವಾಗುವ ಶಿವೋಪಾಸನಕ್ರಮವನ್ನು ವಿವರಿಸುವೆನು. ॥೬೪॥

ನಾಮರೂಪಾದಿಚಿಹ್ನೆಗಳಿಲ್ಲದೆ ಪ್ರಪಂಚವ್ಯಾಪಕನಾಗಿದ್ದರೂ ನಾನು ಶಿವಲಿಂಗದಲ್ಲಿ ಮಾತ್ರ ಸ್ಥಿರವಾಗಿ ನೆಲಸಿರುವೆನು. ಹಸುವಿನ ಹಾಲು, ಅದರ ಸರ್ವದೇಹಸಾರವಾದರೂ, ಕೊಂಬು ಮುಂತಾದ ಪ್ರದೇಶಗಳಲ್ಲಿ ತೋರಿಬರದೆ, ಕೇವಲ ಕೆಚ್ಚಲಿನಲ್ಲಿಯೇ ಅಡಗಿರುವುದು. ಅದರಂತೆ ನಾನು ಜಗದ್ವ್ಯಾಪಿಯಾಗಿದ್ದರೂ ನನ್ನ ಸಾನ್ನಿಧ್ಯವು ಶಿವಲಿಂಗದಲ್ಲಿಯೇ ಹೆಚ್ಚಾಗಿರುವುದು. ಈ ವಿಧದ ಲಿಂಗಾರಾಧನೆಯು ಜ್ಞಾನಯೋಗದಿಂದ ನನ್ನನ್ನು ಧ್ಯಾನಿಸಲು ಅಸಮರ್ಥರಾದವರಿಗೆ ಮಾತ್ರ ಅತ್ಯವಶ್ಯಕವಾಗಿ ಬೇಕು. ॥೬೫-೬೬॥

ಲಿಂಗೇ ಕೃತಾಂ ಪರಾಂ ಪೂಜಾಂ ಶಾಂಭವೈರ್ಭಸ್ಮಧಾರಿಭಿಃ ।
ಮತ್ಪುಂಡ್ರನಿರತೈರೇವ ರುದ್ರಾಕ್ಷವರಕಂಕಣೈಃ ॥೬೭॥

ರುದ್ರಾಧ್ಯಾಯಾಧ್ಯಯನತಃ ಪಂಚಾಕ್ಷರಜಪೇನ ಚ ।
ಏಕಂ ವಾ ಬಿಲ್ವಪತ್ರಂ ಯೈರ್ನಿಕ್ಷಿಪ್ತಂ ಮಮ ಮಸ್ತಕೇ ॥೬೮॥

ಭಕ್ತ್ಯೈರ್ಗೃಹ್ಣಾಮಿ ತದ್ದೇವಿ ತಸ್ಮೈ ಜ್ಞಾನಂ ದದಾಮಿ ಚ ।
ತಂ ಜ್ಞಾನಭಾಜನಂ ಕುರ್ಯಾಂ ಪ್ರತಿಜ್ಞಾ ಮಮ ಶಂಕರಿ ॥೬೯॥

ನಾಸ್ಯವರ್ಣಾಶ್ರಮೈರ್ಧರ್ಮೈರ್ವಿವಿಧೈರಪಿ ಮೇ ಶಿವೇ ।
ನೈವ ತುಷ್ಟಿರ್ಮಮ ಪರಾ ಜಾಯತೇ ಕರ್ಮಕೋಟಿಭಿಃ ॥೭೦॥

ನ ಷೋಡಶಮಹಾದಾನೈರೇಕಾಹಾಹೀನಸತ್ರಕೈಃ ।
ಪ್ರಪಾವಾಪೀಪ್ರದಾನೈರ್ವಾ ಕನ್ಯಾನ್ನಾದಿಪ್ರದಾನತಃ ॥೭೧॥

ಕಥಂಚಿಜ್ಜಾಯತೇ ದೇವಿ ಮದರ್ಚಾಯಾಂ ಮತಿರ್ಭವೇತ್ ।
ಪುಂಡ್ರಾಂತರೇಷು ವಿಪ್ರೇಷು ಮಸ್ಕರೀಣಾಂ ಗಣೇಷು ಚ ॥೭೨॥

---

ಶಂಭುವಿನಲ್ಲಿ ನಟ್ಟ ಭಕ್ತಿಯುಳ್ಳವರಾಗಿ, ಭಸ್ಮತ್ರಿಪುಂಡ್ರವನ್ನೂ, ರುದ್ರಾಕ್ಷಿಯ ಸರವನ್ನೂ ಧರಿಸಿ, ರುದ್ರಾಧ್ಯಾಯವನ್ನೂ, ಶಿವಪಂಚಾಕ್ಷರೀ ಮಂತ್ರವನ್ನೂ ಜಪಿಸುತ್ತಾ ಒಂದು ಬಿಲ್ವಪತ್ರೆಯನ್ನಾಗಲಿ ಯಾರು ನನ್ನ ಶಿವಲಿಂಗದ ಮೇಲಿಟ್ಟು ಭಕ್ತಿಯಿಂದ ಪೂಜಿಸುವರೋ ಅಂತಹವರ ಪೂಜೆಯನ್ನು ನಾನು ಪ್ರೀತಿಯಿಂದ ಸ್ವೀಕರಿಸುವೆನು. ಅದರ ಫಲವಾಗಿ ಅವರಿಗೆ ದಿವ್ಯಜ್ಞಾನವನ್ನು ಅನುಗ್ರಹಿಸುವೆನು. ಇದು ನನ್ನ ದೃಢಪ್ರತಿಜ್ಞೆಯು. ||೬೭-೬೮-೬೯||

ಇದಲ್ಲದೆ ವರ್ಣಾಶ್ರಮಧರ್ಮಗಳ ಪಾಲನೆಯಿಂದಾಗಲಿ, ಷೋಡಶಮಹಾದಾನಗಳಿಂದಾಗಲಿ, ಬಹುಕಾಲ ನಡೆಸುವ ಯಜ್ಞಾದಿಕರ್ಮಗಳಿಂದಾಗಲಿ ನನಗೆ ತೃಪ್ತಿಯುಂಟಾಗದು. ಅರವಟ್ಟಿಗೆಯನ್ನಿಡಿಸುವುದು, ಬಾವೀತೋಡಿಸುವುದು, ಕನ್ಯಾದಾನ, ಅನ್ನದಾನ ಮುಂತಾದ ಮಹಾದಾನಗಳನ್ನು ಮಾಡುವುದು, ಇವುಗಳಿಂದ ಮನುಷ್ಯರಿಗೆ ನನ್ನನ್ನಾರಾಧಿಸುವ ಬುದ್ಧಿಯೊದಗುವುದು. ||೭೦-೭೧||

ಊರ್ಧ್ವತ್ರಿಪುಂಡ್ರಾದಿ ಬೇರೆಬೇರೆ ರೀತಿಯ ತ್ರಿಪುಂಡ್ರಗಳನ್ನು ಧರಿಸುವಂತಹ ವಿಪ್ರರಲ್ಲಿಯೂ, ಅಂತಹ ಸಂನ್ಯಾಸಿವರ್ಗದಲ್ಲಿಯೂ ನನಗೆ ಅಷ್ಟಾಗಿ ಪ್ರೀತಿಯಿರುವುದಿಲ್ಲ.

ನೈವ ಪ್ರೀತಿರ್ಮಹಾದೇವಿ ಯಥಾ ಮತ್ಪುಂಡ್ರಧಾರಿಷು ।
ಭಸ್ಮಧಾರ್ಯೇವ ಸತತಂ ಮದ್ ಜ್ಞಾನಸ್ಯೈವ ಭಾಜನಂ ॥೭೩॥

ಶಿವಲಿಂಗಾರ್ಚನಧ್ಯಾನರುದ್ರಾಧ್ಯಾಯಜಪೇಷು ಚ ।
ಪಂಚಾಕ್ಷರಜಪೈಶ್ಚೈವ ಮಮ ಕ್ಷೇತ್ರನಿವಾಸಕಃ ॥೭೪॥

ಭಸ್ಮತ್ರಿಪುಂಡ್ರಧಾರ್ಯೇವ ಸ್ವೀಕಾರ್ಯೋ ನಾನ್ಯ ಉಚ್ಯತೇ ।
ಊರ್ಧ್ವಪುಂಡ್ರಂ ಭ್ರಮೇಣಾಪಿ ನ ಕುರ್ಯಾನ್ಮೋಹಿತೋ ದ್ವಿಜಃ॥೭೫॥

ಪ್ರತ್ಯುತೋ ನರಕಾಯೈವ ತಸ್ಯ ಸರ್ವಮನುಷ್ಠಿತಂ ।
ಯದಿ ಕುರ್ಯಾತ್ಪ್ರಮಾದೇನ ಪಿತೃಭಿಸ್ಸ ಪತೇದಧಃ ॥೭೬॥

ಊರ್ಧ್ವಪುಂಡ್ರಾಂಕಿತಂ ದೃಷ್ಟ್ವಾ ಮೀಲಯಾಮ್ಯುಧ್ಯ ಲೋಚನೇ ।
ಮತ್ಪ್ರಸಾದಾಲೋಕನೇನ ತಜ್ಞಾನಂ ಜಾಯತೇ ಶಿವೇ ॥೭೭॥

---

ತಿರ್ಯಕ್ ತ್ರಿಪುಂಡ್ರಧಾರಿಗಳೇ ನನ್ನವರು. ತ್ರಿಪುಂಡ್ರಧಾರಣೆಯಲ್ಲಿ ಭಸ್ಮತ್ರಿಪುಂಡ್ರವೇ ಶಿವಜ್ಞಾನಕ್ಕೆ ಸಾಧಕವಾದದ್ದು. ಅಂತಹ ಭಸ್ಮಧಾರಿಗಳಿಗೇ ಶಿವವಿಷಯಕವಾದ ಭಕ್ತಿಯು ದೊರಕುವುದು. ||೭೨-೭೩||

ಶಿವಲಿಂಗಾರ್ಚಕನಾಗಿ, ಶಿವಧ್ಯಾನಪರನಾಗಿ, ರುದ್ರಾಧ್ಯಾಯ, ಶಿವಪಂಚಾಕ್ಷರೀಮಂತ್ರ ಇವುಗಳನ್ನು ಜಪಿಸುತ್ತಾ, ಶಿವಕ್ಷೇತ್ರದಲ್ಲಿ ನೆಲಸಿ ಭಸ್ಮತ್ರಿಪುಂಡ್ರಧಾರಿಯಾಗಿರುವ ಭಕ್ತನೇ ನನಗೆ ಪ್ರಿಯನಾದವನು. ಇತರ್ನ್ನಿಸ್ವರಾದ ಜನರನ್ನು ನಾನು ಪ್ರೀತಿಸುವುದಿಲ್ಲ. ಆದರೆ ಬ್ರಾಹ್ಮಣನು, ಎಂದೂ ಭ್ರಾಂತಿಯಿಂದಲೂ ಸಹ ಊರ್ಧ್ವಪುಂಡ್ರವನ್ನು ಧರಿಸಬಾರದು. ||೭೪-೭೫||

ಹಾಗೆ ಧರಿಸುವುದು ನರಕಪ್ರಾಪ್ತಿಗೂ ಕಾರಣವಾಗುವುದು. ಊರ್ಧ್ವತ್ರಿಪುಂಡ್ರವನ್ನು ಧರಿಸಿ ಮಾಡುವ ಸಕಲ ಕರ್ಮಗಳೂ ನಿಷ್ಫಲಗಳೆನಿಸುವುವು. ಊರ್ಧ್ವಪುಂಡ್ರಧಾರಿಯಾದ ಮನುಷ್ಯನನ್ನು ಕಂಡೊಡನೆಯೇ ನಾನು ಎರಡು ಕಣ್ಣುಗಳನ್ನೂ ಮುಚ್ಚಿಕೊಳ್ಳುವೆನು. ನನ್ನ ಅನುಗ್ರಹದಿಂದಲೇ ಸರ್ವರೂ ಜ್ಞಾನಿಗಳಾಗುವಾಗ, ನಾನು ಕಣ್ಣುಮುಚ್ಚಿದೊಡನೆ ಅವರಿಗೆ ಜ್ಞಾನವು ಲಭಿಸುವುದೆಂತು ? ||೭೬-೭೭||

ಯನ್ನೇತ್ರೇ ಮೀಲಿತೇ ದೇವಿ ಕಥಂ ಜ್ಞಾನಂ ಭವಿಷ್ಯತಿ ।
ಲಿಂಗಂ ಕೈಲಾಸಮೌಲೌ ಮೇ ಕೈಲಾಸೇಶ್ವರಸಂಜ್ಞಿತಂ ॥೭೮॥

ದೇವತಿರ್ಯಙ್ಮನುಷ್ಯಾದ್ಯೈರದೃಶ್ಯಮಪಿ ಕಾಮದಂ ।
ಸ್ಮರಣಾದೇವ ಸಾನ್ನಿಧ್ಯಂ ಯತ್ರ ಕುತ್ರಾಪಿ ಸಿದ್ಧಿದಂ ॥೭೯॥

ಏತಲ್ಲಿಂಗಸ್ಯ ಮಹಿಮಾ ವೇದೈರ್ನಜ್ಞಾತ ಏವ ಹಿ ।
ಸುರಾಸುರೈಶ್ಚ ಮನುಭಿರ್ಗಣೇಂದ್ರೈರಪಿ ಶಂಕರಿ ॥೮೦॥

ಕೈಲಾಸೇಶ್ವರಸಂಜ್ಞಂ ತು ಲಿಂಗಂ ಮುಕ್ತಿಪ್ರದಾಯಕಂ ।
ಲಿಂಗರಾಜಮಿದಂ ದೇವಿ ಬ್ರಹ್ಮೈವೇದಂ ಸನಾತನಂ ॥೮೧॥

ಮಮೈವ ಹೃದಯಾನಂದದಾಯಕಂ ಸ್ವರ್ಗಮೋಕ್ಷದಂ ।
ಸಂಸಾರಸಾಗರಾಪಾರತಾರಕಂ ಭವಭೇಷಜಂ ॥೮೨॥

ವೇದಾಂತಸಾರಸರ್ವಸ್ವಮೇತಲ್ಲಿಂಗವರಂ ಶಿವೇ ।
ನ ಕಸ್ಯಚಿನ್ಮಯಾ ಖ್ಯಾತಂ ನಾಖ್ಯೇಯಂ ಯಸ್ಯ ಕಸ್ಯಚಿತ್ ॥೮೩॥

ಕೈಲಾಸಪರ್ವತಾಗ್ರದಲ್ಲಿ ನೆಲಸಿರುವ ಕೈಲಾಸೇಶ್ವರಲಿಂಗವು, ದೇವತೆಗಳಿಗೂ, ಮನುಷ್ಯರಿಗೂ, ಪ್ರಾಣಿಗಳಿಗೂ ಅಗೋಚರವಾದದ್ದೇ ಆದರೂ, ಅದನ್ನು ತದೇಕ ಧ್ಯಾನದಿಂದ ಭಜಿಸುವವರ ಇಷ್ಟಾರ್ಥಗಳೆಲ್ಲಾ ನೆರವೇರುವುವು. ಅದರ ದರ್ಶನದಿಂದ ಎಷ್ಟು ಫಲವು ದೊರೆಯುವುದೋ, ಸ್ಮರಣೆಯಿಂದಲೂ ಅಷ್ಟೇ ಸುಕೃತವು ಪ್ರಾಪ್ತಿಯಾಗುವುದು. ॥೭೮-೭೯॥

ಕೈಲಾಸೇಶ್ವರಲಿಂಗದ ಮಹಿಮೆಯನ್ನು ವೇದಗಳಾಗಲಿ, ಸುರಾಸುರರಾಗಲಿ, ಮನುಗಳಾಗಲಿ, ಪ್ರಮಥಗಣಗಳಾಗಲಿ ಸರಿಯಾಗಿ ಅರಿತವರಾಗಿಲ್ಲ. ಈ ಕೈಲಾಸೇಶ್ವರಸಂಜ್ಞಕವಾದ ಶಿವಲಿಂಗವು ಎಲ್ಲಾ ಶಿವಲಿಂಗಗಳಿಗಿಂತಲೂ ಶ್ರೇಷ್ಠವಾದದ್ದು. ಸನಾತನವಾದ ಪರಬ್ರಹ್ಮಸ್ವರೂಪವಾದದ್ದು. ॥೮೦-೮೧॥

ಈ ದಿವ್ಯಲಿಂಗವು ನನಗೂ ಮನಸ್ಸಿಗೆ ಹರ್ಷವನ್ನುಂಟುಮಾಡತಕ್ಕದ್ದಾಗಿರುವುದು. ಸ್ವರ್ಗ ಮತ್ತು ಮೋಕ್ಷದ ಆನಂದವನ್ನು ಒದಗಿಸಿ, ಸಂಸಾರವೆಂಬ ಸಾಗರದ ಹೊಡೆತದಿಂದ ತಪ್ಪಿಸಿ ರಕ್ಷಿಸುವುದು. ವೇದಾಂತಗಳ ಸಾರಸರ್ವಸ್ವವೇ ಈ ಶಿವಲಿಂಗ.

ಏತಲ್ಲಿಂಗಪ್ರಭಾವೇನ ಜಗತ್ಸೃಷ್ಟಿಂ ವಿತನ್ವತೇ ।
ವಿಧಾತಾರಸ್ಸರ್ವ ಏವ ಕಲ್ಪೇ ಕಲ್ಪೇ ಸ್ವಸೂನುಭಿಃ ॥೮೪॥

ದೇವತಿರ್ಯಙ್ನರಾಕಾರಸಮುರ್ವೀಸರಿತೋ ವನಂ ।
ಲೋಕಾಲೋಕ್ಯಾಶ್ಚ ದೇವೇಶಿ ವಿಧಾತಾದ್ಯಂ ತನೋತಿ ಚ ॥೮೫॥

ವಿಷ್ಣವಃ ಪ್ರತಿಕಲ್ಪಂ ವೈ ಚೈತಲ್ಲಿಂಗಪ್ರಭಾವತಃ ।
ದೈತ್ಯೇಶ್ವರಾನ್ನಿಹಂತಾರೋ ಮಹತಾಮುಲಚಕ್ರತಃ ॥೮೬॥

ವೈಕುಂಠವಾಸಿನಸ್ಸರ್ವೇ ತೇ ಲಕ್ಷ್ಮ್ಯಾಃ ಪತಯಶ್ಶಿವೇ ।
ಪ್ರತಿಕಲ್ಪಂ ತಥಾ ರುದ್ರಾಸ್ತೇ ಗೌರ್ಯಾಃ ಪತಯೋಂಬಿಕೇ ॥೮೭॥

ಏತಲ್ಲಿಂಗಪ್ರಭಾವೇನ ಪ್ರಲಯೇ ಸಂಹರಂತ್ಯಪಿ ।
ಜಗಜ್ಜಾಲಂ ತಥಾ ಶೂಲೈರ್ವೃಕ್ಣಂ ಸಾಸುರಮಾನುಷಂ ॥೮೮॥

ಇದನ್ನು ಇಲ್ಲಿನ ವರೆಗೆ ಯಾರಿಗೂ ನಾನು ಹೇಳಿರಲಿಲ್ಲ. ದೇವಿಯೇ, ನೀನೂ ಇದನ್ನು ಯಾರಿಗೂ ಹೇಳಕೂಡದು. ॥೮೨-೮೩॥

ಈ ಲಿಂಗದ ಮಹಿಮೆಯಿಂದಲೇ ಈ ಜಗತ್ತಿನ ಸೃಷ್ಟಿಯು ನಡೆಯುವುದು. ಇದರ ಅಂಶಸಂಭೂತರಾದ ಬ್ರಹ್ಮರೇ ಪ್ರತಿಕಲ್ಪಕ್ಕೂ ಬೇರೆಬೇರೆಯಾಗಿ ಅವತರಿಸಿ, ದೇವತೆಗಳನ್ನೂ, ಮನುಷ್ಯರನ್ನೂ, ಪ್ರಾಣಿವರ್ಗವನ್ನೂ, ಭೂಮಿಯನ್ನೂ, ನದಿಗಳನ್ನೂ, ವನಾದಿಗಳನ್ನೂ ಲೋಕಗಳನ್ನೂ, ಸೃಷ್ಟಿ ಮಾಡುವರು. ಇವರ ಮೂಲಕ ಈ ಲಿಂಗವೇ ಜಗತ್ಸೃಷ್ಟಿಕರ್ತೃವಾಗಿರುವುದು. ॥೮೪-೮೫॥

ಹಾಗೆಯೇ ರಾಕ್ಷಸರನ್ನು ತನ್ನ ಚಕ್ರದಧಾರೆಗಳಿಂದ ನಾಶಪಡಿಸುವ ವಿಷ್ಣುಗಳು ಪ್ರತಿಕಲ್ಪದಲ್ಲಿಯೂ ಬೇರೆಬೇರೆಯಾಗಿ ಲಕ್ಷ್ಮೀಪತಿಗಳಾಗಿಯೇ ಜನಿಸುವರು. ಹಾಗೆಯೇ ರುದ್ರರೂ ಪ್ರತಿಕಲ್ಪಕ್ಕೂ ಬೇರೆಬೇರೆಯಾಗಿ ಅವತರಿಸಿ, ಗೌರೀಪತಿಗಳಾಗಿ ಜಗನ್ನಾಶಕರಾಗುವರು. ॥೮೬-೮೭॥

ಪ್ರಲಯಕಾಲದಲ್ಲಿ ರುದ್ರರು ತಮ್ಮ ತ್ರಿಶೂಲಾದ್ಯಾಯುಧಗಳಿಂದ ರಾಕ್ಷಸ ಮತ್ತು ಮನುಷ್ಯವರ್ಗದಿಂದ ಪೂರಿತವಾದ ಈ ಜಗತ್ತನ್ನೆಲ್ಲಾ ನಾಶಮಾಡುವ ಶಕ್ತಿಯನ್ನು ಪಡೆದಿರುವುದು, ಈ ಲಿಂಗ ಪ್ರಭಾವದಿಂದಲೇ. ॥೮೮॥

ಸೇಂದ್ರಾಶ್ಚ ಮನವಶ್ಚೈವ ಋಷಿಭಿಃ ಪಿತೃಭಿಶ್ಚಿನೇ ।
ಏತಲ್ಲಿಂಗೇ ಲಯಂ ಯಾಂತಿ ಪ್ರತಿಕಲ್ಪಂ ಸುರಾಸುರಾಃ ॥೮೯॥

ಜಗದ್ಬ್ರಹ್ಮಾಂಡಜಾಲೈಶ್ಚ ಸರ್ವಾಧಾರಮಿದಂ ಶಿವೇ ।
ರೂಪಂ ಸಂಕೋಚ್ಯ ಮೇ ದಿವ್ಯಂ ಮಹಾಂತೇ ಪ್ರಲಯೇ ಶಿವೇ ॥೯೦॥

ತ್ವಯಾ ಗಣವರೈರ್ದೇವಿ ಸ್ಕಂದಹೇರಂಬಪೂರ್ವಕೈಃ ।
ನಿವಸಾಮಿ ಸದಾ ಲಿಂಗೇ ಕೈಲಾಸೇಶ್ವರಸಂಜ್ಞಿತೇ ॥೯೧॥

ಅಲಿಂಗೋ ಲಿಂಗಸಂಸ್ಥೋಽಹಂ ಸೃಜಾಮಿ ವಿಸೃಜಾಮಿ ಚ ।
ಜಗಜ್ಜಾಲಮಿದಂ ದೇವಿ ಬ್ರಹ್ಮವಿಷ್ಣ್ವೀಶಪೂರ್ವಕಂ ॥೯೨॥

ಸಂಹರಾಮಿ ತಥೈವಾಂತೇ ಲೀಲೇಯಂ ಮಮ ಶಂಕರಿ ।
ಆತ್ಮಕ್ರೀಡಾತ್ಮರತಿಸ್ಸೃಷ್ಟಿಸ್ಥಿತ್ಯಂತಕಾರಕಃ ॥೯೩॥

ಕಾರಣಂ ಕಾರಣಾನಾಂ ಚ ಪತೀನಾಂ ಪತಿರೀಶ್ವರಃ ।
ಚೇತನಶ್ಚೇತನಾನಾಂ ಚ ನಿತ್ಯೋಽಹಂ ಪರಮೇಶ್ವರಿ ॥೯೪॥

---

ಕೊನೆಯಲ್ಲಿ ಇಂದ್ರರೂ, ಮನುಗಳೂ, ಋಷಿಗಳೂ, ಪಿತೃದೇವತೆಗಳೂ ಈ ಕೈಲಾಸೇಶ್ವರಲಿಂಗದಲ್ಲಿಯೇ ಐಕ್ಯರಾಗುವರು. ಇದೇ ರೀತಿ ಪ್ರತಿ ಕಲ್ಪದಲ್ಲಿಯೂ ಜಗತ್ಸೃಷ್ಟಿ, ಸ್ಥಿತಿ, ಲಯಾದಿಗಳು ನಡೆಯುತ್ತವೆ. ನಾನೂ ಸಹ ನನ್ನ ದೊಡ್ಡ ಆಕಾರವನ್ನು ಸಂಕೋಚಮಾಡಿಕೊಂಡು ಸೂಕ್ಷ್ಮರೂಪದಿಂದ, ಪ್ರಲಯಕಾಲದಲ್ಲಿ ಈ ಲಿಂಗದಲ್ಲಿಯೇ ಐಕ್ಯನಾಗುವೆನು. ॥೮೯-೯೦॥

ದೇವಿಯೇ, ಇದೇ ಕೈಲಾಸೇಶ್ವರಲಿಂಗದಲ್ಲಿ ನಾನು ನಿನ್ನೊಡನೆಯೂ ಪ್ರಮಥ ಗಣಗಳೊಡನೆಯೂ, ಸ್ಕಂದ, ಗಣಪತಿ ಇವರೊಡನೆಯೂ ನೆಲಸಿರುವೆನು. ಜಾತಿ ಗುಣಾದಿಗಳಿಂದ ಶೂನ್ಯನಾದ ನಾನು ಈ ಲಿಂಗದಲ್ಲಿ ಆವಿರ್ಭವಿಸಿ ಈ ಜಗತ್ತನ್ನೆಲ್ಲಾ ಸೃಷ್ಟಿಮಾಡುವೆನು. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಕಾರ್ಯಗಳಿಗಾಗಿ ಬ್ರಹ್ಮ, ವಿಷ್ಣು, ರುದ್ರರನ್ನು ನಿರ್ಮಾಣಮಾಡುವೆನು. ಹಾಗೆಯೇ ಬ್ರಹ್ಮಾದಿಗಳಿಂದ ಕೂಡಿದ ಈ ಜಗತ್ತನ್ನೆಲ್ಲಾ ನಾಶಮಾಡುವೆನು. ಇದು ನನ್ನ ಲೀಲೆ. ಪರಮಾತ್ಮಕ್ರೀಡೆಯೂ, ಪರಮಾತ್ಮಸಂತೋಷವೇ ಈ ಜಗತ್ತು. ಜಗತ್ಕಾರಣಗಳಾಗಿರುವ ವಸ್ತುಗಳಿಗೆಲ್ಲಾ ನಾನೇ ಮೂಲಕಾರಣನಾಗಿರುವೆ. ಜಗತ್ಪತಿಗಳಿಗೆಲ್ಲಾ ಒಡೆಯನೆನಿಸಿಕೊಂಡಿರುವೆ,

ಸಕಾರಣೋಹಂ ಕಾರಣಾಧಿಪಾಧಿಪೋ
ಮನ್ಯೈವ ಕಶ್ಚಿಜ್ಜನಕೋ ನ ಹೀಶ್ವರಿ ।
ಕಾಲಾತ್ಮಯುಕ್ತ್ಯಾ[1]ನ್ಯಧಿತಿಷ್ಠತೀಶೋ
ಗುಣೀ ಸರ್ವಜ್ಞಸ್ಸರ್ವಭೂತಾಧಿವಾಸಃ ॥೯೫॥

ಏತತ್ತೇ ಕಥಿತಂ ದೇವಿ ರಹಸ್ಯಾರ್ಥಪ್ರಕಾಶಕಂ ।
ನ ದೇಯಂ ಗುಹ್ಯಮಸ್ಯೇತದ್ಭಕ್ತೇಷು ಪ್ರತಿಪಾದಯ ॥೯೬॥

ರಹಸ್ಯಾಂಶಮಿದಂ ಶೈವಮಾದಿಮಂ ಪರಮೇಶ್ವರಿ ।
ಗುಹ್ಯಜ್ಞಾನಮಿದಂ ಸುಭ್ರು ರಹಸ್ಯಜ್ಞಾನಸಂಗ್ರಹಂ ॥೯೭॥

ನ ಪ್ರಕಾಶ್ಯಮಿದಂ ಭದ್ರೇ ಕಸ್ಯಚಿಧ್ಲೀಲಯಾಂಬಿಕೇ ।
ಇದಂ ರಹಸ್ಯಂ ವೇದಾನಾಮನಂತಾನಾಂ ಸನಾತನಂ ॥೯೮॥

---

ಚೈತನ್ಯವಿಶಿಷ್ಟವಸ್ತುಗಳಿಗೆಲ್ಲಾ ಚೈತನ್ಯಸ್ವರೂಪನಾಗಿ ನಿತ್ಯಸ್ವರೂಪನಾಗಿರುವವನು ನಾನು ಎಂಬುದನ್ನು ತಿಳಿ. ॥೯೧-೯೨-೯೩-೯೪॥

ಸಕಲ ಜಗತ್ತಿಗೂ ಕಾರಣನೆನಿಸಿ, ಕಾರಣೀಭೂತವಾದ ವಸ್ತುಗಳಿಗೆಲ್ಲಾ ಅಧಿಪತಿಯಾಗಿರುವ ನಾನು ಮತ್ತಾರಿಂದಲೂ ಉತ್ಪತ್ತಿಯಾದವನಲ್ಲ. ನನಗೆ ಮಾತ್ರ ಜನಕನೇ ಇಲ್ಲ. ಕಾಲ, ಆತ್ಮ, ಏತದ್ರೂಪವಾಗಿ ಪ್ರಪಂಚದಲ್ಲೆಲ್ಲಾ ವ್ಯಾಪಿಸಿ, ಗುಣವಿಶಿಷ್ಟನಾಗಿಯೂ, ಸರ್ವಜ್ಞನಾಗಿಯೂ, ಸರ್ವಜಗದಂತರ್ವರ್ತಿಯಾಗಿಯೂ ತೋರಿಬರುತ್ತಿರುವೆನು. ॥೯೫॥

ಎಲೌ ದೇವಿಯೇ, ಈ ರಹಸ್ಯಾಂಶವನ್ನೆಲ್ಲಾ ನಿನಗೆ ಮರೆಮಾಜದೆ ತಿಳಿಸಿರುವೆನು. ಇದನ್ನು ಎಲ್ಲರಿಗೂ ತಿಳಿಸಬೇಡ. ಅತ್ಯಂತ ಭಕ್ತರೆನಿಸಿದವರಿಗೆ ಮಾತ್ರ ವಿವರಿಸುವವಳಾಗು. ॥೯೬॥

ಪರಮೇಶ್ವರಿಯೇ, ಇದುವರೆಗೂ ಹೇಳಿದ ಶಿವರಹಸ್ಯವು ಸ್ವಭಾವವಾಗಿಯೇ ಅತ್ಯಂತಗೂಢವಾದದ್ದು. ಗೂಢವಾಗಿಯೇ ಅರಿಯತಕ್ಕದ್ದು. ಆದ್ದರಿಂದಲೇ ಇದನ್ನು ಲೀಲಾರ್ಥವಾಗಿ ಸರ್ವರಿಗೂ ಉಪದೇಶಿಸಬೇಡ. ಇದರಲ್ಲಿ ಸಕಲವೇದಗಳ ಮತ್ತು ಉಪನಿಷತ್ತುಗಳ ಸಾರವೆಲ್ಲಾ ಅಡಗಿರುವುದು. ॥೯೭-೯೮॥

---

1 ಅಧಿತಪ್ಯಾಪಿ ಈಶಃ (ಪಾಠಾಂತರ)

ದೇವಾದೀನಾಂ ಮುನೀನಾಂ ಚ ಗಣಾನಾಂ ಚ ಪ್ರಕಾಶಿತಂ ।
ತವ ಹಾರ್ದೇನ ದೇವೇಶಿ ರಹಸ್ಯಂ ಕಥಿತಂ ಮಯಾ ॥೯೯॥

ಹೃದಿ ಧಾರ್ಯಂ ಸದಾ ದೇವಿ ಗೋಪ್ಯಾದ್ಗೋಪ್ಯಮನುತ್ತಮಂ ।
ಪ್ರಥಮಶ್ಶಿವರತ್ನಾಬ್ಧಿರಹಸ್ಯಸ್ಯಾಂಶ ಉತ್ತಮಃ ॥೧೦೦॥

ಕರ್ಣಭೂಷಾಮಣಿಸ್ತೇಽದ್ಯ ಕಥಿತಸ್ತು ಸುಗೋಪ್ಯತಾಂ ।
ಸತ್ಯಂ ಸತ್ಯಂ ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೦೧॥

॥ ಸ್ಕಂದ ಉವಾಚ ॥

ಇತ್ಯುಕ್ತ್ವಾ ಗಿರಿಜಾಂ ದೇವಸ್ಸಮಾಲಿಂಗ್ಯ ಮಹೇಶ್ವರಃ ।
ಕೈಲಾಸಶೈಲೌ ಶಿವಯಾ ವಿಜಹಾರ ಯಥಾಸುಖಂ ॥೧೦೨॥

॥ ದೇವ್ಯುವಾಚ ॥

ವಸ್ತ್ರಾರ್ಥೌತವಿಧೌ ಸಹಸ್ರಕರತಾ ಪುಷ್ಪಾರ್ಪಣೇ ವಿಷ್ಣುತಾ
ಗಂಧೇ ಗಂಧವತಾ ಮಹಾನ್ನಪಚನೇ ಬರ್ಹಿರ್ಮುಖಾಧ್ಯಕ್ಷತಾ ।

---

ಇದನ್ನು ದೇವಾದಿ ಋಷಿವರ್ಗಕ್ಕೂ ಪ್ರಮಥಗಣಗಳಿಗೂ ವಿವರಿಸಬೇಕಾದದ್ದು. ಅಂತಹ ಶಿವರಹಸ್ಯವನ್ನು ನಿನಗೆ ಮನಃಪೂರ್ವಕವಾಗಿ ವಿವರಿಸಿರುವೆನು. ಇದನ್ನು ಅತ್ಯಂತ ರಹಸ್ಯವಾದದ್ದೆಂದು ತಿಳಿದು ಮನಸ್ಸಿನಲ್ಲಿಯೇ ಮನನಮಾಡುತ್ತಿರು. ಶಿವರಹಸ್ಯವೆಂಬ ದೊಡ್ಡರತ್ನದ ಮೊದಲನೆಯ ಅಂಶವಾದ ಈ ಭಾಗವು ಅತಿಶ್ರೇಷ್ಠವಾದದ್ದು. ||೯೯-೧೦೦||

ಈಗ ಇದು ನಿನ್ನ ಕರ್ಣಾಭರಣದ ದಿವ್ಯರತ್ನವೆನಿಸಿದೆ. ಆದ್ದರಿಂದಲೇ ಪ್ರಮಾಣವಾಗಿಯೂ ಇವನ್ನು ಸತ್ಯವಾದದ್ದೆಂದೂ, ರಹಸ್ಯವಾದದ್ದೆಂದೂ ತಿಳಿ. ಕೈಮೇಲೆ ಕೈಹಾಕಿ ಭಾಷೆಯಿಂದ ಇದನ್ನು ಸತ್ಯವಾದದ್ದೆಂದು ಹೇಳುವೆನು. ಇದರಲ್ಲಿ ಯಾವ ಭಾಗವೂ ಅಸತ್ಯವಲ್ಲ. ||೧೦೧||

ಹೀಗೆ ಮಹೇಶ್ವರನು ಸರ್ವವನ್ನೂ ಪಾರ್ವತಿಗೆ ಹೇಳಿ, ದೇವಿಯ ಆಲಿಂಗನ ಸುಖವನ್ನನುಭವಿಸುತ್ತಾ ಸಂತೋಷದಿಂದ ಕೈಲಾಸಪರ್ವತದಲ್ಲಿ ವಿಹರಿಸಲಾರಂಭಿಸಿದನು. ||೧೦೨||

ಆಗ ಪಾರ್ವತಿಯು ಪತಿಯನ್ನು ಕುರಿತು "ಪರಮೇಶ್ವರನೇ, ನಿನಗೆ ವಸ್ತ್ರವನ್ನು ಅರ್ಪಿಸೋಣವೆಂದರೆ ಸಕಲ ವಸ್ತ್ರಗಳನ್ನೂ ಶುಭ್ರಗೊಳಿಸುವುದರಲ್ಲಿ ಸೂರ್ಯ

ಪಾತ್ರೇ ಕಾಂಚನಗರ್ತತಾಸ್ತಿ ಭಗವನ್ ಕಾರುಣ್ಯವಾರಾಂನಿಧೇ
ಶುಶ್ರೂಷಾಂ ಕರವಾಣಿ ತೇ ಪಶುಪತೇ ಸ್ವಾಮಿಂಸ್ತ್ರಿಲೋಕೀಗುರೋ ॥೧೦೩॥

ಗಂಡೂಷಾಂಬುನಿಮಜ್ಜನಾಯ ಹೃದಭೂದ್ಗಂಗಾವತಂಸಸ್ಯ ತೇ
ಚೂಡಾಲಂಕೃತಿಕಲ್ಪನಾಯ ವಿಧೃತಂ ಜ್ಯೋತಿಸ್ಸುಧಾಧಾಮ ತೇ ।
ತೃಪ್ತ್ಯೈ ಭಕ್ಷಿತಶೇಷಮಾಮಿಷಮಪಿ ತ್ರೈಲೋಕ್ಯಕುಕ್ಷಿಂಭರೇ
ವಿದ್ಯಾಧೀಶಮೃತೇ ತವ ಸ್ತುತಿರಿಯಂ ವಾಣೀ ಲಘಿಷ್ಠಾಪಿ ಮೇ ॥೧೦೪॥

॥ ಸೂತ ಉವಾಚ ॥

ಶ್ರುತ್ವಾ ಚಾಥ ಮಹೇಶಸುಂದರಮಹಾಕೈಲಾಸಲಿಂಗಾಲಯಾ
ಪಾರಾವಾರಮಹಾಘಸಂಸ್ಕೃತಿಭರಂ ವಹ್ನ್ಯಾಪ್ತತೂಲಾದ್ರಿವತ್ ।
ಪಾಪಾದ್ರಿಃ ಪ್ರಶಮಂ ಪ್ರಯಾತಿ ಸುಕೃತಾಂ ರಾಶಿಃ ಪರಂ ವರ್ಧತೇ
ಶೈವಸ್ಯೈತದಪಾರವರ್ಣನಕಥಾಶ್ಯಂಭೋರ್ಮುದೇ ಶಾಂಕರಾಃ ॥೧೦೫॥

ನನ್ನ ಸಾಮರ್ಥ್ಯವು ನಿನ್ನಲ್ಲಿಯೇ ಇರುವುದು. ಪುಷ್ಪಗಳನ್ನು ಸಮರ್ಪಿಸೋಣವೆಂದರೆ, ಪುಷ್ಪಲೋಚನನಾದ ವಿಷ್ಣುವಿನ ಧರ್ಮವು ನಿನ್ನಲ್ಲಿ ಕಾಣುವುದು. ಗಂಧಲೇಪನವಲ್ಲಿ ಗಂಧವಹನಾದ ವಾಯುವೇ ನೀನಾಗಿರುವೆ. ಅನ್ನಪಚನಕಾರ್ಯದಲ್ಲಿ ನೀನೇ ಅಗ್ನಿಯಾಗಿರುವೆ. ಪಾತ್ರಪ್ರದಾನಮಾಡೋಣವೆಂದರೆ, ಸುವರ್ಣದ ಗಣಿಯೇ ನೀನು. ದಯಾಸಮುದ್ರನೂ, ತ್ರಿಲೋಕಗುರುವೂ, ಪಶುಪತಿಯೂ ಆದ ಮಹೇಶ್ವರನೇ, ನಿನ್ನಲ್ಲಿಯೇ ಸಕಲ ಗುಣಗಳೂ ಇರುವಾಗ ನಾನು ನಿನ್ನನ್ನು ಸೇವೆಗೈಯ್ಯುವುದು ಹೇಗೆ? ॥೧೦೩॥

ನಿನಗೆ ಬಾಯಿಮುಕ್ಕಳಿಸುವ ನೀರನ್ನು (ಅರ್ಘ್ಯಪಾದ್ಯಾದಿಗಳನ್ನು) ಕೊಡೋಣವೆಂದರೆ ಸಾಕ್ಷಾದ್ದೇವಗಂಗೆಯೇ ನಿನ್ನ ಹೃದಯಾಂತರಾಳದಲ್ಲಿರುವುದು. ಭೂಷಣಗಳಿಂದ ಭೂಷಿಸೋಣವೆಂದರೆ, ಅಮೃತಮಯನಾದ ಚಂದ್ರನೇ ನಿನ್ನ ಶಿಖಾಭೂಷಣನಾಗಿರುವನು. ಆಹಾರವಸ್ತುಗಳನ್ನು ಒದಗಿಸುವ ಕಾರ್ಯದಲ್ಲಿ ಸಮಸ್ತಲೋಕವನ್ನೇ ಹೃದಯದಲ್ಲಿಟ್ಟಿರುವ ನಿನಗೆ ನಾವು ಹೇಗೆ ತೃಪ್ತಿಯನ್ನುಂಟುಮಾಡುವೆವು? ಕೇವಲ ಮಾತಿನಿಂದ ಸ್ತುತಿಸುವುದಕ್ಕೆ ಹೊರಟರೂ, ಸರ್ವವಿದ್ಯಾಧೀಶನಾದ ನಿನ್ನ ಎದುರಿನಲ್ಲಿ ನನ್ನ ಮಾತುಗಳು ಸಂಪೂರ್ಣ ವ್ಯರ್ಥವಾಗುವುವು." ಎಂದಳು.॥೧೦೪॥

ಹೀಗೆ ಪಾರ್ವತೀ ಪರಮೇಶ್ವರರ ಸಂವಾದ ರೂಪದಲ್ಲಿರುವ ಈ ಮಹೇಶ್ವರನ ಕಥೆಯನ್ನು ಕೇಳಿದವರ ಪಾಪರಾಶಿಯು ಬೆಂಕಿಗೆ ಸಿಕ್ಕಿದ ಹತ್ತಿಯರಾಶಿಯಂತೆ

ಅಗಣಿತಗುಣಗರ್ಭಪುಣ್ಯಜಾಲೈ
ಸ್ಸುರಜಾಲೈರಮೃತೈಸ್ಸುರದ್ರುಸಾಲೈಃ ।
ಕಲಹಂಸಕುಲೈರ್ವಿಲಾಸಶೀಲೈ
ರ್ನ ವಿಶೇಷೋಽಸ್ತಿ ತ್ರಿವಿಷ್ಟಪೇಪಿ ಪುಂಸಾಂ ॥೧೦೬॥

ಶ್ರೋತ್ರೂಣಾಮಿದಮೇವ ಸುಂದರಮಹಾಶೈವೈಕಸಾರಂ ಮಧು
ನಾನಾಸಂಸ್ಕೃತಿಧರ್ಮಭಾರಕಥಯಾ ಸಂಪ್ರಾಪ್ನುಯದ್ವಾ ಫಲಂ ।
ಕಿಂ ಚಿತ್ರಂ ಕ್ಷಣಮಾತ್ರಮಪ್ಯಗಸುತಾಕಾಂತಾಬ್ಜ ಪಾದಾದರೋ
ನಕ್ರಾಕಾರಮಹಾಘಸಂಸ್ಕೃತಿಭರಂ ನ ಪ್ರಾಪ್ನುಯಾಜ್ಜಾತುಚಿತ್ ॥೧೦೭॥

---

ನಿರ್ಮೂಲವಾಗುವುದು. ಎಲೈ ಭವಭಕ್ತಾಗ್ರೇಸರರೇ, ಇಲ್ಲಿರುವ ಮಹಾಕೈಲಾಸ ವರ್ಣನೆ, ಕೈಲಾಸೇಶ್ವರವರ್ಣನೆ, ಕೈಲಾಸಮೌಲಿಸ್ಥಲಿಂಗವರ್ಣನೆ ಇವೇ ಮೊದಲಾದು ವುಗಳನ್ನು ಕೇಳುವುದರಿಂದ ಭಕ್ತರ ಸುಕೃತವು ಅಭಿವೃದ್ಧಿ ಹೊಂದುವುದು. ಇಂತಹ ಮಹಾಮಹಿಮವಾದ ಕಥಾಭಾಗವನ್ನು ಕೇಳಿರಿ ಎಂದು ಸೂತಮಹರ್ಷಿಯು ವಾಜ ಶ್ರವಸಾದಿಗಳಿಗೆ ಹೇಳುತ್ತಾ, ಹೀಗೆಂದರು. ॥೧೦೫॥

ಎಲೈ ಋಷಿವರ್ಯರೇ, ಶ್ರೀಶಿವರಹಸ್ಯ ಶ್ರವಣ ಮಾಡಿದವರಿಗೆ ಪುಣ್ಯರಾಶಿಯು ಪ್ರಾಪ್ತಿಯಾಗುವುದಲ್ಲದೆ, ದೇವತೆಗಳ ಸ್ಥಾನವೂ ಮತ್ತು ದೇವವೃಕ್ಷಗಳ ಸಮೂಹವೂ ಸುಲಭವಾಗಿ ದೊರಕುವುವು. ಶಾಶ್ವತವಾದ ಸುಖಸಾಮಗ್ರಿಗಳೂ, ಕಲಹಂಸಾದಿ ಸುಂದರತರವಾದ ವಿಹಾರವಸ್ತುಗಳೂ, ಸ್ವರ್ಗಕ್ಕೆ ಸಮನಾಗಿ ಇದ್ದಲ್ಲಿಯೇ ದೊರೆಯು ವುವು. ಇದರಲ್ಲಿ ಸಂದೇಹವಿಲ್ಲ. ॥೧೦೬॥

ಪುಣ್ಯ ಕಥೆಗಳನ್ನು ಕೇಳಲು ಅಪೇಕ್ಷೆಯುಳ್ಳವರು ಈಶ್ವರ ಕಥಾಪರಿಪೂರ್ಣ ವಾದ ಈ ಶಿವರಹಸ್ಯವನ್ನೇ ಕೇಳಬೇಕು. ಇದೇ ಅವರಿಗೆ ಮಧುರವಾದ ಮಧು. ಉಳಿದ ಸಾಂಸಾರಿಕ ಕಥೆಗಳು ಯಾವ ಫಲವನ್ನು ತಾನೇ ದೊರಕಿಸಿಯಾವು? ಸಂಸಾರಸಮುದ್ರವೆಂಬುದು ಭಯಂಕರವಾದ ಮೊಸಳೆಯೇ ಮುಂತಾದ ಕ್ರೂರಪ್ರಾಣಿ ಗಳಿಂದ ತುಂಬಿರತಕ್ಕದ್ದು. ಅಂತಹ ಘೋರಸಾಗರವನ್ನು ದಾಟಿಸಲು ಉಳಿದ ದೇವತಾ ಕಥೆಗಳು ಹೇಗೆ ತಾನೆ ಸಮರ್ಥವಾದಾವು? ಆದ್ದರಿಂದ ಕಥಾಶ್ರವಣ ಕುತೂಹಲಿಗಳಾದ ನೀವು ಪಾರ್ವತೀಕಾಂತನಾದ ಶಂಕರನ ರಹಸ್ಯವನ್ನು ತಪ್ಪದೆ ತಿಳಿಯುವವರಾಗಿರಿ. ॥೧೦೭॥

ಶ್ರೀಮತ್ಕೈಲಾಸಮೌಲೌ ತ್ರಿಭುವನ ಜನಕಾದ್ವಿಶ್ರುತಾಪಾರಧೀರಾ
ಸಂಸಾರಾಸಾರಕಾರಾಗೃಹಗತಜನತಾಕಾಮುಪಾದಾರ್ಗಲಾನಾಂ ।
ದೇವ್ಯಾ ಮುಕ್ತ್ಯೈ ಸ್ವಯುಕ್ತ್ಯಾ ಸತತಪರಿಚಿತಾಪಾದಬದ್ಧೇನ ಪ್ರೇಮ್ಣಾ
ವೇದಾನಂದ್ಯೈಕಸೀಮಾ ದುರಿತಭವನವೀತಾರಣೇ ಸೈವ ನೌಕಾ ॥೧೦೪॥

ಪುಂಸಾಮಾಯ್ಯೈರ್ಕಧುರ್ಯಾಃ ಕಥಿತಶಿವಕಥಾಪಾಂಥಕಾಸ್ಸಾಂಪರಾಯೇ ।
ಜೈಗೀಷವ್ಯಕೃತೇ ಮಹೇಶಹೃದಯಾನ್ನಿಸ್ಸಾರಿತಂ ಯನ್ಮಧು
ದೇವ್ಯಾ ತತ್ಕರುಣಾದರೇಣ ಕಥಿತಂ ಮಹ್ಯಂ ಯದುಕ್ತಂ ಮಯಾ ।
ಶೈವಂ ದಿವ್ಯರಹಸ್ಯಮದ್ಭುತತಮಂ ವೇದಾಂತಸಾರೇ ಸ್ಥಿತಂ
ಪೀತ್ವಾ ತುಂದಿಲಮಾನಸಾಶ್ಶಿವಪದಂ ಧ್ಯಾಯಂತು ಮುಕ್ತ್ಯೈ ಸದಾ ॥೧೦೯॥

॥ ಜೈಗೀಷವ್ಯ ಉವಾಚ ॥

ಇಷ್ಟಾನಿಷ್ಟಸಮಸ್ತವಸ್ತುವಿಷಯವ್ಯಾವೃತ್ತಚೇತೋಽಸ್ಮ್ಯಹಂ
ನಿಶ್ಚೇಷ್ಟೋಪಮಕಷ್ಟತುಷ್ಟಜನಕಂ ಮನ್ಯೇ ಪರಂ ವಿಷ್ಟಪಂ ।

ಹೀಗೆ ತ್ರಿಲೋಕಾಧಿಪತಿಯಾದ ಶಂಕರನು ಕೈಲಾಸಪರ್ವತದಲ್ಲಿ, ಸಂಸಾರವೆಂಬ ಕಾರಾಗೃಹದ ಬಂಧನದಿಂದ ಬಿಡಿಸುವ ದಿವ್ಯವಾದ ಶಿವರಹಸ್ಯವನ್ನು, ಪಾರ್ವತಿಗೆ ನಿರತಿಶಯವಾದ ಪ್ರೀತಿಯಿಂದ ಉಪದೇಶಿಸಿದನು. ಆ ಶಿವರಹಸ್ಯವು ವೇದದಲ್ಲಿ ಪ್ರತಿಪಾದ್ಯಮಾನನಾಗಿರುವ ಪರಮಾತ್ಮಸ್ವರೂಪವನ್ನೆಲ್ಲಾ ತಿಳಿಸುವುದರ ಮೂಲಕ, ಸಕಲರಿಗೂ ಸಂಸಾರಸಾಗರವನ್ನು ದಾಟಿಸುವ ನಾವೆಯಂತಿರುವುದು. ॥೧೦೪॥

ಎಲೈ ಪೂಜ್ಯರಾದ ಶಿವಕಥಾಶ್ರವಣಕುತೂಹಲಿಗಳೇ, ಈ ಶಿವರಹಸ್ಯವನ್ನು ಸಾಕ್ಷಾತ್ಪರಮೇಶ್ವರನೇ ಪಾರ್ವತಿಗೆ ಉಪದೇಶಿಸಿರುವನಾದರೂ ಮಹೇಶ್ವರನ ಅಪ್ಪಣೆಯಂತೆ ಜೈಗೀಷವ್ಯಮಹರ್ಷಿಗಾಗಿ ನಾನು ಈಗ ಅದನ್ನೇ ನಿಮಗೆಲ್ಲಾ ವಿವರಿಸಿರುವೆನು. ಇದು ವೇದಾಂತಗಳ ಸಾರವನ್ನೆಲ್ಲಾ ಒಳಗೊಂಡು ಅದ್ಭುತವಾದ ಮಹಿಮೆಯುಳ್ಳದ್ದಾಗಿರುವುದು. ಇಂತಹ ಶಿವಕಥಾಮೃತವನ್ನು ಕುಡಿದು ಹರ್ಷಚಿತ್ತರಾಗಿ, ಸರ್ವದಾ ಮಹೇಶ್ವರನನ್ನು ಸ್ತುತಿಸುತ್ತಾ ಮುಕ್ತಿಮಾರ್ಗವನ್ನು ಸುಲಭವಾಗಿ ಸಂಪಾದಿಸಿರಿ." ॥೧೦೯॥

ಎಂದು ಹೇಳಿದ ಕುಮಾರಸ್ವಾಮಿಯ ವಚನಗಳನ್ನು ಕೇಳಿ ಜೈಗೀಷವ್ಯ ಮಹರ್ಷಿಯು ಹೀಗೆಂದನು, "ಮಹಾದೇವಪುತ್ರನೇ, ಇಲ್ಲಿನವರೆಗೂ ನೀನು

ಕಿಂ ತ್ವಿಷ್ಟಂ ಶಿಪಿವಿಷ್ಟಕಷ್ಟಹರಣೇಃಚಿತ್ರಾಷ್ಟಮೂರ್ತೇಃ ಕಥಾ
ಶ್ರೋತುಂ ಮೇದುರದೃಷ್ಟಕೋಟಿಹರಣಂ ತುಷ್ಟಂ ಪ್ರಸನ್ನಂ ಮನಃ
॥೧೧೦॥

ಮತ್ತಾನಂಗಕರೀಂದ್ರದಾರಣಮಹಾಸಿಂಹೋಪಮಸ್ಯೇಶ್ವರ
ಸ್ಯಾರ್ಚಾಧೂತಸಮಸ್ತಪಾತಕತತೇಃ ಪ್ರಾಪ್ತಂ ನ ಕಿಂಚಿನ್ಮಮ ।
ಸ್ವೇಚ್ಛೇಚ್ಛಸ್ಯ ನಿರಂಕುಶಸ್ಯ ಜಗತಾಂ ವರ್ಣಾಶ್ರಮೋಽಪ್ಯಾಶ್ರಮಃ
ಕಿಂ ವಾ ಮೇ ತವ ವಕ್ತ್ರಪದ್ಮಜಮಹಾಶಂಭೋಃ ಕಥಾಸ್ಸುಂದರಾಃ॥೧೧೧॥

ಪಾಯಂ ಪಾಯಮಪಾಯಜನ್ಮರಹಿತೋ ಮೋದಾಮಿ ನೃತ್ಯಾಮಿ ಚ॥೧೧೨॥

ಪಾಪೋದ್ದಾಮಕ್ರೌಂಚಭಂಗೇ ತ್ವಮೇಕೋ
ಜಿತ್ವಾನಘ ಪ್ರಸ್ತುತಂ ಶಂಭುಭಕ್ತ್ಯಾ ।

ಉಪದೇಶಿಸಿದ ಶಿವರಹಸ್ಯವನ್ನು ಕೇಳಿ, ನನ್ನ ಮನಸ್ಸು ಸಂಪೂರ್ಣವಾದ ವಿರಕ್ತಿಯನ್ನು ಪಡೆದಿರುವುದು. ಸಕಲ ಸುಖಸಂಪತ್ತಿನಿಂದ ಕೂಡಿರುವ ಸ್ವರ್ಗಲೋಕವನ್ನು ನಾನು ಕಷ್ಟಕರವಾದ ಪ್ರದೇಶವೆಂದು ಭಾವಿಸಿ ಅದನ್ನು ಅಲ್ಪವಸ್ತುವೆಂದೇ ಎಣಿಸಿರುವೆನು. ಸಕಲ ತೇಜೋವ್ಯಾಪಿಯೂ, ಅಷ್ಟಮೂರ್ತಿಯೂ ಆದ ಪರಶಿವನ ಕಥಾಶ್ರವಣದಲ್ಲಿ ಇನ್ನೂ ನನ್ನ ಮನಸ್ಸು ಮುಂದುವರಿಯುತ್ತಾ, ಮತ್ತೂ ಮತ್ತೂ ಶಿವಕಥೆಯನ್ನು ಕೇಳಬೇಕೆಂಬ ಅತ್ಯಾಸೆಯುಂಟಾಗುತ್ತಿರುವುದು. ||೧೧೦||

ಸ್ಕಂದಸ್ವಾಮಿಯೇ, ಮದಿಸಿದ ಆನೆಯಂತಿರುವ ಮನ್ಮಥನಿಗೆ ಮಹೇಶ್ವರನು ಸಿಂಹದಂತಿರುವನು. ಮತ್ತು ಆತನು ಸರ್ವತಂತ್ರಸ್ವತಂತ್ರನು. ನಿರಂಕುಶನು. ಅಂತಹ ಮಹಾಮಹಿಮನ ಕಥಾಶ್ರವಣದಿಂದ ನನ್ನ ಪಾಪರಾಶಿಯೆಲ್ಲವೂ ನಾಶವಾಗಿ ನಾನು ಚಿತ್ತಶುದ್ಧಿಯನ್ನು ಪಡೆದಿರುವೆನು. ಜಗತ್ತಿನಲ್ಲಿ ಕಂಡುಬರುವ ಸಕಲ ವರ್ಣಾಶ್ರಮಗಳೂ ಅಸ್ಥಿರವಾದವುಗಳು. ಅವುಗಳ ಸಂಸರ್ಗವಿಲ್ಲದೆ ಈಗ ನಿನ್ನ ಮುಖಕಮಲದಿಂದ ಹೊರಡುವ ಶಿವಕಥಾಮೃತಪಾನವನ್ನು ಕುಡಿದು ಕುಡಿದು ಹರ್ಷಚಿತ್ತನಾಗಿ ನರ್ತನಮಾಡುವಂತಿರುವೆನು. ||೧೧೪-೧೧೨||

ಸ್ಕಂದಸ್ವಾಮಿಯೇ, ನೀನು ಪಾಪರಾಶಿಯೆಂಬ ಕ್ರೌಂಚಪರ್ವತವನ್ನು ಭೇದಿಸಿರುವವನು. ಶಕ್ತಿಯೆಂಬ ಆಯುಧವನ್ನು ಹಿಡಿದಿರುವ ಶೂರನು. ನನ್ನ ಪುಣ್ಯವಶ

ತ್ವದ್ದರ್ಶನಾತ್ಸುದಿನಂ ಸುಪ್ರಭಾತಮ್ಮೈಶೀಃ
ಕಥಾಶ್ಚಕೃತ್ಸ್ನಾಹಸ್ತ್ಯೋ ಹಿ ಶೂರಃ ॥೧೧೩॥

ವಿಷಯಾ ವಿಷಸನ್ನಿಭಾ ಮಮ
ಪ್ರತಿಭಾಂತೀಶ್ವರಪಾದಸೇವನಾತ್ ।
ಭವತಾ ಭವತಾಪಸಂತತೇಃ
ಪರಿಹೀನಾ ಮುನಯೋಽಪ್ಯಮೀ ಗೃಹಸ್ಥಾಃ ॥೧೧೪॥

ಶಿವತತ್ತ್ವಪ್ರಭವೋತ್ಥಹರ್ಷವರ್ಷೈಃ
ಪರಿಷಿಕ್ತಾ ಮುನಯಸ್ಸುರಾ ಗಣಾಶ್ಚ ।
ಗುರುರಸ್ಮಾಕಮಹೋಽಸಿ ಭಾಗ್ಯವರ್ಗೈ
ಸ್ತವ ದೇಯಂ ಕಿಮತಃ ಪ್ರಣಾಮತೋಽನ್ಯತ್ ॥೧೧೫॥

ಗಿಂದಲೂ, ಪರಶಿವನಲ್ಲಿಟ್ಟಿದ್ದ ಭಕ್ತಿಪ್ರಭಾವದಿಂದಲೂ ಇಂದು ನನಗೆ ನೀನು ದರ್ಶನಕೊಟ್ಟಿರುವೆ. ಮತ್ತು ಈಶ್ವರ ಕಥೆಗಳನ್ನೆಲ್ಲಾ ಸಂಪೂರ್ಣವಾಗಿ ತಿಳಿಸಿರುವೆ. ಈ ದಿನವೇ ನನಗೆ ಸುದಿನ. ಈಗಲೇ ನನಗೆ ಜ್ಞಾನಜ್ಯೋತಿಯೊದಗಿ ಸುಪ್ರಭಾತವಾಯಿತು. ॥೧೧೩॥

ಈಗ ಸಕಲ ವಿಷಯಸುಖಗಳೂ ವಿಷಸದೃಶಗಳೆಂದೇ ತೋರುತ್ತಿವೆ. ಈಶ್ವರನ ಪಾದಸೇವನೆಯಿಂದಲೇ ಈ ವಿಧವಾದ ಜ್ಞಾನವು ನನಗೆ ಬಂದಿರುವುದು. ಈಗ ಇಲ್ಲಿ ನೆರೆದಿರುವ ಋಷಿಗಳೂ, ಗೃಹಸ್ಥರೂ, ನಿನ್ನಿಂದ ಸಂಸಾರದುಃಖವನ್ನು ಕಳೆದು ಕೊಂಡು ಧನ್ಯರಾಗಿರುವರು. ॥೧೧೪॥

ಕುಮಾರಸ್ವಾಮಿಯೇ, ಈಗ ನೀನು ಪರಶಿವನ ತತ್ತ್ವಕಥನದಿಂದ ಉಂಟಾಗಿರುವ ಅಮೃತಧಾರೆಯನ್ನು ಇಲ್ಲಿ ನೆರೆದಿರುವವರೆಲ್ಲರ ಮೇಲೂ ವೃಷ್ಟಿಯಂತೆ ಸುರಿಸಿರುವೆ. ಮತ್ತು ಜ್ಞಾನೋಪದೇಶಕನಾದ ಗುರುವಿನಂತೆಯೂ ಆಗಿರುವೆ. ಇಂತಹ ನಿನಗೆ ನಮಸ್ಕಾರವೊಂದನ್ನು ಬಿಟ್ಟು ಮತ್ತೇನನ್ನು ತಾನೆ ಅರ್ಪಿಸಬಲ್ಲೆನು"? ಎಂದು ಜೈಗೀಷವ್ಯಮಹರ್ಷಿಯು ಹೇಳಲು, ॥೧೧೫॥

|| ಮುನಯ ಊಚುಃ ||

**ಷಡ್ವಕ್ತ್ರಾಮಲಪದ್ಮಸಂಘಜನಿತಾಶ್ಶಂಭೋಃ ಕಥಾಃ ಪಾವನಾ**
**ನಸ್ಮಾನ್ ಸಂಕುರುತೇ ದಯಾರಸಭರೈಸ್ಸಂಸಾರಭಾರಾಲಸಾನ್ ।**
**ಶಾಂಗಸ್ಯಾಸ್ಯ ಮುನೇಸ್ಸಮಾಗಮಪಶಾತ್ಪ್ರಾಪ್ತಾ ವಿಮುಕ್ತೇಃ ಫಲಂ**
**ಕಿಂ ಚಿತ್ರಂ ಭಗವಂಸ್ತ್ರಿಣೇತ್ರಜಕಥಾಸಾರೈಃ ಪವಿತ್ರಾ ವಯಂ ॥೧೧೬॥**

**ಶ್ರಮಿಭಿಃ ಕಿಲ ತೇಂದುಮೌಳಿಚರಣಧ್ಯಾನಾರ್ಚಕೈಸ್ತ್ವನ್ಮುಖಾ**
**ದಾಶ್ರಾವ್ಯೋತ್ಕಟಭಕ್ತಿಭಾವಸುರಸಾಶ್ಶಂಭೋಃ ಕಥಾಃ ಪಾವನೀಃ ।**
**ನೋ ಕೈಲಾಸನಿವಾಸಸೌಖ್ಯಧುರಿಮಾ ಗಣ್ಯೋ ನ ಕಿಂಚಿತ್ಪ್ರಭೋ**
**ತ್ವದ್ವಕ್ತ್ರಾಮಲದರ್ಶನೇನ ಸುತರಾಂ ತೃಪ್ಯಾಮಹೇ ಕೇವಲಂ ॥೧೧೭॥**

**ಸ್ಕಂದ ತ್ವದ್ವಕ್ತ್ರಪದ್ಮಾಮಲಮಧುರ್ಝುರೀಪ್ಲಾವಿತಾಸ್ಸ್ಮೋ ಮುನೀಂದ್ರಾ**
**ಶ್ಶೈಲೇಂದ್ರಾವರಣೋತ್ತಮತ್ವಚಿ ವಿಹಿತಾಪಾರವೃತ್ತೇಃ ಕಥಾಭಿಃ ।**

" ಷಣ್ಮುಖಸ್ವಾಮಿಯ ಮುಖಕಮಲದಿಂದ ವಿದಿತವಾದ ಶಂಕರಲೀಲೆಗಳು, ಸಂಸಾರದಲ್ಲಿ ಸಿಕ್ಕಿ ತೊಳಲುತ್ತಿರುವ ನಮ್ಮನ್ನು ಪರಿಶುದ್ಧರನ್ನಾಗಿ ಮಾಡಿವೆ. ಇದಕ್ಕೆ ಶಂಕರಾನುಗ್ರಹದಿಂದ ಒದಗಿದ ಕುಮಾರಸ್ವಾಮಿಯ ದಯಾರಸವೇ ಕಾರಣ. ಅಲ್ಲದೆ ಇಷ್ಟಕ್ಕೂ ಅವಕಾಶವನ್ನು ಒದಗಿಸಿದ ಜೈಗೀಷವ್ಯ ಮಹರ್ಷಿಯ ಸಹವಾಸವೂ, ಪರಶಿವನ ಕಥಾಮಹಿಮೆಯೂ, ಕುಮಾರಸ್ವಾಮಿಯ ಉಪದೇಶವೂ ಲಭಿಸಿರುವಾಗ ನಾವು ಧನ್ಯರಾಗುವುದರಲ್ಲಿ ಆಶ್ಚರ್ಯವೇನು ? " ಎಂದು ಸಕಲ ಋಷಿಗಳೂ ಮಾತನಾಡಿಕೊಂಡರು. ||೧೧೬||

ಪ್ರಮಥಗಣಗಳೆಲ್ಲಾ ಹೀಗೆಂದರು " ಶಂಕರ ಕುಮಾರನೇ, ನಾವು ಸರ್ವದಾ ಪರಮೇಶ್ವರನ ಪಾದಾರ್ಚಕರಾಗಿಯೇ ಶ್ರಮಪಡುತ್ತಿರುವೆವು. ಆದರೂ ಇಂತಹ ರಹಸ್ಯವಾದ ಶಂಕರನ ಮಹಿಮೆಯನ್ನು ಇಷ್ಟು ಸ್ಪಷ್ಟವಾಗಿ ಇಲ್ಲಿನ ವರೆಗೂ ಕೇಳಿರಲಿಲ್ಲ. ಈಗ ನಿನ್ನ ಪರಿಶುದ್ಧವಾದ ಮುಖಕಮಲದಿಂದ ಹೊರಟಂತಹ ಶಿವಕಥೆಗಳನ್ನು ಕೇಳಿ ಕೈಲಾಸವಾಸದ ಸುಖಕ್ಕಿಂತಲೂ ಹೆಚ್ಚಿನ ಆನಂದವನ್ನು ಹೊಂದಿರುವೆವು. ಮತ್ತು ನಿನ್ನ ದರ್ಶನದಿಂದ ನಾವು ಸಂತುಷ್ಟರೂ ಆಗಿರುವೆವು. ||೧೧೭||

ಸ್ಕಂದನೇ, ಕಲಿಯುಗದಲ್ಲಿ ಜನಿಸಿ, ಆಗ ಒದಗುವ ಪಾಪಕರ್ಮಗಳನ್ನು ಮಾಡುತ್ತಾ, ಭ್ರಾಂತರಾಗಿ ಸಂಪಾದಿಸಿದ ಸಕಲ ಸಂಸಾರದುಃಖಗಳನ್ನೆಲ್ಲಾ ನಾಶ

ಶಂಭೋಃ ಪುಂಭಾವಮುಕ್ತ್ಯೈ ಕಲಿತಕಲಿಮಲಾಸ್ಫಾರಮಾಧ್ಯಜ್ಞಾನೌಘ
ಧ್ವಾಂತಭ್ರಾಂತ್ಯುತ್ಥದಾವಪ್ರಶಮನಶಮನಾಗಾಧದುಃಖಾಪನುತ್ತ್ಯೈ ॥೧೧೮॥

॥ ವಿಷ್ಣುಬ್ರಹ್ಮೇಶ್ವರಾ ಊಚುಃ ॥

ಸೃಷ್ಟಿಸ್ಥಿತ್ಯಂತಕಾರ್ಯೈಸ್ಸತತಪರಿಚಿತಾಪಾರದುಃಖೇಷು ಮಗ್ನಾ ।
ಲಗ್ನಾಃ ಕರ್ಮಜಪಾಪತಾಪಮನಸೋ ಜನ್ಮಾದಿದುಃಖಾಸ್ಪದಾಃ
ಶಾಂತಾಃ ಪ್ರಾಪ್ಯ ಭವತ್ಪದಾಂಬುಜೋತ್ಥಸರಣಿಂ ಮುಕ್ತೇಃ ಕಿಮನ್ಯದ್ಧಿ ನಃ
॥೧೧೯॥

ಸಂತುಷ್ಟುವುಃ ಕುಮಾರಂ ತೇ ಗಣಾಸ್ಸುರಮುನೀಶ್ವರಾಃ ।
ಪ್ರಣಮ್ಯ ಮುದಿತಾಸ್ಸರ್ವೇ ಶೃಣುಧ್ವಂ ತತ್ಸ್ತುತಿಂ ದ್ವಿಜಾಃ ॥೧೨೦॥

ಪಡಿಸಿ ಸ್ಥಿರಾನಂದಾತ್ಮಕವಾದ ಮುಕ್ತಿಯನ್ನು ಭಕ್ತರಿಗೆ ಕೊಡುವುದೇ ಈ ಶಿವ ರಹಸ್ಯ. ಗಜಚರ್ಮಾಂಬರಧಾರಿಯೂ, ಕೈಲಾಸವಾಸಿಯೂ, ಮಹಾಮಹಿಮನೂ ಆದ ಮಹೇಶ್ವರನ ಇಂತಹ ದಿವ್ಯ ಕಥಾಮೃತವನ್ನು ನಿನ್ನ ವದನ ಕಮಲದಿಂದ ಹೊಂದಿ, ಅದರಲ್ಲಿ ನಾವು ಮುಳುಗಿ ಪರಿಶುದ್ಧರಾಗಿರುವೆವು. ಮತ್ತು ಪವಿತ್ರರಾಗಿರುವುವು." ॥೧೧೮॥

ಅನಂತರ ಬ್ರಹ್ಮ, ವಿಷ್ಣು, ರುದ್ರರು ಹೀಗೆ ಕುಮಾರಸ್ವಾಮಿಯನ್ನು ಹೊಗಳಿದರು. "ಸ್ಕಂದಸ್ವಾಮಿಯೇ, ನಾವು ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಈ ಕಾರ್ಯಗಳಲ್ಲಿ ತೊಡಗಿ ಸರ್ವದಾ ತತ್ಸಂಬಂಧವಾದ ದುಃಖಪರಂಪರೆಗಳನ್ನು ಹೊತ್ತಿರುವೆವು. ಅಲ್ಲದೆ ಸಾಮಾನ್ಯರಂತೆ ನಾವೂ ಜನನಮರಣಾದಿಗಳಿಗೆ ಸಿಕ್ಕಿ ತೊಳಲುತ್ತಿರುವೆವು. ಈಗ ನಿನ್ನ ವದನದಿಂದ ಬಂದ ಶಂಕರನ ಕಥಾಸರಣಿಯನ್ನು ಕೇಳಿ ಶಾಂತಚಿತ್ತರಾಗಿ ಧನ್ಯರೆನಿಸಿದ್ದೇವೆ. ಸ್ಥಿರವಾದ ಮುಕ್ತಿಗೆ ಈ ಕಥಾಶ್ರವಣಕ್ಕಿಂತ ಮತ್ತಾವ ಸುಲಭ ಮಾರ್ಗವಿರುವುದು ?" ಎಂದು ತಮ್ಮ ಅಭಿಪ್ರಾಯವನ್ನು ಸೂಚಿಸಿದರು. ॥೧೧೯॥

ಹೀಗೆ ಸಕಲರೂ ಕುಮಾರಸ್ವಾಮಿಯನ್ನು ಸ್ತುತಿಸಿದ ಮೇಲೆ ಅಲ್ಲಿ ನೆರೆದಿದ್ದ ಸಕಲ ದೇವತೆಗಳೂ, ಮುನಿಗಳೂ ಒಟ್ಟಾಗಿ ಷಣ್ಮುಖಸ್ವಾಮಿಯನ್ನು ಹೀಗೆ ಸ್ತುತಿಸಲಾರಂಭಿಸಿದರು. ॥೧೨೦॥

|| ದೇವಾದ್ಯಾ ಊಚುಃ ||

ಶರಣಾತುಲಮಾತುಲಗಾಧಿಪತೇ
ಕರುಣಾಕರ ಕಾಮದ ಕಾಮಹಂತಃ ।
ಶರಕಾನನಸಂಭವಚಾರುರುಚೇ
ಪರಿಪಾಲಯ ತಾರಕಮಾರಕ ನಃ ||೧೨೧||

ಹರಸಾರಸಮುದ್ಭವಹೈಮವತೀಕರ
ಪಲ್ಲವಲಾಲಿತ ಕಮ್ರತನೋ ।
ಪುರವೈರಿಮುಕುಂದಹೃದಂಬುನಿಧೇ
ಪರಿಪಾಲಯ ತಾರಕಮಾರಕ ನಃ ||೧೨೨||

ಶರದಿಂದುಸಮಾನಷಡಾನನಾಪಾರ
ಸರಸೀರುಹಲೋಚನಯಾ ವಿಲೋಚನಯಾ ।
ನಿರುಪಾಧಿಕಯಾ ನಿಜಬಾಲತಯಾ
ಪರಿಪಾಲಯ ತಾರಕಮಾರಕ ನಃ ||೧೨೩||

" ಸ್ಕಂದಸ್ವಾಮಿಯೇ, ನೀನು ಶರಣಾಗತನಾಗಿ ಬಂದ ಸೋದರಮಾವನಾದ ಮೈನಾಕ, ಮಂದರ ಮುಂತಾದ ಪರ್ವತಗಳನ್ನು ರಕ್ಷಿಸಿ ಅವುಗಳಿಗೆ ಅಧಿಪತಿಯಾಗಿ ನಿಂತಿರುವೆ. ಕರುಣಾಸಮುದ್ರನೆನಿಸಿ, ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುವಂತಹ ಮಹಾಮಹಿಮನೇ, ಶರವಣದಲ್ಲಿ ಜನಿಸಿ, ದೇಹಕಾಂತಿಯನ್ನು ಅತಿಶಯವಾಗಿ ಪಡೆದಿರುವ ತಾರಕಾರಿಯೇ ! ನಮ್ಮನ್ನು ಕಾಪಾಡು. ||೧೨೧||

ಪರಮೇಶ್ವರನ ಪ್ರೀತಿಪುತ್ರನಾಗಿ, ಪಾರ್ವತಿಯ ಕರಪಲ್ಲವದಿಂದ ಪಾಲಿತ ನಾಗಿ, ಸುಂದರನಾಗಿರುವ ತಾರಕಾರಿಯೇ, ನೀನು ಪರಶಿವನ· ಮತ್ತು ಮಹಾವಿಷ್ಣು ವಿನ ಹೃದಯವನ್ನು ಸರ್ವದಾ ಆನಂದಗೊಳಿಸುತ್ತಿರುವೆಯಲ್ಲವೆ ? ಇಂತಹ ಮಹಾತ್ಮ ನಾದ ನೀನು ನಮ್ಮನ್ನು ಕಾಪಾಡು. ||೧೨೨||

ಶರತ್ಕಾಲದ ಚಂದ್ರನಂತೆ ಪ್ರಕಾಶಿಸುವ ಆರುಮುಖಗಳಲ್ಲಿಯೂ, ಅತಿ ಸುಂದರ ವಾಗಿ ಹೊಳೆಯುತ್ತಿರುವ ಕಮಲಲೋಚನಗಳಿಂದ ನೋಡುತ್ತಾ ಉಪಾಧಿರಹಿತವೂ, ನಿಷ್ಕಲ್ಮಷವೂ ಆದ ದಯಾದೃಷ್ಟಿಯಿಂದ ನಮ್ಮನ್ನು ಉದ್ಧರಿಸು. ||೧೨೩||

ಗಿರಿಜಾಸುತ ಸಾಯಕಭಿನ್ನಗಿರೇ
ಸುರಸಿಂಧುತನೂಜ ಸುವರ್ಣರುಚೇ ।
ಶಿಖಿಜಾತ ಶಿಖಾವಲವಾಹಗತೇ
ಪರಿಪಾಲಯ ತಾರಕಮಾರಕ ನಃ ॥೧೨೪॥

ಜಯ ವಿಪ್ರಜನಪ್ರಿಯ ವೀರಮನೋಜಯ
ಭಕ್ತಪರಾಯಣ ಭದ್ರ ನಮೋ ।
ಜಯ ಶಾಖವಿಶಾಖಕುಮಾರ
ನಮೋ ಪರಿಪಾಲಯ ತಾರಕಮಾರಕ ನಃ ॥೧೨೫॥

ಪುರತೋ ಭವ ಮೇ ಪರಿತೋ ಭವ ಮೇ
ಪಥಿ ಮೇ ಭಗವನ್ ಭವ ರಕ್ಷ ನಮಃ ।
ವೀತರಾಗಿಷು ಮೇ ವಿಜಯಿನ್ ಭಗವನ್
ಪರಿಪಾಲಯ ತಾರಕಮಾರಕ ನಃ ॥೧೨೬॥

---

ಪಾರ್ವತೀಪುತ್ರನೂ, ಸುರರಿಗೆ, ಸಿಂಧುವಿನಂತಿರುವ ಮಹೇಶ್ವರನ ಪ್ರಿಯ ಪುತ್ರನೂ ಆದ ಸ್ಕಂದಸ್ವಾಮಿಯೇ, ನೀನು ಕ್ರೌಂಚಪರ್ವತವನ್ನು ಬಾಣಗಳಿಂದ ಸಂಪೂರ್ಣವಾಗಿ ಭೇದಿಸಿದವನಲ್ಲವೆ? ಅಗ್ನಿಪುತ್ರನೆನಿಸಿ, ಶಿಖಿವಾಹನನಾಗಿ ಪ್ರಸಿದ್ಧಿಗೊಂಡಿರುವ ತಾರಕಾರಾತಿಯೇ, ನಮ್ಮನ್ನು ಪಾಲಿಸು. ||೧೨೪||

ವಿಪ್ರರಿಗೆ ಪ್ರಿಯನೆನಿಸಿ, ವೀರರಿಗೆ ಶ್ರೇಷ್ಠನಾಗಿ, ಭಕ್ತರಿಗೆ ವರದನಾಗಿರುವ ಸ್ಕಂದಸ್ವಾಮಿಯೇ ನಿನಗೆ ವಂದನೆ. ಸಕಲ ತೇಜಸ್ಸುಗಳಿಗೂ, ಉಪನಿಷತ್ತುಗಳಿಗೂ ಆಶ್ರಯಭೂತನಾಗಿರುವ ಶಂಕರನ ಸತ್ಪುತ್ರನೆ, ನಿನಗೆ ನಮಸ್ಕಾರ. ನಮ್ಮನ್ನು ಸಲಹು. ||೧೨೫||

ಕುಮಾರಸ್ವಾಮಿಯೇ, ನೀನು ನಮ್ಮನ್ನು ಸರ್ವಭಾಗದಲ್ಲಿಯೂ ಕಾಪಾಡುವವನು. ಪುರೋಭಾಗದಲ್ಲಿಯೂ, ನಮ್ಮ ಪಶ್ಚಾದ್ಭಾಗದಲ್ಲಿಯೂ, ಮಾರ್ಗದಲ್ಲಿಯೂ ನಮಗೆ ರಕ್ಷಕನಾಗಿರು. ವೈರಾಗ್ಯದಿಂದಿರುವ ನಮ್ಮಲ್ಲಿ ದಯೆಯನ್ನಿಡು. ನಮ್ಮನ್ನು ಸರ್ವಪ್ರಕಾರದಿಂದಲೂ ಕಾಪಾಡು. ||೧೨೬||

ಇತಿ ಕುಕ್ಕುಟಕೇತುಮನುಸ್ಮರತಾಂ
ಪಠತಾಮಪಿ ಷಣ್ಮುಖಷಟ್ಕಮಿದಂ ।
ನಮತಾಮಭಿನಂದನಮಿಂದುಭೃತೋ
ನ ಕ್ಷಯಂ ಕ್ವಚಿದಸ್ತಿ ಶರೀರಿಣಾಂ ॥೧೨॥

ಅಣುಸ್ಸ್ಥಾಣುರ್ವೇಣುಪ್ರತಿನಿಭಸಮೋದ್ಯಜ್ಜಗದಿದಂ
ಮಹಾಭಾಸುಶ್ಛಾಯಂ ತುಹಿನಗಿರಿರಾಸ್ತೇ ಹಿ ಹಿತಕೃತ್ ।
ಹಿಮಾಂಶುಂ ಸ್ವರ್ಭಾನುರ್ಭವಗತಜನಾನಾಂ ಚ ಹಿ ಮುದೇ
ಸಮೀಚೀನೇನೇದಂ ದಿವಿ ವಿತತಚಿತ್ರೈಕವಸತಿ ॥೧೩॥

ಜಾತೇ ಪಾದಾಭಿಘಾತೇ ಚಲತಿ ಮಹಿತಲೇ ಸವ್ಯಥೇ ಭೋಗಿನಾಥೇ
ಸಾಕ್ರಂದೇ ದಂತಿಬೃಂದೇ ವಿಲುಠತಿ ಕಮಠೇ ಚಂಚಲೇ ಶೈಲಜಾಲೇ ।
ನಾದೋನ್ನಿದ್ರೇ ಸಮುದ್ರೇ ನದರಮಣಸುತಾನಾಯಕೇ ಜಾಗರೂಕೇ
ಸಾಶ್ಚರ್ಯತ್ರಾಸಧುರ್ಯೇ ತ್ರಿಭುವನಮಧುನಾ ಪಶ್ಯ ಮೇ ತಾಂಡವಂ ತ್ವಂ॥೧೪॥

---

ಹೀಗೆ ಕುಕ್ಕುಟದ ಆಕಾರವೇ ಧ್ವಜವಾಗಿ ಉಳ್ಳ ಷಣ್ಮುಖಸ್ವಾಮಿಯ ಪ್ರಾರ್ಥನಾಷಟ್ಕವನ್ನು ಯಾರು ಭಕ್ತಿಯಿಂದ ಪಠಿಸುವರೋ, ಅವರು ಪರಶಿವನ ಕೃಪಾಪಾತ್ರರಾಗಿ, ನಾಶರಹಿತರಾಗಿ, ಮುಕ್ತಿಪ್ರಾಪ್ತಿಗೆ ಅರ್ಹತೆಯನ್ನು ಪಡೆಯುವರು. ಇದರಿಂದ ಭಕ್ತರು ಸ್ಥಿರವಾದ ಸುಖಾನುಭವಿಗಳಾಗುವರು. ॥೧೨॥

ಸಮೀಚೀನ ಪುರುಷನಾದ ಈ ಮಹೇಶ್ವರನು, ಅಣುರೂಪಿಯಾಗಿಯೂ, ಸ್ಥಾಣುರೂಪಿಯಾಗಿ ಕಾಣುವನು. ಬಿದಿರಿನ ಪುಷ್ಪದಂತೆ ಆಭಾಸವಾಗಿ ಕಾಣುವ ಜಗತ್ತೇ ಇವನು. ಅತಿಯಾದ ತೇಜಸ್ಸುಳ್ಳವನಾದರೂ, ಹಿಮಾಲಯಂತೆ ಶೀತಲವಾಗಿ ಜನರ ಹಿತಕ್ಕಾಗಿ ನೆಲಸಿರುವವನೂ ಈತನೇ, ಸೂರ್ಯ, ಚಂದ್ರ, ಮುಂತಾದ ತೇಜೋ ವಸ್ತುಗಳೆನಿಸಿ ಭಕ್ತರಿಗೆ ಹಿತವನ್ನುಂಟುಮಾಡಲು ಸ್ವರ್ಗಲೋಕದಲ್ಲಿ ನಾನಾ ರೂಪ ದಲ್ಲಿ ವಿಹರಿಸುವ ಪರಮಪುರುಷನೇ ಈತನು. ॥೧೩॥

ಪಾರ್ವತೀಪತಿಯೂ ಪರಬ್ರಹ್ಮಸ್ವರೂಪನೂ ಆದ ಶಂಕರನ ಪಾದಾಘಾತಕ್ಕೆ, ಸಕಲ ಭೂಮಿಯೂ ನಡುಗಿ ಹೋಗುವುದು. ಆದಿಶೇಷನು ಭೂಮಿಯನ್ನು ಹೊರ ಲಾರದೆ ವ್ಯಥೆಪಡುವನು. ಅಷ್ಟದಿಗ್ಗಜಗಳು ಭಾರವನ್ನು ಸಹಿಸಲಾರದೆ ಕೂಗಿಕೊಳ್ಳು ವುವು. ಆದಿಕೂರ್ಮನು ಉರುಳುವನು. ಪರ್ವತಪಂಕ್ತಿಗಳು ಹಾರುವುವು. ಸಮುದ್ರವು ಮೇರೆದಪ್ಪುವುದು. ಕ್ಷೀರಸಾಗರಶಾಯಿಯಾದ ಲಕ್ಷ್ಮೀಪತಿಯು

ಪಾಯಾದಾಯಾಸಖೇದಕ್ಷುಭಿತಫಣಿಫಣಾರತ್ನನಿರ್ಯತ್ನನಿರ್ಯ
ಚ್ಛಾಯಾಮಾಯಾಪತಂಗದ್ಯುತಿಮುದಿತವಿಯದ್ವಾಹಿನೀಚಕ್ರವಾಕಂ ।
ಅಶ್ರಾಂತಶ್ರಾಂತಚೂಡಾ ತುಹಿನಕರಕರಾಲೀಕನಾಲೀಕನಾಲ
ಚ್ಛೇದಾನೋದಾನುಧಾವದ್ದ್ರುಹಿಣರಥಖಗಂ ಧೂರ್ಜಟೇಸ್ತಾಂಡವಂ
ನೋ ॥೧೩೦॥

ಇತಿ ಶ್ರೀಶಿವರಹಸ್ಯೇ ಪ್ರಥಮಾಂಶೇ ಸ್ಕಂದಸ್ತುತಿರ್ನಾಮ
ಷಷ್ಟಿತಮೋಽಧ್ಯಾಯಃ

ಇತಿ ಶ್ರೀಶಿವರಹಸ್ಯೇ ಮಾಹೇಶಾಖ್ಯೇ ಪ್ರಥಮಾಂಶಸ್ಸಮಾಪ್ತಃ.

---

ಯೋಗನಿದ್ರೆಯಿಂದ ಎಚ್ಚರಗೊಳ್ಳುವನು. ತ್ರಿಲೋಕವು ಆಶ್ಚರ್ಯದಿಂದ ಭಯಗೊಳ್ಳುವುದು. ಇಂತಹ ಪಾದಾಘಾತದಿಂದ ಕೂಡಿದ ಶಂಕರನ ನಾಟ್ಯವನ್ನು ನೋಡಿ ಎಲ್ಲರೂ ಶಂಕರನ ಮಹಿಮೆಯನ್ನು ಅರಿಯಲಿ. ॥೧೨೯॥

ಪರಮೇಶ್ವರನ ತಾಂಡವ ಕಾಲದ ರಭಸಕ್ಕೆ ಆದಿಶೇಷನ ಶಿರೋಭಾಗದಲ್ಲಿರುವ ಶಿರೋರತ್ನಗಳು ಅಲ್ಲಲ್ಲಿ ಎರಚಾಡುತ್ತಿರುವುವು. ಇದನ್ನು ನೋಡಿ, ಗಂಗಾನದಿಯ ದಡದಲ್ಲಿ ಹಾರಾಡುವ ಚಕ್ರವಾಕಪಕ್ಷಿಗಳು ಸೂರ್ಯಭ್ರಾಂತಿಯನ್ನು ಹಡೆಯುತ್ತಿರುವುವು. ಹಾಗೆಯೇ ಶಿರೋಭಾಗದಲ್ಲಿರುವ ಚಂದ್ರನು ಬಳಲಿ ಅಲ್ಲಾಡುತ್ತಿರುವಾಗ, ಬ್ರಹ್ಮನ ವಾಹನವಾದ ಹಂಸಪಕ್ಷಿಯು ಆ ಚಂದ್ರನನ್ನು ಕಮಲನಾಳಗಳ ಚೂರೆಂಬುದಾಗಿ ತಿಳಿದು, ಅದನ್ನು ತಿನ್ನಲು ಓಡಿಹೋಗುತ್ತಿರುವುದು. ಹೀಗೆ ಆದಿಶೇಷ, ಚಂದ್ರ ಮುಂತಾದ ಮಹಾಮಹಾವಸ್ತುಗಳಿಗೂ ಆಯಾಸವನ್ನುಂಟುಮಾಡುವಂತಹ ಪರಶಿವನ ನಾಟ್ಯವು ಸರ್ವದಾ ಭಕ್ತರನ್ನು ಕಾಪಾಡಲಿ" ಎಂದು ಸೂತಮಹಾಮುನಿಗಳು ಈಶ್ವರನಮಸ್ಕಾರಪೂರ್ವಕವಾದ ಮಂಗಳವನ್ನು ವಾಜಶ್ರವಸಾದಿಗಳಿಗೆ ಅರುಹಿದರು. ॥೧೩೦॥

ಹೀಗೆ ಶ್ರೀಶಿವರಹಸ್ಯದ ಪ್ರಥಮಾಂಶದಲ್ಲಿ ಸ್ಕಂದಸ್ತುತಿ ಎಂಬ
ಅರುವತ್ತನೆಯ ಅಧ್ಯಾಯವು ಮುಗಿದುದು.

**ಇಲ್ಲಿಗೆ ಶ್ರೀಶಿವರಹಸ್ಯದ ಮೊದಲನೆಯ ಮಾಹೇಶವೆಂಬ
ಅಂಶವು ಸಮಾಪ್ತಿಗೊಂಡಿತು.**

ಓಂ ತತ್ಸತ್ ॥